ಶ್ರೀ ಮಲ್ಲಿಕಾರ್ಜುನ ಕವೀಶ್ವರ ಸಂಯೋಜಿತ

# ಸೂಕ್ತಿಸುಧಾರ್ಣವಂ

ಸಂಪಾದಕ

ಎನ್. ಅನಂತರಂಗಾಚಾರ್






ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೩

ಕನ್ನಡ ಅಧ್ಯಯನ ಸಂಸ್ಥೆ

ಪ್ರಾಚ್ಯಕಾವ್ಯ ಮಾಲೆ-೨೩

ಪ್ರಧಾನ ಸಂಪಾದಕ
ಡಾ. ಹಾ. ಮಾ. ನಾಯಕ

ವಿಭಾಗ ಸಂಪಾದಕ
ಎನ್. ಬಸವಾರಾಧ್ಯ

ಶ್ರೀ ಮಲ್ಲಿಕಾರ್ಜುನ ಕವೀಶ್ವರ ಸಂಯೋಜಿತ

# ಸೂಕ್ತಿ ಸುಧಾರ್ಣವಂ

ಶ್ರೀ ಮಲ್ಲಿಕಾರ್ಜುನ ಕವೀಶ್ವರ ಸಂಯೋಜಿತ

# ಸೂಕ್ತಿಸುಧಾರ್ಣವಂ


ಸಂಪಾದಕ

ಎನ್. ಅನಂತರಂಗಾಚಾರ್








ಕನ್ನಡ ಅಧ್ಯಯನ ಸಂಸ್ಥೆ

ಮೈಸೂರು ವಿಶ್ವವಿದ್ಯಾನಿಲಯ

೧೯೭೨

SUKTI SUDHARNAVA by Mallikarjuna; Edited by N. Anantharangachar; Published by the Institute of Kannada Studies, University of Mysore, Manasa Gangotri, Mysore-6. Second Edition: 1972. pp xxxii + 428



ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದ ಮೊದಲನೆಯ ಮುದ್ರಣ ೧೯೪೭

ಕನ್ನಡ ಅಧ್ಯಯನ ಸಂಸ್ಥೆಯಿಂದ ಎರಡನೆಯ ಮುದ್ರಣ ೧೯೭೨



ಬೆಲೆ

ಸಾದಾ ಪ್ರತಿ : ರೂ. 12-00

ಉತ್ತಮ ಪ್ರತಿ : ರೂ. 20-00



ಮಾರಾಟಗಾರರು

ಡೈರೆಕ್ಟರ್

ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-6

ಮುದ್ರಕರು

ಯುಟ್ಯಾನ್ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು-೮

# ಪ್ರಸ್ತಾವನೆ

ಸಾಹಿತ್ಯಕ್ಷೇತ್ರದಲ್ಲಿ ಬಗೆಬಗೆಯ ಗ್ರಂಥಗಳು ಹುಟ್ಟಿ ಬಳೆದಿವೆ. ಸಾಹಿತ್ಯವೆಂಬುದು ಅನುಭವದ ಟೀಕೆ. ಕವಿಯು ಮಾನವನ ಅನುಭವದ ಯಾವುದಾದರೊಂದು ಸನ್ನಿವೇಶವನ್ನು ಆರಿಸಿ ತನ್ನ ಪ್ರತಿಭಾಶಕ್ತಿಯಿಂದಲೋ ಸಂಸ್ಕಾರಬಲದಿಂದಲೋ ಅದನ್ನು ರೂಪುಗೊಳಿಸಿ, ತನ್ನ ರಚನಾಚಾತುರ್ಯದಿಂದಲೂ ಸಂವಿಧಾನಕೌಶಲದಿಂದಲೂ ಓದುವವರ ಅಥವಾ ಕೇಳುವವರ ಮನಸ್ಸಿನಲ್ಲಿ ಹೊಸಹೊಸ ಭಾವನೆಗಳನ್ನು ಮೂಡಿಸಿ ಆಹ್ಲಾದವನ್ನೂ ಆನಂದಾನುಭವವನ್ನೂ ತುಂಬುತ್ತಾನೆ. ಸಹೃದಯಹೃದಯಾಹ್ಲಾದನವೇ ಕಾವ್ಯದ ಮುಖ್ಯ ಗುರಿ. ಕಾವ್ಯಗಳು ಕೆಲವು ಪದ್ಯಾತ್ಮಕವಾಗಿಯೂ ಕೆಲವು ಗದ್ಯಾತ್ಮಕವಾಗಿಯೂ ಇನ್ನು ಕೆಲವು ಗದ್ಯಪದ್ಯಮಿಶ್ರಿತವಾಗಿಯೂ ಇರುವುವು. ಇವುಗಳನ್ನೇ ಕಥೆ, ಆಖ್ಯಾಯಿಕೆ, ಚಂಪೂ, ನಾಟಕವೆಂದು ಕರೆಯುವೆವು.

ಇವೆಲ್ಲ ಸ್ವತಂತ್ರಗ್ರಂಥಗಳು. ಇವುಗಳನ್ನು ಅವಲಂಬಿಸಿ ಮತ್ತೆ ಬೇರೆ ಗ್ರಂಥಗಳೂ ಹುಟ್ಟಿವೆ. ಇವುಗಳಲ್ಲಿ 'ಸಂಗ್ರಹ' ಗ್ರಂಥಗಳು ಒಂದು ಬಗೆಯವು. ಸುಪ್ರಸಿದ್ಧಕವಿಗಳು ಬರೆದ ಗ್ರಂಥಗಳ ಬಾಹುಲ್ಯದಿಂದಲೂ ವಿಸ್ತಾರದಿಂದಲೂ ಪ್ರತಿಯೊಬ್ಬ ಸಾಹಿತಿಯು ಅವೆಲ್ಲವನ್ನು ಓದಿ ಆನಂದಪಡಲು ಸಾಧ್ಯವಿಲ್ಲ; ಸಾಹಿತ್ಯದ ಸವಿಯನ್ನು ಸಾಮಾನ್ಯಜನರು ಅನುಭವಿಸಿ ನೋಡಲು ಅವಕಾಶವಿರುವುದಿಲ್ಲ. ಈ ಕಾರಣಗಳಿಂದ ಈ ವಿಧವಾದ ಸಂಗ್ರಹಗಳನ್ನು ಮಾಡುವುದು ಎಲ್ಲರಲ್ಲೂ ವಾಡಿಕೆಯಾಗಿದೆ. ಒಬ್ಬ ಕವಿಯು ಬರೆದ ಬೇರೆಬೇರೆ ಗ್ರಂಥಗಳಿಂದ ರಸವತ್ತಾದ ಉಕ್ತಿಗಳನ್ನು ಒಂದೆಡೆ ಸೇರಿಸಿಡುವುದುಂಟು. ಅನೇಕ ಕವಿಗಳ ಗ್ರಂಥಗಳಿಂದ ಸದುಕ್ತಿಗಳನ್ನು ಸಂಗ್ರಹಿಸುವುದೂ ಉಂಟು. ಈ ಎರಡು ಬಗೆಯ ಸಂಗ್ರಹಗ್ರಂಥಗಳು ನಮಗೆ ಪರಿಚಿತವಾದ ಇಂಗ್ಲೀಷು ಮತ್ತು ಸಂಸ್ಕೃತ ಸಾಹಿತ್ಯಗಳಲ್ಲಿ ಹೇರಳವಾಗಿವೆ. ಇತರ ಸಾಹಿತ್ಯಗಳಲ್ಲಿಯೂ ಈ ಬಗೆಯ ಗ್ರಂಥಗಳಿರಬಹುದೆಂದು ಊಹಿಸಬಹುದು. ಇಂಗ್ಲೀಷಿನಲ್ಲಿ ಪಾಲ್ಗ್ರೇವ್ ಎಂಬವನು ಬರೆದ 'ಗೋಲ್ಡ್ ಟ್ರೆಜರಿ' (Golden Treasury) ಈ ಗುಂಪಿಗೆ ಸೇರಿದುದು. ಸಂಸ್ಕೃತದಲ್ಲಿ ಸುಭಾಷಿತರತ್ನಭಾಂಡಾಗಾರ, ಶಾರ್ಙ್ಗಧರಪದ್ಧತಿ, ಸೂಕ್ತಿ ಮುಕ್ತಾವಳಿ, ಸುಭಾಷಿತರತ್ನಸಂದೋಹ ಮೊದಲಾದ ಅನೇಕ ಗ್ರಂಥಗಳಿವೆ. ಈ ಬಗೆಯ ಸಂಗ್ರಹ ಗ್ರಂಥಗಳಿಂದ ಉದ್ದಾಮಕವಿಗಳ ರಸೋಕ್ತಿಗಳ ಸವಿಯನ್ನು ಸೇವಿಸಲು ಸಾಹಿತ್ಯಪ್ರಿಯರೆಲ್ಲರಿಗೂ ಅವಕಾಶ ದೊರೆತಿರುವುದಲ್ಲದೆ, ಕೆಲವು ಅಜ್ಞಾತಕವಿಗಳ ಅಸ್ತಿತ್ವವನ್ನೂ ಕಾಲವನ್ನೂ ನಿರ್ಧರಿಸಲು ಸಾಧ್ಯವಾಗಿದೆ.

ನಮಗೆ ತಿಳಿದನುಟ್ಟಿಗೆ ಕನ್ನಡ ಸಾಹಿತ್ಯದಲ್ಲಿ ಸುಪ್ರಸಿದ್ಧವಾದ ಈ ಬಗೆಯ ಪ್ರಾಚೀನ ಸಂಗ್ರಹಗ್ರಂಥಗಳು ಎರಡು. ಒಂದು ಸುಮಾರು ಕ್ರಿ.ಶ. ೧೬೦೦ ರಲ್ಲಿ ಬರೆದ ಅಭಿನವವಾದಿವಿದ್ಯಾನಂದನ ಕಾವ್ಯಸಾರ. ಇದನ್ನು ಕರ್ಣಾಟಕಕಾವ್ಯಕಲಾನಿಧಿಯ ಸಂಪಾದಕರು ಅಚ್ಚಿಟ್ಟು ಪ್ರಚಾರಪಡಿಸಿದ್ದಾರೆ. ಮತ್ತೊಂದು ಈಗ ಪ್ರಕಾಶಪಡಿಸುವ ಸೂಕ್ತಿಸುಧಾರ್ಣವ. ಈ ಗ್ರಂಥವನ್ನು ಕವಿಯು ಒಂದು ಮಹಾಕಾವ್ಯವನ್ನಾಗಿ ಪರಿಗಣಿಸಿ, ಪ್ರಸಿದ್ಧ ಸಂಸ್ಕೃತ ಆಲಂಕಾರಿಕನಾದ ದಂಡಿಯು ತನ್ನ ಕಾವ್ಯಾದರ್ಶದಲ್ಲಿ ನಿರೂಪಿಸಿರುವ ಮಹಾಕಾವ್ಯದ ಅಂಗಗಳೆನಿಸಿಕೊಳ್ಳುವ ಹದಿನೆಂಟು ವಿಷಯುಗಳ ವರ್ಣನಾರೂಪವಾದ ಪದ್ಯಗಳನ್ನು ತನಗೆ ಹಿಂದಿದ್ದ ಸುಪ್ರಸಿದ್ಧಕವಿಗಳ ಗ್ರಂಥಗಳಿಂದ ಸಂಗ್ರಹಿಸಿ, ಒಂದೊಂದು ಅಂಗಕ್ಕೆ ಸಂಬಂಧಿಸಿದ ಪದ್ಯಗಳನ್ನು ಒಂದೊಂದು ಆಶ್ವಾಸವಾಗಿ ಸಂಯೋಜನೆ ಮಾಡಿ ಬರೆದಿರುತ್ತಾನೆ. ಈ ವಿಷಯುವು ಪೀಠಿಕಾಪ್ರಕರಣದ ಕೊನೆಯಲ್ಲಿರುವ:—

ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ
ಭೋರುಹವೈರಿಮಿತ್ರರುದಯಂ ಋತುನಂದನಮಂಬುಸೀಧುಕಾಂ
ತಾರತಿಚಿಂತೆ ಮಂತ್ರ ಚರ ಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್

ಪುರ ವಾರಾಶಿ ನಗರ್ತು ಚಂದ್ರ ತಪನೋದ್ಯಾನಾಂಬುಕೇಳೀ ಸುರಾ
ಸುರತಕ್ರೀಡನ ವಿಪ್ರಲಂಭ ಲಲನಾಕಲ್ಯಾಣ ಪುತ್ರೋದಯ
ಸ್ಫುರಿತಾಲೋಚನ ಮಂತ್ರದೂತಗಮನಾಜಿಸ್ತ್ರೀಸುಖವ್ಯಾಪ್ತಿಗಳ್
ದೊರೆಕೊಳ್ಗುಂ ಕವಿವರ್ಣನಕ್ಕೆ ಪದಿನೆಂಟಂಗಂ ಮಹಾಕಾವ್ಯದೊಳ್

ಎಂಬ ಪದ್ಯಗಳಿಂದಲೂ ಪ್ರತಿ ಆಶ್ವಾಸಾಂತ್ಯದಲ್ಲಿರುವ "ಮಲ್ಲಿಕಾರ್ಜುನಕವೀಶ್ವರ ಸಂಯೋಜಿತಮುಮಪ್ಪ ಸೂಕ್ತಿಸುಧಾರ್ಣವದೊಳ್" ಎಂಬ ವಾಕ್ಯದಿಂದಲೂ ವ್ಯಕ್ತವಾಗುತ್ತದೆ. ಈ ಗ್ರಂಥದಲ್ಲಿ ಪೀಠಿಕಾಪ್ರಕರಣವೂ ಸೇರಿ ಹತ್ತೊಂಬತ್ತು ಆಶ್ವಾಸಗಳಿವೆ. ಆದರೆ ನಮಗೆ ದೊರೆತಿರುವ ಪ್ರತಿಗಳಲ್ಲಿ ಕೊನೆಯದಾದ ಯುದ್ಧವರ್ಣನಾಪರವಾದ ಆಶ್ವಾಸವು ಸಿಕ್ಕಿಲ್ಲ. ಇದರಲ್ಲಿ ಒಟ್ಟು ೨,೧೯೧ ಪದ್ಯಗಳಿವೆ. ಇವೆಲ್ಲಕ್ಕೂ ಆಕರವನ್ನು ಗೊತ್ತುಮಾಡಲು ಸಾಧ್ಯವಾಗಿಲ್ಲ. ಆಕರವು ಗೊತ್ತಾದ ಪದ್ಯಗಳ ಸಂಖ್ಯೆಯನ್ನೂ, ಆಕರಗಳ ಹೆಸರನ್ನೂ ಅನುಬಂಧ ೨ ಮತ್ತು ೩ ರಲ್ಲಿ ಕೊಟ್ಟಿದೆ. ಉಳಿದ ಪದ್ಯಗಳು ಕವಿಯ ಸ್ವಂತವೋ ನಮಗೆ ಈವರೆಗೆ ತಿಳಿಯದ ಪೂರ್ವಕವಿಗಳ ಗ್ರಂಥಗಳಿಂದ ಸಂಗ್ರಹಿಸಲ್ಪಟ್ಟವೋ ಹೇಳಲು ಸಾಧ್ಯವಿಲ್ಲ.

ಈ ಕಾವ್ಯವನ್ನು ಬರೆದವನು, ಸಂಯೋಜಕನು, ಕವೀಶ್ವರ ಮಲ್ಲಿಕಾರ್ಜುನ. ಈತನಿಗೆ ಮಲ್ಲ, ಮಲ್ಲಪ, ಚಿದಾನಂದ ಎಂಬ ಹೆಸರುಗಳೂ ಉಂಟು. ಈತನು 'ಯಾದನಕಟಕಾಚಾರ್ಯ ಸುಕವಿಸುಮನೋಬಾಣನ ಜಾಮಾತೃ' ಜನ್ನನ ಸೋದರಿಯ ಗಂಡ, ಕೇಶಿರಾಜನ ತಂದೆ. ಈತನು 'ಮುನಿಗಳ ಸಭೆಯೊಳ್ ಪರಮುಮುನಿ,' 'ಸರಸಕವೀಶ್ವರ ಸಭೆಯೊಳ್ ಸರಸಕವೀಶಂ,' 'ಬುಧರ ಸಭೆಯೊಳ್ ಪರಮಬುಧಂ'

'ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನಂ'. ಈತನು ಹೊಯ್ಸಳ ವೀರಸೋಮೇಶ್ವರನ ಆಶ್ರಿತನೆಂದೂ ಆ ರಾಜನ ಅಳ್ವಿಕೆಯಲ್ಲಿ ಅವನ ಮೆಚ್ಚುಗೆಗೋಸ್ಕರ ಈಕಾವ್ಯವನ್ನು ಬರೆದನೆಂದೂ, 'ಸೋಯಿದೇವರಾಯನ ವಿನೋದಾಕರ್ಣನಕೌತುಕೋತ್ಪಾದಿತಮುಮಪ್ಪ' ಮತ್ತು

ಕೃತಿಯಂ ನಿರ್ಮಿಸಿ ಮುನ್ನಮಾದರಿಳೆಯೊಳ್ ಶ್ರೀಹರ್ಷನುಂ ಭೋಜಭೂ
ಪತಿಯುಂ ಸತ್ಕವಿ ವಜ್ರಹಸ್ತನೃಪನುಂ ಸರ್ವಜ್ಞಸೋಮೇಶನುಂ
ನುತಿವೆತ್ತಂದದಿನಿಂದು ಮಲ್ಲಬುಧನಿಂದಂ ಕಾವ್ಯಸಾರಂ ಜಗ
ನ್ನುತಮಾಯ್ತೆಂದೆನೆ ಮಾಡಿ ಕೀರ್ತಿವಡೆದಂ ಶ್ರೀವೀರಸೋಮೇಶ್ವರಂ

(ಪೀಠಿಕಾಪ್ರ.೨೪)

ಎಂಬ ಉಕ್ತಿಗಳಿಂದ ಸ್ಪಷ್ಟಪಡುತ್ತದೆ. ವೀರಸೋಮೇಶ್ವರನು ಕ್ರಿ. ಶ. ೧೨೩೩ ರಿಂದ ೧೨೫೪ರ ವರೆಗೆ ಕರ್ಣಾಟಕದಲ್ಲಿ ರಾಜ್ಯವಾಳಿದಂತೆ ತಿಳಿದುಬರುತ್ತದೆ. ಅಲ್ಲದೆ ಗ್ರಂಥದ ಪೀಠಿಕಾಪ್ರಕರಣದಲ್ಲಿ ಹೊಯ್ಸಳರಾಜರ ವಂಶವೃತ್ತವನ್ನು ವಿವರಿಸುವ ಪದ್ಯಗಳಿವೆ. ಇವು ಎಲ್ಲ ವಿಧದಲ್ಲಿಯೂ ಮಂಡ್ಯ ೧೨೧ ಮತ್ತು ನಾಗಮಂಗಲ ೯೮ ಶಾಸನದ ಪದ್ಯಗಳನ್ನು ಹೋಲುತ್ತವೆ. ಆದುದರಿಂದ ಇವುಗಳನ್ನು (ಮಂಡ್ಯ ೧೨೧ ನೆಯ) ಬಸರಾಳುಶಾಸನದಿಂದ ಉದ್ಧರಿಸಿರಬೇಕೆಂದು ತೋರುತ್ತದೆ. ಅಲ್ಲದೆ ಹೊಯ್ಸಳವಂಶವೃತ್ತವನ್ನು ತಿಳಿಸುವ ಶಾಸನವು ಅಸಂಖ್ಯಾತವಾಗಿದ್ದರೂ ಈ ಆನುಪೂರ್ವಿಯಲ್ಲಿ, ಈ ಕ್ರಮದಲ್ಲಿ ಬೇರೆಕಡೆ ಎಲ್ಲಿಯೂ ಇಲ್ಲ. ಈ ವಿಷಯದಲ್ಲಿ ಈ ಗ್ರಂಥದಲ್ಲಿರುವ ಕ್ರಮವೂ ವಿವರಣೆಯೂ ಬಸರಾಳುಶಾಸನದಲ್ಲಿ ಮಾತ್ರ ಕಂಡುಬರುವುದರಿಂದ ಈ ವಾಕ್ಯವನ್ನು ಬರೆದವನೂ ಆ ಶಾಸನವನ್ನು ಬರೆದವನೂ ಒಬ್ಬನೇ ಆಗಿರಬೇಕು. ಬಸರಾಳುಶಾಸನವನ್ನು ಬರೆದವನು ಚಿದಾನಂದನೆಂದು ಸ್ಪಷ್ಟೋಕ್ತಿಯಿರುವುದು. ಮತ್ತು ಬಸರಾಳುಶಾಸನದಲ್ಲಿರುವ,

ಧರೆ ಪೊಗೞೆ ಚಿದಾನಂದಂ। ವಿರಚಿಸಿದಂ ಸತ್ಕವೀಶ್ವರಂ ಶಾಸನಮಂ
ಪರಮಪ್ರಕಾಶಯೋಗೀ। ಶ್ವರತನಯಂ ಬ್ರಹ್ಮವಿದ್ಯೆಗಾಸ್ಪದರೂಪಂ

ಎಂಬ ಪದ್ಯವೂ ಸೂಕ್ತಿಸುಧಾರ್ಣವದಲ್ಲಿರುವ

ಸರಸಕವೀಶ್ವರಸಭೆಯೊಳ್ ಸರಸಕವೀಶಂ ವಿಶಿಷ್ಟಮುನಿಗಳ ಸಭೆಯೊಳ್
ಪರಮಮುನಿ ಬುಧರ ಸಭೆಯೊಳ್। ಪರಮಬುಧನೆನಿಪ್ಪನೀ ಚಿದಾನಂದಬುಧಂ

(ಪೀಠಿಕಾಪ್ರ. ೮)

ಎಂಬುದೂ ಒಂದೇ ಅರ್ಥವನ್ನು ಕೊಡುತ್ತವೆ. ಆದಕಾರಣ ಬಸರಾಳುಶಾಸನವನ್ನು ಬರೆದ ಚಿದಾನಂದನೇ ಸೂಕ್ತಿಸುಧಾರ್ಣವವನ್ನು ಬರೆದ ಮಲ್ಲಿಕಾರ್ಜುನನೆಂದು ಊಹಿಸಬಹುದು.*

---

*ಮೈಸೂರು ಶಾಸನಶಾಖೆಯ ವರದಿ ೧೯೩೧, ಪು. ೮೦-೮೯; ಮತ್ತು ಪ್ರಬುದ್ಧ ಕರ್ಣಾಟಕ ಸಂ. ೧೫, ಸಂಚಿಕೆ ೪, ಪು. ೮೨-೯೩.

ಈ ಗ್ರಂಥವನ್ನು ಶೋಧಿಸಿ ಕೋಶಾಗಾರದಿಂದ ಅಚ್ಚಿಟ್ಟು ಶೀಘ್ರವಾಗಿ ಪ್ರಕಾಶಪಡಿಸಲು ಸಾಧ್ಯವಾಗಲಿಲ್ಲ. ಐದು ಪ್ರತಿಗಳ ಆಧಾರದ ಮೇಲೆ ಈ ಗ್ರಂಥವನ್ನು ಶೋಧಿಸಿದೆ. ಇವುಗಳಲ್ಲಿ ಮೊದಲನೆಯದು ೫೧ನೆಯ ನಂಬರಿನ ಕಾಗದದ ಪ್ರತಿ. ಇದರಲ್ಲಿ ಮೊದಲಿನಿಂದ ಚಂದ್ರೋದಯವರ್ಣನೆಯಲ್ಲಿ ಅರ್ಧ ಭಾಗದವರೆಗೆ ಎಂಟು ಆಶ್ವಾಸಗಳು ಮಾತ್ರ ಇವೆ. ಕವಿಚರಿತಕಾರರು ತಮ್ಮ ಕವಿ ಚರಿತೆಯ ಟಿಪ್ಪಣಿಯನ್ನು ಈ ಪ್ರತಿಯ ಆಧಾರದಮೇಲೆ ಬರೆದಂತೆ ಕಾಣುತ್ತೆ. ಈ ಪ್ರತಿಯ ಮೂಲಮಾತೃಕೆ ಯಾವುದೆಂಬುದು ಸ್ಪಷ್ಟವಾಗಿಲ್ಲ. ಎರಡನೆಯದು ೧೮೦ ನೆಯ ನಂಬರಿನ ಕಾಗದದ ಪ್ರತಿ. ಇದರಲ್ಲಿ ಮೊದಲಿನಿಂದ ವಿಪ್ರಲಂಭ ಶೃಂಗಾರದ ವರ್ಣನೆ ಪೂರ್ತಿಯಾಗಿ ಹದಿನೈದು ಆಶ್ವಾಸಗಳಿವೆ. ಇದನ್ನು ಕವಿಚರಿತ ಕಾರರು ತಮ್ಮ ಗ್ರಂಥದ ಎರಡನೆಯ ಮುದ್ರಣದಲ್ಲಿ ಉಪಯೋಗಿಸಿಕೊಂಡಂತೆ ತಿಳಿಯುತ್ತೆ. ಇದು ಮೇಲಿನ ಪ್ರತಿಯೊಡನೆ ಯಾವ ವಿಧದಲ್ಲಿಯೂ ಹೋಲುವುದಿಲ್ಲ. ಅಲ್ಲದೆ ಮಲ್ಲಿಕಾರ್ಜುನನಿಗಿಂತ ಈಚಿನ ಕವಿಗಳ ಪದ್ಯಗಳೂ ಈ ಪ್ರತಿಯಲ್ಲಿ ಸೇರಿಸ ಲ್ಪಟ್ಟಿವೆ. ಆದುದರಿಂದ ಇದು ಸೂಕ್ತಿಸುಧಾರ್ಣವದ ಸರಿಯಾದ ಮಾತೃಕೆಯೆಂದು ಹೇಳುವುದಕ್ಕಾಗುವುದಿಲ್ಲ. ಮತ್ತೊಂದು ಕಾಗದದ ಪ್ರತಿಯಲ್ಲಿ ಚಂದ್ರೋದಯ ವರ್ಣನೆಯು ಮಾತ್ರವಿದೆ. ಈ ಕಾಗದದ ಪ್ರತಿಗಳಲ್ಲದೆ ಎರಡು ಓಲೆಯ ಪ್ರತಿಗಳೂ ದೊರೆತವು. ಇವುಗಳಲ್ಲಿ ಒಂದು ಶೃಂಗೇರಿಯ ಶ್ರೀ ಶಂಕರಮಠಕ್ಕೆ ಸೇರಿದ್ದು. ಈ ಪ್ರತಿಯು ಇರುವ ಸಂಗತಿಯನ್ನು ಮೈಸೂರು ಶಾಸನ ಇಲಾಖಾ ಅಧಿಕಾರಿಗಳು ತಿಳಿಸಿದರು. ಕೂಡಲೇ ಇದನ್ನು ತರಿಸಿ ಗ್ರಂಥದ ಶೋಧನಕಾರ್ಯವನ್ನು ಮುಂದುವರಿಸಲಾಯಿತು. ಗ್ರಂಥವು ಸ್ವಲ್ಪದೂರ ಅಚ್ಚಾದ ಮೇಲೆ ಬೇಲೂರಿನಲ್ಲಿ ಮತ್ತೊಂದು ಓಲೆಯ ಪ್ರತಿಯು ದೊರಕಿತು. ಹೀಗೆ ಸಂಗ್ರಹಿಸಿದ ಎಲ್ಲ ಪ್ರತಿಗ ಳನ್ನೂ ಉಪಯೋಗಿಸಿ ಈ ಗ್ರಂಥವನ್ನು ಶೋಧಿಸಿ ಅಚ್ಚಿಟ್ಟು ಪ್ರಕಾಶಪಡಿಸಿದೆ. ಈ ಗ್ರಂಥದ ಶೋಧನಕಾರ್ಯವನ್ನು ಮಾಡುತ್ತಿದ್ದ ಶ್ರೀಮಾನ್ ಎನ್. ಅನಂತ ರಂಗಾಚಾರ್, ಎಂ. ಎ., ಬಿ. ಟಿ. ಯವರು ತುಮಕೂರಿಗೆ ಅಧ್ಯಾಪಕರಾಗಿ ವರ್ಗವಾದ ಪ್ರಯುಕ್ತ ಇಲ್ಲಿಯ ಪಂಡಿತರು ಆಸ್ಥಾನ ಮಹಾವಿದ್ವಾನ್ ಶಾಂತರಾಜಶಾಸ್ತ್ರಿಗಳು ಗ್ರಂಥಾಂತ್ಯದಲ್ಲಿ ಕೊಟ್ಟಿರುವ ೨ ಮತ್ತು ೩ ನೆಯ ಅನುಬಂಧಗಳನ್ನು ಸಿದ್ಧಪಡಿಸಿ, ಮೂರು ಅನುಬಂಧಗಳಲ್ಲಿ ಕಂಡ ಅಚ್ಚಿನ ತಪ್ಪುಗಳನ್ನು ತಿದ್ದಿ ಪರಿಷ್ಕರಿಸಿರುತ್ತಾರೆ.

ಈ ಗ್ರಂಥವನ್ನು ಅಚ್ಚಿಡಲು ಇದರ ಮಾತೃಕೆಯನ್ನು ಎರವಾಗಿ ಕೊಟ್ಟು ಶ್ರೀ ಶೃಂಗೇರಿಶಂಕರಮಠದ ಅಧಿಕಾರಿಗಳು ವಿಶೇಷ ಸಹಾಯ ಮಾಡಿರುತ್ತಾರೆ. ಈ ಗ್ರಂಥಪ್ರಕಾಶನಕ್ಕೆ ಸಹಾಯ ಮಾಡಿದ ಸಂಸ್ಥೆಗಳಿಗೂ ಮಹನೀಯರಿಗೂ ಈ ಸಂಸ್ಥೆಯು ಋಣಿಯಾಗಿರುತ್ತದೆ.

ಮೈಸೂರು. ಎಚ್. ಆರ್. ರಂಗಸ್ವಾಮ್ಯಯ್ಯಂಗಾರ್,

# ಎರಡನೆಯ ಮುದ್ರಣ

ಮೊದಲನೆಯ ಮುದ್ರಣದ ಪ್ರತಿಗಳು ಮುಗಿದುಹೋಗಿ ಬೇಡಿಕೆ ಅಧಿಕವಾಗಿದ್ದುದರಿಂದ ಈ ಎರಡನೆಯ ಮುದ್ರಣವನ್ನು ಹೊರತರಲಾಗಿದೆ. ಇದನ್ನು ಆದಷ್ಟು ಬೇಗ ಅಚ್ಚುಮಾಡಿಕೊಟ್ಟ ಶ್ರೀ ಯಚ್ಚಾನ್ ಪ್ರಿಂಟರ್ಸ್ ಮಾಲೀಕರಿಗೆ ನನ್ನ ವಂದನೆಗಳು.

ಮೈಸೂರು
೧೫–೫–೧೯೭೨

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

# ಪರಿವಿಡಿ



## ಅನುಬಂಧಗಳು

# ಮುನ್ನುಡಿ

ಸೂಕ್ತಿಸುಧಾರ್ಣವವು ಒಂದು ಸಂಯೋಜಿತ ಗ್ರಂಥ. ಇದಕ್ಕೆ ' ಕಾವ್ಯಸಾರ ' ವೆಂಬ ಹೆಸರೂ ಉಂಟು. ಆಶ್ವಾಸಾಂತ್ಯ ಗದ್ಯದಿಂದಲೂ ಪೀಠಿಕಾಸಂಧಿಯಲ್ಲಿ ಬರುವ ಕೆಲವು ಪದ್ಯಗಳಿಂದಲೂ ಇದು ವೀರಹೊಯ್ಸಳ ಸೋಯಿದೇವರಾಯನ ವಿನೋದಾಕರ್ಣನಕೌತುಕೋತ್ಪಾದನಕ್ಕಾಗಿ ಯಾದವಕಟಕಾಚಾರ್ಯ ಸುಕವಿ ಸುಮನೋಬಾಣಜಾಮಾತೃ ಪರಮಚಿದಾನಂದಮಲ್ಲಿಕಾರ್ಜುನ ಕವೀಶ್ವರನಿಂದ ಸಂಯೋಜಿತವಾದುದೆಂಬುದಾಗಿ ತಿಳಿದುಬರುತ್ತದೆ. ಮಲ್ಲಿಕಾರ್ಜುನನು ಗ್ರಂಥಾರಂಭದಲ್ಲಿ ಸ್ವಲ್ಪಮಟ್ಟಿಗೆ ಸ್ವವಿಷಯವನ್ನು ಸಂಗ್ರಹವಾಗಿ ತಿಳಿಸಿದ್ದರೂ ತನ್ನ ಕಾಲ ದೇಶ ಮತಗಳ ವಿಷಯವಾಗಿ ಖಚಿತವಾಗಿ ಏನನ್ನೂ ಹೇಳಿಕೊಂಡಿಲ್ಲ. ಆದರೂ ಪೀಠಿಕಾ ಪ್ರಕರಣದ ಆಧಾರದಮೇಲೆ ಈ ವಿಷಯಗಳನ್ನು ಸುಮಾರಾಗಿ ನಿರ್ಧರಿಸಬಹುದು.

ಪೀಠಿಕಾಭಾಗದಲ್ಲಿ ಹೊಯ್ಸಳರ ವಂಶವೃತ್ತಾಂತವನ್ನು ತಿಳಿಸುವ ಕೆಲವು ಪದ್ಯಗಳು ಇರುವುವು. ಅವುಗಳಲ್ಲಿ ಮಂಡ್ಯದ ತಾಲ್ಲೋಕು ಬಸರಾಳು ಶಾಸನದ ಪದ್ಯಗಳು ಒಂಬತ್ತು [1], ನಾಗಮಂಗಲದ ೯೮ನೆಯ ಶಾಸನದ ಪದ್ಯಗಳು ಅಯ್ದು, ತರೀಕೆರೆಯ ೪೫ ನೆಯ ಶಾಸನದ ಪದ್ಯ ಒಂದು. ಸೋಮೇಶ್ವರನ ಸ್ತುತಿರೂಪವಾದ ನಾಗಮಂಗಲದ ೯೮ನೆಯ ಶಾಸನದ ಪದ್ಯವೇ ಕಡೂರು ಹನ್ನೆರಡನೆಯ ಶಾಸನದಲ್ಲಿಯೂ ಇರುವುದು. ಹೊಯ್ಸಳರ ವಂಶವೃತ್ತವನ್ನು ತಿಳಿಸುವ ಅನೇಕ ಶಾಸನಗಳಿದ್ದರೂ ಅವುಗಳಾವುದರಲ್ಲಿಯೂ ಸೂಕ್ತಿಸುಧಾರ್ಣವದ ಪದ್ಯಗಳು ದೊರೆಯುವುದಿಲ್ಲ. ಅಲ್ಲದೆ ಮೇಲೆಹೇಳಿದ ಮಂಡ್ಯ ೧೨೧,೧೨೨, ನಾಗಮಂಗಲ ೯೮ ನೆಯ ಶಾಸನಗಳಲ್ಲಿರುವ ಕ್ರಮದಲ್ಲಿಯೇ ಪದ್ಯಗಳು ಸೂಕ್ತಿಸುಧಾರ್ಣವದಲ್ಲಿಯೂ ಇವೆ. ಆದುದರಿಂದ ಇವುಗಳನ್ನು ಬಸರಾಳು ಶಾಸನದಿಂದ ಉದ್ಧರಿಸಿರಬಹುದು. ಆ ಶಾಸನದ ಕೊನೆಯಲ್ಲಿ ಚಿದಾನಂದ ಎಂಬ ಶಾಸನ ಕರ್ತೃವಿನ ಅಂಕಿತವುಳ್ಳ ಈ ಕೆಳಗಿನ ಪದ್ಯವಿದೆ:-

ಧರೆ ಪೊಗಟೞ ಚಿದಾನಂದಂ
ವಿರಚಿಸಿದಂ ಸತ್ಕವೀಶ್ವರಂ ಶಾಸನಮಂ
ಪರಮಪ್ರಕಾಶ ಯೋಗೀ
ಶ್ವರತನಯಂ ಬ್ರಹ್ಮವಿದ್ಯೆಗಾಸ್ಪದರೂಪಂ

ಈ ಶಾಸನದ ಕರ್ತೃವಾದ ಚಿದಾನಂದನೂ ಸೂಕ್ತಿಸುಧಾರ್ಣವದ

[1] ಈ ಶಾಸನದ ಮತ್ತೆರಡು ಪದ್ಯಗಳು ನಾಯಕಾಭ್ಯುದಯ ವರ್ಣನೆಯಲ್ಲಿವೆ.

ಸಂಯೋಜಕನಾದ ಮಲ್ಲಿಕಾರ್ಜುನನೂ ಅಭಿನ್ನರಾಗಿರಬೇಕು. ಏಕೆಂದರೆ ಮಲ್ಲಿಕಾರ್ಜುನನು ಸೂಕ್ತಿಸುಧಾರ್ಣವದ ಪೀಠಿಕಾ ಪ್ರಕರಣದ ೮ನೆಯ ಪದ್ಯವಾದ

ಸರಸಕವೀಶ್ವರ ಸಭೆಯೊಳ್
ಸರಸಕವೀಶಂ ವಿಶಿಷ್ಟಮುನಿಗಳ ಸಭೆಯೊಳ್
ಪರಮಮುನಿ ಬುಧರ ಸಭೆಯೊಳ್
ಪರಮಬುಧನೆನಿಪ್ಪನೀ ಚಿದಾನಂದಬುಧಂ

ಎಂಬ ಪದ್ಯದಲ್ಲಿ ತನ್ನ ಹೆಸರು ಚಿದಾನಂದನೆಂದು ವ್ಯಕ್ತವಾಗಿಯೇ ತಿಳಿಸಿದ್ದಾನೆ. ಅಲ್ಲದೆ ಆಶ್ವಾಸಾಂತ್ಯದ ಗದ್ಯದಲ್ಲೆಲ್ಲಾ ಪರಮಚಿದಾನಂದ ಮಲ್ಲಿಕಾರ್ಜುನ ಕವೀಶ್ವರ ಸಂಯೋಜಿತಮಪ್ಪ ಎಂದು ಚಿದಾನಂದ ವಿಶಿಷ್ಟವಾಗಿಯೇ ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಅದೂ ಅಲ್ಲದೆ ಸುಮನೋಬಾಣನ ದೌಹಿತ್ರನೂ ಮಲ್ಲಿಕಾರ್ಜುನನ ಮಗನೂ ಆದ ಕೇಶಿರಾಜನು ತನ್ನನ್ನು 'ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನಸುತನೆಂ'[2] ಎಂದು ವಿಶೇಷಿಸಿಕೊಂಡಿದ್ದಾನೆ. ಈ ಎಲ್ಲ ಕಾರಣಗಳಿಂದ ಮಲ್ಲಿಕಾರ್ಜುನನಿಗೆ ಮಲ್ಲ, ಮಲ್ಲಪ, ಮಲ್ಲಿಕಾರ್ಜುನ, ಚಿದಾನಂದ, ಚಿದಾನಂದಮಲ್ಲಿಕಾರ್ಜುನ ಎಂಬ ಪರ್ಯಾಯನಾಮಗಳಿದ್ದು ಅವನೇ ಬಸರಾಳು ಮತ್ತು ನಾಗಮಂಗಲದ ೯೮ನೆಯ ಶಾಸನಗಳನ್ನು ರಚಿಸಿ ತಾನು ರಚಿಸಿದ ಆ ಶಾಸನಗಳಿಂದಲೇ ಸೂಕ್ತಿಸುಧಾರ್ಣವದಲ್ಲಿ ಪದ್ಯಗಳನ್ನು ಉದ್ಧರಿಸಿರಬಹುದು. ಶ್ರೀಮಾನ್ ಡಾ|| ಎ. ವೆಂಕಟಸುಬ್ಬಯ್ಯನವರು ತಮ್ಮ 'ಕೆಲವು ಕನ್ನಡಕವಿಗಳ ಜೀವನಕಾಲವಿಚಾರ'[3] ಎಂಬ ಪುಸ್ತಕದಲ್ಲಿಯೂ ಡಾ||ಎಂ. ಎಚ್. ಕೃಷ್ಣ ಅವರು ಮೈಸೂರು ಶಾಸನದ ಇಲಾಖೆ ೧೯೩೧ನೆಯ ವರುಷದ ವರದಿ[4] ಮತ್ತು ಪ್ರಬುದ್ಧ ಕರ್ಣಾಟಕದ ೧೫ನೆಯ ಸಂಪುಟ ಇವುಗಳಲ್ಲಿಯೂ[5] ಹೀಗೆಯೇ ಅಭಿಪ್ರಾಯಪಟ್ಟಿದ್ದಾರೆ. ಆದರೆ ಕವಿಚರಿತೆಕಾರರಾದ ಶ್ರೀಮಾನ್ ಆರ್. ನರಸಿಂಹಾಚಾರ್ಯರು ಬಸರಾಳು ಶಾಸನದ ಕರ್ತೃವು ಚಿದಾನಂದನೆಂದೂ ಆತನು ಸ್ಮಾರ್ತಬ್ರಾಹ್ಮಣನೆಂದೂ ಜೈನನಾದ ಸೂಕ್ತಿಸುಧಾರ್ಣವದ ಸಂಯೋಜಕನಾದ ಮಲ್ಲಿಕಾರ್ಜುನನಿಂದ ಭಿನ್ನನೆಂದೂ ಕವಿಚರಿತೆಯ ಒಂದನೆಯ ಸಂಪುಟದಲ್ಲಿ [6] ಹೇಳಿರುವುದಲ್ಲದೆ ಮೂರನೆಯ ಸಂಪುಟದ ಪೀಠಿಕೆಯಲ್ಲಿ [7] ಕೆಲವು ಆಕ್ಷೇಪಣೆಗಳಿಗೆ ಉತ್ತರಹೇಳುತ್ತಾ ಇದೇ ಅಭಿಪ್ರಾಯವನ್ನು ಪುಷ್ಟೀಕರಿಸಿದ್ದಾರೆ. ಆಚಾರ್ಯರು ಮಲ್ಲಿಕಾರ್ಜುನನು ಜೈನನೆಂಬುದನ್ನು ಮೊದಲು ಅಂಗೀಕಾರಮಾಡಿ ಆ ಕಾರಣದಿಂದ ಅವನು ಚಿದಾನಂದನಿಂದ ಭಿನ್ನನೆಂದು ಸಿದ್ಧಾಂತಮಾಡಿದ್ದಾರೆ. ಆದರೆ ಈ ಅಭಿಪ್ರಾಯವು ಭ್ರಮಮೂಲವೆಂಬುದೂ ಮಲ್ಲಿಕಾರ್ಜುನನು ಜೈನನೆಂದೇ ಹೇಳಲು ಸಾಧ್ಯವಿಲ್ಲವೆಂಬುದೂ ಮುಂದೆ ವಿಶದವಾಗುವುದು. ಆದುದರಿಂದ ಬಸರಾಳು ಶಾಸನದ ಕರ್ತೃವಾದ ಚಿದಾನಂದನೂ ಮಲ್ಲಿಕಾರ್ಜುನನೂ ಏಕವ್ಯಕ್ತಿಗಳೆಂದು ಅಂಗೀಕಾರಮಾಡಬಹುದು.

---

[2] ಶಬ್ದಮಣಿದರ್ಪಣ, ಪೀಠಿಕೆಯ ೨ನೆಯ ಪದ್ಯ. [3] ೧೮೭ ರಿಂದ ೧೮೯ ನೆಯ ಪುಟಗಳಲ್ಲಿ. ಪುಟ ೮೨. [5] ಪ್ರ.ಕ. ೧೫-೪ ಪುಟ ೮೨-೮೪. [6] ಕ.ಚ. ಒಂದನೆಯ ಸಂಪುಟ, ಪುಟ, ೩೫೪-೫. [4] ಮತ್ತು ೩೬೯-೭೦, [7] ಕ.ಚ.ಸಂಪುಟ ೩, ಪೀಠಿಕೆ ಪುಟ ೫೮-೬೦.

ಮಲ್ಲಿಕಾರ್ಜುನನ ಮತವಿಚಾರದಲ್ಲಿಯೂ ಹೀಗೆಯೇ ಭಿನ್ನಾಭಿಪ್ರಾಯಗಳಿವೆ. ಶ್ರೀಮಾನ್ ಡಾ॥ ಎ. ವೆಂಕಟಸುಬ್ಬಯ್ಯನವರು ಮಲ್ಲಿಕಾರ್ಜುನನು ಸ್ಮಾರ್ತ ಬ್ರಾಹ್ಮಣನಿರಬಹುದೆಂದು ಸೂಚಿಸಿದ್ದಾರೆ.[೩] ಆದರೆ ಕವಿಚರಿತೆಕಾರರು ಕವಿಚರಿತ್ರೆಯ ಪ್ರಥಮ ಸಂಪುಟದ ದ್ವಿತೀಯ ಮುದ್ರಣದಲ್ಲಿ 'ಗ್ರಂಥಾವತಾರದಲ್ಲಿ ಜಿನಸ್ತುತಿ ಇದೆ. ಈತನು ಜೈನಕವಿ' ಎಂದು ಹೇಳಿರುವುದಲ್ಲದೆ ಮೂರನೆಯ ಸಂಪುಟದ ಪೀಠಿಕೆಯಲ್ಲಿ, 'ಜನ್ನನು ಸುಮನೋಬಾಣನ ಮಗನೆಂಬುದಕ್ಕೂ ಜೈನನಾದ ಮಲ್ಲಿಕಾರ್ಜುನ ಕೇಶಿರಾಜರ ಬಂಧುವೆಂಬುದಕ್ಕೂ ಆವ ಸಂದೇಹವೂ ಇಲ್ಲ. ಮಲ್ಲಿಕಾರ್ಜುನ ಕೇಶಿರಾಜರು ಜೈನರೆಂಬುದು ಮುಖ್ಯವಾಗಿ ಮೊದಲನೆಯವನು ಸೂಕ್ತಿಸುಧಾರ್ಣವದ ಆರಂಭದಲ್ಲಿ ಮಾಡಿರುವ ಜಿನಸ್ತುತಿಯಿಂದಲೂ ಎರಡನೆಯವನು ಶಬ್ದಮಣಿದರ್ಪಣದ ಒಂಬತ್ತನೆಯ ಸೂತ್ರದಲ್ಲಿ "ಶಬ್ದದ್ರವ್ಯಂ ಶ್ವೇತಂ" ಎಂಬುದರಿಂದಲೂ ಸ್ಪಷ್ಟವಾಗುವುದು' ಎಂದು ಬರೆದಿರುವರು. ಆದರೆ ಈ ಅಭಿಪ್ರಾಯವು ಸಾಧುವೂ ಸಾಧಾರವಾದುದೂ ಎಂದು ಒಪ್ಪಲು ಸಾಧ್ಯವಿಲ್ಲ. ಅಲ್ಲದೆ ಈ ವಿಷಯದಲ್ಲಿ ಅವರಿಗೇ ಸಂದೇಹವಿದ್ದಂತೆ ತೋರುತ್ತದೆ. ಅವರೇ ಕವಿಚರಿತ್ರೆಯ ಪ್ರಥಮ ಸಂಪುಟದ ಮೊದಲನೆಯ ಮುದ್ರಣದಲ್ಲಿ ಜಿನಸ್ತುತಿಯ ವಿಷಯವನ್ನೇ ಹೇಳಿಲ್ಲ. ಈಗ ದೊರೆತಿರುವ 'ಸೂಕ್ತಿಸುಧಾರ್ಣವ'ದ ಸರಿಯಾದ ಪಾಠವೆಂದು ಒಪ್ಪಬಹುದಾದ ನಾಲ್ಕು ಪ್ರತಿಗಳಲ್ಲಿಯೂ ಜಿನಸ್ತುತಿಯಿರುವುದಿಲ್ಲ. ಜಿನಸ್ತುತಿಯಿರುವ ಗ್ರಂಥವು ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ವಲ್ಲವೆಂಬುದು ಮುಂದೆ ವ್ಯಕ್ತವಾಗುವುದು. ಈ ಜಿನಸ್ತುತಿಯೇ ಆಧುನಿಕನೊಬ್ಬನಿಂದ ಪ್ರಕ್ಷಿಪ್ತವಾಗಿದ್ದರೂ ಇರಬಹುದು. ಅದೂ ಅಲ್ಲದೆ ಪರಿಚಿತವಾಗಿರುವ ಯಾವ ಜೈನಕವಿಯಾಗಲಿ ಗ್ರಂಥಾರಂಭದಲ್ಲಿ ಒಂದು ಪದ್ಯದಲ್ಲಿ ಜಿನಸ್ತುತಿಮಾಡಿ ಮುಂದೆ ಜೈನೇತರ ದೇವತೆಗಳಾದ ಶಿವ, ವಿಷ್ಣು, ಗಜಾನನ, ಸರಸ್ವತಿ ಮೊದಲಾದವರನ್ನು ಪ್ರಾರ್ಥನೆಮಾಡಿರುವುದು ಕಂಡುಬರುವುದಿಲ್ಲ. ಲೌಕಿಕ ಕಾವ್ಯಗಳಲ್ಲಿ ಅದಕ್ಕನುಗುಣವಾದ ದೇವತಾವ್ಯೂಹವನ್ನೂ ಧಾರ್ಮಿಕ ಪುರಾಣಗ್ರಂಥಗಳಲ್ಲಿ ಜೈನಮತದೀಪಕರಾದ ಪಂಚಪರಮೇಷ್ಠಿ, ಯಕ್ಷಯಕ್ಷಿಯರು ಮೊದಲಾದವರನ್ನೂ ಸ್ತೋತ್ರಮಾಡುವುದು ವಾಡಿಕೆ. ಭಿನ್ನಸಮಯಗಳಿಗೆ ಸಂಬಂಧಪಟ್ಟ ದೈವಗಳನ್ನು ಏಕತ್ರ ಸ್ತುತಿಸಿರುವುದು ಎಲ್ಲಿಯೂ ಕಂಡುಬರುವುದಿಲ್ಲ.

ಮಲ್ಲಿಕಾರ್ಜುನನು ಜೈನನೇ ಎಂಬುದಕ್ಕೆ ಅಂತರಪ್ರಮಾಣಗಳು ಕೂಡ ದೊರೆಯುವಂತಿಲ್ಲ. ಊಹಿಸಬಹುದಾದ ಕೆಲವು ಸಾಧನಗಳೂ ಅದಕ್ಕೆ ವ್ಯತಿರಿಕ್ತವಾಗಿವೆ. ಸಂಕಲಿತ ಗ್ರಂಥವಾದುದರಿಂದ ಅಲ್ಲಿ ಎಲ್ಲ ಧರ್ಮದ ಗ್ರಂಥಗಳಿಂದಲೂ ಪದ್ಯಗಳು ಉದ್ಧೃತವಾಗಿವೆ. ಅವುಗಳೆಲ್ಲ ಸಾಮಾನ್ಯವಾಗಿ ಪ್ರಕೃತಿವರ್ಣನೆಗೆ

---

[೩] ಕೆ. ಕ.ಜೀ.ಕಾ. ಪುಟ ೧೮೭ ರಿಂದ ೧೮೯.

ಸಂಬಂಧಪಟ್ಟವುಗಳೇ. ಆದರೂ ಪ್ರಾಸಂಗಿಕವಾಗಿ ಬರುವ ವ್ಯಕ್ತಿವರ್ಣನೆಗಳಲ್ಲಿಯೂ ಸನ್ನಿವೇಶ ವರ್ಣನೆಗಳಲ್ಲಿಯೂ ವೈದಿಕಪಕ್ಷಪಾತವು ಕಾಣುತ್ತದೆಯೇ ವಿನಾ ಜೈನವಾಸನೆ ಇರುವಹಾಗೆ ಕಾಣುವುದಿಲ್ಲ.

'ಜೀವದಯೆ ಜೈನಧರ್ಮಂ' ಎಂದು ನಂಬಿರುವ ಜೈನರಿಗೆ ಮೃಗಯಾ ವಿನೋದ ಜೀವನದಲ್ಲಂತು ಗ್ರಾಹ್ಯವಲ್ಲ. ಜೈನಪುರಾಣಗಳಲ್ಲಿ ಅದಕ್ಕೆ ಹೆಚ್ಚು ಅವಕಾಶವಿಲ್ಲ. ಲೌಕಿಕ ಕಾವ್ಯಗಳಲ್ಲಿಯೂ ಯಥೋಚಿತವಾಗಿ ಸಂಗ್ರಹವಾಗಿ ವರ್ಣಿತವಾಗಿದೆ. 'ಸೂಕ್ತಿ ಸುಧಾರ್ಣವ'ದಲ್ಲಾದರೋ ಪರ್ವತವರ್ಣನಾಭಾಗದ ಸುಮಾರು ೮೫ ಪದ್ಯಗಳಲ್ಲಿ ನಾನಾವಿಧ ಬೇಂಟೆಗಳು ವಿಸ್ತಾರವಾಗಿ ಉಕ್ತವಾಗಿರುವುದಲ್ಲದೆ ಮೃಗಯಾವಿನೋದವು ವ್ಯಸನವಲ್ಲ, ದೋಷವಲ್ಲ, ಸಂಪ್ರದಾಯಬದ್ಧವಾದ ಸತ್ಕಾರ್ಯ ಎಂದು ಸಿದ್ಧಾಂತ ಮಾಡುವ ಮುಂದಿನ ಎರಡು ಪದ್ಯಗಳು ಉದಾಹೃತವಾಗಿವೆ:—

ಮೊದಲೊಳುಮಾಮಹೇಶ್ವರನೆ ಬೇಡರ ರೂಪನೆ ತಾಳ್ದಿ ಬೇಂಟೆಯಾ
ಡಿದನಿನವಂಶಜರ್ ಪಲಬರುಂ ನೃಪರಟ್ಟಿಯೊಳಂತು ಬೇಂಟೆಯಾ
ಡಿದರಮೃತಾಂಶುವಂಶತಿಲಕರ್ ಮೃಗಯಾರ್ಥಿಗಳಾಗಿ ಬೇಂಟೆಯಾ
ಡಿದರೆನೆ ದೋಷವಿಲ್ಲಱಿಯದರ್ ಪಱಿವರ್ ಮೃಗಯಾವಿನೋದಮಂ

ವಶಮಕ್ಕುಂ ಬಲಲಕ್ಷ್ಯಸಿದ್ಧಿ ನಿಬಿಡವ್ಯಾಯಾಮನಿರ್ಬಂಧಕ
ರ್ಕಶಮಕ್ಕುಂ ತನು ಕೋಟಿಗ್ರಂಗಳಟಿಪಿಂ ವಿದ್ವಿಷ್ಟಬಾಹಾಬಲಂ
ಕೃಶಮಕ್ಕುಂ ಮುನಿಭಿಸ್ತಪೋವನಮುಮೀ ಶ್ರೀರಕ್ಷೆಯಿಂದಂ ನೃಪ
ರ್ಗೆಶಮಕ್ಕುಂ ಗಡ ಬೇಂಟೆಯುಂ ಬೆಸನಮೆಂದಾರೇಳಿಪರ್ ಲೋಕದೊಳ್(?)

ಈ ಪದ್ಯಗಳಿಗೂ ಇಲ್ಲಿ ಉದ್ಧೃತವಾಗಿರುವ ಇತರ ಸುಮಾರು ೬೫ ಪದ್ಯಗಳಿಗೂ ಆಕರವೇ ಸಿಕ್ಕಿಲ್ಲ. ಇವುಗಳು ಈಗ ನಷ್ಟವಾಗಿರುವ ಇತರ ಗ್ರಂಥಗಳಿಂದಲೋ ಅಥವಾ ಮಲ್ಲಿಕಾರ್ಜುನ ಕೇಶಿರಾಜರ ಅನುಪಲಬ್ಧ ಗ್ರಂಥಗಳಿಂದಲೋ ಆಯ್ದುವಾಗಿರಬೇಕು. ಮಲ್ಲಿಕಾರ್ಜುನನು ಜೈನನೇ ಆಗಿದ್ದರೆ ಬೇಟೆಗೆ ಇಷ್ಟು ಪ್ರಾಶಸ್ತ್ಯವನ್ನು ಕೊಡುತ್ತಿದ್ದನೆ?

ಮಲ್ಲಿಕಾರ್ಜುನನ ಬಂಧುಗಳಾದ ಸುಮನೋಬಾಣ, ಕೇಶಿರಾಜ, ಜನ್ನ ಮೊದಲಾದವರ ಚರಿತ್ರದಿಂದಲೂ ಈತನು ಜೈನನೆಂದು ಸಿದ್ಧಾಂತಮಾಡಲು ಸಾಧ್ಯವಿಲ್ಲ. ಸುಮನೋಬಾಣನ ಗ್ರಂಥಗಳಾವುದೂ ದೊರೆತಿಲ್ಲ. ಆತನ ಮತದ ವಿಷಯವಾಗಿ ಯಾವ ನಿರ್ದಿಷ್ಟವಾದ ಅಭಿಪ್ರಾಯಗಳೂ ತಿಳಿದುಬಂದಿಲ್ಲ. 'ಶಬ್ದದ್ರವ್ಯಂ ಜನಿಯಿಸುಗುಂ ಶ್ವೇತಂ' ಎಂಬ ಒಂದು ವಾಕ್ಯವನ್ನು ಬಿಟ್ಟರೆ ಮತ್ತೆಲ್ಲಿಯೂ ಕೇಶಿರಾಜನು ಜೈನನೆಂದು ಊಹಿಸಲು ಆಧಾರಗಳಿಲ್ಲ. ಗ್ರಂಥಾಂತ್ಯದಲ್ಲಿ ತನ್ನಿಂದ ರಚಿತವಾದುವುಗಳೆಂದು ಆತನು ಹೇಳುವ 'ಚೋಳಪಾಲಕಚರಿತ,' 'ಸುಭದ್ರಾಹರಣ,' 'ಪ್ರಬೋಧಚಂದ್ರ' ಮತ್ತು 'ಕಿರಾತ' ಎಂಬ ಗ್ರಂಥಗಳ ಹೆಸರುಗಳನ್ನು ನೋಡಿದರೆ ಆತನು ಜೈನನೋ

ಅಲ್ಲವೋ ಎಂಬ ಸಂದೇಹ ಹುಟ್ಟುತ್ತದೆ. ಜನ್ನನು ಮಲ್ಲಿಕಾರ್ಜುನನ ಬಂಧುವಲ್ಲವೆಂದೇ ಡಾ॥ ಎ. ವೆಂಕಟಸುಬ್ಬಯ್ಯನವರ ವಾದ.[9] ಒಂದುವೇಳೆ ಆಗಿದ್ದರೂ ಭಾವಮೈದರು ಏಕಧರ್ಮಿಗಳಾಗಿರಬೇಕೆಂಬ ನಿರ್ಬಂಧವೇನೂ ಇಲ್ಲ. ತಂದೆಮಕ್ಕಳೇ ಭಿನ್ನಸಮಯಿಗಳಾಗಿದ್ದುದಕ್ಕೆ ಬೇಕಾದಷ್ಟು ಆಧಾರಗಳಿರುವಾಗ ಭಾವಮೈದರ ವಿಷಯವಾಗಿ ಚರ್ಚೆ ಮಾಡಬೇಕಾದುದೇ ಇಲ್ಲ.

ಈ ಎಲ್ಲ ಕಾರಣಗಳಿಂದ ಮಲ್ಲಿಕಾರ್ಜುನನು ಜೈನನಾಗಿದ್ದಿರಲಾರನೆಂದು ಕಾಣುತ್ತದೆ. ಆತನು ತನ್ನನ್ನು 'ಯೋಗಿಪ್ರವರ' ಎಂಬುದಾಗಿ ವಿಶೇಷಿಸಿಕೊಂಡಿರುವುದರಿಂದಲೂ ಇವನಿಂದ ಅಭಿನ್ನನೆಂದು ನಾವು ಸೂಚಿಸಿರುವ ಬಸರಾಳು ಶಾಸನದ ಕರ್ತೃವಾದ ಚಿದಾನಂದನು ತನ್ನನ್ನು 'ಬ್ರಹ್ಮವಿದ್ಯೆಗಾಸ್ಪದರೂಪಂ' ಎಂಬುದಾಗಿ ಸಂಬೋಧಿಸಿಕೊಂಡಿರುವುದರಿಂದಲೂ ಈತನು ವೈದಿಕಮತಾನುಯಾಯಿಯೆಂದು ಹೇಳಬಹುದು.

ಸೂಕ್ತಿಸುಧಾರ್ಣವದಲ್ಲಿ ಅದರ ರಚನೆಯ ಕಾಲವನ್ನು ಎಲ್ಲಿಯೂ ತಿಳಿಸಿಲ್ಲ. ಅದರಲ್ಲಿ ಉದ್ಧೃತವಾಗಿರುವ ಪದ್ಯಗಳ ಕರ್ತೃಗಳ ಆಧಾರದ ಮೇಲೆ ಇದನ್ನು ಪೂರ್ಣವಾಗಿ ನಿಷ್ಕರ್ಷೆಮಾಡಲು ಸಾಧ್ಯವಿಲ್ಲ. ಅವರಲ್ಲನೇಕರ ಕಾಲವನ್ನು ಸೂಕ್ತಿಸುಧಾರ್ಣವದ ಕಾಲದ ಆಧಾರದ ಮೇಲೆಯೇ ನಿಶ್ಚಯಿಸಬೇಕಾಗಿದೆ. ಅದರಲ್ಲಿ ಉಕ್ತವಾಗಿರುವ ಕವಿಗಳಲ್ಲಿ ನಿಷ್ಕೃಷ್ಟವಾಗಿ ಕಾಲವು ಗೊತ್ತಿರುವ ಒಬ್ಬಿಬ್ಬರಿಂದ ಅದರ ಪೂರ್ವಮಿತಿಯನ್ನು ಮಾತ್ರ ಸೂಚಿಸಬಹುದು. ಅಂತಹವರಲ್ಲಿ ಜನ್ನಕವಿಯೊಬ್ಬ. ಆತನು ತನ್ನ 'ಅನಂತನಾಥಪುರಾಣ'ವನ್ನು ಕ್ರಿ. ಶ. ೧೨೩೦ರಲ್ಲಿ ರಚಿಸಿದುದಾಗಿ ಸ್ಪಷ್ಟವಾಗಿ ತಿಳಿಸಿದ್ದಾನೆ. ಆದುದರಿಂದ ಸೂಕ್ತಿಸುಧಾರ್ಣವವು ಈ ಕಾಲಕ್ಕೆ ಈಚಿನದೆಂದು ಮಾತ್ರ ಹೇಳಬಹುದು. ಎಷ್ಟು ಈಚಿನದು ಅಥವಾ ಯಾವ ವರ್ಷದಲ್ಲಿ ಗ್ರಥಿತವಾಯಿತೆಂಬುದನ್ನು [ಅಲ್ಲಿ ಉಕ್ತರಾದ ಕವಿಗಳಿಂದ] ಸಿದ್ಧಾಂತಮಾಡಲು ಸಾಧ್ಯವಿಲ್ಲ. ಸೂಕ್ತಿಸುಧಾರ್ಣವವು ಹೊಯ್ಸಳ ವೀರಸೋಮಿದೇವನ ವಿನೋದಾಕರ್ಣನ ಕೌತುಕೋತ್ಪಾದನಕ್ಕಾಗಿ ಆತನು ದೋರಸಮುದ್ರದಲ್ಲಿದ್ದಾಗ ರಚಿತವಾದ ವಿಷಯ ಸ್ಪಷ್ಟ. ಆತನ ಕಾಲವು ಖಚಿತವಾಗಿ ತಿಳಿದರೆ ಸುಧಾರ್ಣವದ ಕಾಲವೂ ನಿಶ್ಚಿತವಾಗುವುದು. ಸೋಮೇಶ್ವರನ ಕಾಲದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಕವಿಚರಿತೆಕಾರರು ಸೋಮೇಶ್ವರನು ಕ್ರಿ. ಶ. ೧೨೩೪ರಿಂದ ೧೨೫೪ರವರೆಗೆ ಆಳಿದನೆಂದೂ ಆದುದರಿಂದ ಸೂಕ್ತಿಸುಧಾರ್ಣವವು ಸು. ೧೨೪೫ರಲ್ಲಿ ರಚಿತವಾಗಿರಬಹುದೆಂದೂ ಊಹಿಸುತ್ತಾರೆ. ಆದರೆ ರಾವ್‌ಬಹದ್ದೂರ್ ಎಚ್. ಕೃಷ್ಣಶಾಸ್ತ್ರಿಗಳು ವೀರಸೋಮೇಶ್ವರನ ಆರಂಭದ ವರ್ಷವನ್ನು ೧೨೩೪ ಎಂದು ಒಪ್ಪಿಕೊಂಡು ತಿರುಚನಾಪಳ್ಳಿ ಜಿಲ್ಲೆಯ ತಿರುವಾಶಿಯ ಶಾಸನದಲ್ಲಿ ಉಕ್ತವಾಗಿರುವ ಸೋಮೇಶ್ವರನ ೨೯ನೆಯ ವರ್ಷವೆಂದು ತಿಳಿಸುವ ಕಾಲದ ಆಧಾರದ ಮೇಲೆ ಆತನು ಕ್ರಿ. ಶ. ೧೨೬೩ರ ವರೆಗೆ ಜೀವಿಸಿದ್ದನೆಂದು ಹೇಳಿರುವರು.[10] ಇದರ ಆಧಾರದ ಮೇಲೆಯೂ 'ಹಣಿದಂಬೊಯ್ಯಲ್'[11] ಎಂಬ

[9] ಕ. ಕ. ಜೀ, ಪುಟ ೧೨೪-೧೩೦. [10] ಅದೇ ಗ್ರಂಥ ೧೮೨-೮೩. [11] ಸೂಕ್ತಿಸುಧಾರ್ಣವಂ, ೧-೨೧.

ಸೂಕ್ತಿಸುಧಾರ್ಣವದ ಒಂದು ಪದ್ಯದಲ್ಲಿ 'ಎಲೆಲೆ ಮಹಾದೇವ'ಎಂದು ಉಕ್ತವಾಗಿರುವುದರ ಆಧಾರದ ಮೇಲೆಯೂ ಸೋಮೇಶ್ವರನು ಸೇವುಣರಾಜನಾದ ಮಹಾದೇವನ ಸಮಕಾಲಿನನೆಂದೂ ಆದುದರಿಂದ ಇವನು ೧೨೬೫ರವರೆಗೂ ಜೀವಿಸಿರಬಹುದೆಂದೂ ಮಹಾದೇವನು ಪಟ್ಟಕ್ಕೆ ಬಂದಮೇಲೆ ಸೋಮೇಶ್ವರನು ಜಟಾವರ್ಮಸುಂದರಪಾಂಡ್ಯನಿಂದ ಹತನಾಗುವುದಕ್ಕೆ ಮುಂಚೆ ಅಂದರೆ ೧೨೬೦ರ ಮೇಲೆ ೧೨೬೫ರೊಳಗೆ ಸೂಕ್ತಿಸುಧಾರ್ಣವವು ರಚಿತವಾಗಿರಬೇಕೆಂದೂ ಡಾ|| ಅಯ್ಯನವರು ಅಭಿಪ್ರಾಯಪಟ್ಟಿದ್ದಾರೆ. ಮೈಸೂರು ಶಾಸನದ ಇಲಾಖೆಯ ಅಧ್ಯಕ್ಷರಾದ ಡಾ|| ಎಂ. ಎಚ್. ಕೃಷ್ಣ ಅವರು ತಮ್ಮ ಇಲಾಖೆಯ ೧೯೩೧ ನೆಯ ವರ್ಷದ ವರದಿಯಲ್ಲಿ ಈ ಎಲ್ಲಾ ಅಭಿಪ್ರಾಯಗಳನ್ನು ವಿಮರ್ಶಿಸಿ ತಮ್ಮ ಸಿದ್ಧಾಂತವನ್ನು ಈ ರೀತಿ ಸೂಚಿಸಿದ್ದಾರೆ: "ವೀರಸೋಮೇಶ್ವರನು ತನ್ನ ತಂದೆಯಾದ ಇಮ್ಮಡಿನರಸಿಂಹನು ರಾಜ್ಯಭಾರ ಮಾಡುತ್ತಿದ್ದಾಗಲೇ ಆತನ ಪ್ರತಿನಿಧಿಯಾಗಿಯೋ ಯುವರಾಜನಾಗಿಯೋ ತಮಿಳುದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದು ಅವನ ಅಂತಿಮ ಕಾಲಕ್ಕೆ ಕರ್ಣಾಟಕಕ್ಕೆ ಬಂದು ಕ್ರಿ. ಶ. ೧೨೩೪ರಲ್ಲಿ ದೋರಸಮುದ್ರದಲ್ಲಿ ಪಟ್ಟಾಭಿಷಿಕ್ತನಾಗಿರಬೇಕು. ಆ ಕಾಲದಿಂದ ಅಂದರೆ ಕ್ರಿ. ಶ. ೧೨೩೪ ರಿಂದ ಕರ್ಣಾಟಕದಲ್ಲಿ ಇವನ ರಾಜ್ಯಭಾರದ ಗಣನೆಯು ಆಗಿರಬೇಕು. ತಮಿಳುದೇಶದಲ್ಲಾದರೋ ಇವನು ಯುವರಾಜನಾದ ಕಾಲದಿಂದ ಕಾಲಗಣನೆ ಮಾಡಿರಬೇಕು. ನಂಜನಗೂಡಿನ ೩೬ನೆಯ ಶಾಸನವು ವೀರಸೋಮೇಶ್ವರನು ೧೨೨೮ರಲ್ಲಿ ಕಣ್ಣನೂರಿನಲ್ಲಿ ರಾಜ್ಯಭಾರ ಮಾಡುತ್ತಿದ್ದನೆಂದು ತಿಳಿಸುವುದು. ೧೨೩೦ರಲ್ಲಿ ರಚಿತವಾದ ನಾಗಮಂಗಲದ ೯೮ನೆಯ ಶಾಸನದಲ್ಲಿ 'ವೀರಸೋಮೇಶ್ವರದೇವರು ದೋರಸಮುದ್ರದೊಳ್ ಸುಖಸಂಕಥಾವಿನೋದದಿಂ ಪೃಥ್ವೀರಾಜ್ಯಂಗೈಯುತ್ತಿರೆ' ಎಂದಿದೆ. ಈ ಕಾಲಗಣನೆಯಪ್ರಕಾರ ಇರುವ ಇವನ ಎರಡನೆಯ ಮತ್ತು ಅಯ್ದನೆಯ ವರ್ಷದ ಶಾಸನಗಳು ತಿರುಚನಾಪಳ್ಳಿಜಿಲ್ಲೆಯಲ್ಲಿ ಸಿಕ್ಕುತ್ತವೆ. ಆದುದರಿಂದ ತಮಿಳುನಾಡಿನಲ್ಲಿ ಕ್ರಿ.ಶ. ೧೨೨೮ನ್ನು ಇವನ ರಾಜ್ಯಭಾರದ ಆರಂಭ ಕಾಲವನ್ನಾಗಿ ಇಟ್ಟುಕೊಂಡಿರಬೇಕು. ಕನ್ನಡನಾಡಿನಲ್ಲಾಗಲಿ ತಮಿಳುನಾಡಿನಲ್ಲಾಗಲಿ ಕ್ರಿ. ಶ. ೧೨೫೬ನೆಯ ವರ್ಷದ ಮೇಲೆ ಸೋಮೇಶ್ವರನ ಶಾಸನಗಳಾವುವೂ ಸಿಕ್ಕುವುದಿಲ್ಲ. ಕರ್ಣಾಟಕದಲ್ಲಿ ಇವನ ಮಗ ಮುಮ್ಮಡಿ ನರಸಿಂಹನ ಶಾಸನಗಳು ೧೨೫೭ರಿಂದ ಪ್ರಾರಂಭವಾಗುವುವು. ದಕ್ಷಿಣದಲ್ಲಿಯೂ ಇವನ ಮತ್ತೊಬ್ಬ ಮಗ ರಾಮನಾಥನು ಕ್ರಿ.ಶ. ೧೨೫೭ರಲ್ಲಿ ಆಳುತ್ತಿದ್ದನೆಂದು ಶ್ರೀರಂಗದ ರಂಗನಾಥಸ್ವಾಮಿಯ ದೇವಸ್ಥಾನದ ೪೭೮ನೆಯ ಶಾಸನವು ತಿಳಿಸುವುದು. ತಮಿಳುನಾಡಿನ ಶಾಸನಗಳಲ್ಲಿ ಸೂಚಿಸಿರುವ ವರ್ಷಗಳೆಲ್ಲ ಅವನು ಅಲ್ಲಿ ರಾಜ್ಯಭಾರ ಮಾಡುವುದಕ್ಕೆ ಮೊದಲು ಮಾಡಿದ ಕಾಲವನ್ನು ಸೂಚಿಸುತ್ತವೆ. ಅಲ್ಲಿ ಶಕವರ್ಷಗಳಾಗಲಿ ಚಾಂದ್ರಸಂವತ್ಸರಗಳಾಗಲಿ ಉಕ್ತವಾಗಿಲ್ಲ. ಕರ್ಣಾಟಕದಲ್ಲಿಯಾದರೋ ರಾಜ್ಯಭಾರದ ವರ್ಷಗಳನ್ನು ಸೂಚಿಸದೆ ಶಂಕಸಂವತ್ಸರಗಳನ್ನೂ ಚಾಂದ್ರಮಾನವರ್ಷಗಳನ್ನೂ ಹೇಳಿವೆ. ಅವನ ಜೀವಿತದ ಕೊನೆಯ ಶಾಸನವು ಹೆಗ್ಗಡದೇವನಕೋಟೆಯ ಹತ್ತನೆಯದು. ಆದರ ಕಾಲ ಶಕ ೧೧೭೮

ಅಥವಾ ಕ್ರಿ. ಶ. ೧೨೫೫. ಆಗ ಆತ ಜೀವಂತನಾಗಿರಬೇಕು. ಕೃಷ್ಣರಾಜಪೇಟೆಯ ೯ನೆಯ ಶಾಸನವಾದ ಬಾಚಳ್ಳಿ ಶಾಸನವು ಕ್ರಿ. ಶ. ೧೨೫೬ರಲ್ಲಿ ಸೋಮೇಶ್ವರನು ಪರಂಧಾಮವನ್ನೈದಿದ್ದನೆಂದು ಸ್ಪಷ್ಟವಾಗಿ ಹೇಳುವುದು. ಆದುದರಿಂದ ಸೋಮೇಶ್ವರನ ರಾಜ್ಯಭಾರವು ೧೨೩೪ರಿಂದ ೧೨೫೬ರವರೆಗಿರಬೇಕು. ಸುಂದರಪಾಂಡ್ಯನಿಂದ ಸೋಮೇಶ್ವರನು ಹತನಾದನೆಂದು ಕೃಷ್ಣಶಾಸ್ತ್ರಿಗಳು ಊಹಿಸಿರುವುದಕ್ಕೂ ಇದು ವಿರೋಧವಾಗಿಲ್ಲ. ೧೨೫೪ ರಿಂದ ೧೨೬೧ರವರೆಗೆ ಆತನು ರಾಜ್ಯಭಾರಮಾಡಿದುದರಿಂದ ಆತನು ೧೨೫೬ರಲ್ಲಿ ಸೋಮೇಶ್ವರನನ್ನು ಸಂಹಾರ ಮಾಡಿರಬಹುದು. 'ಮುನ್ನಂ ರೂಢಿಯ ಕೃಷ್ಣ ಕಂಧರನಂ' ಎಂಬ ಪದ್ಯದಲ್ಲಿ ಬರುವ 'ಮಹಾದೇವ' ಎಂಬ ಶಬ್ದವು ಆಶ್ಚರ್ಯಸೂಚಕವೇ ವಿನಾ ಸೇವುಣರ ಮಹಾದೇವನನ್ನು ಕುರಿತದ್ದಲ್ಲ. ಮಹಾದೇವನೊಡನೆ ಯುದ್ಧಮಾಡಿದವನು ಆತನ ಮಗ ನರಸಿಂಹನೇ ವಿನಾ ಸೋಮೇಶ್ವರನಲ್ಲ. ಮಗನು ಸುಮಾರು ೧೫ ವರ್ಷವಾದ ಮೇಲೆ ನಡೆಸಿದ ಜೈತ್ರಯಾತ್ರೆಯನ್ನು ೧೫ ವರ್ಷದ ಹಿಂದೆ ಗತಿಸಿದ ತಂದೆಗೆ ಅನ್ವಯಿಸುವುದು ಸಂಪ್ರದಾಯವಲ್ಲ. ಆದುದರಿಂದ ಸೋಮೇಶ್ವರನು ೧೨೫೬ರವರೆಗೆ ಜೀವಂತನಾಗಿರಬೇಕು. ಅಷ್ಟರಲ್ಲಿ ಸೂಕ್ತಿಸುಧಾರ್ಣವವು ಗ್ರಥಿತವಾಗಿರಬೇಕು.

"ಅಲ್ಲದೆ ಸೋಮೇಶ್ವರನು ಕರ್ಣಾಟಕದಲ್ಲಿ ಸ್ಥಿರವಾಗಿದ್ದುದು ೧೨೪೦ರವರೆಗೆ. ಅಲ್ಲಿಂದ ಮುಂದೆ ತನ್ನ ಅಂತ್ಯಕಾಲದವರೆಗೆ ಆತನು ಕಣ್ಣನೂರಿನಲ್ಲಿಯೇ ರಾಜ್ಯಭಾರ ಮಾಡುತ್ತಿದ್ದನೆಂಬುದು ಶಾಸನಗಳಿಂದ ವ್ಯಕ್ತವಾಗುತ್ತದೆ. ಆ ಕಾಲಕ್ಕೆ ಮುಂಚೆಯೇ ಮಲ್ಲಿಕಾರ್ಜುನನು ಆತನ ಆಸ್ಥಾನಕವಿಯಾಗಿದ್ದು ಈ ಗ್ರಂಥವನ್ನು ರಚಿಸಿರಬೇಕು. ಪ್ರಸಕ್ತವಾದ ಸೂಕ್ತಿಸುಧಾರ್ಣವದಲ್ಲಿ ಬಹುಶಃ ಎರಡನೆಯ ನರಸಿಂಹನ ವಿವಾಹಕ್ಕೆ ಸಂಬಂಧಪಟ್ಟ 'ಎಳವೆಜಿಅಯುಂ ಶ್ರೀಕಂಠಂ'[12] ಎಂಬ ಪದ್ಯವಿರುವುದರಿಂದಲೂ ಸೋಮೇಶ್ವರನ ಪೌರುಷವನ್ನು ವರ್ಣಿಸುವ ಪದ್ಯಗಳೂ ೧೨೩೪ ರಿಂದ ೧೨೩೭ರಲ್ಲಿ ರಚಿತವಾದ ಶಾಸನಗಳ ಪದ್ಯಗಳೂ ಇರುವುದರಿಂದಲೂ ಮಂಡ್ಯದ ೧೨೧–೧೨೨, ನಾಗಮಂಗಲದ ೯೪ನೆಯ ಶಾಸನಗಳು ಏತತ್ಕೃತವಾಗಿರುವುದರಿಂದಲೂ ಈ ಗ್ರಂಥವು ಆ ಶಾಸನಗಳ ಕಾಲಕ್ಕೂ ಸೋಮೇಶ್ವರನು ಕರ್ಣಾಟಕವನ್ನು ಬಿಟ್ಟುಹೋದ ೧೨೪೦ಕ್ಕೂ ಮಧ್ಯಕಾಲದಲ್ಲಿ ರಚಿತವಾಗಿರಬಹುದು. ಇದರ ಪರಮಾವಧಿ ೧೨೪೦."

ಡಾ॥ ಕೃಷ್ಣರ ಈ ಸಿದ್ಧಾಂತ ಸಾಧುವೆಂದು ತೋರುತ್ತದೆ. ಕವಿಚರಿತೆಕಾರರೂ ತಮ್ಮ ಕವಿಚರಿತೆಯ ಮೂರನೆಯ ಸಂಪುಟದ ಉಪೋದ್ಘಾತದಲ್ಲಿ ಡಾ॥ ಅಯ್ಯನವರ ಆಕ್ಷೇಪಣೆಗಳಿಗೆ ಉತ್ತರವೀಯುತ್ತಾ ಸೂಕ್ತಿಸುಧಾರ್ಣವದ ರಚನೆಯ ಕಾಲವು ೧೨೪೫ಕ್ಕಿಂತ ಹಿಂದೆ ಇದ್ದರೂ ಇರಬಹುದೆಂದೂ ಸೂಚಿಸಿದ್ದಾರೆ.[13]

---

12 ಸೂಕ್ತಿಸುಧಾರ್ಣವಂ, ೬-೫೫. 13 ಕವಿಚರಿತೆ — ಸಂಪುಟ ೩, ಪೀಠಿಕೆ LXi

ಕಮಲಭವನ 'ಶಾಂತೀಶ್ವರಪುರಾಣ'ದ ಪದ್ಯಗಳು ಸೂಕ್ತಿಸುಧಾರ್ಣವದಲ್ಲಿರುವು ದರಿಂದ ಕಮಲಭವನು ಸೂಕ್ತಿಸುಧಾರ್ಣವ ಕರ್ತೃವಿಗಿಂತ ಹಿಂದೆ ಸುಮಾರು ೧೨೩೫ರಲ್ಲಿ ದ್ದಿರಬಹುದು ಎಂದು ಕವಿಚರಿತೆಕಾರರು ಸೂಚಿಸಿದ್ದಾರೆ. ವಾಸ್ತವವಾಗಿ ನೋಡಿದರೆ ಈಗ ಶುದ್ಧವೆಂದು ಅಂಗೀಕೃತವಾದ ಸೂಕ್ತಿಸುಧಾರ್ಣವದ ಯಾವ ಮಾತೃಕೆಯಲ್ಲಿಯೂ ಅದರ ಪದ್ಯಗಳು ಸಿಕ್ಕುವುದಿಲ್ಲ. ಕವಿಚರಿತೆಯ ಒಂದನೆಯ ಸಂಪುಟದಲ್ಲಿ ಶಾಂತೀಶ್ವರ ಪುರಾಣದಿಂದ ಉದ್ಧೃತವಾದ ಪದ್ಯಗಳಲ್ಲಿ 'ಪುಟ್ಟದುದಲ್ಲದಿಲ್ಲುಬಿದಭೂತಳಂ'[14] ಎಂದು ಪ್ರಾರಂಭವಾಗುವ ಪದ್ಯ ಮಾತ್ರ ಸೂಕ್ತಿಸುಧಾರ್ಣವದ ಮಾದರಿಯಲ್ಲಿ ರಚಿತವಾದ ಕವಿ ಮಲ್ಲಕೃತ 'ಕಾವ್ಯಸಾರ'ದಲ್ಲಿ ಸಿಕ್ಕುತ್ತದೆ. ಇದನ್ನು ನೋಡಿ ಕವಿಚರಿತೆಕಾರರು ಭ್ರಮಿ ಸಿರಬಹುದು. ಅಲ್ಲದೆ[15] ಡಾ|| ಅಯ್ಯನವರು ತಿಳಿಸಿರುವ ಹಾಗೆ 'ಶಾಂತೀಶ್ವರ ಪುರಾಣ'ವು ೧೨೫೫ರಲ್ಲಿ ಸೂಕ್ತಿಸುಧಾರ್ಣವದ ರಚನೆಯಾದಮೇಲೆ ಹುಟ್ಟಿರಬೇಕು. ಆದುದರಿಂದಲೇ ಸೂಕ್ತಿಸುಧಾರ್ಣವದಲ್ಲಿ ಅದರಿಂದ ಉದಾಹರಣೆಗಳಿಲ್ಲದಿರಬಹುದು.

ಹಾಗೆಯೇ 'ಕಬ್ಬಿಗರ ಕಾವ'ದಿಂದ 'ಸುಧಾರ್ಣವ' ದಲ್ಲಿ ಪದ್ಯಗಳು ಉದ್ಧೃತ ವಾಗಿವೆಯೆಂದೂ ಆದುದರಿಂದ ಅದಕ್ಕಿಂತ ಹಿಂದೆ ಈ ಗ್ರಂಥವು ಸುಮಾರು ೧೨೩೫ರಲ್ಲಿ ರಚಿತವಾಗಿರಬಹುದೆಂದೂ ಕವಿಚರಿತೆಯಲ್ಲಿ ಉಕ್ತವಾಗಿದೆ. 'ಕಬ್ಬಿಗರ ಕಾವ' ವನ್ನು ಪ್ರಕಾಶಮಾಡಿದ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರೂ ಅದರ ಉಪೋದ್ಘಾತ ದಲ್ಲಿ 'ಕಬ್ಬಿಗರ ಕಾವ'ದ ೩೩೭, ೩೩೯, ೩೪೦ನೆಯ ಪದ್ಯಗಳು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಉದಾಹೃತವಾಗಿರುವುದರಿಂದ ಅದಕ್ಕಿಂತ ಹಿಂದೆ ಈ ಗ್ರಂಥವು ರಚಿತವಾಗಿರಬೇಕು' ಎಂದು ಹೇಳಿ ಕವಿಚರಿತ್ರೆಕಾರರ ಮತವನ್ನೇ ಪೋಷಿಸಿದ್ದಾರೆ. ಆದರೆ 'ಶಾಂತೀಶ್ವರ ಪುರಾಣ' ದಂತೆಯೇ ಈ ಮೂರು ಪದ್ಯಗಳೂ ಕವಿಮಲ್ಲಕೃತ ಕಾವ್ಯ ಸಾರದಲ್ಲಿ ಸಿಕ್ಕುತ್ತವೆಯೇ ವಿನಾ ಸೂಕ್ತಿಸುಧಾರ್ಣವದ ಶುದ್ಧಮಾತೃಕೆಗಳಲ್ಲಿ ದೊರೆಯು ವುದಿಲ್ಲ. 'ಕಬ್ಬಿಗರಕಾವ'ಕ್ಕಿಂತಲೂ ಮೊದಲೇ ಸೂಕ್ತಿಸುಧಾರ್ಣವವು ಗ್ರಥಿತವಾಗಿರ ಬಹುದು.

ಇದೂ ಅಲ್ಲದೆ ಮೇಲೆ ಹೇಳಿರುವಂತೆ ವಿವಾಹ ವರ್ಣನೆಯಲ್ಲಿ ಇಮ್ಮಡಿ ನರಸಿಂಹನ ವಿವಾಹಕ್ಕೆ ಸಂಬಂಧಪಟ್ಟ ಪದ್ಯಗಳೂ[16] ಕುಮಾರೋದಯ ವರ್ಣನೆಯಲ್ಲಿ ಇಮ್ಮಡಿ ನರಸಿಂಹ ಮತ್ತು ಸೋಮೇಶ್ವರ ಇವರ ಜೈತ್ರಯಾತ್ರೆಯ ವಿಷಯಕವಾದ ಪದ್ಯಗಳೂ[17]

---

14 ಕವಿಚರಿತೆ, ಸಂಪುಟ ೧, ಪುಟ ೩೬೪. 15 ಕವಿಚರಿತೆಕಾರರು ಸೂಕ್ತಿಸುಧಾರ್ಣ ವದ ಸರಿಯಾದ ಪ್ರತಿ ಯಾವುದೆಂಬುದನ್ನು ವಿಚಾರಮಾಡದಿದ್ದುದು ಭಿನ್ನಾಭಿಪ್ರಾಯಕ್ಕೆ ಕಾರಣ ವಾಗಿದೆ. 16 'ಎಳನೆಯಿಂದೊಪ್ಪುಗೆಕೊಂಡಲ' ಎಂಬ ಪದ್ಯ. 17 ಸೂಕ್ತಿಸುಧಾರ್ಣವ ೫-೩, ೭-೨೦.

ಬರುವುವು. ಚಂದ್ರೋದಯ ವರ್ಣನೆಯಲ್ಲಿ 'ಭಾವಿಪಾದರಿಪ'[18] ಎಂದು ಪ್ರಾರಂಭವಾಗುವ ಪದ್ಯದಲ್ಲಿ ಒಬ್ಬ ಕೇಶವದೇವನನ್ನು ಹೊಗಳಿದೆ. ಬಹುಶಃ ಈತನು ಮಲ್ಲಿಕಾರ್ಜುನನ ಮಗನೂ ಶಬ್ದಮಣಿದರ್ಪಣಕಾರನೂ ಆದ ಕೇಶಿರಾಜನೇ[19] ಇರಬೇಕು. ಈ ಪದ್ಯಗಳೆಲ್ಲ ಆತನ ಗ್ರಂಥವಾದ 'ಚೋಳಪಾಲಕ ಚರಿತೆ' ಯಿಂದ ಆಯ್ದುದಾಗಿರಬೇಕು. ಚೋಳರಾಜನಾದ ಮೂರನೆಯ ರಾಜರಾಜನು (೧೨೧೬–೧೨೫೬) ರಾಜ್ಯವನ್ನು ಕಳೆದುಕೊಂಡು ಸೆರೆಯಲ್ಲಿದ್ದಾಗ ಹೊಯ್ಸಳ ಎರಡನೆಯ ನರಸಿಂಹನು ಅವನ ರಕ್ಷಣೆಯನ್ನು ಕೈಕೊಂಡು ಸೆರೆಯಿಂದ ಬಿಡಿಸಿ ಅವನನ್ನು ಪುನಃ ಸಿಂಹಾಸನದಲ್ಲಿ ಪ್ರತಿಷ್ಠಾಪಿಸಿದನು. ಆದುದರಿಂದ ಈ ನರಸಿಂಹನಿಗೆ 'ಚೋಳಸ್ಥಾಪನಾಚಾರ್ಯ' ಎಂಬ ಬಿರುದುಂಟಾಯಿತು. ಇವನನ್ನೇ ಚೋಳಪಾಲಕನೆಂದು ಕರೆದು ಕೇಶಿರಾಜನು ಇವನ ಚರಿತ್ರೆಯನ್ನು ಕಾವ್ಯರೂಪವಾಗಿ ರಚಿಸಿರಬಹುದು. ತಂದೆ ಮಕ್ಕಳಾದ ಮಲ್ಲಿಕಾರ್ಜುನ ಕೇಶಿರಾಜರಿಬ್ಬರೂ ಸಮಕಾಲೀನರಾಗಿ ನೃಸಿಂಹನ ಕಾಲದಿಂದಲೂ ಹೊಯ್ಸಳರ ಪೋಷಣೆಯಲ್ಲಿದ್ದು ನೃಸಿಂಹ ಸೋಮೇಶ್ವರರ ಬಲ ಪರಾಕ್ರಮಗಳನ್ನು ಪ್ರತ್ಯಕ್ಷ ನೋಡಿ ಮೆಚ್ಚಿ ಅವರ ವಿಷಯಕವಾದ ಗ್ರಂಥಗಳನ್ನು ರಚಿಸಿರಬೇಕು. ಇವರಿಬ್ಬರೂ ಸೇರಿ 'ಸೂಕ್ತಿಸುಧಾರ್ಣವ'ದ ಸಂಕಲನ ಕಾರ್ಯವನ್ನು ನೆರವೇರಿಸಿ ತಮ್ಮ ಕಾವ್ಯದಿಂದಲೂ ಅದರಲ್ಲಿ ಪದ್ಯಗಳನ್ನು ಉದ್ಧರಿಸಿರಬೇಕು. ಇದರ ಆಧಾರದ ಮೇಲೆ ಕೇಶಿರಾಜನು ಪ್ರಯೋಗಗಳನ್ನು ಕಂಡು ತನ್ನ ವ್ಯಾಕರಣಕ್ಕೆ ಉಪಯೋಗಮಾಡಿಕೊಂಡಿರಬಹುದು. ಇದು ನಿಜವಾದ ಪಕ್ಷದಲ್ಲಿ ಇವರಿಬ್ಬರೂ ಸೋಮೇಶ್ವರನಿಗಿಂತ ಹಿರಿಯರಾಗಿದ್ದು ಅವನು ತಮಿಳುನಾಡಿಗೆ ಹೋಗುವುದಕ್ಕಿಂತ ಮುಂಚೆ ದೋರಸಮುದ್ರದಲ್ಲಿರುವಾಗಲೇ ಅವನ ಸಂತೋಷಕ್ಕಾಗಿ ೧೨೪೦ರ ಸುಮಾರಿನಲ್ಲಿ ಸೂಕ್ತಿಸುಧಾರ್ಣವವನ್ನು ರಚಿಸಿರಬಹುದೆಂದು ಹೇಳುವುದು ಸಮಂಜಸವಾಗಿ ಕಾಣುತ್ತದೆ. ಬಸರಾಳು ಶಾಸನದ ಕಾಲವು ನಿಷ್ಕೃಷ್ಟವಾಗಿ ೧೨೩೭ ಎಂದು ಗೊತ್ತಾಗಿರುವುದರಿಂದ ಈ ಕಾಲ ನಿರ್ಣಯವು ಮತ್ತಷ್ಟು ಸೂಕ್ತವಾಗಿ ಭಾಸವಾಗದಿರದು.

ಮಲ್ಲಿಕಾರ್ಜುನನಿಂದ ಸಂಕಲಿತವಾದ ಸೂಕ್ತಿಸುಧಾರ್ಣವವಲ್ಲದೆ ಅದರ ಮಾದರಿಯಲ್ಲಿ ಅದರ ಅನೇಕ ಪದ್ಯಗಳನ್ನೊಳಗೊಂಡ ಕವಿಮಲ್ಲಕೃತ 'ಕಾವ್ಯಸಾರ'ವೆಂಬ ಮತ್ತೊಂದು ಗ್ರಂಥವಿದೆ. ಸಂಪಾದಕರಲ್ಲಿದ್ದ ಕಾಗದದ ಪ್ರತಿ (ಕ), ಮೈಸೂರು ಪ್ರಾಚ್ಯ ಕೋಶಾಗಾರದ ಕೆ. ಎ. ೫೧, ಶೃಂಗೇರಿ ಮಠದ ಓಲೆಯ ಪ್ರತಿ (ಖ), ಈಚೆಗೆ ೧೯೩೬ರಲ್ಲಿ ಸಂಪಾದಕರು ಸಂಚಾರ ಹೋಗಿದ್ದಾಗ ಬೇಲೂರಿನಿಂದ ತಂದ ಓಲೆಯ ಪ್ರತಿ (ಬ) ಮತ್ತು ಡಾ॥ ಕೃಷ್ಣರವರು ತಮ್ಮ ವರದಿಯಲ್ಲಿ ವಿವರಿಸಿರುವ ಓಲೆಯ ಪ್ರತಿ—ಇವು

---

18 ಅದೇ ಗ್ರಂಥ, ೮-೩೮೧. 19 ಸಾಹಿತ್ಯ ಪ್ರಪಂಚದಲ್ಲಿ ಈ ಕಾಲದವರೆಗೆ ಮಾತ್ರಾನ ಕೇಶಿರಾಜನೂ ನಮಗೆ ಪರಿಚಿತನಾಗಿಲ್ಲ.

ಒಂದು ಸಂಗಡಕ್ಕೆ ಸೇರಿದವು. ಇವೇ ಮಲ್ಲಿಕಾರ್ಜುನನಿಂದ ಸಂಕಲಿತವಾದ ಮೂಲ ಗ್ರಂಥ. ಇವೆಲ್ಲವೂ ಹೆಚ್ಚು ಕಡಿಮೆ ಒಂದೇ ಮಾದರಿಯವು. ಅಲ್ಪ ಸ್ವಲ್ಪ ಪಾಠಭೇದಗಳಿದ್ದರೂ ಆಕಾರ, ಮಿತಿ, ಜೋಡಣೆ ಮೊದಲಾದುವುಗಳಲ್ಲಿ ಒಂದೇ ರೀತಿಯಾಗಿವೆ. ಪ್ರಾಚ್ಯ ಕೋಶಾಗಾರದ ಕೆ. ಎ. ೧೮೦ರ ಎರಡು ಸಂಪುಟಗಳು, ಮೈಸೂರು ಭಕ್ಷಿ ನರಸಪ್ಪನವರ ಮನೆಯಲ್ಲಿರುವ ಓಲೆಯ ಪ್ರತಿ ಮತ್ತು ಬೇಲೂರು ತಾಲ್ಲೂಕು ಬಿಕ್ಕೋಡು ಹೋಬಳಿ ಹೊನ್ನವಳ್ಳಿ ಜೋಡೀದಾರ್ ನಾರಾಯಣ ಭಟ್ಟರಿಂದ ತಂದಿದ್ದ ಓಲೆಯ ಪ್ರತಿ—ಇವು ಮೂರೂ ಮತ್ತೊಂದು ಗುಂಪಿಗೆ ಸೇರಿದುವು. ಇವು ಮೂಲ ಸೂಕ್ತಿಸುಧಾರ್ಣವ ಗ್ರಂಥದ ಆಧಾರದಮೇಲೆ ಅನೇಕ ಪ್ರಾಚೀನ ನವೀನ ಕವಿಗಳ ಪದ್ಯಗಳನ್ನು ಸೇರಿಸಿಕೊಂಡು ಆವಶ್ಯಕವಲ್ಲವೆಂದು ತೋರಿದುದನ್ನು ಬಿಟ್ಟು ವಿಸ್ತೃತವಾಗಿರುವುವು. ಇವುಗಳಲ್ಲಿ ಮಲ್ಲಿಕಾರ್ಜುನನಿಗಿಂತ ಆಧುನಿಕರಾದ ಮಧುರ, ಬಾಹುಬಲಿ, ಚೌಂಡರಸ ಮೊದಲಾದವರ ಗ್ರಂಥಗಳಿಂದ ಪದ್ಯಗಳು ಉದ್ಧೃತವಾಗಿರುವುದರಿಂದ ಈ ಕಾವ್ಯಸಾರವು ಮಲ್ಲಿಕಾರ್ಜುನನಿಂದ ಸಂಕಲಿತವಾದುದಲ್ಲವೆಂದು ಹೇಳಬೇಕು. ಅಲ್ಲದೆ ಈ ಪ್ರತಿಗಳಲ್ಲಿ ಮೂಲ ಗ್ರಂಥಕ್ಕಿರುವ ಸೂಕ್ತಿಸುಧಾರ್ಣವ ಮತ್ತು ಕಾವ್ಯಸಾರ ಎಂಬ ಎರಡು ಹೆಸರುಗಳಲ್ಲಿ ಸೂಕ್ತಿಸುಧಾರ್ಣವವೆಂಬ ಹೆಸರು ಎಲ್ಲಿಯೂ ಕಂಡುಬರುವುದಿಲ್ಲ. ಇಲ್ಲಿ ಇರುವ ಆಶ್ವಾಸಾಂತ್ಯ ಗದ್ಯವೂ ವ್ಯತ್ಯಾಸವಾಗಿದೆ. ಪೀಠಿಕಾಪ್ರಕರಣದಲ್ಲಿರುವ ಹೊಯ್ಸಳರ ವಂಶ ವರ್ಣನೆಗೆ ಸಂಬಂಧಪಟ್ಟ ಪದ್ಯಗಳು ಪೂರ್ಣವಾಗಿ ಲುಪ್ತವಾಗಿವೆ. ಅಂಗೀಕೃತ ಪ್ರತಿಗಳಲ್ಲಿ ಇಲ್ಲದ ಜಿನಸ್ತುತಿ ಇವುಗಳ ಆರಂಭ ಪದ್ಯವಾಗಿದೆ[20]. ಮೊದಲನೆಯ ಗುಂಪಿನ ಪ್ರತಿಗಳಲ್ಲಿ ಯುದ್ಧವರ್ಣನೆಯನ್ನು ಉಳಿದು ಪೀಠಿಕಾ ಪ್ರಕರಣ ಸೇರಿ ೧೮ ಆಶ್ವಾಸಗಳಿವೆ. ಎರಡನೆಯದರಲ್ಲಿ ೧೫ ಆಶ್ವಾಸಗಳಿವೆ. ಬಹುಶಃ ಇಲ್ಲಿಯೂ ಉಳಿದ ಆಶ್ವಾಸಗಳಿದ್ದು ಲುಪ್ತವಾಗಿರಬಹುದು. ಮೊದಲನೆಯ ಸೂಕ್ತಿಸುಧಾರ್ಣವದಲ್ಲಿ ಸುಮಾರು ೨,೨೦೦ ಪದ್ಯಗಳಿವೆ. ಎರಡನೆಯದರಲ್ಲಿ ಸುಮಾರು ೩,೪೭೫ ಪದ್ಯಗಳಿವೆ. ಇವೆರಡಕ್ಕೂ ಸಮಾನವಾದ ಪದ್ಯಗಳು ಸುಮಾರು ೮೭೫ ಮಾತ್ರ. ಇದರ ಆಧಾರದಮೇಲೆ ಮತ್ತೊಂದು ಪೂರ್ವಪಕ್ಷ ಶಂಕಿತವಾಗಬಹುದು. ವಿಸ್ತಾರ ಮಾಡಬೇಕೆಂದು ಹೊರಡುವವನು ನವೀನ ಕಾವ್ಯಗಳಿಂದಲೂ ಪದ್ಯವನ್ನು ಆರಿಸಿಕೊಂಡು ದೊಡ್ಡದುಮಾಡಬೇಕೇ ವಿನಾ ಮೂಲ ಗ್ರಂಥಗಳಲ್ಲಿರುವುದನ್ನು ಬಿಡುವುದು ಅಸಂಭವವಾದುದರಿಂದ ಮೂಲ ಗ್ರಂಥದ ಮಿತಿಯೂ ಎರಡಕ್ಕೂ ಸಂವಾದಿಯಾಗಿರುವ ೮೭೫ ಪದ್ಯಗಳಷ್ಟೇ ಇರಲಾರವೇಕೆ ? ಮೊದಲನೆಯ ಸಂಪ್ರದಾಯಕ್ಕೆ ಸೇರಿದ ಪಾಠವು ಬುದ್ಧಿವಂತನಾದ ಒಬ್ಬನಿಂದ ಮಲ್ಲಿಕಾರ್ಜುನನಿಂದಲೇ ರಚಿತವಾಗಿರುವಂತೆ ಭ್ರಮೆ ಬರುವ ಹಾಗೆ ಎಚ್ಚರಿಕೆಯಿಂದ ಅವನ ಹಿಂದಿನ ಕಾಲದ

---

20 ಶ್ರೀಮಾನ್ಗಳಾದ ಆರ್. ನರಸಿಂಹಾಚಾರ್ಯರೂ ಎಸ್. ಜಿ. ನರಸಿಂಹಾಚಾರ್ಯರೂ ಈ ಗ್ರಂಥಪಾಠವನ್ನು ಮಲ್ಲಿಕಾರ್ಜುನನಿಂದ ಸಂಕಲಿತವಾದ ಮೂಲ ಪಾಠವೆಂದು ಭ್ರಮಿಸಿರುವುದರಿಂದ ಕಾಲ ಮತ್ತು ವಿಚಾರಗಳಲ್ಲಿ ಅವರ ಅಭಿಪ್ರಾಯವು ಭಿನ್ನವಾಗಿದೆ.

ಕಾವ್ಯಗಳ ಪದ್ಯಗಳನ್ನು ತುಂಬುವುದರ ಮೂಲಕ ಏಕೆ ವಿಸ್ತೃತವಾಗಿರಬಾರದು ಎಂದು. ಇದಕ್ಕೆ ಹೀಗೆಯೇ ಸರಿ ಎಂದು ಸಿದ್ಧಾಂತಮಾಡಿ ಹೇಳಲು ಸಾಧ್ಯವಿಲ್ಲ. ಒಂದನೆಯ ಗುಂಪಿನ ಪ್ರತಿಗಳ ಪಾಠದಲ್ಲಿ ಕವಿಯಿಂದ ಆಶ್ವಾಸ ಪ್ರಾರಂಭದಲ್ಲಿ ಉಕ್ತವಾಗಿರುವ ವರ್ಣನೀಯಾಂಶಗಳನ್ನು ತಿಳಿಸುವ ಎರಡು ಪದ್ಯಗಳಿಗೆ ಅನುಗುಣವಾಗಿ ವರ್ಣನೆಗಳಿರುವುದರಿಂದಲೂ ಈಗ ಸಿಕ್ಕಿರುವ 'ಸೂಕ್ತಿಸುಧಾರ್ಣವ'ವೆಂಬ ಹೆಸರುಳ್ಳ ಗ್ರಂಥದ ಪ್ರತಿಗಳೆಲ್ಲವೂ ಒಂದೇ ರೀತಿಯ ಪಾಠವನ್ನೂ ಕ್ರಮವನ್ನೂ ಉಳ್ಳುದರಿಂದಲೂ ಇವಕ್ಕೆಲ್ಲ ಒಂದೇ ಮೂಲ ಮಾತೃಕೆಯಾಗಿದ್ದರೂ ಇರಬಹುದು! ಮಲ್ಲಿಕಾರ್ಜುನನಿಗಿಂತ ಆಧುನಿಕವಾದ ಗ್ರಂಥಗಳ ಪದ್ಯಗಳು ಅಲ್ಲಿಲ್ಲದುದರಿಂದಲೂ ಅದೇ ಮಲ್ಲಿಕಾರ್ಜುನನಿಂದ ಸಂಕಲಿತವಾದ ಗ್ರಂಥವೆಂದು ಸ್ಥೂಲವಾಗಿ ಹೇಳಬಹುದು. ದ್ವಿತೀಯ ಸಂಗ್ರಹಕಾರನು ಮೊದಲ ಪ್ರತಿಯಲ್ಲಿ ತನಗೆ ರುಚಿಸದೇ ಇರುವ ಪದ್ಯಗಳನ್ನು ಬಿಟ್ಟು ಆಕರ್ಷಕವಾದ ಹೊಸ ಪದ್ಯಗಳನ್ನು ಆಯ್ದು ಸೇರಿಸಿ ದೊಡ್ಡದನ್ನಾಗಿ ಮಾಡಿಕೊಂಡಿರಬಹುದು.[21]

---

[21] ಈ ವಿಸ್ತೃತ ಗ್ರಂಥವು ಮಲ್ಲಿಕಾರ್ಜುನನ ಮೂಲಗ್ರಂಥಕ್ಕಿಂತ ಭಿನ್ನವಾಗಿದ್ದರೂ ಅದಕ್ಕಿಂತ ಈಚಿನದಾದರೂ ಅದು ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಬಹು ಮುಖ್ಯವಾಗಿದೆ. ಅದರಲ್ಲಿ ಒಟ್ಟು ಸುಮಾರು ೩,೫೭೫ ಪದ್ಯಗಳಿವೆ. ಅವುಗಳಲ್ಲಿ ಮೂಲ ಸೂಕ್ತಿಸುಧಾರ್ಣವದಲ್ಲಿಯೂ ಈಗ ಉಪಲಬ್ಧವಾಗಿರುವ ಇತರ ಗ್ರಂಥಗಳಲ್ಲಿಯೂ ಇಲ್ಲದ ಸುಮಾರು ೫೦೦ ಪದ್ಯಗಳಿವೆ. ಇವುಗಳಲ್ಲಿ ನಮಗೆ ಇದುವರೆಗೂ ತಿಳಿಯದ ಎಷ್ಟೋ ವಿಷಯಗಳು ಪ್ರಕಾಶಕ್ಕೆ ಬರುವುವು. ಈ ಗ್ರಂಥದಲ್ಲಿ ಮೊದಲನೆಯ ಆಶ್ವಾಸದಿಂದ ಕ್ರಮವಾಗಿ ಮಧುರನ 'ಧರ್ಮನಾಥಪುರಾಣ'ದಿಂದ ಪದ್ಯಗಳನ್ನು ಉದ್ಧರಿಸಿದೆ. ಈಗ ಉಪಲಬ್ಧವಾಗಿರುವ ಆ ಗ್ರಂಥದ ನಾಲ್ಕು ಆಶ್ವಾಸಗಳಿಂದಲೇ ಸುಮಾರು ೪೦ ಪದ್ಯಗಳು ಇಲ್ಲಿ ಉದಾಹೃತವಾಗಿವೆ. ಮುಂದೆ ಇದೇ ರೀತಿ ಆ ಗ್ರಂಥದ ಅನೇಕ ಪದ್ಯಗಳು ದೊರೆಯಬಹುದು. ಈ ಗ್ರಂಥದಲ್ಲಿ ನರಸಿಂಹ ಮತ್ತು ಸೋಮಶೇಖರ (ಶಶಿಶೇಖರ, ಚಂದ್ರಶೇಖರ)ರ ವಿಷಯವಾಗಿ ಅನೇಕ ಪದ್ಯಗಳು ಸಿಕ್ಕುವುವು. ಸೋಮಶೇಖರ, ಚಂದ್ರಶೇಖರ, ಶಶಿಶೇಖರ ಎಂಬುವು ಸೋಮೇಶ್ವರನ ಪರ್ಯಾಯನಾಮಗಳಿರಬಹುದು. ಈ ಪದ್ಯಗಳೆಲ್ಲವೂ ಕೇಶಿರಾಜನ 'ಚೋಳಪಾಲಕ ಚರಿತ್ರೆ'ಯಿಂದ ಉದ್ಧೃತವಾಗಿರಬಹುದು. ಕೆಲವು ಪದ್ಯಗಳಲ್ಲಿ ಕುಸುಮಪುರಿ, ಅವಂತಿಕಾಪುರಿ, ಮಿಥಿಳೆ, ಚಂಪಾಪುರ, ವಸಂತಿಕಾಪುರ, ಸುಮನಃಪುರಗಳ ವರ್ಣನೆಯಿದೆ. ಮತ್ತೆ ಕೆಲವುಗಳಲ್ಲಿ ಪುಷ್ಪಪುರೇಶರಾಜಹಂಸ, ವಿಜಯಾಧಿಪಭೂಪ, ಬಾಗೆಯ ವಿಭುಮಲ್ಲ, ಶ್ರೀ ಗಂಡಮಾರ್ತಾಂಡ, ಪ್ರೌಢದೇವ ಮೊದಲಾದವರ ವಿಷಯ ಉಕ್ತವಾಗಿದೆ. ಕಲಾವಿಲಾಸನ ವಿಷಯಕವಾದ ಅಯ್ದು ಪದ್ಯಗಳಿವೆ (ಇವು ಈಗ ಅಚ್ಚಾಗಿರುವ ಅಭಿನವವಾದಿ ವಿದ್ಯಾನಂದನ ಕಾವ್ಯಸಾರದ ಕೊನೆಯಲ್ಲಿರುವ ಕಲಾವಿಲಾಸನೆಂಬ ಅಂಕಿತವಿರುವ ಪದ್ಯಗಳಿಗಿಂತ ಭಿನ್ನವಾದುದು), ಕವಿಪಂಚಮಾರ್ಗಣ ಅಥವಾ ಕವಿಪಂಚಬಾಣನ ವಿಷಯ ಮೂರು ನಾಲ್ಕು ಪದ್ಯದಲ್ಲಿ ಬರುತ್ತದೆ. (ಸಾಂಗತ್ಯದಲ್ಲಿ ಭುಜಬಲಿ ಚರಿತೆಯನ್ನು ಸು.೧೬೧೦ರಲ್ಲಿ ರಚಿಸಿದ

ಮಲ್ಲಿಕಾರ್ಜುನನು ತನ್ನನ್ನು ಯಾದವಕಟಕಾಚಾರ್ಯ ಸುಕವಿ ಸುಮನೋಬಾಣಜಾತನಾತ್ಮ ಎಂದು ಹೇಳಿಕೊಂಡಿದ್ದಾನೆಯೇ ವಿನಾ ತನ್ನ ತಂದೆ ತಾಯಿಗಳ ಹೆಸರನ್ನು ತಿಳಿಸಿಲ್ಲ. ಹಿಂದೆಯೇ ತಿಳಿಸಿರುವಂತೆ ತಾನು ಸರಸ ಕವೀಶ್ವರ ಸಭೆಯಲ್ಲಿ ಸರಸ ಕವೀಶನೆಂತಲೂ ವಿಶಿಷ್ಟ ಮುನಿಗಳ ಸಭೆಯಲ್ಲಿ ಪರಮಮುನಿಯೆಂತಲೂ ಬುಧರ ಸಭೆಯಲ್ಲಿ ಪರಮಬುಧನೆಂತಲೂ ವಿಶೇಷಿಸಿಕೊಂಡಿದ್ದಾನೆ. ಹಿಂದೆ ಶ್ರೀಹರ್ಷನೂ ಭೋಜ ಭೂಪತಿಯೂ ವಜ್ರಹಸ್ತನೃಪನೂ ಕೃತಿಗೆ ಪ್ರೋತ್ಸಾಹಕರಾಗಿ ಕೀರ್ತಿಪಡೆದಹಾಗೆ ಈಗ ಮಲ್ಲಿಬುಧನಿಂದ ಈ ಗ್ರಂಥವನ್ನು ಬರೆಯಿಸಿ ಸರ್ವಜ್ಞ ಸೋಮೇಶನೂ ಉನ್ನತಿಯನ್ನು ಪಡೆದನೆಂದು ಹೇಳಿದ್ದಾನೆ. ಶ್ರೀಹರ್ಷನು ಪ್ರಸಿದ್ಧವಾದ 'ರತ್ನಾವಳಿ'ಯೇ ಮೊದಲಾದ ನಾಟಕಗಳನ್ನು ರಚಿಸಿ ಬಾಣಕವಿಗೆ ಪೋಷಕನಾಗಿದ್ದವನು. ಭೋಜನು ಅಕ್ಷರಲಕ್ಷ ದಾನ ಮಾಡಿದ ಕೀರ್ತಿಯಿಂದ ಕೂಡಿದ ಧಾರಾನಗರದ ಭೋಜರಾಜ; ವಜ್ರಹಸ್ತ ನೃಪ ಯಾರೋ ತಿಳಿಯದು.[22] ಕನ್ನಡ ಕವಿಗಳಲ್ಲಿ ಇವನು ಜನ್ನ, ಪಂಪ, ಗುಣನಂದಿ, ಗಜಾಂಕುಶ, ಗುಣವರ್ಮ ಇವರುಗಳನ್ನು ಸ್ತೋತ್ರ ಮಾಡಿದ್ದಾನೆ. ಜನ್ನನು 'ಯಶೋಧರ ಚರಿತ್ರೆ,' 'ಅನಂತನಾಥ ಪುರಾಣ'ಗಳ ಕರ್ತೃ; ಪಂಪನು ಪ್ರಸಿದ್ಧನಾದ 'ಆದಿಪಂಪ'; ಗುಣವರ್ಮನು 'ಹರಿವಂಶ,' 'ಶೂದ್ರಕ'ಗಳನ್ನು ರಚಿಸಿದ ಒಂದನೆಯ ಗುಣ

---

ಪಂಚಬಾಣ ಈತನಲ್ಲ). ಮುಗ್ಧಮೋಹನ, ವಿಕ್ರಮತಿಮಿಂಗಿಲ, ಛಲದಂಕಮಲ್ಲ, ಅಕಳಂಕ ಮಲ್ಲ, ನಿಕಳಂಕಮಲ್ಲ, ಜಗದೇಕಮಲ್ಲ, ಅರುಹಂತದೇವ, ಸುಚರಿತ್ರಕೋವಿದ ಮೊದಲಾದ ಅಂಕಿತ ಗಳಿಂದ ಮುಗಿಯುವ ಪದ್ಯಗಳು ಮಧ್ಯೆಮಧ್ಯೆ ದೊರೆಯುವುವು. ಇವುಗಳಲ್ಲಿ ಕೆಲವಾದರೂ ನರಸಿಂಹ ಸೋಮೇಶ್ವರರ ಬಿರುದುಗಳಿರಬೇಕು. (ಸೂಕ್ತಿಸುಧಾರ್ಣವದ ೫—೨೬ರಲ್ಲಿ ಮಲ್ಲಿಕಾರ್ಜುನನು ಸೋಮೇಶ್ವರನನ್ನು 'ಛಲದಂಕರಾಮ ಸೋಮನೃಪಾಲಂ' ಎಂದು ಸಂಬೋಧಿಸಿರುವುದನ್ನು ನೋಡಿ.) ೫—೧೯೨ರಲ್ಲಿ ಒಬ್ಬ ನಾಗವರ್ಮನ ಕೀರ್ತಿಯು ವರ್ಣಿತವಾಗಿದೆ. (ಅದು ಈಗ ಉಪಲಬ್ಧವಾಗಿರುವ ನಾಗವರ್ಮಕೃತ ಗ್ರಂಥಗಳಲ್ಲಿ ಸಿಕ್ಕುವುದಿಲ್ಲ.) ಹರಿಯ ವಿಷಯವಾಗಿ ಈಗ ದೊರೆತಿರುವ ಯಾವ ಗ್ರಂಥಗಳಲ್ಲಿಯೂ ಇಲ್ಲದ ಅಚ್ಯುತ, ಕೃಷ್ಣರ ವಿಷಯಕವಾದ ಪದ್ಯಗಳು ಅಲ್ಲಲ್ಲಿಯೆ ಹೇರಳವಾಗಿರುವುವು. 'ಜಗನ್ನಾಥ ವಿಜಯ'ದಿಂದಲೇ ಉದ್ಧೃತವಾಗಿರಬೇಕೆಂದು ಸಂಶಯವನ್ನುಂಟುಮಾಡುವ 'ಶ್ರೀಜಗನ್ನಾಥನಾ' ಎಂಬುದಾಗಿ ಮುಗಿಯುವ ಒಂದು ಪದ್ಯವು ೭ನೆಯ ಆಶ್ವಾಸಾಂತ್ಯದಲ್ಲಿದೆ. ಉಷಾಪರಿಣಯಕ್ಕೆ ಸಂಬಂಧಪಡುವ ಎರಡು ಪದ್ಯಗಳು ಆರನೆಯ ಆಶ್ವಾಸದಲ್ಲಿವೆ. ಕುಮಾರಸಂಭವದ ಭಾಗವಿರಬಹುದಾದ ಗಿರಿರಾಜನ ಆಸ್ಥಾನ, ಪಾರ್ವತಿಯ ಬಾಲ್ಯ, ರತೀಮನ್ಮಥರ ರೂಪಲಾವಣ್ಯ, ಗಿರಿಜಾಕಲ್ಯಾಣ ಮೊದಲಾದುವುಗಳಿಗೆ ಸಂಬಂಧಪಟ್ಟ ಪದ್ಯಗಳು ಎಡೆಯೆಡೆಯಲ್ಲಿ ಗೋಚರವಾಗುವುವು. ಇವು ಹರಿಹರನ ಗಿರಿಜಾಕಲ್ಯಾಣದ ಭಾಗಗಳಲ್ಲ; ಇವೆಲ್ಲ ಇದುವರೆಗೆ ಪರಿಚಿತವಾಗಿರುವ ಕನ್ನಡ ಸಾಹಿತ್ಯಚರಿತ್ರೆಗೆ ಅಗೋಚರವಾದವು.

೨೨ ಎರಡನೆಯ ಗುಣವರ್ಮನು ತನ್ನ ಪುಷ್ಪದಂತ ಪುರಾಣದ ೧—೬೭ನೆಯ ಪದ್ಯದಲ್ಲಿ ಹೇಳುವ ವಜ್ರದೇವನೇ ಇವನಿರಬಹುದೆ?

ವರ್ಮನೋ 'ಪುಷ್ಪದಂತ ಪುರಾಣ'ವನ್ನು ರಚಿಸಿದ ಎರಡನೆಯ ಗುಣವರ್ಮನೋ ಹೇಳುವುದು ಕಷ್ಟ. ಸೂಕ್ತಿಸುಧಾರ್ಣವದಲ್ಲಿ ಇವರಿಬ್ಬರ ಗ್ರಂಥಗಳಿಂದಲೂ ಪದ್ಯಗಳು ಉದ್ಧೃತವಾಗಿವೆ. ಗುಣನಂದಿಯು, ಕೇಶಿರಾಜನೂ ಭಟ್ಟಾಕಳಂಕನೂ ಸ್ತುತಿಸುವ, ಜೈನೇಂದ್ರ ವ್ಯಾಕರಣಕ್ಕೆ ವ್ಯಾಖ್ಯಾನವನ್ನು ರಚಿಸಿರುವ, ಶ್ರವಣಬೆಳಗೊಳದ ೬೩, ೧೧೭, ೧೨೭ನೆಯ ಶಾಸನಗಳಲ್ಲಿ ಉಕ್ತವಾಗಿರುವ ಜೈನ ಗುರುವಿರಬೇಕು. ಈತನು ಕ್ರಿ.ಶ. ೯೦೦ಕ್ಕಿಂತ ಹಿಂದೆ ಇದ್ದಿರಬೇಕು.[23] ಈತನು ಯಾವ ಕನ್ನಡ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು. ಗಜಾಂಕುಶನು, ದುರ್ಗಸಿಂಹ, ನಯಸೇನ ಮೊದಲಾದವರಿಂದ ಸ್ತುತನಾದ. ಸುಮಾರು ಕ್ರಿ.ಶ. ೧೦೦೦ ರಲ್ಲಿದ್ದಿರಬಹುದಾದ ಕವಿಯೂ ದಂಡನಾಯಕನೂ ಆದವನು ಇವನನ್ನು ರುದ್ರಭಟ್ಟನೇ ಮೊದಲಾದ ಅನೇಕ ಕನ್ನಡ ಕವಿಗಳು ಸ್ತೋತ್ರ ಮಾಡಿರುವುದರಿಂದ ಇವನು ಪ್ರಸಿದ್ಧ ಕನ್ನಡ ಕವಿಯಾಗಿರಬೇಕು. ಆದರೆ ಅವನ ಗ್ರಂಥಗಳಾವುವೂ ದೊರೆತಿಲ್ಲ. ಇವರಿಂದಲೇ ಅಲ್ಲದೆ ಸೂಕ್ತಿಸುಧಾರ್ಣವದಲ್ಲಿ ನಮಗೆ ತಿಳಿದವಟ್ಟಿಗೆ ಮಲ್ಲಿಕಾರ್ಜುನನಿಗಿಂತ ಪ್ರಾಚೀನರಾದ ಸುಮಾರು ೨೫ ಕವಿಗಳ ಗ್ರಂಥಗಳಿಂದ ಪದ್ಯಗಳು ಉದಾಹೃತವಾಗಿವೆ. ಅವುಗಳ ಪಟ್ಟಿಯನ್ನು ಮೂರನೆಯ ಅನುಬಂಧದಲ್ಲಿ ಕೊಟ್ಟಿದೆ.

ಮಲ್ಲಿಕಾರ್ಜುನನು ತಾನು ಗ್ರಂಥವನ್ನು ರಚಿಸುವುದಕ್ಕೆ ಕಾರಣವನ್ನು ಮುಂದಿನ ಪದ್ಯದಲ್ಲಿ ವಿಸ್ತರಿಸಿದ್ದಾನೆ.

ಕರೆದು ಬುಧವ್ರಜಂ ಸುಕವಿ ಮಲ್ಲಪನಂ ಮನದಟ್ಟಿಱಿಂದಮಾ
ದರಿಸಿ ಸುಧಾರ್ಣವಾಖ್ಯ ಕೃತಿಯಂ ರಚಿಯಿಪ್ಪುದೆನಲ್ಕೆ ಲೋಕವ
ಚ್ಚರಿವಡೆ ಸಜ್ಜನರ್ ಪೊಗೞೆ ಸೋಲಮುಗುಂದಲೆಯಾಗೆ ಬಿಚ್ಚತಂ
ಪರಿಣತರಪ್ಪರೊಲ್ದೆಳಸೆ ಪೇೞಲೊಡರ್ಚಿದೆನೀ ಪ್ರಬಂಧಮಂ

ಮುಂದಿನ ಪದ್ಯಗಳಲ್ಲಿ ಆತನ ಕಾವ್ಯದ ಪ್ರೌಢಿಮೆ ಉಕ್ತವಾಗಿದೆ :—

ಚದುರರ ಮೆಚ್ಚು ಭಾವುಕರ ಕೈಪಿಡಿ ಜಾಣರ ಬಯ್ಕೆ ಸತ್ಕಲಾ
ವಿದರ ವಿಲಾಸಮುಕ್ಕರಿಗರಾಭರಣಂ ಬುಧರಿಚ್ಚೆಯಚ್ಚು ವೀ
ರದ ಕಣಿ ಕೂರ್ತು ಕೂರಿಸಿದ ನಲ್ಲಳ ಮೈಸಿರಿ ತಾನೆನಿಪ್ಪ ಸ
ಮ್ಮದದೊಳೆ ಬಣ್ಣಿಕುಂ ಧರಣಿ ಸತ್ಕವಿಮಲ್ಲನ ಕಾವ್ಯಸಾರಮಂ

ಚದುರೆಸೆವಂತು ಭಾವಮುಮರ್ವಂತು ನಯಂ ನಿಮಿರ್ವಂತು ಮಲ್ಲಪಂ
ಪದನಿಡೆ ಭಾರತೀವನಿತೆ ಭೋಂಕೆನೆ ಬಂದು ಮನಸ್ಸರೋಜದೊಳ್
ಚದುರೆಸೆವಂತು ಭಾವಮುಮರ್ವಂತು ನಯಂ ನಿಮಿರ್ವಂತು ಲೀಲೆಯಿಂ
ಪದವಿಡುತಿರ್ಪ ವಾಹನವನಕಾರಣಮಂತ್ರವಿದಾಗದಿರ್ಕುಮೇ

[23] ಇವನ ಕಾಲದ ವಿಷಯದಲ್ಲಿ ಅಯ್ಯನವರು ಮಾಡಿರುವ ನಿರ್ಣಯ ಸೂಕ್ತವಾಗಿಲ್ಲ.

ಪದವಿನ್ಯಾಸದ ದೇಸಿ ಮಾರ್ಗದ ವಿಲಾಸಂ ರೂಢಿವೆತ್ತಂಗಹಾ
ರದಲಂಕಾರದ ಬಂಧ ಭಾವದೆಸಕಂ ಮೆಲ್ಪಾಡಿನೋಳ್ಪಂತೆ ಕೂ
ಡಿದ ನಾನಾರಸಸಾರದಾನಮೆಸೆದತ್ತೆಂದೊಲ್ದು ಕೈಕೊಂಡು ಮೆ
ಚ್ಚಿದನಾ ಸೂಕ್ತಿಸುಧಾರ್ಣವಾಹ್ವಕೃತಿಪಾತ್ರಶ್ರೀಗೆ ಸೋಮೇಶ್ವರಂ

ಈಗಾಗಲೇ ತಿಳಿಸಿರುವಂತೆ ಸೂಕ್ತಿಸುಧಾರ್ಣವವು ಒಂದು ಸಂಕಲನ ಗ್ರಂಥ. ಇದರಲ್ಲಿ ಪೀಠಿಕಾಪ್ರಕರಣವೂ ಸೇರಿ ೧೯ ಆಶ್ವಾಸಗಳಿವೆ[24]. ಗ್ರಂಥಾರಂಭದಲ್ಲಿ ವಿಷ್ಣು, ಈಶ್ವರ, ಗಜಾನನ, ಸರಸ್ವತಿ ಇವರ ಸ್ತೋತ್ರವಿದೆ. ಮುಂದೆ ೧೫ ಪದ್ಯಗಳಲ್ಲಿ ಸಳನಿಂದ ಹಿಡಿದು ವೀರಸೋಮೇಶ್ವರನವರೆಗಿನ ಹೊಯ್ಸಳರ ವಂಶವರ್ಣನೆಯಿದೆ. ಆಮೇಲೆ ಗ್ರಂಥಕರ್ತೃವಿನ ಸ್ವವಿಷಯವಾದಮೇಲೆ ದುರ್ಜನ ಸುಜನ ಪದ್ಧತಿಗೆ ಸಂಬಂಧಪಟ್ಟ ಸುಮಾರು ೫೦ ಪದ್ಯಗಳಿವೆ. ಕೊನೆಯಲ್ಲಿ ಮುಂದಿನ ೧೮ ಆಶ್ವಾಸಗಳಲ್ಲಿಯೂ ವರ್ಣಿತವಾಗುವ ಕಾವ್ಯಾಂಗಗಳನ್ನು ಸೂಚಿಸುವ

ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ
ಭೋರುಹವೈರಿಮಿತ್ರರುದಯಂ ಋತುನಂದನಮಂಬುಸೀಧು ಕಾಂ
ತಾರತಿ ಚಿಂತೆ ಮಂತ್ರಿ ಚರ ಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್

ಎಂಬ ಪದ್ಯವೂ ಇದೇ ಅರ್ಥವನ್ನು ಕೊಡುವ ಮತ್ತೆರಡುಪದ್ಯಗಳೂ ಆದಮೇಲೆ ಪೀಠಿಕಾಪ್ರಕರಣವು ಮುಗಿಯುವುದು. ಎರಡನೆಯ ಆಶ್ವಾಸದಿಂದ ಮೇಲೆ ಹೇಳಿದ ಪದ್ಯದಲ್ಲಿ ಸೂಚಿತವಾದ ಕ್ರಮದಲ್ಲಿ ಒಂದೊಂದು ಆಶ್ವಾಸದಲ್ಲಿ ಒಂದೊಂದು ವರ್ಣನೆಯಂತೆ ೧೮ ಆಶ್ವಾಸಗಳಲ್ಲಿ ಅಷ್ಟಾದಶವರ್ಣನೆಗಳೂ ವರ್ಣಿತವಾಗಿವೆ. ಪ್ರತಿಯೊಂದು ಆಶ್ವಾಸದ ಪ್ರಾರಂಭದಲ್ಲಿಯೂ ಆಯಾ ಆಶ್ವಾಸದಲ್ಲಿ ಮುಂದೆ ವರ್ಣಿತವಾಗುವ ವಿಷಯಗಳನ್ನೊಳಗೊಂಡ ಒಂದು ಅಥವಾ ಎರಡು ಸೂಚನಾಪದ್ಯಗಳಿರುವುವು.[25] ಇವು ಮಲ್ಲಿಕಾರ್ಜುನನಿಂದಲೇ ರಚಿತವಾಗಿರಬೇಕು. ಮುಂದೆ ಈ ಸೂಚನೆಗಳಿಗನುಗುಣವಾಗಿ ವರ್ಣನಾಪದ್ಯಗಳು ಪ್ರಾಚೀನ ಗ್ರಂಥಗಳಿಂದ ಉದ್ಧೃತವಾಗಿವೆ. ಸೂಚನೆಯಲ್ಲಿ ಹೇಳಿರುವ ವಿಷಯಗಳೆಲ್ಲ ವರ್ಣಿತವಾಗಿವೆಯೇ ವಿನಾ ಅದೇ ಕ್ರಮದಲ್ಲಿ ಉಕ್ತವಾಗಿವೆಯೆಂದು ಹೇಳ

---

24 ಈಗ ಉಪಲಬ್ಧವಾಗಿರುವುದು ೧೮ ಮಾತ್ರ.

25 ೧೩ನೆಯ ಆಶ್ವಾಸವಾದ ಮಧುಪಾನವರ್ಣನೆಯ ಆರಂಭದಲ್ಲಿ ಪ್ರತ್ಯೇಕವಾದ ಸೂಚನೆಯ ಪದ್ಯವಿರುವುದಿಲ್ಲ. 'ಶೃಂಗಾರ ರತ್ನಾಕರ'ದ ೨–೨೧ನೆಯ ಪದ್ಯವಾದ 'ಮದಿರಾಪಾನ ವಿಕಾರಮುಂ' ಎಂಬ ಪದ್ಯದಿಂದಲೇ ಆಶ್ವಾಸವು ಪ್ರಾರಂಭವಾಗುವುದು. ಕವಿಚರಿತೆಕಾರರು ಇದನ್ನು ಸೂಚನಾಪದ್ಯವೆಂದು ತಿಳಿಸಿದ್ದಾರೆ (ಕವಿಚರಿತೆ ೨ನೆಯ ಸಂಪುಟ, ಪುಟ ೨೮–೨೯.) ಇಲ್ಲಿ ಸೂಚನಾ ಪದ್ಯವು ಲುಪ್ತವಾಗಿರಬಹುದೇ?

ಲಾಗುವುದಿಲ್ಲ. ಪ್ರತಿ ಆಶ್ವಾಸಾಂತ್ಯದಲ್ಲಿಯೂ[26] 'ಓರಂತೆ ಮೆಚ್ಚಿದಂ ಕೃತಿಸಾರಂ ಹೊಯ್ಸಳವಂಶೋದ್ಧಾರಂ ದೋರಸಮುದ್ರಾಧಿನಾಯಕಂ ಸೋಮನೃಪಂ' ಎಂಬ ಕಂದವೂ 'ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧ ಸಾರೋದ್ಧಾರಮುಮಷ್ಟಾದಶಸ್ಥಳವರ್ಣನ ಮಾರ್ಗಮನೋಹರಮುಂ ವೀರಹೊಯ್ಸಳ ಸೋಯಿದೇವರಾಯ ವಿನೋದಾಕರ್ಣನ ಕೌತುಕೋತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ ಸುಮನೋಬಾಣಜಾಮಾತೃ ಪರಮಚಿದಾನಂದ ಮಲ್ಲಿಕಾರ್ಜುನಕವೀಶ್ವರ ಸಂಯೋಜಿತಮುಮಪ್ಪ ಸೂಕ್ತಿಸುಧಾರ್ಣವ ದೊಳ್' ಎಂಬ ಗದ್ಯವೂ ಇರುವುವು. ಆಶ್ವಾಸಗಳ ಪ್ರಮಾಣ (ಅವುಗಳಲ್ಲಿರುವ ಪದ್ಯ ಸಂಖ್ಯೆ) ವಿಷಯದಲ್ಲಿ ಯಾವ ಒಂದು ಕ್ರಮವೂ ಮಿತಿಯೂ ಇರುವಂತೆ ಕಾಣುವುದಿಲ್ಲ. ಒಂದು ಆಶ್ವಾಸದಲ್ಲಿ ಪದ್ಯಸಂಖ್ಯೆ ೨೬ ಆದರೆ ಇನ್ನೊಂದರಲ್ಲಿ ೪೯೦ ಆಗಿದೆ. ಈ ವಿಧ ವಾದ ವ್ಯತ್ಯಾಸಕ್ಕೆ ಪ್ರತ್ಯೇಕವಾದ ಉದ್ದೇಶವಿರುವಂತೆಯೂ ತೋರುವುದಿಲ್ಲ. ಪ್ರಾಚೀನ ಕಾವ್ಯಗಳಲ್ಲಿ ಆಯಾ ವರ್ಣನೆಗೆ ಸಂಬಂಧಪಟ್ಟ ಪದ್ಯಗಳಲ್ಲಿ ಸ್ವಾರಸ್ಯವಾದುವು ಎಷ್ಟು ಸಿಕ್ಕಿದುವೊ ಅಷ್ಟನ್ನುಮಾತ್ರ ಶೇಖರಿಸಿರುವಹಾಗೆ ಕಾಣುತ್ತದೆ. ಇದು ಪ್ರಾಚೀನ ಕವಿ ಗಳಿಗೆ ಯಾವ ವರ್ಣನೆಗಳಲ್ಲಿ ಹೆಚ್ಚು ಒಲವಿತ್ತೆಂಬುದನ್ನು ಪರೋಕ್ಷವಾಗಿ ಸೂಚಿ ಸುತ್ತದೆ. ಆದರೂ ಒಟ್ಟುಗ್ರಂಥದ ದೃಷ್ಟಿಯಿಂದ ಯಾವ ಅಸಮರ್ಪಕತೆಯೂ ಭಾಸ ವಾಗುವುದಿಲ್ಲ.

ಸೂಕ್ತಿಸುಧಾರ್ಣವದಲ್ಲಿ ಕಂದ ವೃತ್ತಗಳಲ್ಲದೆ ಬೇರೆಯ ಛಂದಸ್ಸಿನ ಪದ್ಯಗಳು ಉದಾಹೃತವಾಗಿಲ್ಲ. ವೃತ್ತಗಳಲ್ಲಿಯೂ ಮಧುಪಾನ ವರ್ಣನೆಯಲ್ಲಿ ಬರುವ ಚಿತ್ರಲಯ ಲಲಿತ, ಮಲ್ಲಿಕಾಮಾಲೆ, ಲಯೋತ್ತರ ಅಥವಾ ಲಯಗ್ರಾಹಿ ಜಾತಿಗೆ ಸೇರಿದ, ಒಂದೊಂದು ಪದ್ಯಗಳನ್ನು ಬಿಟ್ಟರೆ ಉಳಿದುವೆಲ್ಲ ಕನ್ನಡದಲ್ಲಿ ಪ್ರಸಿದ್ಧವಾದ ಉತ್ಪಲ ಮಾಲೆಯೇ ಮೊದಲಾದ ಆರು ಸಂಸ್ಕೃತ ವೃತ್ತಗಳು. ದೇಶೀಯ ಛಂದಸ್ಸುಗಳಾದ ರಗಳೆ, ಷಟ್ಪದಿ ಮೊದಲಾದುವು ಆಗಿನ ಪಂಡಿತರ ದೃಷ್ಟಿಯಲ್ಲಿ ಗಣ್ಯವಾಗಿದ್ದಿರಲಾರದು.

ಒಂದು ಸಾಹಿತ್ಯಭಂಡಾರದ ಪೂರ್ಣಪರಿಚಯಮಾಡಿಕೊಳ್ಳುವುದು ಸರ್ವರಿಗೂ ಸಾಧ್ಯವಿಲ್ಲವಾದುದರಿಂದ ಆದರಲ್ಲಿ ಉತ್ತಮವಾದ, ರಸವತ್ತಾದ ಉಕ್ತಿಗಳನ್ನೂ ನೀತಿ

---

26 ಸೂರ್ಯೋದಯ ವರ್ಣನೆಯ ಅಂತ್ಯದಲ್ಲಿ ಮಾತ್ರ

ಹೆಳಚಿತು ಸೂರ್ಯೋದಯಮಿಾ
ಸ್ಥಳಕೆಲ್ಲಂ ಕಾವ್ಯಸಾರದೊಳಗೆಂದುದು ಹೊ
ಯ್ಸಳವಂಶಮೇರು ಯಾದವ
ಕುಳಾಂಬರದ್ಯುಮಣಿ ಸೋಯಿದೇವನೃಪಾಲಂ

ಎಂಬ ಪದ್ಯವಿದೆ,

ಗಳನ್ನೂ ವರ್ಣನೆಗಳನ್ನೂ ಸಂಗ್ರಹಿಸಿ ಪ್ರತ್ಯೇಕ ಗ್ರಂಥವಾಗಿ ರಚಿಸುವುದು ನಮಗೆ ಪರಿಚಿತವಾದ ಇಂಗ್ಲಿಷ್, ಸಂಸ್ಕೃತ, ತಮಿಳು, ತೆಲುಗು ಮೊದಲಾದ ಭಾಷೆಗಳಲ್ಲೆಲ್ಲಾ ಬಹುಕಾಲದಿಂದಲೂ ರೂಢಿಯಲ್ಲಿದೆ. ಕನ್ನಡಕ್ಕೆ ಅತಿನಿಕಟವಾಗಿ ಸಂಬಂಧಿಸಿರುವ ಸಂಸ್ಕೃತ ಭಾಷೆಯಲ್ಲಂತೂ ಸುಭಾಷಿತ ಗ್ರಂಥಗಳು ಹೇರಳವಾಗಿವೆ.[27] ಕನ್ನಡದಲ್ಲಾದರೋ ಸುಮಾರು ಹದಿನಾರನೆಯ ಶತಮಾನದ ಆದಿಭಾಗದಲ್ಲಿ ಸಂಕಲಿತವಾಗಿರಬಹುದಾದ ಅಭಿನವವಾದಿವಿದ್ಯಾನಂದನ 'ಕಾವ್ಯಸಾರ' ವನ್ನು ಬಿಟ್ಟರೆ ಪ್ರಸಕ್ತವಾದ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವವೊಂದೇ ಸುಭಾಷಿತಗ್ರಂಥ ನಮಗೆ ದೊರೆತಿರುವುದು ಅಲ್ಲದೆ ಇದೇ ಪರಮಪ್ರಾಚೀನವಾದುದು. ಮಲ್ಲಿಕಾರ್ಜುನನಿಗಿಂತ ಹಿಂದೆ ಸಂಸ್ಕೃತದಲ್ಲಿ ಸುಭಾಷಿತರತ್ನ ಸಂದೋಹ' 'ಕವೀಂದ್ರ ವಚನ ಸಮುಚ್ಚಯ' ಮೊದಲಾದ ಸುಭಾಷಿತ ಗ್ರಂಥಗಳು ರಚಿತವಾಗಿದ್ದುವು. ಅವುಗಳು ಈ ಗ್ರಂಥಕ್ಕೆ ಎಷ್ಟರಮಟ್ಟಿಗೆ ಪ್ರೇರಕವೊ ಹೇಳಲು ಸಾಧ್ಯವಿಲ್ಲ. ಸೂಕ್ತಿಸುಧಾರ್ಣವದ ಸಂಯೋಜನ ಕ್ರಮವು ಮಾತ್ರ ಒಂದು ವೈಶಿಷ್ಟ್ಯದಿಂದ ಕೂಡಿದೆ. ಸಂಸ್ಕೃತ ಸುಭಾಷಿತಕಾರರು ತಮ್ಮ ಸಂಗ್ರಹಗಳಲ್ಲಿ ಸಾಮಾನ್ಯವಾಗಿ ದೇವತಾಸ್ತುತಿ, ಋತುವರ್ಣನೆ, ಅನ್ಯೋಕ್ತಿ, ಸಂಕೀರ್ಣ ಮುಂತಾದ ಸಾಮಾನ್ಯಭಾಗಗಳನ್ನು ಮಾಡುತ್ತಾರೆ. ಮಲ್ಲಿಕಾರ್ಜುನನಾದರೋ ಕಾವ್ಯಾಂಗಗಳಾದ ಅಷ್ಟಾದಶವರ್ಣನೆಗಳನ್ನೂ ಕ್ರಮಬದ್ಧವಾಗಿ ಬೇರೆ ಬೇರೆಯ ಆಶ್ವಾಸಗಳಾಗಿ ವಿಭಾಗಿಸಿಕೊಂಡು ಮಹಾಕಾವ್ಯದ ಮಾದರಿಯಲ್ಲಿ ರಚಿಸಿದ್ದಾನೆ. ಆದುದರಿಂದ ಈ ಯೋಜನೆಯ ಕ್ರಮ, ರೀತಿ ಎಲ್ಲವೂ ಆತನದೇ ಆಗಿರುವುದು.

---

27 ಸಂಸ್ಕೃತ ಸುಭಾಷಿತಗಳ ಸಮೃದ್ಧಿಯನ್ನು ಮುಂದಿನ ಪಟ್ಟಿಯಿಂದ ಊಹಿಸಿಕೊಳ್ಳಬಹುದು : (೧) ಅಮಿತಗತಿಯ 'ಸುಭಾಷಿತ ರತ್ನಸಂದೋಹ' ೯೯೪. (೨) 'ಕವೀಂದ್ರ ವಚನಸಮುಚ್ಚಯ' ಸು. ೧೧ನೆಯ ಶತಮಾನ. (೩)ನಂದನ ಕವಿಯ 'ಪ್ರಸನ್ನ ಸಾಹಿತ್ಯ ರತ್ನಾಕರ' ಸು. ೧೧ನೆಯ ಶತಮಾನ. (೪) ಶ್ರೀಧರದಾಸನ 'ಸದುಕ್ತಿ ಕರ್ಣಾಮೃತ,' ೧೨೦೫. (೫) ಜಲ್ಹಣನ 'ಸೂಕ್ತಿಮುಕ್ತಾವಳಿ,' ೧೨೫೭. (೬) ಶಾರ್ಙ್ಗಧರನ 'ಶಾರ್ಙ್ಗಧರಪದ್ಧತಿ ೧೩೬೩. (೭) ವಲ್ಲಭದೇವನ 'ಸುಭಾಷಿತಾವಳಿ', ೧೪೬೭. (೮) ಶ್ರೀವರನ 'ಸುಭಾಷಿತಾವಳಿ'. (೯) ಹರಿದಾಸನ 'ಪ್ರಸ್ತಾವರತ್ನಾಕರ', ೧೭ನೆಯ ಶತಮಾನ. (೧೦) ಹರಿಕವಿಯ 'ಸುಭಾಷಿತಹಾರಾವಳಿ', ೧೭ನೆಯ ಶತಮಾನ. (೧೧) ಸುಂದರಕವಿಯ 'ಸೂಕ್ತಿಸುಂದರ', ೧೭ನೆಯ ಶತಮಾನ. (೧೨) 'ಕವೀಂದ್ರ ಚಂದ್ರೋದಯ', ೧೭ನೆಯ ಶತಮಾನ. (೧೩) ಹರಿಹರ ಉಪಾಧ್ಯಾಯನ 'ಸುಭಾಷಿತಾವಳಿ', ೧೮ನೆಯ ಶತಮಾನ. (೧೪) ವಜ್ರನಾಥನ 'ಪದ್ಯತರಂಗಿಣಿ', ೧೮ನೆಯ ಶತಮಾನ. (೧೫) ಪೂರ್ಣಚಂದ್ರ ಕವಿಭೂಷಣನ ಉದ್ಭಟಸಾಗರ'. (೧೬) ಕಾಶಿನಾಥನ 'ಸುಭಾಷಿತ ರತ್ನಭಾಂಡಾಗಾರ'. (೧೭) ವೇಣೀದತ್ತನ 'ಪದ್ಯವೇಣಿ. (೧೮) ಹರಿಭಾಸ್ಕರನ 'ಪದ್ಯಾಮೃತ ತರಂಗಿಣಿ'. (೧೯) ರೂಪ

ಮಲ್ಲಿಕಾರ್ಜುನನು ತಾನೇ ಹೇಳಿಕೊಂಡಿರುವಂತೆ ಸರಸಕವೀಶ್ವರ. ಆದರೆ ಅವನ ಕವಿತಾಶಕ್ತಿಯನ್ನು ಒರೆಹಚ್ಚಿನೋಡಲು ಅವನ ಸ್ವತಂತ್ರ ಗ್ರಂಥಗಳಾವುದೂ ದೊರೆತಿಲ್ಲ. ಆದರೂ ಅವನದೆಂದು ಊಹಿಸಬಹುದಾದ ಪೀಠಿಕಾಪ್ರಕರಣದಲ್ಲಿರುವ ಪದ್ಯಗಳೂ ಆಶ್ವಾಸಾರಂಭದಲ್ಲಿರುವ ಸೂಚನಾಪದ್ಯಗಳೂ ಗ್ರಂಥಮಧ್ಯದಲ್ಲಿ ಬರುವ ನರಸಿಂಹ ಸೋಮೇಶ್ವರರ ಸ್ತೋತ್ರರೂಪವಾದ ಪದ್ಯಗಳೂ ಆತನ ಕವಿತಾಶಕ್ತಿಯನ್ನು ಪ್ರಕಾಶಿಸ ತಕ್ಕವಾಗಿವೆ. ಅಲ್ಲದೆ ಸಂಕಲನಕಾರ್ಯದಲ್ಲಿಯೂ ಆತನ ವಿವೇಕ, ವಿಚಾರಪರತೆ, ಅಭಿರುಚಿ ಮೊದಲಾದುವು ಸ್ಪಷ್ಟವಾಗುವುವು. ಅವನು ಆರಿಸಿರುವ ಪದ್ಯಗಳಲ್ಲಿ ಯಾವುದಾದರೂ ಒಂದು ಬಗೆಯ ಸೊಗಸಿರುತ್ತದೆ. ಶಬ್ದಾಲಂಕಾರ, ಅರ್ಥಾಲಂಕಾರ, ರಸಭಾವಗಳು, ಉಕ್ತಿವೈಚಿತ್ರ್ಯ, ವರ್ಣನಾ ವೈಖರಿ—ಒಂದೊಂದು ದೃಷ್ಟಿಯಿಂದ ಒಂದೊಂದು ಪದ್ಯವನ್ನು ಆರಿಸಿಕೊಂಡಿರುತ್ತಾನೆ. ಆತನಿಗೆ ವೈದರ್ಭಿ ಶೈಲಿಯಲ್ಲಿ ಹೆಚ್ಚು ಒಲವಿರುವ ಹಾಗೆ ಕಾಣುತ್ತದೆ.

ಆದರೂ ಸೂಕ್ತಿಸುಧಾರ್ಣವವು ಪ್ರಕೃತಿವರ್ಣನಾದೃಷ್ಟಿಯನ್ನೇ—ಅಷ್ಟಾದಶ ವರ್ಣನೆಗಳನ್ನೇ—ಮುಖ್ಯವಾಗಿಟ್ಟುಕೊಂಡಿರುವುದರಿಂದ ಇದರಲ್ಲಿ ಸತ್ಕಾವ್ಯದ ಜೀವವಾದ ಭಾವಪ್ರದರ್ಶನಕ್ಕೆ, ಸನ್ನಿವೇಶಗಳ ಸೊಬಗಿಗೆ, ಕಥಾಸಂವಿಧಾನ ಚಾತುರ್ಯಕ್ಕೆ ಅವಕಾಶವಿಲ್ಲ. ಕಾವ್ಯಾವಲೋಕನದಲ್ಲಿರುವಂತೆ ಭಾವವ್ಯಂಜಕಗಳಾದ ಪದ್ಯಗಳು ಇದರಲ್ಲಿಲ್ಲ. ಆದುದರಿಂದ ಇದನ್ನು ಕನ್ನಡ ಸಾಹಿತ್ಯದ ಉತ್ತಮಭಾಗದ ಮಾದರಿ ಎಂಬುದಾಗಿ ಹೇಳಲು ಸಾಧ್ಯವಿಲ್ಲ.

ಆದರೆ ಸೂಕ್ತಿಸುಧಾರ್ಣವವು ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಅತಿಮುಖ್ಯವಾದ ಸ್ಥಾನವನ್ನು ಆಕ್ರಮಿಸಿದೆ. ಸಾಹಿತ್ಯಚರಿತ್ರೆಯ ಆದಿಕಾಲದಿಂದ ರಚಿತವಾದ ಎಲ್ಲ ಪ್ರಸಿದ್ಧ ಗ್ರಂಥಗಳಿಂದಲೂ[28] ಇದರಲ್ಲಿ ಪದ್ಯಗಳು ಉದ್ಧೃತವಾಗಿವೆ. ಆದರೆ ಈಗ ಅದರಲ್ಲಿರುವ ಸುಮಾರು ೨,೨೦೦ ಪದ್ಯಗಳಲ್ಲಿ ಅರ್ಧಕ್ಕೆ ಮಾತ್ರ ಆಕರಗಳು ಸಿಕ್ಕಿವೆ. ಅವುಗಳ ವಿವರ

---

ಗೋಸ್ವಾಮಿಯ 'ಪದ್ಯಾವಳಿ'. (೨೦) ಘಾಸಿರಾಮ ಕವಿಯ 'ರಸಚಂದ್ರ'. (೨೧) ಭಟ್ಟ ಭಾಸ್ಕರನ 'ರಸಪ್ರದೀಪ'. (೨೨) ಶುಕ್ಲಭೂದೇವನ 'ರಸವಿಲಾಸ'. (೨೩) ಭಟ್ಟ ಗೋವಿಂದಜಿತನ 'ಸಾರಸಂಗ್ರಹ ಸುಧಾರ್ಣವ.' (೨೪) ಶಂಭುದಾಸನ 'ಸಾರಸಂಗ್ರಹ' (೨೫) ಭೋಜನ 'ಸುಭಾಷಿತಪ್ರಬಂಧ'. (೨೬) ಚತುರ್ಭುಜನ 'ರಸಕಲ್ಪದ್ರುಮ ಮೊದಲಾದುವು.

[28] ಸೂಕ್ತಿಸುಧಾರ್ಣವದಲ್ಲಿ ರನ್ನನ 'ಗದಾಯುದ್ಧ' ಅಥವ 'ಸಾಹಸಭೀಮವಿಜಯ'ದಿಂದ ಒಂದು ಪದ್ಯವೂ ಉದ್ಧೃತವಾಗದೇ ಇರುವುದು ಆಶ್ಚರ್ಯಕರವಾಗಿದೆ. ನಾಗವರ್ಮನ 'ಕಾವ್ಯಾವಲೋಕನ'ದಲ್ಲಿ ಅದರ ಎಷ್ಟೋ ಪದ್ಯಗಳು ಉದಾಹೃತವಾಗಿವೆ. ಅದನ್ನು ಮಲ್ಲಿಕಾರ್ಜುನನು ನೋಡಿರಲಾರನೆ? ಅಷ್ಟೇಕೆ, ಅವನೇ ಅಜಿತನಾಥಪುರಾಣದಿಂದ ನಾಲ್ಕು ಪದ್ಯ

ವನ್ನು ೨ ಮತ್ತು ೩ನೆಯ ಅನುಬಂಧದಲ್ಲಿ ಕೊಟ್ಟಿದೆ. ಈ ಅರ್ಧಭಾಗವು ಸುಮಾರು ೩೦ ಗ್ರಂಥಗಳಿಂದ ಆರಿಸಿಕೊಂಡವು. ಈ ಅಂದಾಜಿನಮೇಲೆ ಉಳಿದ ಅರ್ಧಭಾಗವು ಇದೇ ಸಂಖ್ಯೆಯ ಗ್ರಂಥಗಳಿಂದಾದರೂ ಆರಿಸಿರಬೇಕೆಂದು ಊಹಿಸಬಹುದು. ಇದು ನಿಜವೆಂದು ಒಪ್ಪಿಕೊಂಡರೆ ಈಗ ಕನ್ನಡ ಸಾಹಿತ್ಯದಲ್ಲಿ ನಷ್ಟವಾಗಿರುವ ಗ್ರಂಥರಾಶಿಯ ಪರಿಮಾಣವೂ ಕನ್ನಡ ಸಾಹಿತ್ಯದ ವಿಸ್ತಾರವೂ ವಿಶದವಾಗುವುದು.[29] ಉಪಲಬ್ಧವಲ್ಲದ ಅಷ್ಟು ದೊಡ್ಡ ಗ್ರಂಥರಾಶಿಯ ಉತ್ತಮ ಪದ್ಯಗಳನ್ನು ಸೂಕ್ತಿಸುಧಾರ್ಣವವು ಉಳಿಸಿಕೊಟ್ಟಿದೆ. ಕನ್ನಡ ಕವಿಗಳ ಕಾಲನಿರ್ಣಯಕ್ಕೆ ಸೂಕ್ತಿಸುಧಾರ್ಣವವು ಈಚಿನ ಗಡಿಗಲ್ಲು. ಅದರಲ್ಲಿ ಒಂದು ಪದ್ಯವಿದ್ದರೆ ಅದರ ಕವಿ ಅದಕ್ಕೆ ಪ್ರಾಚೀನನೆಂಬುದು ಸ್ಪಷ್ಟ ; ಇಲ್ಲದಿದ್ದರೆ ಸಂದೇಹಾಸ್ಪದ. ಸೂಕ್ತಿಸುಧಾರ್ಣವದಲ್ಲಿ ಅನೇಕ ಪ್ರಾಚೀನ ಗ್ರಂಥಗಳ ನೂರಾರು ಪದ್ಯಗಳು ಉದ್ಧೃತವಾಗಿರುವುದರಿಂದ ಅವುಗಳ ಸಂಶೋಧನೆಯ ಕಾರ್ಯದಲ್ಲಿ ಉತ್ತಮ ಪಾಠವನ್ನು ನಿಷ್ಕರ್ಷಿಸುವುದಕ್ಕೆ ಅದು ಬಹುಮಟ್ಟಿಗೆ ಸಹಾಯಕವಾಗಿದೆ. ಕವಿಮಲ್ಲನ ಕಾವ್ಯಸಾರವು ಸೂಕ್ತಿಸುಧಾರ್ಣವದ ಆಧಾರದ ಮೇಲೆಯೇ ಹುಟ್ಟಿರುವುದೆಂಬುದು ನಿರ್ವಿವಾದ. ಅದರಲ್ಲಿ ಮೂಲದಲ್ಲಿಲ್ಲದ ಆಕರ ಸಿಕ್ಕದ ಸುಮಾರು ೫೦೦ ಪದ್ಯಗಳಿವೆ. ನಷ್ಟವಾದ ಗ್ರಂಥಗಳಿಂದ ಉದ್ಧೃತವಾದ ಅವುಗಳನ್ನು ಉಳಿಸುವುದಕ್ಕೂ ಇದೇ ಪರೋಕ್ಷವಾಗಿ ಕಾರಣವಾಗಿದೆ.

ಅಭಿನವವಾದಿವಿದ್ಯಾನಂದನ 'ಕಾವ್ಯಸಾರ'ಕ್ಕೂ ಇದಕ್ಕೂ ಸುಮಾರು ೨೭೫ ಪದ್ಯಗಳು ಸಂವಾದಿಯಾಗಿರುವುದರಿಂದ ಬಹುಶಃ ಅದರ ರಚನೆಗೂ ಇದೇ ಪ್ರೇರಕವಾಗಿರಬೇಕು. ಸೂಕ್ತಿಸುಧಾರ್ಣವದಲ್ಲಿ ಹೊಯ್ಸಳರ ವಂಶವರ್ಣನೆಯೇ ಅಲ್ಲದೆ ಚೋಳ, ಪಾಂಡ್ಯ, ಸೇವುಣರ ವಿಷಯವಾಗಿ ಅಲ್ಲಲ್ಲಿ ಉಕ್ತವಾಗಿರುವುದರಿಂದ ಇತಿಹಾಸದೃಷ್ಟಿಯಿಂದಲೂ ಇದಕ್ಕೆ ಪ್ರಾಶಸ್ತ್ಯವಿದೆ. ಸೂಕ್ತಿಸುಧಾರ್ಣವದಲ್ಲಿ 'ಜಗನ್ನಾಥವಿಜಯ' 'ನೇಮಿನಾಥಪುರಾಣ' ಗಳಿಗೆ ಸಂಬಂಧಪಡದ, ವಿಸ್ತೃತಪಾಠದಲ್ಲಿ ಸಿಕ್ಕುತ್ತದೆಂದು ಪುಟ

---

ಗಳನ್ನು ಉದ್ಧರಿಸಿದ್ದಾನೆ. ಗದಾಯುದ್ಧವು ಅವನಿಗೆ ಪರಿಚಿತವಾಗಿಯೇ ಇರಬೇಕು. ಕೇಶಿರಾಜನಂತೂ ಅದರಿಂದ ಶಬ್ದಮಣಿದರ್ಪಣದಲ್ಲಿ ಬೇಕಾದಷ್ಟು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಹಾಗೆಯೇ ಕರ್ಣಪಾರ್ಯನ 'ನೇಮಿನಾಥಪುರಾಣ'ದಿಂದಲೂ ಪದ್ಯಗಳನ್ನು ಆರಿಸಿಕೊಂಡಿಲ್ಲ. ಅವನಿಗಿಂತ ಒಂದು ತಲೆಮೊರೆ ಈಚಿನವನಾದ ನೇಮಿಚಂದ್ರನ, 'ಅರ್ಧನೇಮಿ' 'ಲೀಲಾವತಿ' ಗಳಿಂದ ಅನೇಕ ಪದ್ಯಗಳನ್ನು ತೆಗೆದುಕೊಂಡಿರುವಾಗ ಇದನ್ನು ಬಿಡಲು ಕಾರಣವೇನು? ಇದು ಅವನ ಕಣ್ಣಿಗೆ ಬಿದ್ದಿರಲಾರದೆ ?

[29] ಇವುಗಳ ಜೊತೆಗೆ 'ಕವಿರಾಜಮಾರ್ಗ,' 'ಕಾವ್ಯಾವಲೋಕನ,' 'ಶಬ್ದಸ್ಮೃತಿ,' 'ಭಾಷಾಭೂಷಣ,' 'ಶಬ್ದಾನುಶಾಸನ'ಗಳಲ್ಲಿ ಅನಿರ್ದಿಷ್ಟವಾಗಿರುವ ಪದ್ಯಗಳನ್ನೆಲ್ಲಾ ಒಟ್ಟುಗೂಡಿಸಿ ಒಂದೆಡೆ ಪ್ರಕಾಶಪಡಿಸಿದರೆ ಪ್ರಯೋಜನಕಾರಿಯಲ್ಲವೆ ?

ದಡಿಯಲ್ಲಿ ಹಿಂದೆ ತಿಳಿಸಿರುವ ಪದ್ಯಗಳಿಗಿಂತ ಭಿನ್ನವಾದ ಕೃಷ್ಣನ ವಿಷಯಕವಾದ ಹತ್ತಾರು ಪದ್ಯಗಳೂ ಹರಿಹರನ ಗಿರಿಜಾಕಲ್ಯಾಣಕ್ಕೆ ಸಂಬಂಧಪಡದ ಶಿವಪಾರ್ವತಿಯರ ವಿಷಯಕವಾದ ಕೆಲವು ಪದ್ಯಗಳೂ ವತ್ಸರಾಜ ರತ್ನಾವಳಿಯನ್ನು ಹೆಸರಿಸುವ ಒಂದು ಪದ್ಯವೂ ದೊರಕುವುದರಿಂದ ಮಲ್ಲಿಕಾರ್ಜುನನಿಗಿಂತ ಹಿಂದೆ ಜೈನರಂತೆಯೆ ವೈದಿಕರ ನೇಕರೂ ಹೇರಳವಾಗಿ ಕನ್ನಡದಲ್ಲಿ ಗ್ರಂಥರಚನೆ ಮಾಡಿದ್ದಾರೆಂದು ಊಹಿಸಬಹುದು. ಈ ಸಂಕಲನದಲ್ಲಿ ಆಗತಾನೆ ರೂಢಿಗೆ ಬರುತ್ತಿದ್ದ ಷಟ್ಪದಿ, ರಗಳೆ ಮೊದಲಾದ ಛಂದಸ್ಸಿನ ಪದ್ಯಗಳಾವುವೂ ಇಲ್ಲದುದರಿಂದ ಅವಿನ್ನೂ ಪಂಡಿತರ ಮನ್ನಣೆಗೆ ಪಾತ್ರವಾಗಿರಲಿಲ್ಲವೆಂದು ಹೇಳಬಹುದು. ಮಲ್ಲಿಕಾರ್ಜುನ ಪಂಡಿತ ಆ ಕಾಲದ ಎಲ್ಲ ಗ್ರಂಥಗಳನ್ನೂ ಚೆನ್ನಾಗಿ ಆಲೋಡನೆ ಮಾಡಿದ್ದವನು. ಪಂಡಿತ ಪಾಮರರಲ್ಲಿ ಬೆರೆತು ಅವರ ಅಭಿರುಚಿಯನ್ನು ಪೂರ್ಣವಾಗಿ ತಿಳಿದಿದ್ದವನು. ಅವರಿಗಾಗಿ ರಚಿಸಿದ ಈ ಗ್ರಂಥವು ಆ ಕಾಲದವರ ಅಭಿ ರುಚಿಯ ಕೈಗನ್ನಡಿ.

ಸೂಕ್ತಿಸುಧಾರ್ಣವವನ್ನು ಕೆಳಗೆ ಕಂಡ ಪ್ರತಿಗಳ ಆಧಾರದಮೇಲೆ ಶೋಧಿಸಿದೆ :

(೧) ಸಂಪಾದಕರಲ್ಲಿದ್ದ ಕಾಗದದ ಪ್ರತಿ. ೩೭೪ ಪತ್ರಗಳಿವೆ. ಇದರಲ್ಲಿ ಪ್ರಾರಂಭ ದಿಂದ ಯಾನಸ್ಥಳವಾದ ೧೮ನೆಯ ಆಶ್ವಾಸ ಪೂರ್ತ ಇದೆ. ಆಜಿ ಅಥವಾ ವಿರೋಧಿ ಜಯವೆಂಬ ೧೯ನೆಯ ಆಶ್ವಾಸ ಲುಪ್ತವಾಗಿದೆ. ಇದು ಪ್ರತಿಯಾದ ಕಾಲ ತಿಳಿಯದು. ಇದರ ಮೂಲಮಾತೃಕೆ ಯಾವುದೋ ಗೊತ್ತಿಲ್ಲ. ಇದರಲ್ಲಿ ಱಕಾರವು ಶುದ್ಧವಾಗಿ ಉಪಯೋಗವಾಗಿರುವುದರಿಂದ ಇದರ ಮೂಲ ಮಾತೃಕೆ ಪ್ರಾಚೀನವಾದುದಾಗಿರಬೇಕು. ಇದರ ಪಾಠವು ಬಹುಮಟ್ಟಿಗೆ ಶುದ್ಧವಾಗಿದೆ. ಇದನ್ನು (ಕ) ಎಂಬ ಸಂಕೇತದಿಂದ ಕರೆದಿದೆ.

(೨) ಪ್ರಾಚ್ಯಕೋಶಾಗಾರದಲ್ಲಿರುವ ಕೆ. ಎ. ೫೮ನೆಯ ನಂಬರಿನ ಕಾಗದದ ಪ್ರತಿ. ಇದರಲ್ಲಿ ಮೊದಲಿನಿಂದ ೮ನೆಯ ಆಶ್ವಾಸವಾದ ಚಂದ್ರೋದಯ ವರ್ಣನೆಯಲ್ಲಿ ೧೯೧ನೆಯ ಪದ್ಯದವರೆಗಿದೆ. ಇದಕ್ಕೂ (ಕ) ಪ್ರತಿಗೂ ಯಾವ ವ್ಯತ್ಯಾಸವೂ ಇಲ್ಲ. ಎರಡಕ್ಕೂ ಒಂದೇ ಮಾತೃಕೆ ಮೂಲವಾಗಿರಬೇಕು. ಆದುದರಿಂದ ಇದಕ್ಕೆ ಪ್ರತ್ಯೇಕ ವಾದ ಸಂಕೇತವನ್ನು ಕೊಟ್ಟಿಲ್ಲ.

(೩) ಶೃಂಗೇರಿ ಶಂಕರಮಠದ ಓಲೆಯ ಪ್ರತಿ. ಇದನ್ನು ಶಾಸನದ ಇಲಾಖೆಯ ಪಂಡಿತರಾದ ಶ್ರೀಮಾನ್ ರಾಮಾನುಜ ಚಕ್ರವರ್ತಿಯವರು ಮೊದಲು ಗುರ್ತಿಸಿದರು. ಇದರಲ್ಲಿ ೧೪೭ ಓಲೆಗಳಿವೆ. ಇದರಲ್ಲಿ ಆದಿಯಿಂದ ೧೫ನೆಯ ಆಶ್ವಾಸದ ೫೩ನೆಯ ಪದ್ಯ ದವರೆಗಿದೆ. ಇದರಲ್ಲಿ ಱಕಾರವು ಸರಿಯಾಗಿ ಉಪಯೋಗವಾಗಿಲ್ಲ. ಇದು ಮಧ್ಯೆ ನಿಂತು ಹೋಗಿರುವುದರಿಂದ ಪ್ರತಿಮಾಡಿದ ಕಾಲ ಗೊತ್ತಾಗುವಂತಿಲ್ಲ. (ಕ) ಪ್ರತಿಯಷ್ಟು ಶುದ್ಧ ವಾಗಿಲ್ಲ. ಅಲ್ಲಲ್ಲಿ ಸ್ಖಾಲಿತ್ಯಗಳಿವೆ. ಇದನ್ನು (ಖ)ಎಂಬ ಸಂಕೇತದಿಂದ ವ್ಯವಹಾರ

ಮಾಡಿದೆ.

(೪) ಸಂಪಾದಕರು ಬೇಲೂರು ತಾಲ್ಲೋಕಿನಲ್ಲಿ ಸಂಚಾರ ಮಾಡುತ್ತಿದ್ದಾಗ ದೊರೆತ ಓಲೆಯ ಪ್ರತಿ. ಈಗ ಇದು ಪ್ರಾಚ್ಯಕೋಶಾಗಾರದ ೫೬೮ನೆಯ ನಂಬರಿನ ಕೋಶ ವಾಗಿದೆ. ಇದು ೬''×೨'' ಅಳತೆ ಉಳ್ಳದ್ದು ; ಬರವಣಿಗೆ ಇರುವ ಸ್ಥಳ ೫''×೧ ೧/೨'' ಪ್ರತಿ ಪುಟದಲ್ಲಿಯೂ ೧೨ ಪಙ್ಕ್ತಿಗಳಿವೆ. ಪ್ರತಿ ಪಙ್ಕ್ತಿಯಲ್ಲಿಯೂ ಸರಾಸರಿ ೩೮ ಅಕ್ಷರ ಗಳಿವೆ. ಒಟ್ಟು ೨೧೨ ಪತ್ರಗಳಿವೆ. ಪಾಠವು ಶುದ್ಧವಾಗಿದೆ. ಒಂದೇ ಪಾಠ ಸಂಪ್ರ ದಾಯಕ್ಕೆ ಸೇರಿದ್ದರೂ (ಕ) ಪ್ರತಿಗಿಂತ ಭಿನ್ನವಾದ ಮೂಲಮಾತೃಕೆಗೆ ಸಂಬಂಧ ಪಟ್ಟದ್ದು. ಇದರಲ್ಲಿ ೧೮ನೆಯ ಆಶ್ವಾಸವು ಎರಡು ಭಾಗವಾಗಿದೆ. ೨೨ನೆಯ ಪದ್ಯ ವಾದಮೇಲೆ 'ಓರಂತೆ ಮೆಚ್ಚಿದಂ ಕೃತಿಸಾರಂ ಯಾತ್ರಾಂಗಕೆಯ್ದೆ ಹೊಯ್ಸಳ ವಂಶೋ ದ್ಧಾರಂ ನರಸಿಂಹಸುತಂ ದೋರಸಮುದ್ರಾಧಿನಾಯಕಂ ಸೋಮನೃಪಂ' ಎಂಬ ಆಶ್ವಾ ಸಾಂತ್ಯಪದ್ಯದೊಡನೆ ಯಾತ್ರಾಂಗ ಪ್ರಕರಣವು ಮುಗಿದು, ಯಾನಸ್ಥಲವೆಂಬ ಭಾಗವು ಪ್ರಾರಂಭವಾಗುವುದು. ಅಲ್ಲಿಂದ ಮುಂದಿನ ಪದ್ಯಸಂಖ್ಯೆಯು ಒಂದರಿಂದ ಪ್ರಾರಂಭ ವಾಗುವುದು. ಆ ಲೆಕ್ಕದಪ್ರಕಾರ ಆ ಪ್ರತಿಯು ಆ ಆಶ್ವಾಸದ ೪೯ನೆಯ ಪದ್ಯದಲ್ಲಿ ಅಪೂರ್ಣವಾಗಿ ನಿಂತುಹೋಗುವುದು. ಬಹುಶಃ ೧೯ನೆಯ ಆಜಿವರ್ಣನೆಯು ಉಪಲಬ್ಧ ವಲ್ಲದುದರಿಂದಲೂ ೧೮ನೆಯ ಆಶ್ವಾಸದ ೨೩ನೆಯ 'ಗುಡಿನೇಣ್ ಕಾಂಡಪಟಂ' ಎಂಬ ದಂಡಿನ ಸಾಮಗ್ರಿಗಳನ್ನು ತಿಳಿಸುವ ಪದ್ಯವು ವರ್ಣನೀಯಾಂಶಗಳನ್ನು ಸೂಚಿಸುವ ಆಶ್ವಾಸ ಪ್ರಾರಂಭ ಪದ್ಯದಂತೆ ತೋರುವುದರಿಂದಲೂ ಈ ವಿಧವಾದ ಭ್ರಮಜನ್ಯವಾದ ವಿಭಾಗಗಳಾಗಿರುವಂತೆ ಕಾಣುತ್ತದೆ. ಪೀಠಿಕಾಸಂಧಿಯಲ್ಲಿ ಅಷ್ಟಾದಶ ವರ್ಣನೆಗಳನ್ನು ಸೂಚಿಸುವ ಸಂದರ್ಭದಲ್ಲಿ ಯಾತ್ರೆ ಮತ್ತು ಯಾನಗಳೆಂಬ ವ್ಯತ್ಯಾಸಗಳಿಲ್ಲದುದರಿಂದಲೂ ಆಜಿವರ್ಣನೆಗೆ ಪ್ರತ್ಯೇಕಸ್ಥಾನವಿರುವುದರಿಂದಲೂ ಯಾತ್ರೆಯಾನಗಳೆರಡನ್ನೂ ಬೇರೆ ಯಾಗಿಟ್ಟುಕೊಂಡರೆ ಆಜಿವರ್ಣನೆಯನ್ನು ಬಿಟ್ಟು ೧೮ ವರ್ಣನೆಗಳು ಮುಗಿಯುವು ದರಿಂದಲೂ ಪ್ರಸಕ್ತ ಸಂಸ್ಕರಣದಲ್ಲಿ ಇವನ್ನು ಒಂದೇ ಭಾಗವಾಗಿ ಅಂಗೀಕರಿಸಿದೆ. ಈ **ಪ್ರತಿಗೆ (ಬ) ಎಂಬ ಸಂಕೇತವಿದೆ,**

(೫) ಪ್ರಾಚ್ಯಕೋಶಾಗಾರದ ಕೆ. ಎ. ೧೮೦ನೆಯ ನಂಬರಿನ ಎರಡು ಸಂಪುಟ ಗಳುಳ್ಳ ಕಾಗದದ ಪ್ರತಿ. ಇದು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದ ಸರಿಯಾದ ಪಾಠವಲ್ಲ. ಅದರ ಆಧಾರದಮೇಲೆ ಪ್ರಾಚೀನ ನವೀನ ಕಾವ್ಯಗಳಿಂದ ಪದ್ಯಗಳನ್ನು ಸೇರಿಸಿಕೊಂಡು ಕವಿಮಲ್ಲನಿಂದ ವಿಸ್ತೃತವಾದ ಕಾವ್ಯಸಾರವೆಂಬ ಹೆಸರುಳ್ಳದ್ದು. ಇದರಲ್ಲಿ ೧೪ ಆಶ್ವಾಸಗಳು ಮಾತ್ರ ಇವೆ. ಸಂದೇಹ ಬಂದೆಡೆಗಳಲ್ಲಿ ಮಾತ್ರ ಇದನ್ನು ಉಪ ಯೋಗಿಸಿಕೊಂಡಿದೆ. ಇದನ್ನು (ಗ) ಎಂದು ಕರೆದಿದೆ. ಶುದ್ಧವಾದುದೇನೂ ಅಲ್ಲ.

(೬) ಮೇಲಿನ ದ್ವಿತೀಯ ಪಾಠ ಸಂಪ್ರದಾಯಕ್ಕೆ ಸೇರಿದ ಬೇಲೂರು ತಾಲ್ಲೋಕು ಬಿಕ್ಕೋಡು ಹೋಬಳಿ ಹೊನ್ನವಳ್ಳಿ ಜೋಡಿದಾರ್ ನಾರಾಯಣಭಟ್ಟರಿಂದ ತಂದ

ಓಲೆಯ ಪ್ರತಿ. ಇದೂ (ಗ) ಪ್ರತಿಯೂ ಬಹುಶಃ ಒಂದೇ ಮೂಲಮಾತೃಕೆಯಿಂದ ಪ್ರತಿಯಾದುದು. ಇದನ್ನು ಕೆಲವೆಡೆಗಳಲ್ಲಿ ಮಾತ್ರ ಉಪಯೋಗಿಸಿಕೊಂಡಿದೆ. (ಘ) ಎಂಬ ಪ್ರತಿ ಇದು.

(೭) ಈಚೆಗೆ ಗ್ರಂಥದ ಮೂಲವೆಲ್ಲ ಅಚ್ಚಾದಮೇಲೆ ಡಾ॥ ಎಂ. ಎಚ್. ಕೃಷ್ಣ ಅವರು ಶಾಸನದ ಇಲಾಖೆಯ ೧೯೩೧ನೆಯ ವರ್ಷದ ವರದಿಯಲ್ಲಿ ಪ್ರಸ್ತಾಪಿಸಿರುವ ಓಲೆಯ ಪ್ರತಿಯು ಹಸ್ತಗತವಾಯಿತು. ಇದರಲ್ಲಿ ೬೭ ಪತ್ರಗಳಿವೆ. ಪತ್ರಗಳು ೧೭″×೨″ ಅಳತೆಯುಳ್ಳವು. ಇದರಲ್ಲಿಯೂ ಪ್ರಾರಂಭದಿಂದ ಯಾತ್ರಾಂಗವರ್ಣನೆಯ ಕೊನೆಯ ವರೆಗೆ ಇದೆ. 'ವಿರೋಧಿಜಯ'ವೆಂಬ ಹದಿನೆಂಟನೆಯ ವರ್ಣನೆ ಇದರಲ್ಲಿಯೂ ಲುಪ್ತ. ಪೀಠಿಕಾಭಾಗ ಮತ್ತು ಸಮುದ್ರವರ್ಣನೆ ಇವೆರಡೂ ಒಂದೇ ಆಶ್ವಾಸವಾಗಿ ಪರಿಗಣಿತವಾಗಿವೆ. ೧–೨ನೆಯ ಆಶ್ವಾಸಾಂತ್ಯಗಳಲ್ಲಿ ಮಾತ್ರ ಆಶ್ವಾಸಾಂತ್ಯ ಗದ್ಯವಿದೆ. ಱಕಾರವು ಶುದ್ಧವಾಗಿದೆ. ಪ್ರತಿ ಮಾಡಿದ ಕಾಲ ತಿಳಿಸಿಲ್ಲ. ಲಿಪಿಶಾಸ್ತ್ರ ದೃಷ್ಟಿಯಿಂದ ಇದು ೧೮ನೆಯ ಶತಮಾನದಲ್ಲಿ ಸಿದ್ಧವಾಗಿರಬೇಕು. ಪಾಠದ ದೃಷ್ಟಿಯಿಂದ ಇದು (ಕ) ಪ್ರತಿಯನ್ನು ಬಹುಮಟ್ಟಿಗೆ ಹೋಲುತ್ತದೆ. ಕೆಲವೆಡೆ ಉತ್ತಮವಾದ ಪಾಠಾಂತರಗಳು ದೊರೆಯುವುವು. ಗ್ರಂಥದ ಮೂಲವು ಅಚ್ಚಾದಮೇಲೆ ಇದು ನಮ್ಮ ವಶಕ್ಕೆ ಬಂದುದರಿಂದ ಶೋಧನ ಕಾರ್ಯದಲ್ಲಿ ಇದನ್ನು ಉಪಯೋಗಿಸಲಾಗಲಿಲ್ಲ.

'ಸೂಕ್ತಿಸುಧಾರ್ಣವ'ದ ಶೋಧನೆಯು ಸಾಧ್ಯವಾದಮಟ್ಟಿಗೂ ಬಹು ಎಚ್ಚರಿಕೆಯಿಂದ ನಡೆದಿದೆ. ಇತರ ಸುಭಾಷಿತ ಗ್ರಂಥಗಳಂತೆ ಇದರಲ್ಲಿರುವ ಪದ್ಯಗಳಿಗೆ ಮಾತೃಕೆಗಳಲ್ಲಿ ಆಕರಗಳು ಸೂಚಿತವಾಗಿಲ್ಲವಾದುದರಿಂದ ಅವನ್ನು ಕಂಡುಹಿಡಿಯುವುದೇ ಪ್ರಯಾಸವಾಯಿತು. ಇದಕ್ಕಾಗಿ ಮಲ್ಲಿಕಾರ್ಜುನನಿಗಿಂತ ಹಿಂದೆ ಇದ್ದ ಉಪಲಬ್ಧವಾದ ಎಲ್ಲ ಕನ್ನಡ ಚಂಪೂಗ್ರಂಥಗಳಿಗೂ (ಅಚ್ಚಾಗಿರಲಿ—ಕೈ ಬರಹದಲ್ಲಿರಲಿ) ಅಕಾರಾದಿಯನ್ನು ಮಾಡಿಕೊಂಡು ಸೂಕ್ತಿಸುಧಾರ್ಣವದ ಅಕಾರಾದಿಯೊಂದಿಗೆ ಹೋಲಿಸಿ ಶಾಸ್ತ್ರೀಯವಾಗಿ ಸಾಧ್ಯವಾದಷ್ಟು ಪದ್ಯಗಳಿಗೆ ಆಕರಗಳನ್ನು ಕಂಡುಹಿಡಿದು ಅವುಗಳಡಿಯಲ್ಲಿ ಕೊಟ್ಟಿದೆ. ಶೋಧನೆಯ ಕಾರ್ಯದಲ್ಲಿ ಮೇಲೆ ತಿಳಿಸಿರುವ ಪ್ರತಿಗಳನ್ನೂ ಆಕರ ಸಿಕ್ಕಿರುವ ಪದ್ಯಗಳಿಗೆ ಇವುಗಳ ಜೊತೆಗೆ ಆಯಾ ಗ್ರಂಥಗಳ ಅಚ್ಚಿನ ಅಥವಾ ಕೈ ಬರಹದ ಗ್ರಂಥಗಳನ್ನೂ ಉಪಯೋಗಿಸಿಕೊಂಡಿದೆ. ಅಚ್ಚಿನ ಪ್ರತಿಗಳಿಂದ ಪಾಠಾಂತರವನ್ನು ಕೊಟ್ಟಿದ್ದರೆ ಅದಕ್ಕೆ (ಅ) ಎಂಬ ಸಂಕೇತವನ್ನು ಉಪಯೋಗಿಸಿದೆ. ಉದಾಹರಣೆಗೆ 'ಚಂದ್ರಪ್ರಭಪುರಾಣ'ದಿಂದ ಉದ್ಧೃತವಾದ ಒಂದು ಪದ್ಯಕ್ಕೆ ಪುಟದಡಿಯಲ್ಲಿ (ಅ) ಎಂಬ ಪಾಠಾಂತರವಿದ್ದರೆ ಅದು ಚಂದ್ರಪ್ರಭಪುರಾಣದ ಅಚ್ಚಿನ ಪ್ರತಿಯ ಪಾಠವೆಂದು ತಿಳಿಯಬೇಕು. ಇಲ್ಲಿ ಉಪಯೋಗಿಸಿಕೊಂಡಿರುವ ಅಚ್ಚಿನ ಪ್ರತಿಗಳ ವಿವರವನ್ನು ಗ್ರಂಥಾಂತ್ಯದಲ್ಲಿ ಅನುಬಂಧದಲ್ಲಿ ಕೊಟ್ಟಿದೆ. 'ಶೂದ್ರಕ' ಗ್ರಂಥದ ಪದ್ಯಗಳನ್ನು ಆ ರೀತಿ ಗುರುತಿಸಿದುದು ಅಭಿನವವಾದಿವಿದ್ಯಾನಂದನ 'ಕಾವ್ಯಸಾರ'ದ ಆಧಾರದಿಂದ. ಶೂದ್ರಕಗ್ರಂಥ ಉಪ

ಲಬ್ಧವಾಗಿಲ್ಲ. ಅದರ ಪದ್ಯದ ಕೆಳಗಡೆ (ಅ) ಎಂಬ ಪಾಠಾಂತರವಿದ್ದರೆ ಅದು 'ಕಾವ್ಯಸಾರ'ದ ಅಚ್ಚಿನ ಪ್ರತಿಯ ಪಾಠವೆಂದು ಗ್ರಹಿಸಬೇಕು. 'ಮದನತಿಲಕ' ಮತ್ತು 'ಪಾರ್ಶ್ವನಾಥಪುರಾಣ' ಇವೆರಡೂ ಇನ್ನೂ ಅಚ್ಚಾಗಿಲ್ಲವಾದುದರಿಂದ ಅದಕ್ಕೆ ಸಂಬಂಧಿಸಿದ ಪದ್ಯಗಳನ್ನು ಶೋಧಿಸುವಾಗ ಆ ಗ್ರಂಥಗಳ ಕೈ ಬರಹದ ಪ್ರತಿಗಳಾದ ಪ್ರಾಚ್ಯಕೋಶಾಗಾರದ ಕೆ. ಬಿ. ೫೮ ಮತ್ತು ಕೆ. ಬಿ. ೫೯ ನಂಬರಿನ ಕೋಶಗಳನ್ನು ಉಪಯೋಗಿಸಿಕೊಂಡಿದೆ. 'ಮದನತಿಲಕ'ದ ಪಾಠಾಂತರಗಳಿಗೆ ಮ. ತಿ. ಯೆಂದೂ ಪಾರ್ಶ್ವನಾಥಪುರಾಣದ ಕೈಬರಹದ ಪ್ರತಿಯ ಪಾಠಾಂತರಕ್ಕೆ (ಪ) ಎಂದೂ ಸಂಕೇತಮಾಡಿದೆ.[30] ಪ್ರತಿಗಳಲ್ಲೆಲ್ಲ (ಕ) ಪ್ರತಿಯ ಪಾಠವೇ ಬಹುಮಟ್ಟಿಗೆ ಶುದ್ಧವೂ ದೋಷರಹಿತವೂ ಆಗಿರುವುದರಿಂದ ಅದನ್ನೇ ಹೆಚ್ಚು ಅನುಸರಿಸಿದೆ. ಎಲ್ಲ ಸಾಮಗ್ರಿಗಳನ್ನೂ ಉಪಯೋಗಿಸಿಕೊಂಡು ವಿಶೇಷ ಶ್ರಮಪಟ್ಟರೂ ಅರ್ಥವಾಗದ ಸುಮಾರು ೫೦ ಪದ್ಯಗಳಿಗೆ ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಿ ಹಾಗೆಯೇ ಬಿಟ್ಟಿದೆ. ಮಾತೃಕೆಗಳಲ್ಲಿಲ್ಲದ ಸಂಪಾದಕರ ಹೊಸ ಪಾಠಗಳನ್ನು ಕಂಸದಲ್ಲಿ ಸೇರಿಸಿದೆ. ವಾಚಕರ ಸೌಕರ್ಯಕ್ಕಾಗಿ 'ಸೂಕ್ತಿಸುಧಾರ್ಣವ'ದ ಪದ್ಯಗಳ ಅಕಾರಾದಿಯನ್ನೂ, ಆಕರಗಳು ಸಿಕ್ಕಿರುವ ಪದ್ಯಗಳ ಸಂಖ್ಯೆಗಳನ್ನೂ ಆಕರಗಳ ಪಟ್ಟಿಯನ್ನೂ ಅನುಬಂಧದಲ್ಲಿ ಕೊಟ್ಟಿದೆ.

ಮೇಲೆ ಸೂಚಿಸಿರುವಂತೆ ಈ ಗ್ರಂಥದಲ್ಲಿ ಆಕರ ಸಿಕ್ಕದೆ ಅನಿರ್ದಿಷ್ಟವಾಗಿ ಉಳಿದಿರುವ ಪದ್ಯಗಳು ಒಂದು ಸಾವಿರಕ್ಕಿಂತ ಮೀರಿವೆ. ಅವುಗಳಲ್ಲಿ ಯಾವುದಕ್ಕಾದರೂ ಆಕರ ಗೊತ್ತಾಗಿ ತಿಳಿಸಿದರೆ ಕೃತಜ್ಞತೆಯಿಂದ ಸ್ವೀಕರಿಸಲಾಗುವುದು.

ಈ ಗ್ರಂಥದ ಸಂಶೋಧನೆಯ ಕಾಲದಲ್ಲಿ ಮೊದಲಿಂದಲೂ ನಾನಾರೀತಿಯಾಗಿ ಸಹಾಯಮಾಡಿರುವ ನನ್ನ ಮಿತ್ರರಾದ ತೀ. ನಂ. ಶ್ರೀಕಂಠಯ್ಯ, ಎಂ. ಎ., ಮತ್ತು ಡಿ. ಎಲ್. ನರಸಿಂಹಾಚಾರ್ಯ, ಎಂ. ಎ., ಅವರಿಗೂ, ಶೋಧನೆಗೆ ಪ್ರತಿಗಳನ್ನು ಕೊಟ್ಟು ಸಹಾಯಮಾಡಿದ ಎಲ್ಲ ಮಹನೀಯರಿಗೂ ಕೃತಜ್ಞತಾಪೂರ್ವಕವಾದ ವಂದನೆಗಳು.

ವ್ಯಯ॥ ಭಾ॥ ಬ॥ ೫. ಎಸ್. ಅನಂತರಂಗಚಾರ್

30 ಈ ಸಂಕೇತಗಳಲ್ಲದೆ ಬೇರೆ ಸಂಕೇತಗಳಿದ್ದರೆ ಅವನ್ನು ಅಚ್ಚಿನ ತಪ್ಪೆಂದು ಭಾವಿಸಬೇಕು.

# ಪೀಠಿಕಾ ಪ್ರಕರಣಂ

ಶ್ರೀ ನೆಲಸಿರ್ಪ ತಾವರೆಯನಾಂತ ಸರೋವರದಂತೆ ವಿದ್ರುಮ
ಶ್ರೀ ನೆಲಸಿರ್ಪ ವಾರಿನಿಧಿಯಂತೆ ತಳಿರ್ ಪುದಿದಾಮ್ರದಂತೆ ತೇ
ಜೋನಿಧಿಯಪ್ಪ ಬಾಲರವಿ ತಳ್ತ ವಿಯತ್ತಳದಂತೆ ವಿಶ್ವಧಾ
ತ್ರೀನುತ ಕೌಸ್ತುಭಾಭರಣನಚ್ಯುತನೀಗೆಮಗೊಲ್ದು ರಾಗಮಂ ೧

ಶ್ರೀವಧು ರಾಗದಿಂದಗಲದಾವನ ವಕ್ಷದೊಳಿರ್ಪಳಾವ[1]ನಂ[1]
ದೇವನಿಕಾಯಮೋಲಗಿಪುದಾವನ ನಾಭಿಸರೋಜದೊಳ್ವಚ
ಶ್ರೀವರನುತ್ಸವಂಬೆರಸು ಪುಟ್ಟಿದನಾವನ[2]ಶೇಷ[2] ದೈತ್ಯವಿ
ದ್ರಾವಣ[3]ನೀಗೆ ಕಾವ್ಯವಿಭುಗ[3]ಚ್ಯುತನಚ್ಯುತ ಸೌಖ್ಯಕೋಟಿಯಂ ೨

(ದುರ್ಗಸಿಂಹನ ಪಂಚತಂತ್ರಂ, ೧–೧)

ಪೊಸ ಪೊಂಬಣ್ಣಂ ಪೊದಟಿರ್ದ್ದಪ್ಪುವ ಜಡೆಮುಡಿಗಲ್ ಭೂಷಣಾಹಿಸ್ಫಟಾ ರ
ತ್ನಸಹಸ್ರಜ್ಯೋತಿ ಶೀತದ್ಯುತಿ ಮೃದುಕರಿಚರ್ಮಾಂಬರಂ ಸಂಜೆಗೆಂಪುಂ
ಬಿಸಿಲುಂ ಬೆಳ್ದಿಂಗಳುಂ ಕಟ್ಟಲೆಯುಮೆನಿಪ ಚೋದ್ಯಕ್ಕೆ ಪಕ್ಕಾದ ದೈತ್ಯೇಂ
ದ್ರಸುರೇಂದ್ರಸ್ತೋತ್ರಪಾತ್ರಂ ಪ್ರಮುದದೆ ಪರಿರಕ್ಷಿಕ್ಕೆ ನಮ್ಮಂ ತ್ರಿಯಕ್ಷಂ ೩

[4]ಉದಧಿ[4]ಗಳೇಱುಮೆಯ್ದೆ ತೊವರಾದುವು ದಾನಜಲೌಘದಿಂ ಸುವ
ರ್ನದಿ ತನಗೊರ್ವೆ ಪೀರಲಣಮೆಯ್ದದು ಬೃಂಹಿತದಬ್ಬರಕ್ಕೆ ದಿ
ಙ್ಮದಕರಿ ಭೀತಿಯಿಂದೆ [5]ಸರವಿ[5]ಟ್ಟುವು ಚಂಚಲ ಕರ್ಣತಾಳವಾ
ತದೆ ಸುಟಿಗೊಂ[6]ಡರಭ್ರಗರೆ[6]ನಿಪ್ಪ ಗಜಾನನನೀಗೆ ಭೋಗಮಂ ೪

ಅರಿರೌದ್ರಂ ಕರದೈಶ್ವರ್ಯಮುಲ್ಲಸದಹೀನಾಲಂಕೃತಂ ಮೂರ್ತಿ ಸಾ
ಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ

---

[1] ಗಂ (ಕ) [2] ಶಿಷ್ಯ (ಕ) [3] ನೀಗೆ ದುರ್ಗವಿಭುಗ (ಅ) ಕಾವ್ಯನೀಗೆಮಗೆಯ (ಕ)
[4] ಅದಡಿ (ಖ) [5] ಸೆರಗಿ (ಕ) [5] ದಭ್ರನೆನಿಪ್ಪ (ಕ) ಡುದಭ್ರವೆನಿಸಿರ್ಪ (ಖ).

ವರದಾನಂ [1]ಸು[1]ತಭದ್ರಲಕ್ಷಣ[2]ಗುಣಂ[2] ಪದ್ಮಾನುಷಂಗಿತ್ವಮಾ
ಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ ೫

(ಜಗನಾಥವಿಜಯಂ೧-೫)

ಆವಳ ಕಯ್ಯ ಪುಸ್ತಕದೊಳಿರ್ಪುವು ಲೋಕದ ಸಾರ[3]ಸೂ[3]ಕ್ತಿಯಿ
ನ್ನಾವಳ ವಾಗ್ವಿಲಾಸಚತುರತ್ವದೆ ಪೋದುದು ಪದ್ಮಜಂಗೆ ಮು
ನ್ನಾವರಿಸಿರ್ದ ಛಾಂದಸಿಕೆಯಾವಳ ಪೋಲ್ವೆಯ ಪುತ್ರಿ ಕೀರ್ತಿ ಲ
ಕ್ಷ್ಮೀ[4]ವಧುವಾದಳಾ ವಧುಗೆ[4] ಕಾವ್ಯದ [5]ನಾಂದಿ[5]ಯೊಳರ್ಘ್ಯವೆತ್ತುವೆಂ ೬

ದುರಿತವ್ರಾತಲತಾಕೃಪಾಣಿ ವಿಸರದ್ದುರ್ಭೋಧರೋದಸ್ವಿನೀ
ತರಣದ್ರೋಣಿ ಸಮುನ್ನತಾಕ್ಷಯಪದ ಪ್ರಾಸಾದ ನಿಶ್ರೇಣಿ ಬಂ
ಧುರಸಾಹಿತ್ಯ ಸುರತ್ನರೋಹಣಮಹೀಂಪ್ರಕ್ಷೋಣಿ ತಾಳ್ದಿರ್ಕೆ ವಿ
ಸ್ತರದಿಂ ವಾಣಿ ಮದೀಯ ಮಾನಿತ ಮುಖಶ್ರೀಯೊಳ್ ಸಖೀಲೀಲೆಯಂ ೭

(ಚಂದ್ರಪ್ರಭಪುರಾಣಂ,೧-೧೧.)

ಸರಸಕವೀಶ್ವರ ಸಭೆಯೊಳ್
ಸರಸಕವೀಶಂ ವಿಶಿಷ್ಟ ಮುನಿಗಳ ಸಭೆಯೊಳ್
ಪರಮಮುನಿ ಬುಧರ ಸಭೆಯೊಳಾ
ಪರಮಬುಧನೆನಿಪ್ಪ[6]ನೀ ಚಿದಾ[6]ನಂದ ಬುಧಂ ೮

ಶ್ರೀವಧು ಮುತ್ತಿನೆಕ್ಕಸರದಂತುರದೊಳ್ [7]ನಿಲು[7]ವಂತು ವಿಕ್ರಮ
ಶ್ರೀವಧು ಬಾಹುಪೂರಕದವೊಲ್ ಭುಜದೊಳ್ ನಿಲುವಂತು ಕೀರ್ತಿ ದಿ
ಗ್ದೇವಿಯರೊಳ್ [8]ನಿಜಾಜ್ಞೆ[8]ವೆರಸಾದರದಿಂ ನಿಲುವಂತು ಧರ್ಮಲ
ಕ್ಷ್ಮೀವರನಾಗಿ ಪಾಲಿಸುಗೆ ಮೇದಿನಿಯಂ ಕಲಿಸೋಯಿಬಲ್ಲಹಂ ೯

(ಮಂಡ್ಯ ೧೨೧ ; ನಾ. ಮಂ, ೯೮ ; ಕಡೂರು, ೧೨.)

ಹರಿನಾಭೀಕಮಲಕ್ಕೆ ಪುಟ್ಟಿದಜನಿಂ ಸಂದತ್ರಿಯಿಂ ಸೋಮನಿಂ
ದೊರೆವೆತ್ತಾ ಬುಧನಿಂ ಪುರೂರವನಿನಾಯುರ್ಭೂಪನಿಂ ರಾಜಶೇ
ಖರನಪ್ಪಾ ನಹುಷಾಂಕನಿಂ [9]ವಿಭು[9] ಯಯಾತಿ[10]ಕ್ಷ್ಮಾಪ[10]ನಿಂ ಕ್ಷಾತ್ರಮಂ
ದಿರನಾದಂ ಯದುವಾತನಿಂ ಯದುಕುಲಂ ಪ್ರಖ್ಯಾತಮಾಯ್ತುರ್ವಿಯೊಳ್ ೧೦

(ಮಂಡ್ಯ ೧೨೧ ; ನಾ. ಮಂ, ೯೮.)

---

[1] ನ (ಕಖ) [2] ಪವಂ (ಕಖ) [3] ಸೋ (ಖ) [4] ವರವಾದವಾಗ್ವಧುಗೆ (ಕ) ವಧುವಾವಾಗ್ವಧುಗೆ (ಖ) [5] ಸಂಧಿ (ಖ) [6] ನಿಶ್ಚಿತಾ (ಕ) ಸಚ್ಚಿವಾ (ಖ) [7] ನಲಿ (ಶಾಸನ) [8] ವಿರಾಗ (ಖ) [9] ನಯ (ಕ) [10] ಶ್ರೇಷ್ಠ (ಕಖ ಶಾಸನ).

ಸಳನೆಂಬಂ ಶಶಕಾಭಿಧಾನಪುರದೊಳ್ ವಾಸಂತಿಕಾದೇವಿ[1]ಯಂ
ಬಳನಾ[1]ರಾಧಿಸುವಾಗಳು[2]ಗ್ರತರ[2]ನೇತ್ರಂ ಘೋರವಕ್ತ್ರಂ ವಿಶೃಂ
ಖಳಗಾತ್ರಂ ಪುಲಿ [3]ಪಾಯೆ[3] ಕಂಡು ಮುನಿನಾಥಂ ಕುಂಚಮಂ ಕೊಟ್ಟು ಹೊ
ಯ್ಸಳ ಎಂದಂ ಬೞಿ[4]ಕಾ[4]ಯ್ತು ಹೊಯ್ಸಳವೆಸರ್ [5]ತದ್ವಂಶಜೋ[5]ರ್ವೀಶರೊಳ್
(ತರೀಕೆರೆ, ೪೨.)

ಆದಿವರಾಹಂ ಕೋಡೊಳ್
ಮೇದಿನಿಯಂ ತಳೆವ ತೆಱದಿನೂರ್ಜಿತಸತ್ವಂ
ಮೇದಿನಿಯಂ ತಳೆದಂ ವಿನ
ಯಾದಿತ್ಯಂ [6]ದೋಃಪತ್ರಪದಿಂ[6] ಹೊಯ್ಸಳರೊಳ್ ೧೨
(ಮಂಡ್ಯ, ೧೨೧.)

ವಿನಯಾದಿತ್ಯನ ನಂದನಂ ನಿಜಭುಜಾವಷ್ಟಂಭದಿಂ ವಿಶ್ವಮೇ
ದಿನಿಯಂ ತಾಳ್ದಿದನಾಜಿವೀರನೆಱೆಯುಂಗಂ ಹರ್ಷಮುಂ ತಾ[7]ಳ್ದಿ[7] ಮಿ
ತ್ರನಿಕಾಯಂ ನಿಜಶತ್ರುಗಳ್ ಭಯಮನೆತ್ತಂ ತಾ[7]ಳ್ದಿ[7] ಬೀತಾನತರ್
ಘನಸಂಪತ್ತಿಯನೆಯ್ದೆ ತಾ[7]ಳ್ದಿ[7] ದಿಗಧೀಶರ್ ತಾ[7]ಳ್ದಿ[7] ತನ್ನಾಜ್ಞೆಯಂ ೧೩
(ಮಂಡ್ಯ, ೧೨೧.)

ಪೆಸಗೊಂಡಾವಾವ ದೇಶಂಗಳನೆಣಿಸುವುದಾವಾವ ದುರ್ಗಂಗಳಂ ಬ
ಣ್ಣಿಸಿ ಪೇೞುತ್ತಿರ್ಪುದಾವಾವವನಿಪತಿಗಳಂ ಲೆಕ್ಕಿಸುತ್ತಿರ್ಪುದೆಂಬೊಂ
ದೆಸಕಂ ಕಯ್ಗಣ್ಮೆ ನಾಲ್ಕುಂ ಕಡಲ ಕಡೆವರಂ ದಿಗ್ಜಯೋತ್ಸಾಹದಿಂ ಸಾ
ಧಿಸಿದಂ ವಿಕ್ರಾಂತದಿಂ ಸಂದೆಱಗನೃಪತಿಯಾತ್ಮೋದ್ಭವಂ ಬಿಟ್ಟದೇವಂ ೧೪
(ಮಂಡ್ಯ, ೧೨೧.)

ದೇವಿವೆಸರೆಸೆವ ಲಕುಮಾ
ದೇವಿಗಮಾ ವಿಷ್ಣುವರ್ಧನಂಗಂ ತನಯಂ
ಶ್ರೀ ವಿಜಯನಾರಸಿಂಹ ಮ
ಹೀವಲ್ಲಭನಾದನುದಿತನುಪಮಾತೀತಂ ೧೫
(ತರೀಕೆರೆ, ೪೨.)

ಇದಿರಾದರಿಭೂಪಾಲರ
ಮದದಾನೆಯ ಕೊಂಬಿನೆಸೆವ ದಂತದ ಬಳೆ[8]ಯಂ[8] |

---

[1] ಯಂ ತಳೆದಾ (ಶಾಸನ) [2] ತ್ತರಳ (ಶಾಸನ) [3] ಯೆಯ್ದೆ (ಕಖ) [4] ಯಾ (ಕಖ) [5] ತಾಂ ಯಾದವೋ (ಶಾಸನ) [6] ಗೋತ್ರವರ್ಧನಂ (ಬ ?) (ಕಖ. ಶಾಸನ) [7] ಳೆ (ಶಾಸನ) [8] ಯಿಂ (ಕ).

ಬಿದುವಿನ ಮುತ್ತಿನ ಹಾರವ
ನೊದವಿಸಿ ಜಯಸಿರಿಗೆ ತುಡಿಸುವಂ [1]ನರ[1]ಸಿಂಹಂ ೧೬

(ಅರಸೀಕೆರೆ, ೬೨.)

ಆ ವಿಜಯನಾರಸಿಂಹ ಮ
ಹೀವಲ್ಲಭನಗ್ರಮಹಿಷಿಗಾ ಪಟ್ಟಮಹಾ
ದೇವಿಗೆ ಪೆಸರ್ವೆ[2]ತ್ತೇಚಲ[2]
ದೇವಿಗೆ ಬಲ್ಲಾಳದೇವನುದಯಂಗೆಯ್ದಂ ೧೭

(ಮಂಡ್ಯ, ೧೨೯.)

ಉರದೊಳ್ ಸಪ್ತಾಂಗಲಕ್ಷ್ಮೀವಧು ವಿಜಯಭುಜಾದಂಡದೊಳ್ ವಿಕ್ರಮಶ್ರೀ
ಧರೆಯೊಳ್ ತನ್ನಾಜ್ಞೆ ತನ್ನೊಳ್ ನೃಗ ನಳ ನಹುಷಕ್ಷತ್ರಧರ್ಮಂ ಪದಾಬ್ಜೋ
ದರದೊಳ್ ಭೀತಾನತೌಘಂ ಸುಖಮಿರೆ ಪರಮೋತ್ಸಾಹದಿಂ ವಿಶ್ವವಿಶ್ವಂ
ಭರೆಯಂ ದೋರ್ದಂಡದೊಳ್ ತಾಳ್ದಿದನತುಳಬಳಂ ವೀರಬಲ್ಲಾಳದೇವಂ ೧೮

(ಮಂಡ್ಯ, ೧೨೧.)

ಆ ಚಕ್ರೇಶನ ಸೂನು ವೀರನರಸಿಂಹಂ ಚೋಳರಾಯಪ್ರತಿ
ಷ್ಠಾಚಾರ್ಯಂ ಮ[3]ಗರಾ[3]ಧಿರಾಜ ಲಯಕಾಲಂ ಪಾಂಡ್ಯಸಾಮ್ರಾಜ್ಯಸಂ
ಕೋಚಾಧಾಯಿಪರಾಕ್ರಮಂ [4]ಧರೆಯನಾಳ್ದಂ[4] [5]ತತ್ಸುತಂ[5] ವೀರಲ
ಕ್ಷ್ಮೀಚಂಚನ್ಮಣಿ[6]ಪೂ[6]ರನಂಬುಧಿಗಭೀರಂ [7]ವೀರಸೋಮೇಶ್ವರಂ[7] ೧೯

(ಮಂಡ್ಯ, ೧೨೧ ; ನಾ. ಮಂ, ೯೮ ;ಕಡೂರು, ೧೨.)

ಮುನ್ನಂ ರೂಢಿಯ ಕೃಷ್ಣಕಂಧರನುಮಂ ಮಾರ್ಕೊಂಡು ಚೋಳೋರ್ವಿಯಂ
ನಿನ್ನಂತಾರೊಳಪೊಕ್ಕು ಸಾಧಿಸಿದರಾರ್ ಪಾಂಡ್ಯೇಶನಂ ವೀರದಿಂ
ಬೆನ್ನಂ ಪತ್ತಿಸಿ ಸೋಯಿದೇವ ಘಟೆಯಂ ಕೈಕೊಂಡರಾರ್ ಚೋಳನಂ
ತನ್ನಾಮ್ನಾಯದ ರಾಜ್ಯದೊಳ್ ನಿಲಿಸಿದರ್ ಸೋಮಾನ್ವಯಾಧೀಶರೊಳ್ ೨೦

(ನಾ. ಮಂ, ೯೮ ; ಕಡೂರು, ೧೨.)

ಹಣಿದಂ[8]ಬೊಯ್ಯಲ್ ಜವಂ[8] ರಾಯರನೆ [9]ಬಯ[9]ಸಿ ಬರ್ಪಂತೆ ಸೋಮೇಶ್ವರಂತೆಂ
ಕಣರಾಯಂ ಬಂದನಾಶಾಜಯಕೆಲೆಲೆ ಮಹಾದೇವ ವಿದ್ವಿಣ್ನೃಪರ್ಗೆ
ತ್ತಣ ಕೂರ್ಪಿನ್ನೆತ್ತಣಾರ್ಪೆತ್ತಣ ಜಯದೊದವಿನ್ನೆತ್ತಣಾಟೋಪಮಿನ್ನೆ
ತ್ತಣ ಧಾತ್ರೀಚಕ್ರಮಿನ್ನೆತ್ತಣ ಗಜಘಟೆಯಿನ್ನೆತ್ತಣಾತ್ಮೀಯಸೈನ್ಯಂ ೨೧

---

[1] ಜಯ (ಬ) [2] ತ್ತಚಲಾ (ಬ) [3] ಕರಾ (ಶಾಸನ ಕಡೂರು, ೧೨) ಗಧಾ (ಕ) [4] ಮಗಧನಾಳ್ವಂ (ಬ) [5] ಲೀಲೆಯಿಂ (ಕಖ) [6] ಹಾ (ಕ) [7] ರಾಜವಿದ್ಯಾಧರಂ (ಕ. ಖ. ಶಾಸನ) [8] ಬೊಯ್ದೆಲ್ಲರಂ (ಬ) [9] ಜಯಿ (ಬ).

ಕವಚಂ ಕಟ್ಟಾಯುವಣ್ಮಿಂದಿಱಿವ ಮೆಱೆವ ಬಾಹಾಬಲಕ್ಕಾರ್ಪು[1]ವೆತ್ತೀ
ಕವಿ[1]ಳಾಸಂ ಸಾಹಸಕ್ಕೆತ್ತಿದ ಬಿರುದೆ ವಲಂ ಡಂಗುರಂ [2]ಪೂಣ್ದ ಮಂತ್ರ[2]
ಕ್ಕೆ ವಿರೋಧಿಶ್ರೀಸಮಾಕರ್ಷಣಮೆ ಕಳಶವಿಸ್ತಾರವೆಂಬನ್ನೆಗಂ ಯಾ
ದವರಾಯಂ ಸೋಯಿಗಂ ಹೊಯ್ಸಳಕುಲತಿಲಕಂ ಲೋಕದೊಳ್ ಕೀರ್ತಿವೆತ್ತಂ ೨೨

ಗಿರಿದುರ್ಗಂ ತಿಱಿಕಲ್ ಸಮಗ್ರವನದುರ್ಗಂ ಕರ್ಬುದೋಂಟಂ ಜಲೋ
ದರದುರ್ಗಂ ಕಡುಪಿಂದ[3]ಮಿಾಂ[3]ಟೆ ಮೊಗೆವಂತಾಪೋಶನಂ [4]ಕಾಣ್ಬುದೇ
ಕರಣಂ ಕೇಳ್[4] ಶರಣಿಲ್ಲ ಬೇಱೆ ನಿಮಗೆಂದುದ್ವೃತ್ತರಂ ಸಾಱಿ ಡಂ
ಗುರಿಪಂತಬ್ಬರಿಕುಂ ಜಯೋತ್ಥಪಟಹಂ ಶ್ರೀಸೋಮಭೂಪಾಲನಾ ೨೩

ಕೃತಿಯಂ ನಿರ್ಮಿಸಿ ಮುನ್ನಮಾದರಿಳೆಯೊಳ್ ಶ್ರೀಹರ್ಷನುಂ ಭೋಜ ಭೂ
ಪತಿಯುಂ ಸತ್ಕವಿ ವಜ್ರಹಸ್ತನೃಪನುಂ ಸರ್ವಜ್ಞಸೋಮೇಶನು
ನ್ನತಿವೆತ್ತಂ ಧರೆಗಿಂದು ಮಲ್ಲಬುಧನಿಂದಂ ಕಾವ್ಯಸಾರಂ ಜಗ
ನ್ನುತಮಾಯ್ತೆಂದೆನೆ ಮಾಡಿ ಕೀರ್ತಿವಡೆದಂ ಶ್ರೀವೀರಸೋಮೇಶ್ವರಂ ೨೪

ಚದುರರ ಮೆಚ್ಚು ಭಾವುಕರ ಕೈಪಿಡಿ ಜಾಣರ ಬಯ್ಕೆ ಸತ್ಕಲಾ
ವಿದರ ವಿಲಾಸಮುಕ್ಕರಿಗರಾಭರಣಂ ಬುಧರಿಚ್ಚೆಯಚ್ಚು ವೀ
ರದ ಕಣಿ ಕೂರ್ತು ಕೂರಿಸಿದ ನಲ್ಲಳ ವೈಸಿರಿ ತಾ[5]ನೆನಿಪ್ಪ[5] ಸ
ಮ್ಮದದೊಳೆ ಬಣ್ಣಿಕುಂ ಧರಣಿ ಸತ್ಕವಿ ಮಲ್ಲನ ಕಾವ್ಯಸಾರಮಂ * ೨೫

ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು ಪೊನ್ನನೊಳ್
ಸನ್ನಿದಮಾದ [6]ಜಾ[6]ಣ್ಣುಡಿ ಗಜಾಂಕುಶ ರಾಜನ ಚಿತ್ತವೃತ್ತಿ ತಾ
ನುನ್ನತಮಾಗಿ ಸಂದ ಗುಣವರ್ಮನ ಜಾತಿ ಸಮಾನುರಕ್ತಿಯಿಂ
ದನ್ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಳಾಸಗೇಹದೊಳ್ ೨೬

ಚದುರೆಸೆವಂತು ಭಾವಮುಮುರ್ವಂತು ನಯಂ ನಿಮಿರ್ವಂತು ಮಲ್ಲಪಂ
ಪದವಿಡೆ ಭಾರತೀವನಿತೆ ಭೋಂಕನೆ ಬಂದು ಮನಸ್ಸರೋಜದೊಳ್
ಚದುರೆಸೆವಂತು ಭಾವಮುಮುರ್ವಂತು ನಯಂ ನಿಮಿರ್ವಂತು ಲೀಲೆಯಿಂ
ಪದವಿಡುತಿರ್ಪಳಾಹವನ ಕಾರಣಮಂತ್ರಮಿದಾಗದಿರ್ಕುಮೋ ೨೭

---

[1] ಕೇಯೂರವಿ (ಖ) [2] ಪೊಣ್ಮಿದಂತ (ಬ) [3] ದೀಂ (ಕಖ) [4] ಗೊಟ್ಟುಬರ್ಪವರೇಣ್ಯಂ (ಖ) ಗೊಂಡುಬರ್ಪವರೇಣ್ಯಂ ಕೇಳ್ (ಬ) [5] ನಂದದೆ (ಕ) * ಈ ಪದ್ಯ ಾದಮೇಲೆ (ಕ) ಪ್ರತಿಯಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ :—

ಕಂ ॥ ರಸದ ಬಗರಗೆ ಕಳಾಳಿಯ। ಹಸರಂ ವರ್ಣನದ ಸೀಮೆ ಕರ್ಣಾಟಕದಿಂ ॥
ದೆಸೆವರ್ಥಸೂಕ್ತಿಕಂಜಂ । ಪಸರಿಸಿತೀ ಕಾವ್ಯ ......... ತತ್ಸಾರಂ ॥

[6] ನಾ (ಬ).

ಪಡೆದಂ ರಜೋಧಿಕಂ ವಿಧಿ
ಪೆಡೆವಣಿಯಂ ಫಣಿಯನಮೃತರಸಮಂ ವಿಷಮಂ
ಕಡಲಂ ಸುಱಿಯಂ ಮಱಿಯಂ
ಸಿಡಿಲಂ ಪಡೆದಂತೆ ಸುಜನರಂ ದುರ್ಜನರಂ ೨೮

(ಪಂಪರಾಮಾಯಣಂ, ೧–೩೨ ; ಮಲ್ಲಿನಾಥಪುರಾಣಂ, ೧–೫೨.)

ವಿನಯಮನನ್ನೆಗಂ ಸುಜನರೊಳ್ ಬಱಿಕೊಯ್ಯನೆ ಮಾಡಿಕೊಳ್ವ[1]ನೇ
ಕೆನೆ[1] ವಿಷಪನ್ನಗಾಕೃತಿಯೊಳಟ್ಟಿ ತಗುಳ್ದು ದುರಂತ ದುಃಖ ಭಾ
ಜನ ದುರಿತಾತ್ಮ ದುಶ್ಚರಿತ ದುಸ್ಸಹ ದುರ್ಮುಖ ದುರ್ವಿದಗ್ಧ ದು
ರ್ಜನನೆನಿಸಿರ್ದ ದುಷ್ಕೃತಿಗೆ ಭಕ್ತಿಯೊಳೆತ್ತುವೆನಗ್ರಪೂಜೆಯಂ ೨೯

ಅಂಗುಳಿೊಳಡಸಿದ ವಿಷ[2]ಮುಂ[2]
ಭಂಗುರತರ ವಿಷಮದೃಷ್ಟಿ[3]ಯುಂ[3] ವ್ಯಾಳಸಮಾ
ಸಂಗಮು[4]ಮಮರ್ದಿರೆ[4] ಮದನಹ
ರಂಗೆಣೆಯೆನಿಪುದಱಿನೆಮಗೆ ಖಳರಭಿವಂದ್ಯರ್ ೩೦

(ಕಾವ್ಯಾವಲೋಕನಂ, ೭೬೩.)

ಒಱೆಯಿಂದುರ್ಚದೆ ನಡುಗುವೆ
ನೆಱದೆಡೆಯಂ ಖಡ್ಗಮಾಸ್ಯಕೋಶದಿನಿನಿಸುಂ
ಪೊಱಮಡದೆ ಕೊಂದು ಕೂಗಲ್
ನೆಱೆದುದು ದುರ್ಜನನ ನಿಶಿತ ರಸನಾಖಡ್ಗಂ ೩೧

ವಿನಯಂ ಮಾಸುಗುಮೆಂದು ಬೆರ್ಚಿ ಕೆಲಬರ್ ಸೌಜನ್ಯಮಂ ಬೀಱಿ ದು
ರ್ಜನನಂ ಮೆಲ್ಲನೆ ಬಯ್ವರಾ ಖಳನಿನಾರ್ಗಂ ಪೇಱಿವೊಳ್ಪುಂಟೆ ಕೆ
ಮ್ಮನೆ ಕೈ[5]ಗಾ[5]ದಿರದೋವದುಪ್ಪನೊಲೆಯೊಳ್ ಪೊಯ್ವಂತೆ ಪಾಱೇಱಿ ದು
ರ್ಜನನಂ ಬಯ್ವುದು ಬಯ್ದೊಡಲ್ಲದವನಂ ಪೇಱ್ ಭಾವಿಸಲ್ಬರ್ಕುರ್ಮೇ ೩೨

ತುಡುಕಿದ ದೋಷಿಯನಲ್ಲದೆ
ಪಿಡಿಯದು ಘಟಸರ್ಪನಂತುಟಲ್ಲಿದು ತನ್ನಂ
ತುಡುಕದ ನಿರ್ದೋಷಿಯುಮಂ
ಪಿಡಿವುದು ಖಳಮುಖ ಘಟೋಗ್ರಜಿಹ್ವಾಸರ್ಪಂ ೩೩

(ಜಗನ್ನಾಥವಿಜಯಂ, ೧-೧೨.)

---

[1] ನೆಂತೆನೆ (ಖಬ) [2] ದಿಂ (ಬ) [3] ಯಿಂ (ಬ) [4] ಮಾಗಿರೆ (ಬ)
[5] ಗುಂ (ಕ).

ವಿಕಸಿತಚಂಪಕಕ್ಕೆಳಸಿ ಬಂಡುಣಲೊಲ್ಲದ ಚಂಚರೀಕ ನಾ
ಸಿಕಮನಶೇಷಮಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ ಕೌ
ಶಿಕನಯುಸಂಗಳಂ ಸುಕವಿಕಾವ್ಯಮನಾಲಿಸಿ ಕಾಯ್ವ ದುರ್ಜನ
ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜವಿಷ್ಟರಂ ೩೪

(ಪಂಪರಾಮಾಯಣಂ, ೧-೩೧.)

ಛಂದಮಿದಾವುದೆಂದೊಡಿಱಿವರ್ ಪದಬಂಧದೊಳೀಪ್ರಯೋಗ[1]ಮಂ
ತೆಂ[1]ದೆ.ಡೆ ಬಯ್ವರಾವ ಕವಿಮಾರ್ಗಮಿದೆಂದೊಡೆ ಪೊಯ್ವರರ್ಥಮೇ
ನೆಂದೊಡೆ ತೊಂಡುಭಂಡುಗೆಡೆದುಟ್ಟುದನಿಕ್ಕುವರಾ[2]ವ ನೀತಿ ಪೇ[2]
ೞೆಂದೊಡೆ ಕೊಲ್ವರೀಗಳಿನ ದೇಸಿಗೆ ಬಿಟ್ಟ ಮಹಾಕವೀಶ್ವರರ್ ೩೫

ವಾಕ್ಕಿನೊಳಿಲ್ಲ ಮೇಣ್ ಪರಿಚಯಂ ಬಗೆ [3]ಮೊ[3]ಕ್ಕಳಮಂತು[4]ಟ[4]ಲ್ತೆ ಗಂ
ಟಿಕ್ಕುವರೆಂಜಲಾದ [5]ಬ[5]ಱುವಾತುಗಳಂ ಪಱಿಗಬ್ಬಮೆಲ್ಲಮಂ
[6]ಠಕ್ಕಿಸಿ ತಿಂದು[6] ಕುಂಬಳದ ಮಾೞ್ಕೆಯ ಮಾಡುವೆನೆಂಬ ಸಾಸಿಗಂ
ಗಕ್ಕಟ ಪೂಣ್ದು ನಿರ್ವಹಿಪುದೇನರಿದಾ[7]ಯ್ತೆ[7] ಮಹಾಪ್ರಬಂಧಮಂ ೩೬

ಕವಿಯಂ ಕಂಡೊಡೆ ಶಾಸ್ತ್ರಹೀನನಿವನೆಂದಿಂತಾರ್ದು ಶಾಸ್ತ್ರಜ್ಞನಂ
ಕವಿಯಲ್ಲೆಂದಣಮಾರ್ದು ಮಿಕ್ಕ ಬಹುಶಾಸ್ತ್ರ ಪ್ರಜ್ಞನಪ್ಪಾ ಮಹಾ
ಕವಿಯಂ ಕಂಡೊಡೆ ದಗ್ಧವಾಣಿಯಿವನೆಂದಿಂತಾ[8]ರ್ದಸಹ್ಯರ್ ಕೆಲರ್[8]
ಕವಿಗಳ್ ವರ್ತಿಪರಲ್ಲದಾವ ಮೊಱೆಮುಟ್ಟಂದಂತವರ್ ವರ್ತಿಪರ್ ೩೭

[9]ಪೆಱರಂ ಪೊಗೞ[9]ಲ್ವಡೆಯದೆ
ಪೆಱರಂ ಕಯ್ಯಿಕ್ಕಿ [10]ಜೋಡಿ[10]ಸಲ್ವಡೆಯದೆ ತಾಂ
ಪೆಱರಂ ಪೞಿಯಲ್ವಡೆಯದೆ
ಮಱುಕದೊ[11]ಳಿರ್ಪಂತು[11] ದುರ್ಜನರ್ ಬಡ[12]ವಪ್ಪರ್[12] ೩೮

ನೋಡಿರೆ ಸದ್ಗುಣಂಗಳನೆ ಕೇಳ್ದು ಕನಲ್ವ ಖಳಂಗೆ ಕರ್ಣಮಂ
ಮಾಡಲೆ ಪೋಗಿ ಮಸ್ತಕಮನಯ್ಯೊ ವಿಧಾತ್ರನದೆಂತು ಸರ್ಪನೊಳ್
ಮಾಡಿದನಾ ಬುಧಂಗವಿದು ಸರ್ಪನಿವಂ ಖಳನೆಂಬ ಬುದ್ಧಿ ಮೇಣ್
ಕೂಡದೊ ಕಂಡೊಡಂ ಕಮಲ[13]ಗರ್ಭ[13]ನುಮಂ ಖಳನಾೞಿಗೊಂಡನೋ ೩೯

(ಲೀಲಾವತಿ, ೧-೩೯,)

---

[1] ಮೇನೆಂ (ಕ) [2] ತಿಕಬ್ಬವೇ (ಬ) [3] ಪೊ (ಕಖ) [4] ಮ (ಕಬ) [5] ಬಿ (ಕ) [6] ರಕ್ಕಸಿ ತಿಂದ (?) [7] ಯ್ತು (ಖ) [8] ದು ಹಾಸ್ಯೋಕ್ತಿಯಿಂ (ಕ) [9] ಪರಮಂ ಕೇಳ (ಕ) [10] ಓದಿ (ಕ) [11] ಳೆಸೆವಂತು (ಕಖ) [12] ವರವರ್ (ಕ) [13] ಸಂಭವ (ಖ).

ದುರ್ಜನತೆಯಿಂದೆ ಪಡೆದಂ
ದುರ್ಜನನಂ ಕಮಲಗರ್ಭಸಂತಲ್ಲದೆ ಮೇಣ್
ದುರ್ಜನನುದಯದೊಳಂತಾ
ದುರ್ಜನನವನಳವಿಗಳಿದು ಪುಟ್ಟದನಕ್ಕುಂ ೪೦

ಸತ್ತುಂ ಪಿಸುಣಂ ಪೆಱರ್ಗಾ
ಪತ್ತಂ ಮಾಡದಿರನೆಂದು ಮಱುಗಿದಪುದು ಮ
ಚ್ಚಿತ್ತಂ ಮೃತಮಾಷಮುಖಂ
[1]ಮಿ[1]ತ್ತಿನಿಸದೆ ವಮನಮೆಯ್ದಿಪವೊಲುಂಬವನಂ ೪೧

(ಲೀಲಾವತಿ, ೧-೩೭.)

ನಂಬಿಸಿ ಖಳನಂ ಸಜ್ಜನ
ನೆಂಬುದನೆನಿಸಿದೊಡಮೇನೊ ಸೈತಾದಪನೇ
ಕಂಬಿಟ್ಟು ನಾಯ ಬಾಲವ
ನಿಂಬಿಂ ಕಟ್ಟಿದೊ[2]ಡೆ ಸೈತದೇನಾದುಪುದೇ[2] ೪೨

ಅತಿ[3]ಪೀಡಿ[3]ಸುಗುಂ ಸ್ಥಾನ
ಚ್ಯುತನಾಗಿಯುಮಖಿಳ[4]ಮುಂ ಖಳಂ ವೃತವೀ[4]ರು
ತ್ಪತಿತಂ ಪಥಿಕರ ಪದತಳ
ಹತಿಯಂ ಹತಕಂಟಕಾಂಕುರಂ ಮಾಡುವವೋಲ್ ೪೩

(ಲೀಲಾವತಿ, ೧-೩೬.)

ಕನಕಂ ನಿರ್ಭಾಗ್ಯನಾಲೋಕಿಪುದುಮವನ ದುಷ್ಕರ್ಮದುದ್ರೇಕದಿಂ ಕರ್ಬುನಮಾಗಪ್ಪಂತೆ ಪಿತ್ತಜ್ವರನಿರತನ ಬಾಯ್ಗಿಂಪನಾಳ್ದಿರ್ದ ಪಾಲ್ ಬೇವಿನ ಕಾಯ್ವೊಲ್ ಕೈಪೆಯಪ್ಪಂತಿರೆ ಸುಕವಿಜಗತ್ಸೇವ್ಯಕಾವ್ಯಾಮೃತಂ ದುರ್ಜನಚೇತೋವೃತ್ತಿಯೊಳ್ ದುಃಸ್ಸಹಕಟುಕ[5]ರಸಾಭಾವ[5]ಮಂ ತೋಱುತಿರ್ಕುಂ

ಆನುಂ ಬುಧರೊಡನೆ ನೃಪಾ
ಸ್ಥಾನದೊಳಿರ್ದಪ್ಪೆನೆಂದು ಕುಕವಿಕದಂಬಂ
ಬಾನುದ್ದಮುಪ್ಪದೇಕು—
ದ್ಯಾನದೊಳೊಡನಿರವೆ ಕಾಗೆಯುಂ ಕೋಗಿಲೆಯುಂ ೪೪

(ಲೀಲಾವತಿ, ೧-೨೬.)

---

[1] ಮ (ಅ) [2] ಡಮದೇನು ಸೈತಾನಪುದೆ (ಕ) [3] ಬೇಧಿ (ಕ) [4] ಲೋಕಮುಂ ಖಳನಂತಾ (ಕಖಬ) [5] ಸ್ವಾಭಾವ (ಕ).

ಹಱಿಗವಿಗಳ ಕಬ್ಬಂಗಳ
[1]ಪೊ[1]ಱಗಱಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ
ಬಱಿ ತಾಱಿಗ ಬೀಱಿಗವೆ
ತ್ತಱಿ ತತ್ತಱಿ ವೆಕ್ಕಸಕ್ಕವಸ್ತವ್ಯಸ್ತಂ ೪೬

(ಗಿರಿಜಾಕಲ್ಯಾಣ, ೧-೩೨.)

ನವರಸಪರಿಭಾವಾರ್ಥಂ
ನವೀನಪದಭರಿತ[2]ಮಿಂತಿದೆನೆ[2] ಸತ್ಕೃತಿಯಂ
ತವೆ ಪೇ[3]ಟ್ವುದು ಪೇ[3]ಟದೊಡೇಂ
ಕವರ್ವರೆ ಕೋಪಿಪರೆ ದಂಡಿಪರೆ ನಿಂದಿಪರೇ ೪೭

(ಗಿರಿಜಾಕಲ್ಯಾಣ, ೧-೨೦.)

ರಸವತ್ಕಾವ್ಯವನಱಿತ್ತವಟ್ಟು ಸುಜನಂ ಕೇ[4]ಳ್ದೈದೆ ತಾಳ್ವಂತೆ[4] ಸಂ
ತಸಮಂ ದುರ್ಜನ[5]ನೇಕೆ[5] ಕೇಳ್ದು ನಲಿ[6]ಗುಂ[6] ದುರ್ಬೋಧಮಂ ಬೇಱಿ ಪು
ಟ್ಟಿಸುಗುಂ ನಿಷ್ಠುರವಜ್ರತುಂಡಹತಿಯಿಂ ಕೀಟಂ ಭರಂಗೆಯ್ದು ತುಂ
ಡಿಸುಗುಂ ತುಂಬಿವೊಲೀಂಟೆ ರಾಗಿಸುಗುಮೇ [7]ದಿವ್ಯಾಂ[7]ಬುಜಾಮೋದಮಂ ೪೮

(ಮಲ್ಲಿನಾಥಪುರಾಣಂ, ೧-೨೬.)

ತಲೆಯಂ ತೂಗುವನೋರ್ವನುರ್ಬಿ ಕೆಲದೊಳ್ [8]ಕಾ[8]ಱಿಕಬ್ಬಮಂ ಕಟ್ಟಿ ಕೋ
ಟಲೆಗೊಂಡೂಱ್ವವನೋರ್ವ[9]ನೊಲ್ದ[9]ವರ ಚಾತುರ್ಯಕ್ಕೆ ಕೈವಾರಮಂ
ಪೊಲೆಗೆಟ್ಟೀವವನೋರ್ವನಿಂತಕಟ ಯಕ್ಷ್ಯೋಯಾದೃಶಸ್ತಾದೃಶೋ
ಬಲಿಯೆಂಬುಕ್ತಿಗೆ ದುರ್ವಿದಗ್ಧರೆ ವಲಂ ನೋಂತರ್ ಪೆಱರ್ ನೋಂತರೇ ೪೯

(ಲೀಲಾವತಿ, ೧-೪೦.)

ಬಗೆಗೊಂ[10]ಡೋದಿದಡೆ ಕೇಳ[10]ದೆಲ್ಲ ಕಲೆಯಂ ಕಾವ್ಯಜ್ಞ [11]ರಿಂ ಕಲ್ಲ[11]ದ
ಚ್ಚಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾಱಿಕಬ್ಬಂಗಳಂ ಬಂ[12]ಟಸಾ[12]
ಮಿಗಳಂ ಕೇಳಿಸಿ ತಾವೆ ತಮ್ಮ ಮನ[13]ದೊ[13]ಳ್ ಸರ್ವಜ್ಞರೆಂದಿರ್ಪ ಕ
ಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ ಭೂಭೃತ್ಸಭಾಭೂಷಣಂ ೫೦

(ಅರ್ಧನೇಮಿ, ೧-೩೫.)

ಪಾವಿಂದಿರ್ಮಡಿ ವಿಷದಿಂ
ಮೂವಡಿ ಶಾರ್ದೂಲದಿಂದೆ ನಾಲ್ವಡಿ ಭಲ್ಲೂ

---

1 ಪೆ (ಬ) 2 ವಿಂತಿದಂ (ಪ) 3 ಟ್ಟುದಂ ಕೇ (ಖ) 4 ಳ್ದಪ್ಪುಕೆಯ್ವಂತೆ (ಖ) ಳ್ದಱಿತ್ತಗೆಯ್ವಂತೆ (ಬ) 5 ನೆಯ್ದೆ (ಖ) 6 ಯಂ (ಕಖ) 7 ಹೇಮಾಂ (ಅಕಖ) 8 ಪಾ (ಕ) 9 ನಂತ (ಬ) 10 ದಾಡದಕಲ್ಲ (ಖ) 11 ರೊಳ್ಕೇಳ (ಕ) 12 ಟಸಾ (ಕ) ಟ್ಟಿ ಸಾ (ಬ) 13 ಯೊ (ಅ).

ಕಾವಳಿಯೆಂದೈವಡಿ [1]ಹೋ
ಹೋ[1]ವೆಂಬುದು ಖಳಚರಿತ್ರಮುಂ ಭುವನಜನಂ ೫೧

ಖಳರೆಂಬರ್ ಕವಿಮಾರ್ಗಮುಂ ಪಿಡಿದು ಕೇಳ್ದೊಂದುಕ್ತಿಯಿಂ ದೇಸಿಯು
ಗ್ಗಳಮುಪ್ಪಂತಿರೆ ಪೇೞ್ದುದಂ ಕುಪಥಮೆಂಬರ್ ಜಾತಿಸಂಪತ್ತಿಯುಂ
ಸ್ಖಲಿತಾಲಂಕೃತಿಯೆಂಬರದ್ಭುತ ರಸಾಲಂಕಾರಸದ್ಭಾವಮುಂ
ಕಳೆ ಚಿಃ ನೀರಸಮೆಂಬರೋವೊ ಖಳರಂ ಮೆಚ್ಚಿಪ್ಪರಾರ್ ಕಾವ್ಯದೊಳ್ ೫೨

ಒಂದಂ ಬಾಚಿಸುತಿರೆ ಮ
ತ್ತೊಂದು ಬೆಸಗೊಳ್ವನರ್ಥರಸಭಾವಂಗಳ್
ಮುಂದಿರೆ ಪಚ್ಚುತ್ತಿಣಿಪಂ
ಚಂದಮನಿದು ಕಾವ್ಯ[2]ಮುಂ ಖಳಂ[2] ಕೇಳ್ವಂದಂ ೫೩

ಇರು ಮರುಳೆ ಶುಷ್ಕವೈಯಾ
ಕರಣಂಗಂ ಶುಷ್ಕತಾರ್ಕಿಕಂಗಂ ಬೆಳ್ಳ
ಕ್ಕರಿಗಂಗಂ ವಿಷಯಮೆ ಕಾ
ವ್ಯರತ್ನಮತಿಚತುರ ಕವಿಕದಂಬಕವಿಷಯಂ ೫೪

(ಆದಿಪುರಾಣಂ, ೧-೨೪.)

ಸುಲಲಿತ ಕವಿಕೃತಿಗಮಲಿನ
ನೆಳಸುವವೊಲ್ ಮಲಿನನೆಳಸನತಿವಿಶದ ಹಿಮೋ
ಪಲವೊಸರ್ವವೊಲಿಂದುಕಳಾ
ವಳಿಗೆ ತೃಣಗ್ರಾಹಿ ನೀಲಮಣಿಯೊಸರ್ದಪುದೇ ೫೫

(ಚಂದ್ರಪ್ರಭಪುರಾಣಂ, ೧-೩೯.)

ಚಂದಮಿದೆಂತುಟೆಂದಡುರಿದೆೞ್ದು ಪರಿಂತಿದ[3]ಶು[3]ದ್ಧ ಶಬ್ದಮಾ
ಯ್ತೆಂದೊಡೆ ದುಃಖದಿಂ ಚಿಬುಕುಗುಟ್ಟಿದಪರ್ ಗುಣಮಾವುದಿಂತಿದ
ರ್ಕೆಂದೊಡೆ ಮೇಲೆವಾಯ್ದು ಪಿಡಿವಂತಿರೆ ಗರ್ಜಿಪರೋವೊ ತಮ್ಮೊಳೋ
ತೊಂದಱಿತೊಳೊಂದುಮಿಲ್ಲ ಕೆಲಬರ್ ಕವಿಗಳ್ ಮುಗಿಲುದ್ದಮಾದಪರ್ ೫೬

ಕಸಮುಂ ಕಿೞ್ತಿಲ್ಲದೆ ಪೊಸ
ಸಸಿಗಳ್ ಕೈಕೊಳ್ಳವೆತ್ತಿ ಕಳೆಯದೆ ಖಳ ತಾ
ಮಸಮುಂ ಬೇರ್ವೆರಸಿಂ ಪಸ
ರಿಸುಗುಮೆ ಬುಧವಿಧುಗ ವಿಮಳಕೃತಿದೀಧಿತಿಗಳ್ ೫೭

(ಲೀಲಾವತಿ, ೧೨-೮.)

---

1 ಪೋವೋ (ಕಖ) 2 ಮೆಂದವಂ (ಕ) 3 ಸಿ (ಕ).

ಪೊಸದೇಸೆಯುಂ ಬೆಡಂಗಂ
ರಸ[1]ಪುಷ್ಟಿ[1]ಯುನರ್ಥ[2]ದೃ[2]ಷ್ಟಿಯುಂ ಬಗೆವರೆ ಭಾ
ವಿಸುವರೆ ಸಾರ[3]ಣೆ[3]ಯುಂತಿರೆ[3]
ಕಸಮನೆ ಪಿಡಿವರ್ ಕೆಲರ್ ಮಹಾಪುರುಷರ್ಕಳ್ ೫೮
(ಅಜಿತಪುರಾಣಂ, ೧-೯೧ ; ಕಾವ್ಯಾವಲೋಕನಂ, ೨೪೦.)

ಅತಿಮಧುರೋಕ್ತಿಯುಕ್ತನಮಲಂ ವಿದಿತಾಖಿಳವರ್ಯರ್ಗನಪ್ಪ ವಿ
ಶ್ರುತಕವಿರಾಜಹಂಸನಱಿವಂತೆವೊಲೇನಱಿಯಲ್ಕೆ ಯೋಗ್ಯನೆ
ಚತುರಕವಿಪ್ರತಾನರಚಿತಾಧ್ವಕೃತಿಪ್ರಕರೈಕಪಾತ್ರಸಂ
ಸ್ಥಿತಗುಣದೋಷದುಗ್ಧಜಳಭೇದನಮಂ ಕವಿನಾಮಧಾರಕಂ ೫೯
(ಚಂದ್ರಪ್ರಭ ಪುರಾಣಂ, ೧-೩೮.)

ಕವಿತಾಪ್ರೌಢನೆ ಸೋಲ್ವವೊಲ್ ಕೃತಿಯೊಳಜ್ಞಂ ಸೋಲ್ವನೇ ಚಂದ್ರಕಾಂ
ತವೊಸರ್ವಂತಿರೆ ಗೋರಿಕಲ್ಲೊಸರ್ಗುಮೇ ಬೆಳ್ದಿಂಗಳೊಳ್ ತುಂಬಿ ಪೀ
ರ್ವವೊಲೇಂ ಪೀರ್ದಪುದೇ ಕಡಂದುಱುತೆ ನವ್ಯಾಮೋದಮಂ ಪೂಗಳೊಳ್
ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ ೬೦
(ಜಗನ್ನಾಥವಿಜಯಂ, ೧-೧೩)

ಅರಮನೆಗಲ್ತು ಸೂಳೆಮನೆಗಲ್ತು ಸವಣ್ಮನೆಗಲ್ತು ಕೂಡೆ ಬ
ಲ್ಲರ ಬಗೆಗಲ್ತು ವಸ್ತುಕೃತಿಯಂ ಸಲೆ ಪೇೞ್ವುದು ಕಲ್ತು ಪೇೞದಂ
ದರಮನೆಗಲ್ತು ಸೂಳೆಮನೆಗಲ್ತು ಸವಣ್ಮನೆಗಲ್ತು ಕೂಡೆ ಬ
ಲ್ಲರ ಬಗೆಗ[4]ಲ್ತುದಾವಡೆಗಮುಲ್ತುದು[4] ಕ[5]ಲ್ಪಿ[5] ವಲಂ ಕವೀಂದ್ರರಾ ೬೧
(ಪುಷ್ಪದಂತಪುರಾಣಂ, ಕಾವ್ಯಾವಲೋಕನಂ, ೨೦೫.)

ಆದರಿಸರ್ ಖಳರ್ ಕೆಲಬರೀ ಪೊಸಕಬ್ಬಮನೆಂದು ನೀಂ ಮನಃ
ಖೇದಮನಾಳದಿರ್ ಜನದ [6]ಕಣ್ಗೆ ವಿಲಾಸಮನೀವ[6] ಸಾಂದ್ರ ಚಂ
ದ್ರೋದಯದೇೞ್ಗೆಯಂ [7]ನಿರಹಿ[7] ಸೈರಿಸದಿರ್ದೊಡದರ್ಕೆ ಬನ್ನಮೇ
ನಾದುದೊ ನೋಡೆ ಸಜ್ಜನರ್ಗೆ ಸೇವ್ಯಮುದಾದೊಡೆ ತಾನೆ ಸಾಲದೇ ೬೨

ಗುಣಮಂ ಕಂಡೊಡೆ ದುರ್ಜನಂ ಬಗೆವನಲ್ಲಂ ದೋಷಮಂ ಕಂಡ ಸ
ದ್ಗುಣಿವೊಲ್ ದೋಷಮನಲ್ಲಿ ಕಂಡೊಡೆ ಖಳಂ ವಿಸ್ತಾರಿಕುಂ ಸಜ್ಜನಂ

[1] ಘಟ್ಟೆ (ಖ) [2] ನೃ (ಖ) [3] ಣೆಗೆಯುವೋಲ್ (ಕ) [4] ಲ್ತುದಾರಬಗೆಗಲ್ತುದು (ಖ) [5] ಬ್ಬ (ಖ) [6] ಕಂಗಳ ಪರ್ವಮೆನಿಪ್ಪ (ಖ) [7] ಖಳರ (ಖ).

ಗುಣಮಂ ಕಂಡವೊಲಿಂತುಟಿರ್ದರ ನಿಜಂ ಪುಣ್ಣೊಳ್ ನೊಣಂ ಪುಷ್ಪದೊಳ್
ಪ್ರಣಯಂ ಮಾೞ್ಪುದು ತುಂಬಿಯೆಂಬ ತೆಱದಿಂದಾ[1]ರ್ ಬಾಚಿಪರ್ ನೈಜಮಂ[1] ೬೩

ರಸಮಂ ಭಾವಿಸದರ್ಥಮಂ ಬಗೆಯದಜ್ಞರ್ ಭಾವದೊಳ್ ರೂಢಿವೆ
ತ್ತೆ[2]ಸ[2]ವಂ ತಾಳ್ದಿದ ಶಾಸ್ತ್ರದೊಳ್ ವಿಕಳರುದ್ಯತ್ಕಾವ್ಯದೊಳ್ ನೀರಸರ್
ಬೆಸೆದಿರ್ಪರ್ ಬಿ[3]ಗಿ[3]ದೂಡಿಬಿಟ್ಟ ತುದಿಯೊಳ್ ತಮ್ಮಂದಮಂ ತಾವೆ ಭಾ
ವಿಸರೇಂ ಚೀ ಖಳವೃತ್ತಿಯಿಂ ಕೆಲರಿದೇಂ ಹಾಸ್ಯಕ್ಕೆ ಪಕ್ಕಾದರೋ ೬೪

ಎನಿತನೊಱಲ್ದು ಪೇೞ್ವ ಕವಿಯೇವನದಂ ಪೆಸರಿಟ್ಟು ಮೆಚ್ಚಬ
ಲ್ಲನನಱಸಲ್ಕೆವೇೞ್ಪುದವನಂ ಜಗದೊಳ್ ಪಡೆಯಲ್ಕೆಬಾರದಾ
ತನ ಮುಖದಿಂದಮಲ್ಲದದು ಸಲ್ಲದು ಕಟ್ಟಯುಮೇನೊ ಮಾಲೆಗಾ
ಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೇ ೬೫

(ಅನಂತನಾಥಪುರಾಣಂ, ೧-೪೫.)

ರಸಮಂ ನಾಲಗೆ ಕವಿತಾ
ರಸಮಂ ಕವಿ ಕುಸುಮರಸಮನಳಿಮಾಲೆ ಸುಧಾ
ರಸಮಂ ಸುರರಕ್ಷಯಸುಖ
ರಸಮಂ ಪರಮಾತ್ಮನಱಿವನುೞಿದವರಱಿಯರ್ ೬೬

(ಮಲ್ಲಿನಾಥಪುರಾಣಂ, ೧-೨೮.)

ಕಾೞ್ಪುರಮಾಗೆ ಕಾವ್ಯರಸಮರ್ಥಮುಮುಕ್ಕರಮುಂ ಪ್ರತೀತಿಯಂ
ಮಾೞ್ಪನೆಗಂ ಜಲಕ್ಕನಿರೆ ಪೇೞದೆ ಕೆಮ್ಮನೊ[4]ಗಂ[4]ಟುವೇೞ್ದು ಚೀ
ನೋೞ್ಪುದೆ ಮುಯ್ವನಾ ಕೃತಿಗೆ ಪಂಚಿಕೆವೇೞ್ಪುದದರ್ಕೆ ಟಿಪ್ಪಣಂ
ಬೇೞ್ಪುದು ಟೀಕುವೇೞ್ಪುದೆನೆ ವೇೞ್ದವನುಂ ಕವಿಯೆಂಬ ಲೆಕ್ಕಮೇ ೬೭

(ಕಾವ್ಯಾವಲೋಕನಂ, ೨೨೯.)

ಮೃದುಪದಬಂಧಮಂ ಬಗೆಯ ಭಾವದ ಪೈಸಿರಿಯಂ ರಸಪ್ರವಾ
ಹದ ನೆಲೆವೆರ್ಚನಿಂಬ[5]ಱ[5]ದು ಭಾವಿಸಿ ಭಾವಿಸಿ ಮೆಚ್ಚಿ ಮೆಚ್ಚಿ ಪೊ
ಣ್ಮಿದ ಪುಳಕಂಗಳಿಂ ನಯನದೊಳ್ ಕರೆಗಣ್ಮಿದ ಹರ್ಷಬಾಷ್ಪವ
ರ್ಷದಿನನುರಾಗಮಂ ಪಡೆವ ಸಜ್ಜನಸಂಸ್ತವಮೊಂದೆ ಸಾಲದೇ ೬೮

(ಪಂಪರಾಮಾಯಣಂ, ೧-೨೯.)

ಅಸವಸದಿಂದಮೊಂದಿನಿತು ಕಲ್ಪಿತದೋಷಮನುಂಟುಮಾಡಿಕೊಂ
ಡೆಸಗದೆ ಕೆಮ್ಮನೂನವಿಡಿದೊಳ್ಳಿತುಮಪ್ಪೆಡೆಗೞ್ತಿಯಿಂ ವಿಚಾ
ರಿಸಿ ತಲೆದೂಗಿ ಮೆಚ್ಚಿ ಬೆರಲಂ ಮಿಡಿದೊಯ್ಯನೆ ಕೇಳ್ದೊಱಲ್ದು ಬ
ಣ್ಣಿಸುವ ಬುಧರ್ಕಳಿಂ ಕವಿಗೆ ಪಿಂಗುಗುಮಾ ಕವಿತಾಪರಿಶ್ರಮಂ ೬೯

1 ಬರ್ಣ್ಣಿಪನ್ಯಾರ್ಯಯಮಂ (ಖಬ) 2 ಸೆ (ಕಖ) 3 ಸಿ (ಬ) 4 ಜಂ (ಅ) 4 ಗೆ (ಕ).

ನಿರುಪಹತಿಸ್ಥಲಂ ಮೃದುತರಾಸನವೊಳ್ಪಣಿಸಿಂಪುದಂಬುಲಂ
ನೆರಪಿದ ಪುಸ್ತಕಪ್ರತತಿ [1]ಲೇಖಕವಾಚಕ[1]ಸಂಗ್ರಹಂ ನಿರಂ
ತರಗೃಹನಿಶ್ಚಿತಸ್ಥಿತಿ ವಿಚಾರಕಸಂಗತಿ ಸತ್ಕಳತ್ರಸಾ
ಪರತೆ[2]ಯನುಳ್ಳ ಸತ್ಕವಿಯುಮಿಾಸುವೊಡಾಗದೆ[2] ಕಾವ್ಯವಾರ್ಧಿಯಂ ೨೦

ಅಲಸಂ ಶಾಂತಂ ಜಡಂ [3]ದುರ್ಮತಿ[3] ಮತಿವಿಕಳಂ ಮತ್ಸರಂ [4]ಭೋಗಿ ರುಕ್ಷಂ[4]
ಚಲನನ್ಯಾಸಕ್ತನಪ್ರಸ್ತುತಮತಿ [5]ವಿರಶಂ[5] ನೀರಸಂ ಛಾಂದಸಂ ವಾ
ಕ್ಛಲಿ ಬಾಲಂ ವೃದ್ಧಜೀರ್ಣಂ ಸಮುದನನಧಿಕಸ್ತೋತ್ರಶೀಲಂ ಕಥಾವ್ಯಾ
ಕುಲನುಗ್ರಂ ಲೋಕಮೂ[6]ಢಂ[6] ಸಮಯವಿರಹಿತಂ ಕಾವ್ಯದೊಳ್ ಶ್ರೋತೃವಲ್ಲಂ

ಪೞಿದೊಡೆ ಬಾೞ್ವನಲ್ಲದೊಡೆ [7]ಬಾೞ್ವನೆ[7] ಸತ್ಕೃತಿಗೇಳ್ದು ದುರ್ಜನಂ
ಪೞಿದು ವೃಥೋಕ್ತಿ ಸಲ್ಲದೊಡೆ ಸಲ್ಲದೆ ಕಾವ್ಯನಿಬಂಧನಕ್ಕಮಾ
ಪೞಿಯೆ ಪೊಗೞ್ತೆಯಲ್ತೆ ರಸವತ್ಕೃತಿಯುಂ ಕವಿ ಪೇೞ್ದ ದುರ್ಜನಂ
ಪೞಿಯುತುಮಿರ್ಕೆ ಬಾೞ್ವ ಮನೆಗೊಂದು ಬಗುಳ್ವುದು ವೇೞ್ಕುಮೆನ್ನರೇ ೨೧
(ಅನಂತನಾಥಪುರಾಣಂ, ೧-೪೦.)

ಶಿಥಿಲಪದಪ್ರಪೂರ್ಣಮಪಶಬ್ದತುಷಾವೃತಮಸ್ತಭಾವಮು
ಪ್ರಥಿತಗತಾರ್ಥಶಾಸ್ತ್ರಮುಪಹಾಸ್ಯ ಸಮಾಶ್ರಿತಮಪ್ಪ ಕಬ್ಬಮಂ
ಕಥಿಯಿಸಿ ಗರ್ವದಿಂ ಬೆಱೆತು ಬಿಜ್ರನೆ ಬೀಗಿ ಸರಸ್ವತೀ [8]ಶಿರೋ[8]
ವ್ಯಥೆಯನದೇಕೆ ಮಾಡುವರೊ ದುಷ್ಕವಿಗಳ್ ಕೆಲರೀ ಧರಿತ್ರಿಯೊಳ್ ೨೩
(ಶೃಂಗಾರರತ್ನಾಕರಂ, ೧–೭.)

ಒಸರ್ವ ರಸಂ ಪೊಸಲ್ವೊಸಲಸಟ್ಟದೆ ರಂಜಿಪ ದೇಸಿ ದೇಸಿವೆ
ತ್ತೆಸೆಯದೆ ರೇಖೆ ರೇಖೆವಡೆದೊಪ್ಪದೆ ಕೊಂಕು ಸಮಂತು ಕೊಂಕನೊ
ಪ್ಪಿಸದೆ ನಿರರ್ಥಮಪ್ಪ ಕೊೞಗಬ್ಬ[9]ಮನುಬ್ಬರ[9]ಮಾೞ್ಪ ಗರ್ವದಿಂ
ದೆಸೆವನನಿಕ್ಕಿ ಕಿಚ್ಚಿನೊಳಗಿಕ್ಕಿದೊಡಾಗರೆ ಮತ್ತೆ ಕಬ್ಬಿಗರ್ ೨೪

ಕರೆದು ಬುಧವ್ರಜಂ ಸುಕವಿ ಮಲ್ಲಪನಂ ಮನದೞ್ಕಱಿಂದಮಾ
ದರಿಸಿ ಸುಧಾರ್ಣವಾಖ್ಯಕೃತಿಯಂ ರಚಿಯಿಪ್ಪುದೆನಲ್ಕೆ ಲೋಕವ
ಚ್ಚರಿವಡೆ ಸಜ್ಜನರ್ ಪೊಗೞೆ ಸೋಲಮಗುಂದಲೆಯಾಗೆ ಬಿಚ್ಚತಂ
ಪರಿಣತರಪ್ಪರೊಲ್ದೆಳಸೆ ಪೇೞಲೊಡರ್ಚಿದೆನೀ ಪ್ರಬಂಧಮಂ ೨೫

---

1 ವಾಚಕ ಲೇಖನ (ಬ) 2 ಸಮಗ್ರಮುಳ್ಳಕವಿಯಿಾಸುವುದೊಪ್ಪದೆ (ಕ) 3 ತಾನತಿ (ಖಬ) 4 ದುಃಖರಂತಾಂ (ಖಬ) 5 ನಿರತಂ (ಕಖ) 6 ಖರಂ (ಖಬ) 7 ಸಾಯನೆ (ಖ) 8 ಮನೋ (ಖ) 9 ಮನೋವದೆ (ಖಬ).

ವಾರಿಧಿ ಪರ್ವತಂ ಪುರಮಧೀಶ್ವರಸುದ್ವಹನಂ ಕುಮಾರನಂ
ಭೋರುಹವೈರಿಮಿತ್ರರುದಯಂ ಋತು ನಂದನಮಂಬು [1]ಕೇಳಿ[1] ಕಾಂ
ತಾರತಿ ಚಿಂತೆ ಮಂತ್ರ ಚರ ಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂಗವೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್ ೭೬

ಪುರ ವಾರಾಸಿ ನಗರ್ತು ಚಂದ್ರ ತಪನೋದ್ಯಾನಾಂಬುಕೇಳೀ ಸುರಾ
ಸುರತಕ್ರೀಡನ ವಿಪ್ರಲಂಭ ಲಲನಾಕಲ್ಯಾಣ ಪುತ್ರೋದಯ
ಸ್ಫುರಿತಾಳೋಚನ ಮಂತ್ರ ದೂತ ಗಮನಾಜಿ ಸ್ತ್ರೀಸುಖವ್ಯಾಪ್ತಿಗಳ್
ದೊರೆಕೊಳ್ಗುಂ ಕವಿವರ್ಣನಕ್ಕೆ ಪದಿನೆಂಟಂಗಂ ಮಹಾಕಾವ್ಯದೊಳ್ ೭೭

ಉದಧಿ ಪುರಾಧಿಪ ಸುತ ಮಂ
ತ್ರದೂತಗಮನಾಜಿ ವಿರಹ ಪರಿಣಯ ಸುರತ
ರ್ತುದಿನೇಶ ಚಂದ್ರ ಮಧು ಕುಭೃ
ದುದಕ ವನಸ್ಪತಿಯೆ ಕೃತಿಗೆ ಪದಿನೆಂಟಂಗಂ ೭೮

(ಉದಯಾದಿತ್ಯಾಲಂಕಾರಂ, ೧-೧೩.)

[2]ಇದು ಸರಸ್ವತೀಸರ್ವಾಂಗ ದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧ ಸಾರೋದ್ಧಾರಮುಮ
ಷ್ಟಾದಶ ಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋತ್ಪಾ
ದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮ ಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್
ಪೀಠಿಕಾಪ್ರಕರಣಂ ಪ್ರಥಮಾಶ್ವಾಸಂ ಸಂಪೂರ್ಣಂ.[2]

[1] ಸೀಧು (ಕ) [2] (ಬ) ದಲ್ಲಿಲ್ಲ.

# ಸಮುದ್ರವರ್ಣನಂ

ತೆರೆ ನೊರೆ ಬುದ್ಬುದಂ ಸುೞಿ ಜಲಂ ತೆಗೆ ಪೆರ್ಚುಗೆ ಗುಣ್ಪು ಘೋಷಣಂ
[1]ವರು[1]ಣಸಗಂ [2]ವಧೂಟಿ[2]ಜನನಂ ಮಣಿಗಳ್ ವಡಬಾಗ್ನಿ [3]ವಾಶ್ಚರಂ[3]
ಹರಿ ಮಱಿಯಾ[4]ವೆ[4] ವೇಳೆ ತೊಱೆ[3]ಯಿಾ[5]ಶತೆ ನೀರ್ವೊಗೆವಭ್ರಮುರ್ವರಾ
ಪರಿವೃತಿ ನಾ[6]ಗರಿ[6]ಕ್ಕೆ ಬಗೆಗಾದೊಡೆ ಸೈತು ಸಮುದ್ರವರ್ಣನಂ ೧

ಮಾಲಾಮಾಲಾಪ್ರವಾಳಾವೃತಸುರತರುಶೋಭಾವಹಂ ಭಾವಹಂ ಶೈ
ವಾಲಾವಾಲಾಭಿಘಾತಪ್ರಕರಮಕರಕುಂಭೀಕರಂ ಭೀಕರಂ ಜಂ
ಬಾಲಾಬಾಲಾಮೃಣಾಳೋಚ್ಚಲಿತಶಫರಕಂಜಾಕರಂ ಜಾಕರಂ ಕ
ಲ್ಲೋಲಾಲೋಲಾಯಮಾನಧ್ವನಿಜನಿತದಿಶಾಭಿತ್ತಿ ಮುದ್ರಂ ಸಮುದ್ರಂ ೨

ಗಂಭೀರಸ್ಫಾರಿವೇಳಾಬಹಳಪರಿವೃತೋಲ್ಲೋಲಕಲ್ಲೋಲಮಾಲಾ
ರಂಭಪ್ರೋಡ್ಡೀನಫೇನಪ್ರಬಳಜಲಚರೋ[7]ಲ್ಲುಂಠ[7]ಪಾಠೀನಶುಂಭ
ತ್ಕುಂಭೀರಾಭೀಳನಕ್ರಪ್ರಕರಕಮಠನೀರೇಭರತ್ನಪ್ರ[8]ವಾಳೋ[8]
ಜ್ಜೃಂಭತ್ಪ್ರೋದ್ಭಾಸಿವೀಚೀನಿಚಯಘನಘನಾರಾವರೌದ್ರಂ ಸಮುದ್ರಂ ೩
(ಶೂದ್ರಕಂ, ೭೩.)

ವಿಚಲತ್ಪಾಠೀನಪುಚ್ಛಪ್ರತಿಹತಸಲಿಲಾನೇಕಪೋಚ್ಚಂಡಶುಂಡಾ
ಗ್ರಚಪೇಟಾಸ್ಫೋಟಿತಾಂ[9]ಬೂ[9]ರಗಮುಖನಿಸ್ಸೃತಶ್ವಾಸಸಂಕೋಚಿತಗ್ರಾ
ಹಚಯೋದೀರ್ಣಸ್ವಪಾನೋತ್ಸುಕತಿಮಿಕುಳಕೋಳಾಹಳಕ್ಷೋಭವಿಚೀ
ವಿಚರದ್ವೀತಾನಮುದ್ವಾಡಬಶಿಖಿಮುಖಸಂಧಾನಮಂಭೋನಿಧಾನಂ ೪

ಶಶಿ ತನ್ನುದರದೊಳುದಯಿಸಿ
ಮಿಸುಗುವುದಾ ನಭದೊ[10]ಳಿಂ[10]ದು ಜಲನಿಧಿ ಫಲವುಂ
ಶಶಿವಡೆದ ತೆಱದೆ ಮಿಗೆ ರಂ
ಜಿಸುವುವು ಮುಂಡಳಿಸಿ ಪೊಳೆವ ಫೇನಪ್ರಕರಂ ೫

---

[1] ಶರ (ಬ) [2] ತಮಾಡಿ (ಖಬ) [3] ಪಾರ್ಸರ (ಕ) [4] ದೆ (ಖ)
[5] ಷ (ಖಬ) [6] ಗಿರ (ಕ) [7] ಲ್ಲೂಠ (ಅಖ) ಲೋಲ (ಕ) [8] ಭಾವೋ (ಖ)
[9] ಭೋ (ಖಬ) [10] ಳಿಂ (ಕ).

ಹರನಿರ್ಕೆಗೊಂದು ಬೆಳ್ಳಿಯ
ಗಿರಿ ಸಾಲದೆನುತ್ತನೇಕ ರಜತಾಚಲಮಂ
ಶರನಿಧಿಯುಟ್ಟುವ ತೆಱದಿಂ
ನೊರೆವೆಟ್ಟಂತಿಪ್ಪ ತೆರೆಗಳೇನೊಪ್ಪಿದುವೋ ೬

ಪಲವುಂ ರತ್ನಾಂಶು ತಳ್ಪೊಯ್ದೆಸೆದಿರೆ ಶಬಳಚ್ಛಾಯೆಯಿಂದ ತರಂಗಾ
ವಳಿ ಜಂಬೂದ್ವೀಪಮಂ ಮಂಡಳಿಸಿದ ಪರಿವೇಷಂಬೊಲಿಂಬಾಯ್ತು ಮುಕ್ತಾ
ಫಳಜನ್ಮಸ್ಥಾನಮುಜ್ಜೃಂಭಿತ ಜಲಚರಕೋಳಾಹಳಧ್ವಾನಮುದ್ಯ
ದ್ವಿಲಸತ್ಪಾಠೀನಮಾಶಾಮುಖಲಿಖಿತ ಸಮುತ್ಫೇನಮಂಭೋನಿಧಾನಂ ೭

ವಡಬಾನಳನುರಿ[1]ಯ[ಳ್ಳಿ]ಱಿ[1]
ದೊಡಲೆಲ್ಲಂ ಬೆಂದು ಬೊಕ್ಕೆ ನೆಗೆದವೊಲೊಳ್ಗಿಂ
ದಡಕೊತ್ತಿ[2]ಮುತ್ತುಗಳ್ ನೆಗೆ
ದೊಡೆವವೊಲಾ ಕಡಲ ಬುದ್ಬುದಂ ಕಣ್ಗೆಸೆಗುಂ ೮

ಪದಿನಾಲ್ಕುಂ ಲೋಕಮುಂ [3]ಕಿಱಿಬ್ಬೊಡೆಯೊಳ್ ತಳೆದಾ[3] ವಿಷ್ಣು ತನ್ನೇಕದೇಶಾ
ಗ್ರದೊಳಿರ್ಪಂ ನಾರಿದಂ ತನ್ನೊಳೆ ಕತಿಪಯ ವಾರ್ಬಿಂದುವಂ ಪೇೞ್ ತಂದಂ
ತದಱಿಂದಂ ಲೋಕಮಂ ತೀವುವುದು ಪವಿಭಯ ಭ್ರಾಂತಿಯಿಂದಂ ಶರಣ್ಬೊ
ಕ್ಕುದು ತನ್ನಂ ಗೋತ್ರಧಾತ್ರೀಧರತತಿಯೆನೆ ಪೆಂಪರ್ಣವಕ್ಕೇ[4]ಕಭೋಗ್ಯಂ[4] ೯
(ಜಗನ್ನಾಥವಿಜಯಂ, ೧-೪೫)

ಕುಂದಲೊಡನಿಂದುಬಿಂಬಂ
ಕುಂದುಗುಮದು ಪೆರ್ಚೆ ಪೆರ್ಚುಗುಂ ಜಲನಿಧಿ ಮೆ
[5]ಯ್ಯೊಂ[5]ದಿದ [6]ಪು[6]ತ್ರಸ್ನೇಹಂ
ಸಂಧಿಸಿ ಜಗಕಿಂತು ಸೊಗಯಿಸವೇಡಾ ೧೦
(ಕಾವ್ಯಾವಲೋಕನಂ, ೯೧೦.)

ಮೇರು ಕಲಂಕೆಯುಂ ಕದಡಿತೋ ಬಡಬಾನಳನಱ್ವ ಕಾಯ್ದುದೋ
ಮಾರುತಿ ಕಟ್ಟಿ ಮೇಣ್ ಪಱಿದುದೋ ಗಿರಿಗಳ್ ಬರೆ ವಜ್ರಿಗಳ್ಕಿತೋ
ಸಾರಸಮಸ್ತವಸ್ತುಗಳ[7]ನಾರ್ ಕೊಳೆ ತಪ್ಪದೊ[7] ಮತ್ತ[8]ಮಂತೆ[8] ಗಂ
ಭೀರತೆ ಸಂದುದೆಂದು ಹರಿ ಮೆಚ್ಚಿ ಕರಂ ಪೊಗೞ್ದಂ ಸಮುದ್ರಮಂ ೧೧
(ಕಾವ್ಯಾವಲೋಕನಂ, ೯೦೮.)

---

[1] ಯೊಳಗುರಿ (ಕ) ಯುಳ್ಳುಱಿ (ಖಬ) [2] ಗಿರ್ದೊಡೆವಂತೆ (ಖ) [3] ಕುಕ್ಷಿಯೊಳ್ ಧರಿಸಿದಾ (ಖ) [4] ಸುಚೋದ್ಯಂ (ಅ) [5] ಯ್ಗಂ (ಖ) [6] ಮಿ (ಖ) [7] ನಾಂತೊಳಗಾದುದೋ (ಖ) [8] ಮತ್ತೆ (ಖ).

ಮುಗನಿಂದುವಬ್ಜವಾಸಿನಿ
ಮುಗಳಳಿಯುಂ ಜಲಜಜಠರನಿದು ಪೆಂಪೆನ್ನಿಂ
ಮಿಗಿಲಾವನೆಂದು ರಾಗಿಸಿ
ನಗುವಂತಿವೊಲಾಯ್ತು ಜಲಧಿಕಳಕಳನಿನದಂ ೧೨

ವರುಣಾಶಾಜಾತವಾತಾಹತಿಯೊಳೆ ತೆರೆಗಳ್ ತೀವ್ರತೀವ್ರಂ ತೆರ[1]ಳ್ದು
ಳ್ಕ್ಷ[1]ರೆಗಳ್ ತಳ್ತುರ್ಬಿ ನೀರಾನೆಗಳ[2]ತೆಱದೆ ತಾಮುರ್ಗಟ್ಟಿ[2] ನೀಳ್ ಸೀಕರಂ ಬಾನ್
ಬರಮುದ್ಘಂ[3]ಪಾ[3]ಱೆ ನೀರೇಱಿದ ಮುಗಿಲೊಡೆದೊಂದೊಂದಱೊಳ್ ತಾಗಿ ಬೀೞ್ವಂ
ತಿರೆ ಘೋರಂದಾಗಳುಂ ಘೂರ್ಣಿಪುದು ದಶದಿಶಾಭಿತ್ತಿಮುದ್ರಂ ಸಮುದ್ರಂ ೧೩

ಅಸು ಮತ್ತೆಂತೆಂದೊಡುದ್ಯ[4]ತ್ಕರಿ[4]ಮಕರ ಕುಳಕ್ಷೋಭ ನೀರೇಭರಾಜೀ
[5]ರ[5]ದನವ್ಯಾಘಾತ[6]ಪಾತೋ[6]ತ್ಪಮಠ ಲುಠನ ಕಾಠಿನ್ಯ ಪಾಠೀನ [7]ಮತ್ಸ್ಯ[7]
ಚ್ಛದನ ಚ್ಛೇದಾದಿ ನಾನಾ ಜಲಚರ ನಿಕರಾಸ್ಫಾಳನಪ್ರೋಚ್ಛಲತ್ಸ್ವ
ಚ್ಛದನ [8]ಚ್ಛನ್ನ ಚ್ಛಟಾಪ್ರ[8]ಕ್ಷುಭಿತಲಹರಿಕಾಸ್ಫಾರ [9]ರೌ[9]ದ್ರಂ ಸಮುದ್ರಂ ೧೪

(ಶೂದ್ರಕಂ—ಕಾವ್ಯಸಾರಂ, ೭೫.)

ಅತುಳೋತ್ತಾಲ ತಿಮಿಂಗಿಳ ಪ್ರಬಳ ಪಕ್ಷೋದ್ಧೂತ ಪಾತ ಪ್ರಕಂ
ಪಿತ ಕುಕ್ಷೀಲಸಮಗ್ರ [10]ದುಗ್ರ[10]ಹ ಘನಗ್ರಾಸಗ್ರಹವ್ಯಗ್ರ ವಿ
ಸ್ತೃತ ವಕ್ತ್ರೋದರಭಾಗಭೂರಿಕಮಠ ಪ್ರಕ್ಷುಬ್ಧ ಕಲ್ಲೋಲ ಕ
ಲ್ಪಿತ ಕೋಲಾಹಲ ಕಲ್ಪ ಕಾಲಜಭಸ ಪ್ರಸ್ಪರ್ಧಿಯಂ ವಾರ್ಧಿಯಂ ೧೫

(ಶೂದ್ರಕಂ—ಕಾವ್ಯಸಾರಂ, ೭೬).

ಆ[11]ವಾವೆ[11]ಡೆಯೊಳ್ ನವರ
ತ್ನಾವಳಿ ತೀವಿರ್ಪುವೆಂದು ಮಕರಾರೂಢಂ
ಜೀವನನಾ[12]ಥಂ[12] ವರುಣಂ
ಕಾವಂ ಧೃತ[13]ಪಾಶ[13]ನೆನಿಪ [14]ರತ್ನಾ[14] ಕರಮಂ ೧೬

ಹರಿವಜ್ರಹತಿಗೆ [15]ಸುರ್ಕಿದ
ಗಿರಿ ಮುೞಿಪುಗೆ ಕಾಪು ವಾರ್ಧಿ[15] ಮರ್ಯಾದೆಯನೀ
ಧರಣಿಗೆ ಮಾಡಿದುದೆಂತೆನೆ
ಘುರದೊಳ್ ನೀರ್ವೊಕ್ಕಪಂಗೆ ಮುನಿಯರ್ ಪಗೆವರ್ ೧೭

---

[1] ಳ್ದುಂ ನೊ (ಕ) [2] ನೆಗಳತಾವೃಷ್ಟಿ (ಕ) [3] ಬಿಃ (ಜ) [4] ತ್ತಿಮಿ (ಖ)
[5] ಮ (ಖ) [6] ಮುದ್ಯ (ಖ) [7] ಮುದ್ಯ (ಖ) [8] ಚ್ಛೇದಾದಿ ನಾನಾ (ಕ)
[9] ಸಾಂ (ಖ) [10] ವಿಗ್ರ (ಖ) [11] ವವಸೆ (ಕ) [12] ದಂ (ಕ) [13] ಸಾರ (ಖ)
[14] ಮಕರಾ (ಖ) [15] ಮರೆಯುಗೆ ಗಿರಿ ಕಾದುದು ವಾರ್ಧಿಯೆಂಬ (ಖ).

ಸಿರಿಗೆ ಸುಧಾಕರಂಗೆ ಸುರದಂತಿಗೆ ಕಲ್ಪಕುಜಕ್ಕೆ ಪೆರ್ಚಿದ
ಚ್ಚರಸಿಯ ಸಂಕುಳಕ್ಕೆ ತ್ರಿದಶೇಂದ್ರಹಯಕ್ಕಮೃತಕ್ಕೆ ಮಿಕ್ಕ ಭಾ
ಸುರತರಮಪ್ಪ ರತ್ನ ನಿಚಯಕ್ಕೆ ನೆಗೞ್ತೆಯ ಜನ್ಮಭೂಮಿಯಿ
ಧರೆಗೆನೆ ಬಣ್ಣಿಸಲ್ ನೆಱೆವನಾವನೊ ಪೆಂಪೆಸೆದಿರ್ಪ ವಾರ್ಧಿಯಂ ೧೮

ಪವಳದ ಕುಡಿ ಶಂಖದ ಬ
ಳ್ಳಿ ವಿರಾಜಿಪ ಮುತ್ತು ಮಾಣಿಕಂ ಬೆಳೆವುದಱಿಂ
ನವರತ್ನದ ಬೆಳೆಗೆಯ್ಯೆನಿ
ಸುವುದಂಬುಧಿ ಕವಿಗಳೆಱಕದಿಂ ಸತ್ಕೃತಿಯೊಳ್ ೧೯

ಪಡಗೋಡು ನಾವೆ ದೋಣಿಗ
ಳಿಡಿಕಿಱಿದ ಬಹಿತ್ರ ಮ[1]ರ್ಧ ಲಾಗಂ ಬಂ[1]
ದೆಡೆಗೆಯ್ದು ಜಂಗಮತ್ವಂ
ಬಡೆದವರವೊಲಿರ್ಪವಾ ಮಹಾಜಲನಿಧಿಯೊಳ್ ೨೦

ಎಡೆಗುಡದುಸಿರ್ದಗೆವೆಡೆಯೊಳ್
ಪೊಡಕರಿಸುವುದುಸಿರನಿಕ್ಕುವೆಡೆಯೊಳ್ ಮುನ್ನೀ
ರ್ಗಡಲೆಂದೊಡೆ ವಡಬಾಗ್ನಿಯ
ಪೊಡರ್ಪಿನಿತ್ತೆಂಬ ರಸನೆಗೊಗೆಯುವೆ ಪುಗುಳ್ಗಳ್ ೨೧

ಮೇಲೆ ನಿರಂತರಂ ನೆಗೆದ ಕಯ್ ಕರವೊಪ್ಪುವ ಕೂವ ಕಂಭಮುಂ
ಪೋಲೆ ಕರಾಗ್ರದಿಂ ನೆಗೆದ ಸೀಕರವೊಪ್ಪುವ ವಾಲದಂಡಮುಂ
ಪೋಲೆ ನಿರಂತರಂ ಪರಿವದೊಂದು ಮಹಾಮಕರಂಬೊಲಾದುದಂ
ದೀ ಲವಣಾಂಬುರಾಶಿಯೊಳಿಗೆಂದದ[2]ನೊಂದಿನಿಸಿರ್ದು[2] ನೋಡಿದಂ ೨೨

ಕರಿ ಮಕರಂಗಳುಚ್ಚಲಿತ ಭಂಗುರ ತುಂಗ ತರಂಗಮಾಲೆಯಿಂ
ಕರಿರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀ
ಕರದೊಳೆ ನಾಂದು ಸೇಡುಗೊಳುತುಂ ಸುೞಿ[3]ದಾಡು[3]ವ ಗಾಳಿ ಬರ್ಪ ದೇ
ವರ ನವ ಕಾಂತೆಯರ್ಕಳ ಪರಿಶ್ರಮುಮಂ ಕಳೆದತ್ತು ವಾರ್ಧಿಯೊಳ್ ೨೩

(ಶೂದ್ರಕಂ—ಕಾವ್ಯಸಾರಂ, ೭೮.)

ಮಿಳಿರ್ವರುಣಧ್ವಜಂಗಳ ನೆೞಲ್ಗಳನೊಂದೆರೆಗೆತ್ತು ವಾರ್ಧಿಯೊಳ್
ಪೊಳೆವೆಳವಾಳೆಗಳ್ ಕೆರ್ದುಕೆ ಬಾಳೆಗಳಂ ತಿಮಿ ನುಂಗೆ ನುಂಗಿದಾ

---

[1] ರ್ಧ ಜೊಲಿಗಂಬು (ಕಖಗ) [2] ನೋದಿಸಿ ನಿಂದು (ಖ) [3] ದೂದು (ಕ)

ಗಳೆ ತಿಮಿಯುಂ ತಿಮಿಂಗಿಳನಡಂ[1]ಗುವಿನಂ[1] ತವೆ ನುಂಗೆ ತತ್ತಿಮಿಂ
ಗಿಳಮುಮನಾ ತಿಮಿಂಗಿಳಗಿಳಂಗಳೆ ನುಂಗಿದುವೊಂದು ತಾಣದೊಳ್ ೨೪

(ಶೂದ್ರಕಂ—ಕಾವ್ಯಸಾರಂ, ೭೬.)

ಬೆಟ್ಟುಗಳೆಟ್ದು ಬೆಟ್ಟುಗಳನಟ್ಟುವವೋಲ್ ಪವಮಾನ ವೇಗದಿಂ
ದಟ್ಟೆ ತೆರಳ್ದು ಗೊಂದಣಿಸಿ [2]ತಾಳತರೂಪಮಹಸ್ತ[2]ಘಾತದಿಂ
ತೊಟ್ಟನೆ ಕಿಟ್ತು ಪೊಯ್ದು ಕೊಣಕಿಟ್ಟು ಮಹಾರವದಿಂದೆ ಹೋರಲೆ
ಬ್ಬಿಟ್ಟುವ [3]ಸೊಕ್ಕಿ[3]ದಾನೆ ಮಕರಂಗಳನೀಕ್ಷಿಸಿದಂ ಸಮುದ್ರದೊಳ್ ೨೫

ಶಂಖಮನೆತ್ತಿ ಮೀನ ಪೊಳೆಪಂ ತಳೆದಾವೆಯ ರೂಪನಾಳ್ದು ಪಾ
ವಂ ಕರ[4]ವೊಪ್ಪೆ ನೆಮ್ಮಿ[4] ಶಿಶುಮಾರ [5]ಸಮಾ[5]ಶ್ರಯಮಾಗಿ ಭೂಮಿಭೃ
ತ್ಸಂಕುಳಮಂ ಶರಣ್ಗೆವರೆ ರಕ್ಷಿಸಿ ಲಕ್ಷ್ಮಿಯನೋತು ಪೆತ್ತು ವೀ
ತಾಂಕುಶಸತ್ವದಿಂದಮುರ್ದು ಪೋಲ್ತುದು ವಾರಿಧಿ ವಾರಿಜಾಕ್ಷ[6]ನಂ[6] ೨೬

ಸೀಮೆಯಿದು ಜಲಧಿಗಂ ಪೃ
ಥ್ವೀಮಂಡಲಕೆಂದು ಪರಶುರಾಮಂ ಬರೆದಾ
ಸೀಮೆಯೆ ಮೇರೆಯೆನಿಪ್ಪುದು
ಭೂಮಿಗೆ[7]ಯುಳಿಕಂಬೊಲಾಯ್ತು[7] ಸೀಮಾಲಂಘ್ಯಂ ೨೭

ಆಡುವ ಮೀನ್ಗಳುಂ ಕುಣಿವ ಹಂಸೆಗಳುಂ ಕಡುದಣ್ಣ[8]ನೇಗಳುಂ[8]
ತೀಡುವ ಗಾಳಿಯುಂ ಸುೞಿವ ನಾವೆಗಳುಂ ತೆರೆ ಪೊಯ್ಯೆ ಪುಯ್ಯಲಿ
ಟ್ಟಾಡುವ ಫೇನಸಂಹತಿಗಳುಂ ತ[9]ಗದುನ್ಮದ[9]ಷಟ್ಪದಂಗಳುಂ
ಮಾಡಿದುವೞ್ತಿಯುಂ ಪಿರಿದುಮಂ ಮನದೊಳ್ ಜಯದಂಕಕಾಱನಾ ೨೮

ಅಗಲದ ಪರೋಪಕಾರದ
ಬಗರಗೆ ನೀರ್ವೇಱಿ ಕೀಱಿ ನವಜಲದಂಗಳ್
ಗಗನಪಥಕ್ಕಡರ್ವಗ್ನಿಯ
ಪೊಗೆಗಳ್ ನೆಗೆವಂತೆ ನೆಗೆದುವಂಬುಧಿಯಿಂದಂ* ೨೯

---

[1] ಗುವವೋಲ್ (ಖ) [2] ಕಾಳದ ರೂಪದ ಹಸ್ತಿ (ಕ) [3] ದಮ್ಮ (ಕ) [4] ಮುಂಬ್ಬೆನೇಮಿಸಿ (ಕ) [5] ನುಪಾ (ಅಕ) [6] ನಾ (ಕಗ) [7] ಬೞಿಕವನಿನಾಯ್ತು (ಕ) [8] ಸಾಳ್ಗಳುಂ (ಬ) [9] ವ ಮನ್ಮಥ (ಕ).

* ಈ ಪದ್ಯವೂ ಇದರ ಮುಂದಿನ ಪದ್ಯವೂ (ಬ) ಪ್ರತಿಯಲ್ಲಿ ಹಿಂದು ಮುಂದಾಗಿವೆ.

ಧರೆಗಿ[1]ದಮರೇಂ[1]ದ್ರಜಾಲಂ
ಶರಧಿಯ ವಿಷಮುಂ ಕಡಂಗಿ ಮಾರುತಜವದಿಂ
ಪರಿದೆಱಗಿ [2]ಮೊಗೆದು ನೆಗೆದು[2]
ರ್ವರೆಗಮರ್ದಂ ಕಱು[3]ವುವಲ್ಲಿಗೆಱಗುವ[3] ಮುಗಿಲ್ಗಳ್ ೩೦

ಮೃಗ ಮಕರಂಗಳಿಂ ಕಮಠ ನಾಗ ಹರಿನ್ಮಣಿ ನೀಲಮೌಕ್ತಿಕಾ
ಳಿಗಳ ಕಳಾಪದಿಂ ಶಫರ ಶಂಖಪರಂಪರೆಯಿಂ ವಿಳಾಸವ
ತ್ಪಗಯುಗಳಂಗಳಿಂ ಲಹರಿ[4]ಕಾ[4] ಲತಿಕಾವಳಿ[5]ಯುಂಗಳಿಂದೆ[5] ಧಾ
ತ್ರಿಗೆ ಕಟಿಸೂತ್ರದಂತೆ ಸೊಗಯಿಕ್ಕುಮಗಾಧ ಪಯೋಧಿಮಂಡಲಂ ೩೧

ನೊರೆಯಿ[6]ವ[6]ಲ್ಲವು ತಳ್ತ ಶಂಖದ ಬಳ್ಳಿಗಳ್ ಬಡಬಾನಲಾಂ
ಕುರಮಿ[6]ವ[6]ಲ್ಲವು ರತ್ನದೀಧಿತಿಗಳ್ ತರಂಗಮಿ[6]ವ[6]ಲ್ಲವು
ದ್ಧುರ ಕುಳಾಚಳಪಂಕ್ತಿಗಳ್ ಜಳಶೀಕರಂಗಳಿ[6]ವ[6]ಲ್ಲವಾ
ಪರೆದ ಮುತ್ತುಗಳೆಂಬ ಶಂಕೆಯನಾಗಿಕುಂ ಮಕರಾಕರಂ ೩೨

(ಕಾವ್ಯಾವಲೋಕನಂ, ೮೮೬.)

ಬಲವೈರಿಸ್ಫಾರ ವಜ್ರಾಯುಧ ಭಯಚಕಿತೋ[7]ದ್ಧೂತ[7] ವೈನಾಕಗೋತ್ರಾ
ಚಲಪಕ್ಷತ್ರಾ[8]ಯಿ ಸಿಂಧು[8]ಪ್ರಿಯತಮನತಿಗಂಭೀರನಂತರ್ನಿವಿಷ್ಟಾ
ಖಿಲಲೋಕಂ ನಕ್ರಚಕ್ರಸ್ಫುರದುರುತರ[9]ಯಾದಶ್ಚರಾಧ್ಯಾಸಿತ[9] ಪ್ರೋ
ತ್ಕಲಿತಾಂಭಃಕುಂಭಿ [10]ಕುಂಭೀನಸ ಮಕರ ಕರಕ್ಷೋಭ[10]ರೌದ್ರಂ ಸಮುದ್ರಂ ೩೩

(ಪಂಚತಂತ್ರಂ—ಪದ್ಯ ೨೨೨, ಪುಟ ೧೫೦.)

ಒಳಗೊಳಗಳುರ್ದುದು ವಡಬಾ
ನಳನಿನಿಸಂ ಮೊಗೆಯೆ ಮುಗಿಲ ಬಳಗಂ ಮಹಿಗಂ
ಜಲಮಯಮೆನಿಸಲ್ ಸಾಲ್ವುದು
ಜಲರಾಶಿ ನಭಕ್ಕೆ ನೆಗೆದ ಪೆರ್ಚುಗೆಯಿಂದಂ ೩೪

---

[1] ಡಿದವಿಂ (ಬ) [2] ನೀರಂ ಮೊಗೆದು (ಬ) [3] ವೊಲಲ್ಲಿಗೆಱಪ (ಕಗ) [4] ಪಾ (ಬ) [5] ಯಿಂದಲಿಂತು (ಕ) [6] ವೆ (ಖ) [7] ದ್ಧಾಮ (ಅ) ದಾರ (ಕ) [8] ತ್ರಾಣಸಿಂಧು (ಅ) ತ್ರಾಯಿಯಿಂದು (ಕ) [9] ರೋಧಸ್ಸ್ನರೋಘಂ ಯಮ (ಕ) ಯೋಧ್ಯಸ್ಯರೋಘಂ ಯಮ (ಖ) [10] ಕುಂಭೋನ್ಮದ ರಸ ವಿಸಲತ್ ಕ್ಷೋಭ (ಅ).

ಅಮ ಜಂಬೂದ್ವೀಪಮಂ ಬಾಸ್ಗಡರೆ ಬಳಸಿವಂತಿರ್ದುದಂಭಃಕರೀಂದ್ರೋ
ಪ್ರಪನಾಘಾ[1]ತೋಚ್ಚಳಚ್ಛೀಕರ[1]ಮಕರಕರಸ್ಫಾಲಪಾಠೀನಪುಚ್ಛ
ಚ್ಛದನಚ್ಛನ್ನಕ್ರಕೂರ್ಮಪ್ರಕುಪಿತ[2]ವಿ[2]ಲುಠಚ್ಛಿಂಶುಮಾರಪ್ರಹಾರ
ಪ್ರದಳತ್ಫೇನಪ್ರವಾಹಪ್ರಬಲಘನಘನಾರಾವರೌದ್ರಂ ಸಮುದ್ರಂ ೩೫

ಒಂದುಂ ಕಾರಣಮಿಲ್ಲದೆನ್ನ ಧನಮಂ ಶ್ರೀಕೌಸ್ತುಭಾಸಾಂಗನಾ
ವೃಂದಸ್ನಿಗ್ಧ ಸುರದ್ರುಮಾ[3]ಮೃತಹಯಶ್ರೇಷ್ಠೇಭಮಂ[3] ದೇವರೆ
ಯ್ತಂದೀೞ್ಕೊಂಡುದನೆನ್ನ ಪುಯ್ಯಲನಿದಂ ನೀಂ ಭೂಧರಂಗೆ[4]ಯ್ದಿ[4] ಪೇ
ೞೆಂದೂಳ್ವಂತೆ ಗಭೀರನಾದಮೊಗೆವಂತಾಯ್ತಬ್ಧಿ ವಾತಾಹತಂ ೩೬

ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು ನಾಡೆಯುಂ
ಕವಿಗಳ ಲೀಲೆ ಗಂಗೆಗಿವಿಯೋಲೆ ವನೇಭದ ಶಾಲೆ ಪದ್ಮಸಂ
ಭವನ ನೆಗೞ್ತೆ ಪೂರ್ವದ ಪೊಗೞ್ತೆ ಕುದುರ್ಗದಗೞ್ತೆ ಮಿಕ್ಕ ಬಾ
ಡವಶಿಖಿಗೋಗರಂ ಮಣಿಗಳಾಗರಮಂದೆಸೆದತ್ತು ಸಾಗರಂ ೩೭

ಪವಳದ ಕೆಯ್ ಮುಗಿಲ್ಗಳಱವಟ್ಟಿಗೆ [5]ನೀರ್ಗಳ್[5] ಗೊತ್ತು ಮುತ್ತು ಹು
ಟ್ಟುವ ಕಣಿ ಜೆಟ್ಟವಕ್ಕಿಗಳ ಗೂಡೆಳನೇಸಱ ತೊಟ್ಟಿಲುದಗ್ರ ದಾ
ನವರೆಱೆವಟ್ಟು ಲಕ್ಷ್ಮಿಯ ತವರ್ಮನೆ ತಿಂಗಳ ಪೆತ್ತ ತಂದೆ ವಾ
ಡವಶಿಖಿಗಂ ನಿವಾಸಮಸುರಾರಿಯ ಸೆಜ್ಜೆ ಶುಭಂ ಮಹಾರ್ಣವಂ * ೩೮

ನಳಿನೀಗರ್ಭಾಂಡಮಾಲಾಫಳಿತಮೆನಿಪ ಪೃಥ್ವೀಮಹಾವಲ್ಲಿಯಂ ಮಂ
ಡಳಿಸಿರ್ದಾವಾಲದಂತಿರ್ಪುದು ಜಲಚರಸಂಭೂತ ಸಂಪದ್ವಿಧಾನಂ
ವಿಳಸದ್ರತ್ನ ಪ್ರತಾನಂ ಕುಲಗಿರಿಶರಣಸ್ಥಾನಮುತ್ಕೀರ್ಣಫೇನಂ
ಬಳವದ್ವೀಚೀವಿತಾನಂ ಪ್ರಬಳಘುಳುಘುಳುಧ್ವಾನಮಂಭೋನಿಧಾನಂ ೩೯

(ಜಗನ್ನಾಥವಿಜಯಂ, ೧—೨೩.)

ಕ್ಷಿತಿಯನಶೇಷಮಂ ಬಳಸಿ ಕಾವುದಱಿಂ ಮಱೆವೊಕ್ಕ ಭೂಮಿಭೃ
ತ್ಪತಿಯನರಾತಿಗೊಪ್ಪಿಸದ ಸಾಹಸದಿಂದವೆ ಬೀರಗೌರವ
ಸ್ಥಿತಿಯಿನಲಂಘ್ಯಶಕ್ತಿಯಿನುದಾರಗುಣೋನ್ನತಿಯಿಂ ಪಯೋಧಿ ಭೂ
ಪತಿಯನೆ ಪೋಲ್ತು ಪೋಲದತಿತೃಷ್ಣತೆಯಿಂ ತೆರೆಯಿಂ ಜಡತ್ವದಿಂ ೪೦

---

[1] ತಬಲಚ್ಛೀಕರ (ಬ) [2] ಲು (ಕ) [3] ಶ್ವಗಜಮಂ ರತ್ನಂಗಳಂ (ಖ) [4] ಯ್ದು (ಬ) [5] ಮೀನ್ಗಳ (ಕ) * ಇಲ್ಲಿಗೆ (ಕ) ಪ್ರತಿಯಲ್ಲಿ ಸಮುದ್ರವರ್ಣನೆಯಾದ ೨ನೆಯ ಆಶ್ವಾಸವು ಮುಗಿದಿದೆ.

ಜಗದೊಳುಳ್ಳ ನದೀಪ್ರವಾಹಜಲಂಗಳೌಘದಿನಾವಗಂ
ಪುಗೆಯುಮೊತ್ತದು ಮೇರೆಯಂ ವಡಬಾನಳಂ ಬಿಡದೇಗಳುಂ
ತಗುಳೆ ಪೀರೆಯುಮಂತ[1]ದೆಳ್ಳನಿತಪ್ಪೊಡಂ ತಪದಂತೆವೋಲ್[1]
ಬಗೆದು ನೋಡೆ ಮಹಾತ್ಮರಪ್ಪವರೇಕರೂಪರದೆಲ್ಲಿಯುಂ ೪೧

(ಕಾವ್ಯಾವಲೋಕನಂ ೭೨೩.)

ಧರಣೀವನಿತಿಗೆ ಧಾತ್ರಂ
ವಿರಚಿಸಿ[2]ದ[2] ವಿಚಿತ್ರ ಮೇಖಲಾಸೂತ್ರಮೆನಲ್
ಕರಮೆಸೆವುದಖಿಳ ಮಣಿಗಣ
ಕಿರಣಾವಳಿ ಕಲಿತ ಪಲಿತ ಪಾರಾವಾರಂ ೪೨

(ವರ್ಧಮಾನಪುರಾಣಂ).

ಉರಗೇಂದ್ರಾಭಿನುತಾಂತರಂಗಬಹಿರಂಗಶ್ರೀಯುತಂ ವೃತ್ತರ
ತ್ನರುಚಿವ್ಯಾವೃತನಿಷ್ಕಳಂಕಹೃದಯಂ ನಿತ್ಯಂ ಗಭೀರಂ ಸುರಾ
ಸುರಸೇವ್ಯಂ ಕಮಠಪ್ರಣೂತವಿಭವಂ ಶ್ರೀಪಾರ್ಶ್ವತೀರ್ಥೇಶನಂ
ತಿರೆ ಪೂರ್ಣಂ ಲವಣಾರ್ಣವಂ ಸೊಗಯಿಕುಂ ನೀಲಪ್ರಭಾಡಂಬರಂ ೪೩

(ಪಾರ್ಶ್ವನಾಥಪುರಾಣಂ, ೧—೧೦೫.)

ನೊರೆಯಿಂ ಬುದ್ಬುದದಿಂ ಕಣಾವಳಿಗಳಿಂದಾವರ್ತದಿಂ ತುಂತುಱಿಂ
ತೆರೆಯಿಂ ಪೆರ್ದೆರೆಯಿಂ ತಿಮಿಂಗಿಳ[3]ಗಿಳ[3]ಸ್ತೋಮಂಗಳಿಂ ಕಚ್ಛಪೋ
ತ್ಕರದಿಂ ನಕ್ರನಿಕಾಯದಿಂ ಮಕರದಿಂ ನೀರಾನೆಯಿಂ ಕಂಬುವಿಂ
ವರರತ್ನವ್ರಜದಿಂ ಪ್ರವಾಳಲತೆಯಿಂದೊಪ್ಪಿತ್ತು ನೀರಾಕರಂ ೪೪

(ಗಿರಿಜಾಕಲ್ಯಾಣಂ, ೧—೪೭.)

ವಿಳಸತ್ಕಲ್ಲೋಲಮಾಲಾಪ್ರತಿಹತವಿತತಪ್ರೋಚ್ಚಲಚ್ಛೈಲಕೋಳಾ
ಹಳಿತೋದ್ವೃತ್ತಫೇನನಾನಾಕರಿಮಕರವಿಪುಚ್ಛ ಪ್ರಹಾರಪ್ರತಾಪೋ
ದ್ಗಳಿತಾನಂತಪ್ರರತ್ನಪ್ರಬಲಜಲಚರಾನೀಕಗಂಭೀರಭೀಮೋ
ಜ್ಜ್ವಳರಾವಪ್ರೋದ್ಯತಪ್ರೋದ್ಗಳಿತಘುಳುಘುಳುಧ್ವಾನಮಂಭೋನಿಧಾನಂ ೪೫

(ಗಿರಿಜಾಕಲ್ಯಾಣಂ, ೧—೪೬)

ಕಟ್ಟಿದ ಚೌರಿಗಳ್ ಗಗನಮಂ ಮಿಗೆ ಚುಂಬಿಪ ಕೂಪಕಂಭವು
ಟ್ಟಟ್ಟ ಸುವರ್ಣರತ್ನತತಿ ಗಾಳಿಯ ಕೋಳ್ಗನುಕೂಲವಪ್ಪಿನಂ

[1] ದೇಟಿನೆ ತಪ್ಪುದಂತವದಂಡೆವೋ (ಖಬ) [2] ದಂ (ಬ) [3] ಕುಲ (ಬ).

ಬಿಟ್ಟುಪ[1]ರಿ[1] ಪ್ರಮಾದಫಲಕಂ [2]ಸಿ[2]ತನಾದ ವಣಿಗ್ವರಂ ಕರಂ
ದಿಟ್ಟಿಗೆ ಚೆಲ್ವನಾಗಿ ಕಡಲೊಳ್ ಬರುತಿರ್ಪುದು ಯಾನಪಾತ್ರಕಂ ೪೬

ಹಾಸಾಗಿ[3]ಸು[3]ರೇಶಂ ಹರಿ
ಗಾ ಸೌಪರ್ಣಂಗೆ ಸುಗಿಯದುರಗನಿಕಾಯಂ
ಬಾಸಣಿಸಿರ್ಪ್ಪುದು ಕಡಲಂ
ಬೀಸದೆ ನಿಲೆ ವಾಯುವಿಂಗೆ ಪೆರ್ದೆರೆಗಳವೋಲ್ ೪೭

ಓರಂತೆ ಮೆಚ್ಚಿದಂ ಕೃತಿ
ಸಾರಾರ್ಣವ ವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರ ಸಮುದ್ರಾಧಿನಾಯಕಂ ಸೋಮನೃಪಂ ೪೮

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋತ್ಪಾ
ದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮ ಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್.

ಸಮುದ್ರವರ್ಣನಂ ದ್ವಿತೀಯಾಶ್ವಾಸಂ ಸಂಪೂರ್ಣಂ.



[1] ರಿ (ಕಖಬ) [2] ಸ (ಖ) [3] ಸ (ಕಖಬ).

# ಪರ್ವತವರ್ಣನಂ

———

ತರುತತಿ ಬಳ್ಳಿ ಪುಲ್ಮೊಡಜು ಪಕ್ಕಿ ಮೃಗಂ ಫಣಿ ಜೇನ್ ಮೃಗವ್ಯಮೊ
ಜ್ಜರಮೆಸೆವಪ್ಪ ತಿಕ್ಕೆ ಶಿಲೆ ಕೋಡು ಗುಹಾವಳಿ ತಾಪಸಾಶ್ರಮಂ
ದರಿ ಸರಿಯಾನೆಗಳ್ ಗಜುಗೆ ಪೇವ ಮುಗಿಲ್ ಜೊಣೆ ಭಿಲ್ಲಪಳ್ಳಿ ಕಿ
ನ್ನರಮಿಥುನಾಳಿಗಳ್ ನಿಲಯಮಾಗಿರೆ ತೀವ್ರಡು ಶೈಲವರ್ಣನಂ ೧

ಬಿಲಸಗ್ಗಂ [1]ಗ[1]ವಿಸಂದಿ ಡೋಣಿ ಪರಿಚಾರೀರಂ ಪುಗಿಲ್ವಟ್ಟೆ ಮೇ
ಖಳೆ ತಾಳ್ವಾಸಜೆ ಗಂಡಶೈಲಮುಡಕಿಲ್ವಟ್ಟಂ ಪರಲ್ವಟ್ಟೆ ತಾ
ಜಲೊಸದಾರ್ಣ ಮಹಾಗ್ರಹಂ ತೊಜೆ ಕೊಳಂ ಪುಲ್ವಟ್ಟೆಗಳ್ ಕಾರ್ಮುಕಂ
[2]ಬೊ[2]ಲೆ ಗಂಟಿಕ್ಕಿದ ಕಾಡದಿಕ್ಕೆಗಮಜಸ್ರಂ ರಮ್ಯಮಾ ಬೆಟ್ಟದೊಳ್ ೨

ನೋಡೆ ಮಹೇಂದ್ರರೌದ್ರವನನೋಪಮುಮಪ್ಪುದಯಾದ್ರಿಕೂಟದಿಂ
ಮೂಡುವ [3]ತಿಗ್ಮ[3]ದೀಧಿತಿಯ ತೀವ್ರ ಕರಂಗಳ ಕೇಳ್ದ ದಿರ್ಜಿ [4]ತ
ಳ್ತೋಡಿ [4]ತೆರಳ್ದು ತೂಳ್ದು ನಿಲಲಾಜಪೆ ಪಶ್ಚಿಮ ದಿಗ್ವಿಭಾಗ[5]ದ
ತ್ತೋ[5]ಡುವದೊಂದು ಕಟ್ಟಲೆಯ ಹಾದಿವೊಲಿರ್ದುದು ವಿಂಧ್ಯಪರ್ವತಂ ೩

ಪ್ರತಿಭಟ[6]ಜೋದ್ಧ[6]ನಾ[7]ದ[7] ಪ್ಲವಗಕಳಕಳಂ ಕೇಕಿ[8]ಚಂಚೂ[8]ಭಯಾಕುಲಂ
ಚಿತ್ರ[9]ಘಾಳ[9]ವ್ಯಾಳಜಾಲಂ ಜವನಜಗರವಕ್ತ್ರಕ್ಷರತ್ಕ್ಷೇಪಜಾತಾ
ಸತತವನ್ಯಪ್ರಾಣಿವರ್ಗಂ ಮೃಗಪತಿನಖನಿರ್ಭಿನ್ನ ಮತ್ತೇಭಕುಂಭ
ಚ್ಯುತಮುಕ್ತಾಪುಂಜಗುಂಜಾ[10]ವಿಕಸಿ[10]ತ ಕಟಕಂ ಕಣ್ಗೆ ಮಂದ್ರಾಗೇಂದ್ರಂ ೪

ಉನ್ನ ಶಿಖಂಡಿತಾಂಡವನಮನೋಹರಮುಜ್ಜ್ವಲ ರತ್ನರಾಜಿ[11]ರಂ
ಜ[11]ಸ್ಫಟಿಕಂ [12]ಸರತ್ನಕನಕ[12]ಸ್ಥ ಪರಾಗಪಿಶಂಗಿತಾಂಗರಂ
[13]ಜ[13]ಸ್ಫಟಿಕಾಂಶುಸಾಂದ್ರ ರಜತೋಚ್ಚಯದಂತೆ ಮದಾಂಧನಾಗ[14]ಘಾ
ರೋ[14]ತ್ಕಟಮೇಕ್ಷ್ಯಗುಂ ಕುಮುದಸಾಂದ್ರುರಮಾ ವಿಜಯಾರ್ಧಪರ್ವತಂ ೫

(ಆದಿಪುರಾಣಂ, ೧—೬೩.)

---

[1] ಸ (ಕ) [2] ಜೋಲ್ಸ (ಕ) [3] ತೀವ್ರ (ಖಬ) [4] ದಳ್ವಾಡೆ (ಕ) [5] ದಿಂದೊ (ಖ) [6] ಜಾಡ್ಯ (ಖ) [7] ಸ (ಕ) [8] ಕೇಕಾ (ಕ) [9] ಡೋಲ (ಕ) [10] ಕಬಳಿ (ಖ) [11] ರಾಜ (ಅ) ರುಚಿ (ಕ) [12] ಸರತ್ನಚಯ (ಕ) ಕನತ್ಕನಕ (ಅ) ಕರತ್ನಕಾ (ಖಬ) [13] ಗ (ಅ) [14] ಗಂಧೋ (ಅ) ಮದೋ (ಕ).

ಬಲಿವ ಶಕುಂತಿಯಿಂ ನುಡಿವವೋಲ್ ಕುಸುಮೋ[1]ಜ್ಜ್ವಲ[1]ಭೂರಿಭೂರುಹಾ
ವಳಿಯಿನನಂತರಂ ನಗುವವೋಲ್ ನವನಿರ್ಝರವಾರಿನಾದದಿಂ
ಪೊಲಿದು ತಗುಳ್ದು ಪಾಡುವವೊ[2]ಲಾ[2]ದುವ ಗಾಳಿಯ ಕೋಳ್ಗೆಳೋಳಿವ
ಟ್ಟಲುಗುವ ಕೊಂಬಿನಿಂ ನಲಿವು ನರ್ತಿಪವೋಲ್ ಸೊಗಯಿಕ್ಕುಮಾ ನಗಂ ೬

ಭಾರತದಂತೆ ಭೀಮನಕುಲಾರ್ಜುನಸಂಗತಿಯಿಂ ನೆಗಳ್ದ ದೈ
ತ್ಯಾರಿಯ ವಕ್ಷದಂತೆ ಭೃಗುಸಂಪದದಿಂ ಹರನಂತೆ ಸದ್ಗುಹಾ
ಕಾರಪಿಶಾಚದಿಂ ರಘುಜನಂತೆ ಮನೋಜ್ಞಧರಿತ್ರಿಸಂಭವಾ
ಕಾರದಿನಿರ್ದುದೊಂದು ಕುಧರಂ ಗಗನಸ್ಥಳಮಂ ತುಡುಂಕುತುಂ ೭

ಕುವಲಯಪಾಂಡುರಂ ಕನಕಪಂಕಜಷಂಡಪಿರಾಜಿ ಕೇಕಿತಾಂ
ಡವರಮಣೀಯ[3]ಕಲ್ಪ[3]ಲತಿಕಾವನ[4]ಮುನ್ಮದ[4]ಭೃಂಗಮಾಳಿಕಾ
ರವಮುಖ[5]ರೀ[6]ಕೃತಾ[6]ಮ್ರ[6]ವನಶೋಭಿತಮಾಶ್ರಿತದಿವ್ಯಸೌಂದರೀ
ನಿಚಯವಿಕೀರ್ಣ ಚಂಪಕವನಂ ಕರಮೊಪ್ಪುಗುಮಾ ಮಹೀಧರಂ ೮

(ಆದಿಪುರಾಣಂ, ೧೩—೭೦.)

ಫಳಭಾರಾಕ್ರಾಂತ ಸಾರ್ವರ್ತುಕನಿಕಟವನಂ ಮೇಖಲಾಕೀರ್ಣ[7]ವಲ್ಲೀ
ನಿಲಯಂ[7] ಗಂಧೇಭಗಂಧೋತ್ಕಟಮವಿರಳಸಾನುಸ್ಥಳೀಪದ್ಮ[8]ರಾಗೋ[8]
ತ್ಪಲಷಂಡಂ ಕೂಟಕೋಟಿ[9]ಸ್ಥಗಿತ[9]ಮಣಿಮಯೂಖಾವಳೀಚಿ[10]ತ್ರಿತಾಶಾ[10]
ವಳಯಂ ಕಣ್ಗಂ ಮನಕ್ಕಂ ಪಡೆದುದು [11]ಪಡೆಪಂ ಚಿತ್ರಕೂಟಾಚಲೇಂದ್ರಂ[11] ೯

(ಪಂಪರಾಮಾಯಣಂ, ೭—೩೦.)

ಭ್ರಮಿತಾ[12]ಷ್ಟಾಪದಮುಗ್ರಖಡ್ಗಮೃಗಸಂಛನ್ನಂ[12] [13]ಜರ[13]ದ್ದಂದಶೂ
ಕಮ[14]ಶೋಚ್ಛ್ವಾಸ[14]ಶುಷ್ಕಾಗ್ನಿದಗ್ಧವಿಪಿನಂ ಮತ್ತೇಭವಿಕ್ರೀಡಿತಂ
ತಮದೊಡ್ಡಿಂಬಿನೆಗಂ ಕಜಂಗಿ ನಭಮಂ ನುಂಗಿತ್ತು ಸಾಪರ್ಧಿನಂ
[15]ಭ್ರ[15]ಮಕೋಲಾಹಲಬಭ್ರು[16]ಕಾ[16]ಕಲುಷಿತಾಂ[17]ತ[17]ಸ್ಸಿಂಧು ವಿಂಧ್ಯಾಚಲಂ ೧೦

(ಪಂಪರಾಮಾಯಣಂ, ೭—೧೨೨.)

---

1 ತ್ಸ್ವಲ (ಬ) 2 ಶೋ (ಬ) 3 ಪುಷ್ಪ (ಕ) 4 ಮನ್ಮಥ (ಕ) 5 ರಂ (ಖ)
5 ದುರ್ಗ (ಕ), ಘರ್ಗ (ಬ) 7 ಭದ್ರವಿಳಸದ್ಗಂ (ಕ) 8 ಸಂಶೋ (ಅ) ಸದ್ಯೋ (ಕ)
9 ಸ್ಫುರಿತ (ಅಕ) ಸ್ಥಗಿತ (ಬ) 10 ತ್ರಶೋಭಾ (ಬಬ) 11 ಮಾದಮಂ ನೋಡೆ ವಿಂಧ್ಯಾಚಲೇಂದ್ರಂ (ಕ) 12 ಟೋಪದಿಂದುಗ್ರಖಡ್ಗಮೃಗಸಂತಾನಂ (ಕ) 13 ಚಲ (ಖ)
14 ಖಶ್ವಾಸ (ಅಕ) 15 ಕ್ರ (ಖ) 16 ಕಂ (ಅಕ) 17 ಭ (ಖ).

ಬಹುರತ್ನಚ್ಛಾಯೆಯಿಂ [1]ಚಿತ್ರಿಸಿ[1] ನಿಖಿಳ ದಿಶಾಭಿತ್ತಿಯಂ ಚೋಳಿಕಾನೋ
ಕಹಶಾಖಾಹಸ್ತದಿಂ ಜಕ್ಕುಲಿಸಿ ರವಿರಥಾಶ್ವಂಗಳಂ ಗಂಡಶೈಳಾ
ಗ್ರಹಟತ್ಕೂಟಂಗಳಿಂ[2]ಮುಗ್ಧ[2]ರಿಸಿ ದಿವಮನೇಂ ಸೆಂಪುವೆತ್ತತ್ತೊ ಭೂಭೃ
ನ್ನೃಹಿತಂ ಶ್ರೀಪರ್ವತಂ ನಿರ್ಝರಜಲಲಹರೀಲಾಸ್ಯಮಾಂಗಲ್ಯರಂಗಂ ೧೧

(ಮಲ್ಲಿನಾಥಪುರಾಣಂ, ೧೦—೧೦೨).

ಕರಿಗಳ್ ಮದವತ್ಕರಿಗಳ್
[3]ಪರ[3]ಲೆಲ್ಲಂ ಮುತ್ತು ಮಾಣಿಕಂ ಪಾಸಱೆಗಳ್
ಪರುಷಂಗಳ್ ದೊಣೆಗಳ್ ಸಿ
ದ್ಧರಸಂಗಳ್ ಗಿರಿಯ [4]ಸಿರಿಯನೇ[4]ನಂ ಪೇೞ್ವಂ ೧೨

ಕತ್ತುರಿಮೃಗಮೆ ಮೃಗಂಗಳ್
ಮುತ್ತುಗಳಂ ತಳೆವ ಗಂಧಗಜಮೆ ಗಜಂಗಳ್
[5]ಬಿ[5]ತ್ತದೆ ಪರಿವ ರಸಾಯನ
ದೊತ್ತಿಂ ಬಂದಿಱಿಯುತಿರ್ಪ ತೊಱೆಗಳೆ ತೊಱೆಗಳ್ ೧೩

ಸೊಗಯಿಸಿ ಪಾಯ್ವ ನಿರ್ಝರದ ಶೀಕರಪುಂಜಮೊಳಾದ ಮಂಜಿನಿಂ
ದಗಲದೆ ಪೊರ್ದಿ ಬರ್ಪ ರವಿಯಿಂ[6]ದು[6]ರಿದೇೞ್ವ ಸಕಾಂತತಾಪದಿಂ
ಮೃಗದವರ್ೊಲೇೞು ಮೇವ ಮುಗಿಲಿಂ ಪಥಿಕರ್ಕಳ ಕಣ್ಗೆ ಮಾಗಿ ಬೇ
ಸಗೆ ಮೞೆಗಾಲಮೆಂಬಿನಿತುಮೊ[7]ರ್ಮೆಯೆ ತೋಱುಗು[7]ಮಾ ವನಾಂತಮೊಳ್ ೧೪

ಕೋಡಿಸುವ ಚಂದ್ರಕಾಂತದ
ಕೋಡುಂಗಲ್ಗಳೊಸ[8]ರ್ವ[8] ರಸದ ಪೊನಲ್ಗಳ್
ಸೇಡುವಡೆ ಕವಿಯೆ ಗಿರಿಗೆಡೆ
ಯಾಡುವ [9]ವಿಧು[9] ನಾಂದು ನನೆದು ಹಿಮಕರನಾದಂ ೧೫

(ಲೀಲಾವತಿ, ೯—೩೨).

ಪೂಗೊಯ್ವ [10]ಶಬರಿ[10] ಶಿಖರದ
ಪೂಗಿಡುಗಳ ಕೊಂಬಿನಲ್ಲಿ ತೊಡರ್ದಿರೆ ಮಿನ್ಗಳ್
[11]ಪೂಗೆತ್ತು ತುಡುಂಕುವಳೆನ[11]
ಲಾ ಗಿರಿಯುನ್ನ[12] ತಮ[12] ನಿನ್ನದೇನಂ ಪೇೞ್ವಂ ೧೬

(ಲೀಲಾವತಿ, ೯—೩೮.)

---

[1] ಪರ್ಬಿಸುವ (ಅಬ) [2] ದಂಧ (ಬ) [3] ಪುದು (ಕ) [4] ನೊಣದೊಳ್ (ಕ) [5] ಪ (ಕ) [6] ಪು (ಕ) [7] ನೆರ್ಸಲೊಪ್ಪುಗು (ಬ) [8] ರ್ಗ (ಅಬ) [9] ರವಿ (ಬ) [10] ಬಿಱಿ (ಅಕ) [11] ಪೂಗೊಯ್ಯಲ್ ತುಡುಕುವರೆನ (ಬ) [12] ತಿಯು (ಕಬ).

ಜ್ವಳದರ್ಕಗ್ರಾವಮುಂ ತಿಗ್ಮಕರಸಮುಳಮಾಣಿಕ್ಯ ಸಂತಾನಮುಂ ನಿ
ರ್ಮಳಜಾತಿಜ್ಯೋತಿತೌಘಂ ಮೃಗಮೊಱಗಿದ ಚಂದ್ರಾಶ್ಮಮುಂ ಚಂದ್ರಬಿಂಬಂ
ಪೊಳೆಯುತ್ತುಂ ಪೋಲೆ ನೀಳಾಚಲಮನಡಕಿಲಿಟ್ಟಂತೆ ತೋರ್ಕುಂ ತದುಚ್ಚಾ
ಚಳ ಚೂಡಾಚಕ್ರದೊಳ್ ಚುಂಬಿತಜಲಧರದಿವ್ಯಾಸಗಾವ್ಯೋಮಮೆಂದುಂ ೧೭

(ಲೀಲಾವತಿ, ೯–೨೯.)

ಹರಿನೀಲಶಿಖರದುನ್ಮುಖ
[ಕ] ರಮುಂ[ತಾಂ] ರಾಹುಗೆತ್ತು ಭಯದಿಂ[ದಂ] ಸಂ
ಚರಿಸುವ ಚಂದ್ರಮನೆರಳಿಗೆ
ಪಿರಿದುಂ ಪಾಯಲ್ಕೆ ಬಗೆದುವಲ್ಲಿಯ ಪುಲಿಗಳ್ ೧೮

ಅಗತಟಮನೆ ಸಾರ್ಚೆ ಮುಗಿಲ್
ತಗುಳ್ದುಂ ಮುಱಗಜ್ರಿಯೆ ಪೋಗಿ ಕೋಡುಂಗಲ್ಲಂ
ಮೃಗರಾಜನೇಱ ನನೆಯದೆ
ಮುಗುಱ್ದೀಕ್ಷಿಸುತಿರ್ಕುಮೇನಪತ್ಯುನ್ನತಮೋ ೧೯

ನೀಲದ ಕೋಡುಂಗಲ್ಗಳ
ಲೋಲದ್ಯುತಿ ಮುಸುಱ ಮುಸುಳೆ ಮೇಗಣ [1]ಮಿಾನ್[1] ತಾ
ರಾಳಿಯು ಹಾ[2]ರಿ[2]ಯು ಬಟ್ಟೆಗೆ
ಶೈಲಂಬರ ತೊಲಗಿದಂತೆ ಕೆಲದೊಳ್ ತೋರ್ಕುಂ ೨೦

(ಲೀಲಾವತಿ, ೯–೩೪.)

ಮೃಗಧರನಗತಟದೊಳ್ ಬರೆ
ಮೃಗಮುದಱೊಳ್ ಬೆರಸೆ ಬೇಡನೊಡನಾರ್ದೆಸಲಂ
ದೊಗುವಮೃತದಿನದು ಬರ್ದೊಡೆ
ಮೃಗವ್ಯಮುಂ ತೊಱ[3]ದು ಬಿಲ್ಲನುಂಬಂ ಬಿಸುಟಂ ೨೧

ಗಿರಿಗಳ್ ಜಂಗಮವಪುಗಳ್
ಶಿರದೊಳ್ ಸಸಿದರಳೆಯಂತೆ ಮುಸುಱಿದ ಮುಂಜಿಂ
ನರೆಯುಂ [3]ಪೊತ್ತವೊಲಿ[3]ರ್ದುವು
ನಿರವಸ್ಥಿತದಶನಘನಗುಹಾಮುಖತತಿಗಳ್ ೨೨

(ಲೀಲಾವತಿ, ೯೬–೨೪.)

ಬಲಮಂ ಪಾದರಿ ಹಾಲೆ ನುಗ್ಗೆ ಸಿರಿಸಂ ಮಾಸೋವಿಳಾಸಳ್ಳೆ ಬೊ
ಬ್ಬುಲಿ [4][ತಕ್ಕೆ][4]ಲ್ತರು ಕಾಸು ನೆಲ್ಲಿ ಕಡವೀಚಿಲ್ ಮಾರುತುಂಬುರ್ಜೆಳ

[1] ನಿಂ (ಅಕ) [2] ಲಿ (ಖ) [3] ಪೋಲ್ತಣವಿ (ಕ) [4] ತೊಲ್ಕಿಲ್ (ಬ).

ಲ್ಪಲಸಂ ಬಾೞೆ ಕಱುಂಕೆ ಕಲ್ಜೊಡರಿ ಬಿಲ್ಪಲ್ಲತ್ತಿ ಪುಳ್ಳುತ್ತ್ರಪಂ
ಕೊಲೆ ಕಾೞೆ ತ್ರಣಸಿಂಗಳಂ ಕೊಸಗುಂ ಗೇರ್ ಕಕ್ಕೆ ಬಿದಿರ್ಕಮ್ರ್ಮರಂ ? ೨೩

ಎಲವದ [1]ಬೇಲ[1] ಚೆನ್ನಗೆಯ ಹೊನ್ನೆಯ ಕಮ್ರ್ಮರದಾರ ಗೇರ ನೇ
ಱಿಲ ಸಿರಿತಾಳೆ ಯಿಂಗುಳದ [2]ನಿಂಬದಶೋಕೆಯ ಗೋಣಿಯಾಲದಿ[2]
ಚಿಲ ಕರಿಬೇವಿನಂಬಟೆಯ [3]ತಂಡಸಿನಾಸಿನ ತುಂಬುರೆಕ್ಕೆ[3] ಬೊ
ಬ್ಬುಲಿಯರನೇಱಿಲಂಕೊಲೆಯ ಸೆಳ್ಳ ತಮಾಳದ ಪಾರಿವಾಳದಿಂ ೨೪

(ಲೀಲಾವತಿ, ೬—೨೬.)

ತದುಕಿನ ತಾಳ ತೆಂಗಿನ ತಮಾಲದ ತುಂಬುರ ಚಿಲ್ಲ ಬೆಲ್ಲವ
ತ್ತದ ಬಿಳಿಲತ್ತಿಯಿಪ್ಪೆಯ ಮರಂಗಳ ಕೊಂಬುಗಳಂಬರಂಬರಂ
ಪುದಿದು ಪೊದಱ್ದು ಸುರ್ಪಡರೆ ಪರ್ವಿರೆ ಕಾರಿರುಳೋಳಿ ಕೊಂಬುಗೊಂ
ಡುದೆನೆ ಕಱಂಗಿ ಕಱ್ತಲಿಸುತಿ[4]ರ್ದು[4]ದು ಕಾನನಮೆತ್ತ ನೋೞ್ಪೊಡಂ ೨೫

(ಲೀಲಾವತಿ, ೬—೨೭.)

ಕಡಸಿಗೆ ಕಾ[5]ಗೆ[5]ದೊಂಡೆ ಕಹಿದೊಂಡೆ ಕವುಂಗಿನಿ ಹಾಲೆಯೋಲೆ ದಾಂ
ಗುಡಿಯುಗುರ್ವೇರಿಯಿಶ್ವರಿ ಸುಗಂಧಿ ಕುರುಂಟಿಗೆ ಮೊಲ್ಲೆ ಬಿಂಬ ಮಾ
ರುಡ [6]ಮದದಾ[6]ನೆ [7]ಸುರ್ಚುರಿಕೆ[7] ಕಬ್ಬಳಿ ಹಾವು[8]ಸವುಂತೆ[8] ಸೋರೆ ತ
ಳ್ತಡರ್ದುವು ಬಳ್ಳಿವಳ್ಳಿ ಬನದೊಳ್ ಸಲೆ ಕಱ್ತಲೆಯಿರ್ಕೆಯೆಂಬಿನಂ ೨೬

ಅಲ್ಲಿ ಮರವಾಯ್ದು ಕೊರ್ವಿದ
ಪುಲ್ಲಿಂ ಪೆರ್ಮರನಡರ್ದು ಪರ್ಬಿದ ನಾನಾ
ಬಳ್ಳಿಗಳಿಂ ಕಱ್ತಲೆ ತನ
ಗಲ್ಲದೆ ಮಾರ್ಮಲೆವುದಿಂದುಗಂ ದಿನಪಂಗಂ ೨೭

(ಲೀಲಾವತಿ, ೬—೨೫.)

ತಲೆವಣಿಯ ಫಣಿಗಳಂ ಸುರಿ
ಮೊಲದಡಗಂ ಪೊತ್ತ ಬೇಡರುಂ ಮರಗಳ ಕ
ಱ್ತಲೆ ತಲೆ[9]ಮುಟ್ಟಿ[9]ಡಿದಿರೆ ಮುಂ
ದಲೆಯೊಳ್ ಸೊಡರಿಟ್ಟು ನಡೆವ ತೆಱದಿಂ ನಡೆವರ್ ೨೮

(ಲೀಲಾವತಿ, ೬—೩೦.)

---

[1] ಚಿಲ್ಲ (ಏ) [2] ನೆಲ್ಲಿಯ ನೀವಹಸೊಲೆಯಾಲದಿಂ (ಅ) [3] ತಾರೆಯ ತಂಡಸಿನಾಸಿನಾನೆ (ಅ) [4] ರ್ಪು (ಕ) [5] ಡ (ಕ) [6] ಮಮದಾ (ಕ) [7] ಸುಬ್ಬುನರೆ (ಏ) [8] ಮೆಕ್ಕೆ (ತಏ) [9] ಮುದ್ದಿ (ಕ).

ಕಱುಕೆ ಮರಗಱುಕೆ ಕವಲುಂ
ಗಱುಕೆ ಕವಲ್ಗೊಟ್ಟ ಹಂಚಿ ತವತಲೆ ಸೇಡಂ
ಕಿಱುಮಾ[1]ಲೆ[1] ನೂಲೆ [2]ಕಿಸುಕುರಿ[2]
ನೆಱೆದೀ ಚಿಕ್ಕಣಿಕೆ ಮಾನಿನಿ ಕಸಕೆ [3]ಕಲ್ವಲ್[3] ೨೯

ಅದಱಲ್ಲಿ ಮೂಷೆಯಿಟ್ಟೆಱ
ಗಿದ ತೆಱದಿಂ ಸೊಕ್ಕಿದೆಕ್ಕಲಂ ದಾಡೆಯಿನೆ
ತ್ತಿದ ಬಿದಿರ [4]ಸುರ್ವಿನೊಳ್ ತೋ
ರ್ಪುದಲ್ಲಿ[4] ಗೀಜಗನ ಗೂಡಿನಂತಿನಬಿಂಬಂ ೩೦

ಲೋಲಶ್ಮಶ್ರುಮುಖಂ ತೆಱಂಬೊಳೆವಿನಂ ಗಾಹಿಂಗೆ ಬೀೞ್ವನ್ನಮಾ
ಭೀಳಾಲೋಕವೆ ಸಾರ್ದು ಪಲ್ಮೊಱೆದು ಕೋಪಾಟೋಪದಿಂ ಚೆಚ್ಚರಂ
ನೀಳಾಲಂಘನದಿಂದೆ ಬಪ್ಪೆರೞೆಯಂ ಪೊಯ್ದೆತ್ತಿ ಸೀೞ್ದೆತ್ತಿ ಶಾ
ರ್ದೂಲಂಗಳ್ ಕೆಲಶೈಲದೊಳ್ ಸೊಗಯಿಕುಂ ಶಾರ್ದೂಲವಿಕ್ರೀಡಿತಂ ೩೧

ಚಲವಾಲಂ ಸ್ಥೂಲಗಾತ್ರಂ ವಿ[5]ಕೃ[5]ತವದನನಾಭೀಳರಕ್ತೇಕ್ಷಣಂ ಪೆ [ಪಾ
ರ್ಬುಲಿ [6]ತಾಮುರ್ಬಿಟ್ಟಾದುದಂ[6] ಸಂಕಟವ ಸರಣಿಯೊಳ್ ಕಂಡು [7]ಬಲ್ವಂದಿಯಂ
ಯುಲೊಡಂ ಸ್ಕಂಧಾಗ್ರದಿಂದಂ ಕಡಿದೊಡಕುಗಳೊಳ್[7]ಕೂರುಗುರ್ಕೊಯ್ಯೆನೊಂದಾ
ಪುಲಿಯಂ ಪೋೞ್ದಂತೆ ಪೊಯ್ದೆತ್ತಿದುದು ಸರಿಸದಿಂ ಕ್ರೋಡನಂತೊಂದು ಕೋಡೊಳ್

ಮಿಱುಗುವ ದಾಡೆಯಿಂದಣೆದು ಪೆರ್ದರಿಯಂ ಕರದಿಂದಮೆತ್ತುತುಂ
ತುಱುತುಱು ತಿಂಬ ಕಂದರಮ[8]ನೊತ್ತರಗೊಂಡು[8] ಮಹಾಮಹೀಜದೊಳ್
ತಱತಱನಾಗಿ ಮಾಱೊರಸುತುಂ ಮಲೆಯುತ್ತೊಲೆಯುತ್ತಮಲ್ಲಿ ಕೈ
ಪಱೆದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು ಸೂಕರಂ ೩೨

(ಶೂದ್ರಕಂ—ಕಾವ್ಯಸಾರಂ, ೧೧೧೨.)

ಘನಕೋಪಾಟೋಪದಿಂದಂ ಕುಲಕುಧರಮಹಾಶೃಂಗಮಂ ಕೋಡ ಕೊಪ್ಪಿಂ
ತೊನೆದೀಡಾಡುತ್ತೆ ಬಪ್ಪ ದ್ವಿರದಪತಿಯನಾತ್ಮೋಪದೇಶಂಗಳಿಂ ಭೋಂ
ಕನೆ ನೋಡುತ್ತೆಯ್ದೆ ಜಿಹ್ನಂ ಬಿಡದೆ ಸಲವಿನೊಳ್ಗುಂಡಿನುದ್ದಂಡದಿಂ ಕೆ
ಮ್ಮನೆ ಹೋರುತ್ತುಂ ಮದಾಂಧಂ ನಡೆದುದಡವಿಯೊಳ್ ದೀರ್ಘದೇಹಂ ವರಾಹಂ

[1] ರೆ (ಕ) [2] ಕೇಸುರಿ (ಖ) [3] ಕವಲ್ವಲ್ (ಕ) [4] ಮರದ ಸುರ್ವಿನ ಪೊಡಱುನ (ಕ.ಬ) [5] ವೃ (ಖ) [6] ತಾಂ ಮುಂದಾದುದಂ (ಕ) [7] ಮೆಲ್ವಾಯ ಕೋಲಂ ಪುಲಿಯುವಾಯುಲ್ಕೊಡಂ ತಾಂ ನಿಜಗಳದೆಡೆಯೊಳ್ (ಕ) [8] ನಿತ್ತರಗೊಂಡ (ಕ).

ಉರಿ ತೀಡುತ್ತಿರ್ದ ಕಣ್ಬೇಡೆಳವೆಱೆಯೊಗೆದಂತಿರ್ದ ಕೂರ್ದಾಡೆ ವೈವೆ
ತ್ತಿರೆ ಸಂಧ್ಯಾಕಾಲದಾಕಾರಮನನುಕರಿಸುತ್ತೊಪ್ಪೆ ತನ್ನೊಂದು ಕಾಯ್ಪಿಂ
ದರಿಯಂ ಕೋದೆತ್ತಿ ಕೋಡೊಳ್ ತಳರ್ದು ಬಿಡದೆ ಸೊಕ್ಕಿರ್ದ ಜೆನ್ನೊಂದೞಿಂ ದಿ
ಕ್ಕರಿ ಕೈಬಿಟ್ಟಿರ್ದುದೆಂಬಂತೆಸೆದುದಸದಳಂ ದೀರ್ಘದೇಹಂ ವರಾಹ * ೩೫

ವಿಪುಳಸ್ಕಂಧೋರುಭಾರೋಲ್ಲಸಿತಗತಿರತಂ ಭೀಕರಾರಣ್ಯಸಂಚಾ
ರಪದಶ್ರಾಂತಂ ಬೃಹತ್ಕರ್ದಮಿತ ತನು ಕವು[1]ರ್ವ್ವಳ್ಳಿ[1] ಕಂದಾವಳೀಲೋ
ಲುಪಸುದ್ಯದ್ಘೋರಘೋಣಾವಿವರ ಘುರುಘುರುಸ್ಫಾರಪಾತಾಭಿಘಾತ
ಸ್ಫುಪುಟಾಂತಂ ನಿಂದು ಕೂಲಂ ನಡೆದುದು ಬಲವದ್ದೀರ್ಘದೇಹಂ ವರಾಹಂ * ೩೬

ನೆಱೆದಿರೆ ಕೊಬ್ಬಿ ಸಂದೞಿಯಬಾರದವೋಲ್ ಪಲವೇೞ ಮೂಷೆಯಿ
ಟ್ಟೆಱಗಿದ ಮಾೞ್ಕೆಯಿಂ ಪೞನವಿರ್ ಮೊದಲಿಂದೆ ಕೞಲ್ತು ಜೆಳ್ಳವಿರ್
ತುಱುಗಿ ನಿರಂತರಂ ಬಳಪಮಂ ತೊಡೆದಂತಿರೆ ವೈಬೆಳರ್ತ ಕಯ್
ಪೞಿದ ಗಜೇಂದ್ರಮಂ ನೆಱೆಯೆ ಪೋಲ್ತುದುವೆಕ್ಕಲನೊಂದು ತಾಣದೊಳ್ ೩೭

ನಡುವಿಂ ನಾಲ್ವಡಿ ಕೊರ್ವುವೆತ್ತ ಕೊರಲೊಳ್ ಕರ್ಬೊನ್ನ ಬಲ್ಲೂಸಿಗಳ್
ನಡೆ ಬೊಟ್ಟಿಟ್ಟವೊಲುರ್ಬೆ ರೋಮನಿಕರಂ ಕಂಕಾಳಮಂ ರಕ್ಕಸಂ
ಕಡೆವಾಯೊಳ್ ಕುಡಿದೋರ್ವಿನಂ ಮಡಗಿದೊಲ್ ದಂಷ್ಟ್ರಾಂಕುರಂ ತೋೞ ಕಣ್
ಕಿಡಿಯಂ ಸಾಲಿಡೆ ಹಂದಿ ಹಿಂಡೊಡೆದು ಗಂಡಂ ಬೀೞ ಪೋಯ್ತೆಕ್ಕಲಂ ೩೮

ತುದಿಕೋಡೊಳ್ ವೇಣುಜಾಲಂಗಳ ಹೊದಱನಡರ್ದೆತ್ತುತುಂ ಭದ್ರ[2]ಮುಸ್ತಾ
ದಿ ಧರೋತ್ತಿಷ್ಠ [2][ತ್ಸ] ಕಂದಂಗಳನೆ ಕಬಳಿಸುತ್ತುಂ ತಡಂ ಮೆಟ್ಟುತುಂ ಬೆ
ಟ್ಟದ ತೀಕ್ಷ್ಣಗ್ರಾವದೊಳ್ [3]ನೀರಡಸಿ[3] ಬಿಡದೆ ನೀರ್ದಾಣಮಂ ನೋಡುತುಂ ಕಂ
ಠದ ಬಿ[4]ಣ್ಪಿಂ[4] ಜೊಂಪಿಸುತ್ತುಂ ನಡೆದುದಡವಿಯೊಳ್ ದೀರ್ಘದೇಹಂ ವರಾಹಂ ೩೯

ಬರಿಗಂಡಂ ಪಿಣಿಲ್ಗೇಱ ರೋಮಮುಡಿದಿರ್ಬೆನ್ನಾಗೆ ಮುಂಗಾಲಗ
ಲ್ತಿರೆ ಬಿರ್ಕುರ್ವೆ ಮೊಗಂ ಕರಂ ಪೆಗಲ ಬಣ್ಪಿಂ ಜೋ[5]ಲ್[5] ಬಾಲಂ ಮುೞುಂ
ಕಿರೆ ಬಂಬಲ್ಗಡಿವಂ ಪೊದೞ್ದಗಸೆವೂಗೊಂಬೊಪ್ಪೆ ಕೋೞ್ಕಟ್ಟಿ ಪೆ
ರ್ನೊರೆ ಸೂಸುತ್ತಿರೆ ಭೀಕರಂ ಸೊಗಯಿಸಿತ್ತುತ್ಕೇಕರಂ ಸೂಕರಂ ೪೦

(ಚಂದ್ರಪ್ರಭಪುರಾಣಂ, ೫—೬೦.)

---

* ಈ ಪದ್ಯಗಳೆರಡೂ (ಕ) ಪ್ರತಿಯಲ್ಲಿಲ್ಲ [1] ರ್ವೋೞ (ಕಖ) [2] ಮುಸ್ತಾದಿದು ರಾತೊಲ್‌ಕ್ಲಿಷ್ಟ (ಕ) [3] ತಿನ್ನೊರಸಿ (ಅಕ) [4] ಳ್ಪಿಂ (ಕ) [5] ಲ್ವ (ಅ).

ಗಿರಿತಟದೊಳ್ ಚರಿಯಿಪ ಕಿ
ನ್ನರರಂ ನಡೆ ಪುಯ್ಯಲೆಯ್ದುವವರವರ ಮದಂ
ಸುರಿತರೆ ಕಾಟ್ಕೋಣಂಗಳ್
ತರಳತರಶ್ವಸಿತ ವಿಲುಳಿತಘ್ರಾಣಂಗಳ್ ೪೧

ಕೋಣಂಗಳ್ ಘುರುಘುರಿತ
ಘ್ರಾಣಂಗಳ್ ಮಸಗಿ ಲೂನಘಟ್ಟನ ನಿಖಿಳ
ತ್ರಾಣಂಗಳ್ ಕರ್ದಮಿತ ವಿ
ಷಾಣಂಗಳ್ ದೆಸೆಗೆ ಮಸಗಿ ಕೊಣಕಿಡುತಿರ್ದುಂ ೪೨

ಪಿರಿದುಂ ದಾನಾಂಧಮೊಂದು ಸ್ಫಟಿಕಮಯ ಶಿಲಾಭ್ಯಂತರಾತ್ಮೀಯರೂಪಂ
ಕರಿಗೆತ್ತೆಯ್ತಂದು ಪಾಯಲ್ ಮುಱಿಯೆ ರದನಯುಗ್ಮಂಗಳಂತಂತೆ ನೋಡು
ತ್ತಿರೆ ಕಣ್ಣಂ ಮುಚ್ಚಿ ತದ್ರೂಪಮನೆ ಕರಿಣಿಗೆತ್ತಾಡುತಾತ್ಮೀಯರೂಪಂ
ಕರಮಂ ಮೇಲಿಕ್ಕಿ ನಿಂದಿರ್ದುದು ವಿಪುಳಕುಭೃತ್ಕುಂಜದೊಳ್ ಕುಂಜರೇಂದ್ರಂ ೪೩

ಬಿದುವೋ ಕೂಟಮೊ ಕರ್ಣತಾಳಮೊ ಪತತ್ರಕ್ಷೇಪಮೋ ನಿರ್ಗಲ
ನ್ಮದಮೋ ನಿರ್ಝರಮೋ ಲಲಾಟಮೊ ಶಿಲಾವಿಸ್ತಾರಮೋ ಕಣ್ಣ ಕೆಂ
ಪೊ ದವಜ್ವಾಲೆಯೊ ಮೆಯ್ಯ ಕರ್ಪೊ ಕರಿಕೋ ಪೇರಾನೆಯೋ ವಜ್ರಿಗೊ
ಡ್ಡಿದ ನೀಲಾದ್ರಿಯೊ ಪೇೞ್ದೆಂಬಿನಮುಗುರ್ವಾದತ್ತು ಮತ್ತೊಂದಿಭಂ ೪೪

(ಜಗನ್ನಾಥವಿಜಯಂ, ೧೬-೮.)

ಸೊವಡಿಂಗೇವಯ್ಸಿ ಪುಲ್ವಟ್ಟೆಯ ತಿವಳಿಯನಾರಯ್ದು ಘರ್ಮದ್ರವಂ ಮೆಯ್
ನವಿರುಂ ಮೆಯ್ವೆರ್ಚೆ ಕಣ್ಬೇಡುರಿಯನುಗುಳೆ ಕಣ್ಮುಟ್ಟೆನೊಳ್ ಕಂಡು ಕಾಯ್ಪಿಂ
ಜವದಿಂ ಬೆಂಕೊಂಡು ಕೋಡೇಱಿನ ಮಸಕಮುಗುರ್ವಾಗೆ ಕಾಡಾನೆ[1]ವಿಂಡಂ[1]
ತವೆ ಕೊಂದುಂ ತನ್ನ ಕೋಪಂ ತವದಿರೆ ಮರವಾಯ್ದತ್ತು ಮತ್ತದ್ವಿಪೇಂದ್ರಂ ೪೫

(ಮಲ್ಲಿನಾಥಪುರಾಣಂ ೧೦-೯೦.)

ಸೊವ[2]ಡಿಂ ಸೊರ್ಕಿ[3]ಸುಕುಂ ಕರೇಣುಕುಳಮಂ ಸಾ[3]ದಾರ್ದುರ್[3] ಸಾಮೋದಪ
ಲ್ಲವಮಂ ಮೇಯುತೆ ಕೀಂಬ ತುಂಬಿಗಳನುದ್ಯದ್ಗಲ್ಲದಿಂದಗ್ರಪ
ಲ್ಲವದೊಳ್ ಸೋವುತೆ ಸೋರ್ವ ದಾನಜಲದಿಂದಂ ಸಲ್ಲಕೀಕಾನನೋ
ದ್ಭವಮಂ ಮಾಡುತುಮಾಡುತಿರ್ದುವಗದೊಳ್ ಕೋಡಿಟ್ಟು ಕಾಡಾನೆಗಳ್ ೪೬

(ಲೀಲಾವತಿ, ೮-೩.)

---

[1] ಯೊಂದಂ (ಅ) [2] ಡಂ ಸೊಂಕಿ (ಕ) ಡಂ ಸೊಂಪಿ (ಖ) [3] ದ್ರಾರ್ದ್ರ (ಕ).

ಬೆದಱಿ ಮನಂ ವನಸ್ಥಳದೊಳೊಂದಿಭಮಿರ್ದುದು ಮೂರ್ಧಪಿಂಡಮ
ಲ್ಲದು ಶಿಖರಸ್ಥಳಂ ನಿಟಿಲಮಲ್ಲದು ಪಾಸಱಿ ಕರ್ಣತಾಳಮ
ಲ್ಲದು [1]ಚಳಪಕ್ಷ[1]ಸಂಹತಿ ಮದಪ್ಲವಮಲ್ಲದು ನಿರ್ಝರಪ್ಲವಂ
ಮದಗಜಮಲ್ಲದಿಂದ್ರನೊಳಿದಿರ್ಚಿದ ನೀಲನಗೇಂದ್ರಮೆಂಬಿನಂ ೪೭

(ಪಂಪರಾಮಾಯಣಂ, ೧೦–೧೫೯, ಮು. ಪು, ೧೦-೮೮.)

ಒಡಗೊಂಡೊಯ್ದೊಂದು ಪದ್ಮಾಕರದಿಮುಜಲಮಂ ಕೊಂಡು ಮೇಲೊಟ್ಟೆ[2]ತಣ್ಪಂ[2]
ಪಡೆದಂಭೋಜಾತಪತ್ರಂಗಳ ಕೊಡೆವಿಡಿದಲ್ಲಿಂ ನಿಕುಂಜಸ್ಥಳಕ್ಕ
ಯ್ದುಡಿಡಿತ್ತುತ್ಪಲ್ಲವಮಂ ಸಲ್ಲಕಿಯೆಳದಳಿರಂ ಪೇಚಕಸ್ಥಾನಮಂ ಕೈ
ದುಡುಕುತ್ತಾಘ್ರಾಣಿಸುತ್ತುಂ ನಸೆಗನುವಶಮಾರ್ಗಿರ್ದುದಂದೊಂದಿಭೇಂದ್ರಂ ೪೮

(ಜಗನ್ನಾಥವಿಜಯಂ, ೧೬–೧೦.)

ಕುಡುತುಂ ಚಂದನಸಲ್ಲಕೀ ಕಬಳಮಂ ತತ್ಪಲ್ಲವಾನೀಕದಿಂ
ತೊಡೆಯುತ್ತುಂ ಮೊಗಮಂ ನೆಟಲ್ಪಿಡಿಯುತುಂ ನಿಂದಲ್ಕಿಱಿಂ ನೋಂಕುತುಂ
ಕಡೆಗಣ್ಣಿಂ ನಸುನೋಡುತುಂ ತುಡುಕುತುಂ ಚಿತ್ರೋಚ್ಛ್ವಸಸ್ಥಾನಮಂ
ಪಿಡಿಯಂ ಕಾದಪುದಂದಮಾದ ನಸೆಯೊಳ್ ಕೂಡಿತ್ತು ಮತ್ತೊಂದಿಭಂ ೪೯

ಪಸಿದೊಡೆ ಸಲ್ಲಕೀಕಿಸಲಯಂಗಳನೊಯ್ಯನೆ ನೀಡಿ [3]ನೆಯ್ಯ ತೀನ್
ಮಸೆದೊಡೆ[3] ಕೋಡೊಳೊಟ್ಟೊರಸಿ ನೀರ್ಗೆಳಸಿರ್ದೊಡೆ ತಂದು ನೀರನೂ
ಡಿಸಿ ನಸೆಯಿಚ್ಚೆಯಾದೊಡೊಡಗೂಡಿ ಬಟಲ್ದೊಡೆ ಕರ್ಣ ತಾಳಮಂ
ಪಸರಿಸಿ ತನ್ನ ಕೈಪಿಡಿಯವೊಲ್ ಪಿಡಿಯಂ ಪಿಡಿದಿರ್ದುದೊಂದಿಭಂ ೫೦

(ಚಂದ್ರಪ್ರಭಪುರಾಣಂ, ೫-೬೪.)

ಕೊಳದೊಳ್ ಬಾಲಮೃಣಾಲಿನೀ ಕಬಳಮಂ [4]ಕೀಱಿ[4]ತ್ತು ಹಸ್ತಾಗ್ರದಿಂ
ತಿಳಿನೀರಂ ತೆಗೆದೆತ್ತಿ ಕೂಡಿಸಿ ಪರಿಮ್ಲಾನಾಸ್ಯದೊಳ್ ಶೀಕರಂ
ಗಳನೀಡಾಡಿ ಪೊದಳ್ದ ಪಚ್ಚೆಗೊಡೆಯೆಂಬಂತೆತ್ತಿ ಪಂಕೇಜಿನೀ
ದಳಮಂ ಬಾಳಕರೇಣುವಂ ಬಯಕೆಯೊಳ್ ಕೊಂಡಾಡುತಿರ್ದತ್ತಿಭಂ ೫೧

(ಲೀಲಾವತಿ, ೮–೪.)

ಮೊರೆದೊಡವಾಯ್ದ ನಿರ್ಝರದ ನಾದಮುಮಂ ಮದಸೌರಭಕ್ಕೆ ತ
ತ್ಕರಟತಟಾಂತದೊಳ್ ಸುಟಿವ ತುಂಬಿಯ ನಾದಮುಮಂ ಪುಳಿಂದಸೌಂ
ದರಿಯರ ಗೀತನಾದಮುಮನಾಲಿಸ ಸೋಲ್ತು ನೆಱೆಲ್ದೊಜಲ್ದ ಸುಂ
ದರಗಿರಿಕಂದರೋದರದೊಳಿರ್ದುದಮೊಂದು ಮದಾಂಧಸಿಂಧುರಂ ೫೨

---

1 ಪರತ್ರ (ಖ) 2 ತಾಪಂ (ಕ) 3 ನೀಣಿತಮ್ಮಸಪಕ್ಕೆ (ಖ) 4 ಕೊಟ್ಟೆ (ಖ).

ನವನೀರೇಜಮನೊಟ್ಟಿಕೊಂಡು [1]ವಿಕಟೋತ್ಕರ್ಷ[1]ಸ್ರವ[2]ಚ್ಚಂ[2]ದನ
ಪ್ರವದಿಂ ನಾಂದು ಕರಾಂಬುಶೀಕರದೆ ತನ್ನಂ ತೊಯ್ದು ಕರ್ಪೂರರೇ
ಣುವನಾಂತೊಯ್ಯನೆ ನೆಮ್ಮಿ ಸಾಲತರುವಂ [3]ಶ್ವಾಸಾನಿಳೋತ್‌ಪ್ಲುಷ್ಟಪ[3]
ಲ್ಲವದಿಂ ಬೀಸಿಕೊಳುತ್ತುಮಿರ್ದುದು ವಿಯೋಗಮ್ಲಾನವನ್ಯದ್ವಿಪಂ ೫೩

(ಲೀಲಾವತಿ, ೮-೮.)

ತುಂಬಿಗುರುಳಲೆಯೆ ಕೈಯಲ
ಗೆಂಬಿನಮಲರ್ಗೊಂಬು ಪೊಳೆಯೆ ಪಲ್ಗಳ ಛವಿ ಮಿಂ
ಚಂ ಬೀಱೆ ಬೇಱೆ ಸಮದ
ಸ್ತಂಬೇರಮಮೆಸೆದುದೊಂದು ವೈಲಾರನವೊಲ್ ೫೪

(ಲೀಲಾವತಿ, ೮-೪೯.)

ಪ್ರಸವದ್ಗ[4]ರ್ಭೋತ್ಥ[4]ದಿಂ ನೇರ್ಪಡುವ ಪಿಡಿಯನಬ್ಜಾಕರಕ್ಕೊಯ್ದು ನೀರೂ
ಡಿಸಿ ಮೆಯ್ಯಂ ಕರ್ಚಿ ಮೆಲ್ಪಿಂ ಪಿಡಿದು ಬಿಸಲತಾಗ್ರಂಗಳಂ [5]ಸೃಕ್ವ[5]ದೊಳ್ ಸಂ
ಧಿಸಿ ಕೊಟ್ಟಂಭೋಜಪತ್ರೌಘದೆ ಕೊಡೆವಿಡಿದಾತ್ಮಾಂಗಮಂ ಕೂರ್ಮೆಯಿಂ ನೆ
ಮ್ಮಿಸಿ ತತ್ಕರ್ಣಾಗ್ರದಿಂ ಬೀಸಿದುದುಮುಪಸಮಾಯತ್ತ ಮತ್ತೊಂದಿಭೇಂದ್ರಂ

ಪರಿಪರಿದು ನಲಿದು ಮೊಲೆಗಳ್
ತೊರೆದಿರೆ ತಣಿಯುಂಡು ಪಾಲ್ಗಳಂ ಪುಷ್ಕರದಿಂ
ಬರೆ ತೆಗೆದು ಮುರಿದು ನೋಡುವ
ಕರಿಣಿಯ ಮೆಯ್ಯೊಳ್ ತುಳುಂಕಿತೊಂದಿಭಕಳಭಂ ೫೬

(ಲೀಲಾವತಿ, ೮-೧೩.)

ಪಿಡಿಯೆ ಮೆಲಲ್ ಪಿಡಿ ಸೃಕ್ವದೊ
ಳಡಸಿದ ಪಲ್ಲವಕೆ ಪಲ್ಲಮುಱೆ ನಿಳ್ಕುವುದುಂ
ಕಡೆಗಣ್ಣೊಳ್ ಕಂಡೊಂದಿಭ
ಮುಡಿದಿತ್ತುದು ಸಾರ್ದ್ರಸಲ್ಲಕೀಪಲ್ಲವಮಂ ೫೭

(ಕಾವ್ಯಾವಲೋಕನಂ, ೧೪೯.)

ಹರಿ ಭೇದಂಗೆಯ್ಯೆ ಬಿರ್ದೋಪನ ಪಡಿಮೊಗದೊಳ್ ತುಂತುಱಿಂ [6]ತೂಱೆ ಸುಯ್ಯಂ[6]
ಕರದಿಂದಾರಯ್ದು ಬಾಯೊಳ್ ತದುಕಿನ ತಳಿರಂ ತೂಂತಿ ರಕ್ತಾರ್ದ್ರಮುಕ್ತೋ
ತ್ಕರಮಂ ಮತ್ತಾಯ್ದು ಪುಣ್ಣೆತ್ತಿಯೊಳೆ ಹುದುಗಿ ಬಾಷ್ಪಪ್ಲುತಾಲೋಕೆ ಶೋಕಾ
ತುರೆ ದುಃಖೋದ್ರೇಕದಿಂದಂ ಬಸೆ ಪರವಶೆ ಬೀಸಿತ್ತು ಕರ್ಣಾಗ್ರದಿಂದಂ ೫೮

(ಲೀಲಾವತಿ, ೮-೨೦.)

---

[1] ಕರೆವಾಪಪ್ರ (ಕ) ಕರಟೋಪಪ್ರ (ಖ) [2] ಸ್ವಂ (ಖ) [3] ಶಾಸಾನಿಲಂ ಸೂಸಿ (ಖ) [4] ಭಾರ್ಥ (ಕ) [5] ಶ್ರೋತ್ರ (ಕ) [6] ಕೋಟಿಸೂರ್ಯಂ (ಖ).

ಪಿಡಿಮೊಲೆಯೂಡಿ ಪಲ್ಲಮುಱಿಯಂ ಕರಪುಷ್ಕರದಿಂ ಕಪೋಲಮಂ
ತೊಡೆದು ಲವಂಗಪಲ್ಲವಮನಿತ್ತು ತಮಾಲದ ಮೂಲವಿಂಡಿಯೊ
ಳ್ಕೊಡುಕಿಸಿ ನೀಳ್ದುರೋದಕಮನೂಡಿಸಿ ಚಿತ್ತದೊಳಾದ ಮೋಹಮ
ಚ್ಚಿಡಿದಿರೆ ಬಿಚ್ಚತಂ ಕಱಿಪಲಾಱದೆ ನಿಂದುದದೊಂದು ತಾಣದೊಳ್ ೫೯

ಒಮ್ಮೆ ವನಸ್ಥಳೀಕಮಲಪಾಂಸುವನಿಂಬೆನೆ ಮೆಯ್ಯೊ[1]ಳೊಟ್ಟಿ[1]ಕೊಂ
ಡೊಮ್ಮೆ ಕರಾಗ್ರಮಂ ನೆಗಪಿ ಸಂಭ್ರಮದಿಂ ಪರಿದೊರ್ಮೆ ಶೈಲಸಿಂ
ಧೂರ್ಮಿಗೆ ಬೆಚ್ಚಿ ತಾ[2]ಯ್ವಿಡಿ[2]ಯ ಸೋಂಕಿಲನೊಯ್ಯನೆ ಸೋಂಕಿ ನಿಲ್ದು ಮು
ಯ್ಯೊಮ್ಮೆಯುಮೊಪ್ಪಿ ತೋಱಿ[3] ಕಳಭವ್ರಜಮಿರ್ದುದದೊಂದು ತಾಣದೊಳ್ ೬೦

(ಜಗನ್ನಾಥ ವಿಜಯಂ, ೧೬-೧೦.)

ಉಡಿಯೆ ಕರಿ ಚಂದನದ ತಳಿ
ಗರ್ಡಿ[3]ಯಿಂದಂ ನೆಲಕೆ[3] ಬಿಲ್ದು ಪರಿವೆಳವಾವಂ
ಪಿಡಿಯೆ ಪಿಡಿ ಪಿಡಿಯ ಪೋತಂ
[4]ಪಿಡಿದೋಡಿದುದಂದು ಫೂತ್ಕೃತಕ್ಕಗಿದಗದೊಳ್[4] ೬೧

(ಲೀಲಾವತಿ, ೮-೧೫).

ಮಿಳಿರೆ ಕಿವಿಗಳ್ ತಮಾಲದ
ತಳಿರಂತಿರೆ ಪೊಳೆ[5]ವ[5] ಪವಳದಂತಿರೆ ಬಾಯ್ ಕಯ್
ಗಳನ್ನೆತ್ತಿ [6]ಪಿಡಿ[6]ದು ಪೋರ್ದುವು
ಕಳಭಂಗಳ್ ನಲಿದು ನೋಡುತಿರೆ ತಾಯ್ವಿಡಿಗಳ್ ೬೨

(ಲೀಲಾವತಿ, ೮-೧೭.)

ರಸದಾಳಿಂಬದ ಬಿತ್ತಂ
ಬ ಶಂಕೆಯಿಂದದಱ ತಪ್ಪಲೊಳ್ ಸಿಂಗಂ ಸೀ
ಳ್ದ ಸಿಱುಂಬುಳಾಡಿದಾನೆಯ
ಪೊಸಮುತ್ತಂ ಮುಕ್ಕಿ ಚಪಳ ಕಪಿಕುಲಮುಗುಳ್ಗುಂ ೬೩

ಬಿಸಿಲೊಳರೆವಿರಿದ ಬಿದುವಿಂ
ನಸು ಕೆದಱಿದ ರಕ್ತಯುಕ್ತಮುಕ್ತಾಫಳಮಂ
ರಸದಾಳಿಂಬದ ಬಿತ್ತೆಂ
ದೊಸೆದು ಕರ್ದುಂಕವು ಶುಕಕುಲಂ ವನಗಜದಾ ೬೪

[1] ಳೋಲಿ (ಕ) [2] ಯ್ದೊಡೆ (ಕ) [3] ಯಂ ಭಯದಿಂದೆ (ಅ) [4] ಪಿಡಿದೋಡಿ ಪಿಡಿದೀಡಾಡಿದುದು ಪೂರತತ್ಕನಿರಾಗಳ್ (ಕಖ) [5] ಯೆ (ಅ) [6] ಪರಿ (ಅ).

ದರಿಗೊಳೆ ಗಂಡಶೈಲದ ತಳಂ ತವುತಂದಿರೆ ದಂತಮಧ್ಯದೊಳ್
ಜರಿದುದು ಬಿರ್ದ ತೆತ್ತಿಸಿದವೋಲಿರೆ ಹೋತದ ನೆತ್ತಿ ಸುತ್ತಲುಂ
ಪಿರಿದು ಸಮುದ್ರಮಂ ರಘುಜನೋವದೆ ಕಟ್ಟುವ ಕಾಲದಂದು ಪೊ
ಕ್ಕಿರದೆ ಗಿರೀಂದ್ರಮಂ ಬಲಿಮುಖಂ ನೆಱೆ ಪೊತ್ತವೊಲಿರ್ದುದೊಂದಿಭಂ ೬೫

ಗಗನಾಸ್ವಾದಿತ ಗಂಡಶೈಲದೆಡೆಯೊಳ್ ನಿಂತಿರ್ದುದಂತೊಂದು ಮ
ತ್ತಗಜಂ ತದ್ಘಟಬಿಂಬಮಂ ದ್ವಿಪಮೆಗೆತ್ತತ್ಯುದ್ಧತಂ ಪಾಯ್ದು ಕೂ
ರುಗುರಂ ದಾಡೆಯುಮಾವಗಂ ಮುಱಿಯೆ ಸಿಂಗಂ ಭಂಗಮಂ ಪೊತ್ತು ನೊಂ
ದುಗ[1]ರಂದೆಯ್ತರೆ[1] ನಿರ್ವಿಕಾರ ರಭಸಂ ಪೇಱಿಯುದ್ದುಗುಂ ಬನ್ನಮಂ ೬೬

ಮದಗಜಗಂಧದುದ್ದೆಸಕೆ ಭೋಂಕನೆ ಲಂಘಿಸಿ ಚಂದ್ರಕಾಂತಕೂ
ಟದ ಕೆಲದಲ್ಲಿ ನಿಂದಿಭ[2]ದುದ[2]ಗ್ರತನುಪ್ರತಿಬಿಂಬಮಂ ಮದೇ
ಭದ ತನುಗೆತ್ತು ಪಾಯ್ದು ಶಿಲೆಯಂ ಮೃತಮಾದುದಿಭದ್ವಿಷಂ ಬರ್ದು
ಕಿದುದಿಭಮಂತೆ ನಿರ್ಮಲರ ಸನ್ನಿಧಿ ಮಾಱ್ಪುದಪಾಯನಾಶಮಂ ೬೭

(ಜಗನ್ನಾಥವಿಜಯಂ, ೧೬–೨೯.)

ಉಗುವೆಂಟುಂ ಮದವೆತ್ತಿ ಕಟ್ಟೆ [3]ವಿಸರ[3]ಚ್ಚೀತ್ಕಾರಭೀರುಸ್ವ[4]ನಂ[4]
ಮಿಗೆ ಬಾ[5]ಯಂ[5] ಬಿಡೆ ಕಯ್ಯನಿಟ್ಟು ಸುಗಿವನ್ನಂ ಗರ್ಜಿಸುತ್ತೆಯ್ದೆ ಮು
ತ್ತುಗ[6]ಳೆತ್ತಂ ಬಿದುವಿಂ[6] ಸ್ವರೌದ್ರರಸಬಿಂದುಶ್ರೇಣಿವೋಲ್ ಸೂಸೆ ದಂ
ತಿಗಳಂ ಸೀಳ್ದು ಸಿಱುಂಬುಳಾಡಿದುದದೊಂದುತ್ಕಂಠಕಂಠೀರವಂ ೬೮

(ಜಗನ್ನಾಥವಿಜಯಂ, ೧೬–೧೨.)

ಪರಿಮೂತ್ರಂ ಭಿನ್ನಲಂಡಂ ಸುರಿವ ಮದಜಳಂ ಮೆಯ್ಯೊಳಟ್ಕಾಡೆ ಭೀತಾ
ತುರಚಿತ್ತಂ ಸುತ್ತಲುಂ ಪೆ[7]ಳ್ಪ[7]ಳಿಸೆ ನಯನಮುತ್ಕಂಪಿತಂ ಕುಂಚಿತಾಂಗಂ
ಪರಿದೇಳಾಕುಂಜಮಂ ಪೊ[8]ಕ್ಕೆ[8]ವೆಮಿಡುಕದೆ ನಿಂದಿತ್ತು ಮತ್ತೊಂದಿಭಂ ಸಾ
[9]ರ್ತರೆ ಕರ್ಣಾಭ್ಯರ್ಣಮಂ ವನ್ಯಮೃಗವಿಳಯನಿಷ್ಪಾದಕಂ[9] ಸಿಂಹನಾದಂ ೬೯

(ಮಲ್ಲಿನಾಥಪುರಾಣಂ, ೧೦–೯೨.)

ಖರನಖರಂಗಳಿಂದುಗಿದು ಕೋಪದೆ ಸೀಳ್ದು ಸಿಱುಂಬುಳಾಡೆ ಕುಂ
ಜರ[10]ದು[10]ರುಕುಂಭಮಂಡಲಮನ[11]ಲ್ಲು[11]ಗುತಂದು ಕುಳುಂಪೆಗೊಂಡ ನೆ

---

[1] ಗಂದಂದಯುರ (ಖ) [2] ಮನ (ಕಖ) [3] ವಿಲಸ (ಖ) [4] ರಂ (ಅಕ)
[5] ಯೊಳ್ (ಖ) [6] ಗಳಂ ತದ್ಬಿದು (ಖ) [7] ಪ್ಪ (ಖ ಬ) [8] ತ್ತೆ (ಕ ಖ) [9] ದಿಶರಿಯುಂ
ಕರ್ಣಾವತಾರಂ ಮೃಗಪತಿ ವಿಲಸಹ್ಲಾದಕಂ (ಕ ಖ ಬ) [10] ಗು (ಅ) [11] ಲ್ಲೊ (ಖ).

ತ್ತರ ಹೊಸವಜ್ಜೆಯೊಳ್ ಕೆದಱಿ ಕಣ್ಗೆಸೆದಿರ್ದವು ರಕ್ತಸಿಕ್ತಕೇ
ಸರ[1]ಪರಿಶೋಭಿ[1] ಕೇಸರಿಯ ಬೀರದ ಬಿತ್ತುಗಳಂತೆ ಮುತ್ತುಗಳ್ ೭೦

(ಮಲ್ಲಿನಾಥಪುರಾಣಂ, ೧೦–೯೪.)

ಉಗಿಬಗಿಮಾಡು[2]ತ್ತೆ ಮದಾಂ
ಧಗ[2]ಜಮ[3]ನೆ[3]ಸೆದತ್ತು ರಕ್ತಕೇಸರವಿಸರಂ
ನಗಮಸ್ತಕದೊಳ್ ಸಂಧ್ಯಾಂ
ಶುಗಳಿಂ ರಂಜಿಸುವ ಚಂದ್ರನಂತೆ ಮೃಗೇಂದ್ರಂ ೭೧

(ಮಲ್ಲಿನಾಥಪುರಾಣಂ, ೧೦–೯೬.)

ಕೆದಱಿದ ಕೇಸರಂ ಕುಸಿದು ಪಿಂದೊಗೆದೊಡ್ಡಿದ ಕಂದವೇಱೆ ಕ
ಟ್ಟಿದ ಬಸಿಱೆತ್ತಿದೇಕಚರಣಂ ತೆಱೆದಾನನವಾಳ ಸುತ್ತಿಸು
ತ್ತಿದ ಕುಡಿವಾಲವೊಪ್ಪೆ ಕಿವಿಗಳ್ ಕಿಱು[4]ಪು[4]ತ್ತಿರೆ ಪಾಯ್ದು ದೇವಕೂ
ಟದ ಕಱುವಿಟ್ಟ ಕೇಸರಿವೊಲಿರ್ದುದು ಕೇಸರಿ ಕುಂಭಿಕುಂಭದೊಳ್ ೭೨

(ಲೀಲಾವತಿ, ೮–೨೧.)

ಕೊರಲೊಳ್ ತಳ್ತಗ್ಗಳಂ ತೊಂಗಲ ಪೊರಜೆವೊಲಿಂಬಾಗೆ ಬಾಲಂ ಬಳಂಕು
ತ್ತಿರೆ ಗಾತ್ರಂ ನೆತ್ತಿಯೊಳ್ ನಟ್ಟುಗುರುಗಿಯೆ ನಿಶಾತಾಂಕುಶಶ್ರೀಯಿನುದ್ಯ
ತ್ಕರಿಯಂ ಪಾಯ್ದೇಱಿ ಬಂಬಲ್ವರಿಯಿಸಿ ಗಿರಿಯೊಳ್ ಪೋರಿಸುತ್ತುಂ ಸರತ್ಕೇ
ಸರಿಕಾಸಾರಕ್ಕೆ ಕೊಂಡೊಯ್ದಪುದಿದು ಮೃಗರಾಜಂಗೆ ಪೇೞಿಂದಮಲ್ತೇ ೭೩

(ಲೀಲಾವತಿ, ೮–೨೪.)

ಹರಿ ಕರಿಯಂ ತಗುಳ್ದು ಬರೆ ಸೂಕರನಾ ಕರಿಗಂಜಿ ಪೊಕ್ಕು ಬೆಂ
ಬರಿವರಿವಂತು ಪೆರ್ಬಿದಿರನೆತ್ತಿದೊಡಂತದು ತಾಗೆ ಮೇಘಮುಂ
ಕರಿ ಮುಱಿದೊತ್ತೆ ಸೂಕರನನಾ ಕರಿಯಂ ಹರಿ ಮೆಟ್ಟೆ ಸೀಳ್ದೊಡಂ
ಸುರಿದುವು ಮೇಘಜೇಭಜ ವರಾಹಜ ವೇಣುಜ ಮೌಕ್ತಿಕವ್ರಜಂ ೭೪

ಮರೆದಿಂದಾ ಸರ್ಪನಂ ಹಸ್ತಿಯೆ ಪಿಡಿ[5]ವುದುಮಾ[5] ಸರ್ಪನಂ ಹಸ್ತಿಯಂ ಕೇ
ಸರಿ ಕೋಪಾಟೋಪದಿಂ ಪಾಯ್ದುಗಿಬಗಿವುದುಮಾ ಸರ್ಪನಂ ಹಸ್ತಿಯಂ ಕೇ
ಸರಿಯಂ ಸಿಂಹಾರಿಯೆಂಟುಂ ಪದ[6]ದೊಳೆ[6]ಱ[7]ವುದುಂ[7] ಸರ್ಪನಂ ಹಸ್ತಿಯಂ ಕೇ
ಸರಿಯಂ ಸಿಂಹಾರಿಯಂ ತುಂಡದೊಳೆ ಪಿಡಿದು ಪಾಱುತ್ತು ಭೇರುಂಡನಾಗಳ್ ೭೫

(ಜಗನ್ನಾಥವಿಜಯಂ, ೧೬–೧೪.)

---

[1] ಮೆಸೆದತ್ತು (ಖ) [2] ತ್ತು ಮುದಾತ್ತ (ಅ) [3] ದೆ (ಕಖ) [4] ಸು (ಕಖ)
[5] ದುದುವಾ (ಅ) [6] ದಿನಿ (ಅ) [7] ದುದಾ (ಅ).

ಮರೆಯನೆಡೆಗೆಯ್ದ ಪಾವಂ
ಭರಿಕಯ್ಯೊಳ್ ಸುತ್ತಿ ಪಿಡಿದ ಹಸ್ತಿಯನಂತಾ
ಕರಿರಿಪುವನೊಯ್ದ ಶರಭನ
ಶಿರಮಂ ಭೇರುಂಡ[1]ನೆತ್ತಿ[1] ಪಾಱಿತ್ತಾಗಳ್ ೭೬

ಮರೆಯಂ ಸುಂಗಿತ್ತು ಪೆರ್ಬಾವಜಗರಮನಿಭಂ ಕುತ್ತಿ ಸುತ್ತಿತ್ತು ಕೋಡೊಳ್
ಕರಿಯಂ ಪೊಯ್ದತ್ತು ಸಿಂಗಂ ಪಿಡಿದುದು ಶರಭಂ ಸಿಂಗಮಂ ಕೋಪದಿಂದಂ
ಮರೆ ಪೆರ್ಬಾವಾನೆ ಸಿಂಗಂ ಶರಭಮಿನಿತುಮಂ ಕರ್ಚಿ ಭೇರುಂಡನಂದಂ
ಬರದೊಳ್ ಪಾಱುತ್ತಿರಲ್ಕಚ್ಚರಿವಡೆ ತಲೆಯಂ ತೂಗಿದಂ ವಿಕ್ರಮಾಂಕಂ ೭೭

ತುಂಡಯುಗಂಗಳಿಂ ನೆಗಪಿಕೊಂಡೆರಡಂ [2]ಮಿಗೆ[2] ಪಾಱಿಪೋಪ ಭೇ
ರುಂಡನ ತುಂಡ[3]ದೊಂದು[3] ಶರಭಂ ಜಗುಳ್ದೊಯ್ಯನೆ ಬೀೞ[3] ಬೇಗದಿಂ
ಚಂಡಿಸಿ ಪಾಱಲೊಂದೆಱಗಲೊಂ[4]ದೆೞಲು[4]ತ್ತಿರೆ ವಕ್ತ್ರಮಾನಭೋ
ಮಂಡಲವಲ್ಲಿ ನಿಂದುದನಭೀಕ್ಷಿಸಿದಂ [5]ಕಲಿಸೋಯಿಬಲ್ಲಹಂ[5] ೭೮

(ಲೀಲಾವತಿ, ೮–೨೭).

ಒಟ್ಟೆ ಕೆಲದಂ[6]ತ[6]ಮಂ [7]ದೂ[7]
ತಟ್ಟೆದುದೆನೆ ದಿನಕರಂಗೆ ಬೆಟ್ಟದ ತಡಿಯಿಂ
ಮುಟ್ಟೆದುದಜಗರ ಮುಖದಿಂ
ಪುಟ್ಟಿದ ವಿಷವಹ್ನಿಯುಗುಟ್ದ ಕರ್ಬೊಗೆ ಮುಗಿಲಂ ೭೯

ಪವಿಯ ಮುಖಘಾತದಿಂ ಡೊ
ಣೆವೋದ ಪೞವುಣ್ಗೆ ಜಿಗುಳೆಯಂ ಬಿಟ್ಟವೊಲಿ
ಪ್ಪವುದಾರ ಗಹ್ವರಾಂತ
ರ್ನಿವಿಷ್ಟಜರದಜಗರಂಗಳಾ ಗಿರಿವರದೊಳ್ ೮೦

ಅಂಬರದೊಳ್ ಕಿನ್ನರಗೇ
ಯಂ ಬಳಯಿಸಿ ಮುದದಿನಲಸದಾಲಿಸಿ ಕಾ
ವಂಬೊಯ್ದವೆನಿಸಿ ತದ್ಗಿರಿ
ಯಂ ಬಳಸಿರ್ದಜಗರಂಗಳೇನೊಪ್ಪಿದುವೋ ೮೧

ನಗಲಕ್ಷ್ಮಿಯುಟ್ಟ ಹಳವ್ಯೆ
ಲಗೆಗಳನೊ[8]ಜ್ಜ[8]ರಮೆನಿಪ್ಪ ಮಡಿವಾಳಂಗಂ

[1] ಗರ್ಚಿ (ಖ) [2] ನೆಱೆ (ಕಖ) [3] ದಿಂದೆ (ಕ) [4] ದೆಳೆಯು (ಕಖ)
[5] ಕವಿರಾಜಕುಂಜರಂ (ಅ) [6] ಶ (ಖ) [7] ಮೂ (ಬ) [8] ಜ್ವ (ಕ).

[1][ವಗೆ]ವಱಿ[31]ಯೊಳ್ ತೆಗೆಬಿಸುಟವೊ
ಲಗತಟದೊಳ್ [2][ಪೊರಳು][2]ತಿರ್ಪುವಜಗರನಿಕರಂ ೮೨

ಪುದಿದಡ[3]ವಿಯ[3] ಕಟ್ಟಲೆ ಶೂ
ಲದೊ[4]ಳಿಕ್ಕಿದೊಡಿಱಿದು[4] ಸೋರ್ವ ತಿಂಗಳ ಪೆಣ[5]ನಂ
ದದೊಳ್[5]ದೞ್ದು ಕೆಱ[6]ಗೊಕ್ಕು
ಬೞದ[6] ನೆಯ್ಯಿಂ ಜೇನಪುಟ್ಟಿ ಪೆರ್ಮರಗಾಡೊಳ್ ೮೩
(ಲೀಲಾವತಿ, ೬—೩೧.)

ಗಿರಿಪತಿಯುಂ ಪವಿಹತಿಗಗಿ
ದಿರಿದದ ಠಾಣಾಂತರಕ್ಕೆ ನೇರಿದ ಹಲವುಂ
ಹರಿಗೆಗಳೆನಲ್ಕೆ ಶಿಲೆಯೋ
ವರಿಯೊಳ್ ಹೆಜ್ಜೇನ ಹುಟ್ಟಿ ಸೊಗಯಿಸಿ ತೋರ್ಕುಂ ೮೪

ಮೊದಲೊಳುಮಾಮಹೇಶ್ವರನೆ ಬೇಡರ ರೂಪನೆ ತಾಳ್ದಿ ಬೇಂಟೆಯಾ
ಡಿದನಿನವಂಶಜರ್ ಪಲಬರುಂ ನೃಪರಟ್ಟಿಯೊಳಂತು ಬೇಂಟೆಯಾ
ಡಿದರಮೃತಾಂಶುವಂಶತಿಲಕರ್ ಮೃಗಯಾರ್ಥಿಗಳಾಗಿ ಬೇಂಟೆಯಾ
ಡಿದರೆನೆ ದೋಷಮಿಲ್ಲಱಿಯದರ್ ಪೞಿವರ್ ಮೃಗಯಾವಿನೋದಮಂ ೮೫

ವಶಮಕ್ಕುಂ ಬಲ [7]ಲಕ್ಷ್ಯ[7]ಸಿದ್ಧಿ ನಿಬಿಡವ್ಯಾಯಾಮ ನಿರ್ಬಂಧಕ
ರ್ಕಶಮಕ್ಕುಂ ತನು ಕೋಟಿ ಮೃಗಂಗಳೞಿಪಿಂ ವಿದ್ವಿಷ್ಟಬಾಹಾಬಲಂ
ಕೃಶಮಕ್ಕುಂ ಮುನಿಭಿಸ್ತಪೋವನಮುಮಾ ಶ್ರೀರಕ್ಷೆಯಿಂದಂ ನೃಪ
ರ್ಗೆಶಮಕ್ಕುಂ ಗಡ ಬೇಂಟೆಯುಂ ಬೆಸನಮೆಂದಾರೇಳಿಪರ್ ಲೋಕದೊಳ್ ೮೬

ಕತ್ತುರಿಮಿಗಮುಂ ಪಂದಿಯ
ಮುತ್ತಂ [8]ಪೊಂಬು[8]ಲಿಯ ತೊಗಲನಾನೆಯ ಕೊಂಬಂ
[9]ಕಿತ್ತುದಸವಸದೆ ತೆಗೆತೆಗೆ
ದಿತ್ತುದುದಂ[9] ಪತಿಗೆ ಕಾಣ್ಕೆಗೊಟ್ಟಂತೆಂದರ್ ೮೭
(ಅನಂತನಾಥಪುರಾಣಂ, ೧೧—೩೮.)

ಮುತ್ತಗಜಂಗಳ ಕೋಡಂ
ಕತ್ತುರಿಮಿಗಮುಂ ಪೊದಟ್ಟಿ ಪೊಂಬುಲಿದೊಗಲಂ

---

[1] ಹೊಗುವುರಿ (ಕ) ಹೊಗವರಿ (ಖಬ) [2] ಪೊಗಳು (ಕಬ) ಬೆಳಗು (ಖ) [3] ಗದ (ಕಖ) [4] ಳಿಡಿದು (ಕಖ) [5] ದಂದದಿನಿ (ಅ) [6] ಗುರ್ಕಿದ (ಅ) [7] ಲಕ್ಷ್ಮಿ (ಖ) [8] ಪೆರ್ಬು (ಬ) [9] ಕುತ್ತಱಿಸದಡಿಸಿ ಪಿಡಿದುಗಿದೆತ್ತಿದುವಂ (ಅ) ಕಿತ್ತುದಸವಸವೆ ತೆಗೆದುಗಿದೆತ್ತಿದುದಂ (ಬ).

ಚಿತ್ತಯ್ಪುದೆಂದು ಕಾಣ್ಕೆಯು
ನಿತ್ತು ಮೊಗಂಬಡೆದು ಧರಣಿಪತಿಗಿಂತೆಂದರ್ * ೮೮

ಪೊಲನಱಿವೆಂ ನೆಲನಱಿವೆಂ
ನೆಲೆಯುಱಿವೆಂ ಮೃಗದ ಮೂಱು ವಿವರಮನಱಿವೆಂ
ಕೊಲೆಯಾಳುಮನಱಿವೆಂ ಪೇ
ೞಲದೇಂ ಬೇಂಟೆ[1]ಯದು[1] ನೋಡಲೆನ್ನೊಳೆ ಸಹಜಂ ೮೯

ಬಗೆಯಱಿದು ನಿಟ್ಟಿಸೆಂ ಪ
ಜ್ಜೆಗಳನುಗುರ್ಕೊೞಗು ತುಪ್ಪುೞಿಂಬವಱಿಂ ಪು
ಲ್ಮೃಗಮುಂ ಬೆಳ್ಮೃಗಮುಂ ಬ
ಲ್ಮೃಗಮುಂ ಶಿಲೆಗುಹೆಯೊಳಾದೊಡಂ [2]ಪಿಡಿ[2]ದಪ್ಪೆಂ ೯೦

ದೇವರ ಬೆಸದಿಂ ದೆಸೆ ನಾ
ಲ್ಗಾವುದ ಪರಿಸಂಖ್ಯೆಯಾಗಿ ಬರೆದೆಂ ಪನ್ನಿ
ರ್ಗಾವುದ ಕಾಡಂ ತೆಕ್ಕನೆ
ತೀವಿರ್ದಪುವಲ್ಲಿ ಮೂಱು ಬೇಂಟೆಯ ಮೃಗಗಳ್ ೯೧

ತುಱುತುಱುನೆ ತಿಂಬ ತನುವಂ
ನೆಱೆಪಂದಿಗಳೊಱಸಿಕೊಂಡ ಭರದಿಂದೆತ್ತಂ
ತಱಿಯದ ಕೋಡುಂ[3]ಗಲ್ಲುಂ
ಮು[3]ಱಿಯದ ಪೆರ್ಮರನುಮಿಲ್ಲವಂತಾ ಕಾಡೊಳ್ ೯೨

ಪೞಿನವಿರೆಲ್ಲಂ ಮೆಯ್ಯುಂ
[4]ತೞಿದುಂ[4] ಬೆಳ್ಮೃಗಗಳಾಗಿ ತಿಳಿದಿರ್ದುವು [5]ಮೋ[5]
ವೞಿಗಳೊಳಾಡುತ್ತುಂ ಪಿಂ
ಡೞಿಯುದೆಯಾ ಬೆಳ್ಮೃಗಂಗಳುಂ ಪಂದಿಗಳುಂ ೯೩

ಅಕಳಿತನೆಂಬುದೊಂದು [6]ಎರೆ[6]ಯಿನ್ನೆವರಂ ಗುಱಿಯಾದುದಿಲ್ಲ ಕಾ
ರ್ಮುಕಕರವಿಮುಕ್ತಬಾಣದಿನೆರ[7]ಳ್ದ[7]ಳೆಯುಗ್ಗಳದಿಂ ಮದಾಂಧಮೀ

---

* ಈ ಪದ್ಯವು (ಬ) ಪ್ರತಿಯಲ್ಲಿ ‘ದೇವರ ಬೆಸದಿಂ’ ಎಂಬ ಪದ್ಯವಾದ ಮೇಲೆ ಇದೆ.

1 ಯೊಳೆ (ಖ ಬ) 2 ಬಡಿ (ಕ ಖ ಬ) 3 ಲ್ಮೃಟ್ಟಿ (ಬ) 4 ಕೞಿದುಂ ? 5 ಮೆಯ್ (ಕ ಖ ಬ) 6 ಕೇಳೆಱೆ (ಕಖ) 7 ಳ್ದ (ಬ).

ಸಕಳ ಮೃಗಂ ಮನಕ್ಕೆ ಹರಿಣೀಯಮುದಾಗಿರೆ ತೋರ್ಕುಮೆಯ್ದೆ ಮೂ
ಱು ಕರತಿರದ್ಧನೆಳ್ಳಿನಿತುಮಂ ಬರುತುಂ ನಸಿಯಿಲ್ಲ ಬುದ್ಧನೊಳ್ ? ೯೪

ಬೇಂಟೆಗಳೊಳ್ ನಾನಾವಿಧ
ಬೇಂಟೆಗಳೆನಿತೊಳ[1]ವವು[1]ಳ್ಳೊಡಂ ನೃಪತಿಗೆ ಪೆ
ರ್ವೇಂಟೆ ಕಿಱುವೇಂಟೆಯೂವರ
ವೇಂಟೆಯೆನಲ್ ಮೂಱು ವೇಂಟೆ ಪೆಸರ್ವಡೆದಿರ್ಕುಂ ೯೫

ಅರುಣಾಸ್ಯಂ ಲೋಲಜಿಹ್ವಾನ್ವಿತಸಿತರದನಂ ಬಭ್ರುನೇತ್ರಂ ಸುಹೃನ್ಮೇ
ದುರಕಂಠಂ ಚೂಡಕಕ್ಷಂ ಕೃಶಲಸದುದರಂ ಪಾಂಸುನಿರ್ಮಾಂಸಪಾದಂ
ಗುರುದೀರ್ಘಾಪ್ಲುಷ್ಟಪೃಷ್ಠಂ ದೃಢವಿಶಿಖನಖಂ ತುಚ್ಛಪುಚ್ಛಂ ಸುಲೋಮಂ
ಸ್ಥಿರಕರ್ಣಂ ಸಿಂಹನಾದಂ ಪವನಜವನನಾ ಶ್ವಾನನಾದಾನದಾಮಂ ೯೬

ಬಿಡುವುದು ತಡವೆನೆ ಮೊಲನಂ
ಪಿಡಿವುದು ಕಾಣ್ಬಳವಿಯೊಳಗೆ ಸರಳಿಪ ಮರೆಯಂ
ತಡೆಗಡಿದು ಕರ್ಚಿ ಮೃಗಮಂ
ಕೆ[2]ಡೆವಿಡಿ[2]ವಾ ನಾಯ್ಗಳರಸನಿಂತಿರವೇಡಾ ೯೭

ಮಸಗಿ ಕನಲ್ದು ನಿನ್ನಣುಗಿನಂಕದ ನಾಯ್ಬರೆ ಪಜ್ಜೆಗಾಣ್ಬುದುಂ
[3]ಮಸೆ[3]ವುದು ಕೂಡೆ ಕತ್ತಿಗಳನಾಗಳೆ ಸುಂಟಗೆಗೋಲ್ಗಳೆಲ್ಲಮಂ
[4]ಬಸಿ[4]ವುದು ಕೋಪದಿಂದರೆಯುತಿ[5]ರ್ಪ[5]ದು ಸಂಬರಮಂ ಕ್ಷಣಾರ್ಧದಿಂ
ಪೊಸೆವುದು ಕಿಚ್ಚಿನಲ್ಲಿ ಪೆಜತೇನದು ಮಾ[6][ಣ][6]ದಿಳಾಧಿನಾಯಕಾ ೯೮

ಕೆಳರ್ದೊಡೆ ಸಿಂಗದಬ್ಬರಮುರಲ್ದೊಡೆ ಮಾರಿಯ ಮೂರ್ತಿ ಕೋಪದಿಂ
ದಳುರ್ದೊಡೆ ಕಾಡಗಿಚ್ಚಿನ ಮೊಗಂ ಬಟೀಸಂದೊಡೆ ಕಾಲಮೃತ್ಯು ವೆ
ಗ್ಗಳಿಸಿ ಬಗುಟಿರ್ದೊಡರ್ಣವನಿನಾದಮುಳುಂಬಿಸಿ ನೀಳ್ದು ಗಂಟಲಿಂ
[7]ದೊಳ[7]ರ್ದೊಡೆ ರಾಹುವಿಂದೊಗರನೆಕ್ಕಲನಂದಿಗೆ ತಕ್ಕುದುರ್ವಿಪಾ ೯೯

ಪೊರೆದವು ನೆತ್ತರಿಂದೆನಿಪ ನಾಲಗೆಯಂ ನಸುಕಿತ್ತು ಸಿಂಹಕೇ
ಸರದವೊಲಿರ್ದ ದಾಡೆಗಳ ಕಾಂತಿಯನಾಂತು ವರಾಹಘಾತಜ
ರ್ಝರತನುಗಳ್ನಿಜಶ್ರಮವನೊಯ್ಯನೆ ನಾಲಗೆ[8]ಯಿಂದೆ [8]ತೋಱುವಂ
ತಿರೆ ಬಟೀಸಂದುವಾ ಶಬರನಾಯಕನಂ ಕಿಱುನಾಯುಕುನ್ನಿಗಳ್ ೧೦೦

(ಕಾದಂಬರಿ, ಪೂ.ಭಾ. ೧೬೭).

---

[1] ವುಮು (ಕಖ) [2] ಡಪಿವ (ಬ) [3] ಬಿಸು (ಬ) [4] ಬಿಸು (ಬ) [5] ರ್ದ (ಖಬ) [6] ನ (ಕಖಬ) [7] ದಳು (ಕಖ) [8] ಯಂತೆ (ಬ).

ಅತಿಕುಟಿಲಕೋಟಿಹಸ್ತ[1]ರ್[1]
ಕೃತಕೌಲೇಯಕ [ಬ] ಲಗ್ರಹರಾ ವನಮೃಗಸಂ
ತತಿಗೆ ದೃಢಕಠಿಣಕಾಯ[1]ರ್[1]
ಕೃತಾಂತದೂತರ್ಕಳಂತೆ ಬರೆ ಬೇಂಟೆಯವರ್ ೧೦೧

ಪದವಿಲ್ ಕಟ್ಟಿದ [2]ಗೇ[2]ಣ್ ಪೊಸ
ಪೊದೆ ಪೆಗಲೊಳ್ ಕೋದ ಕೊಂಬು ಬಡಿಕೋಲ್ ಬಲೆ ಪಾ
ಶದ ವಿಶ್ವಕದ್ರು ದೇಸಿಯ
ನೊದವಿಸಿ ನಡೆದತ್ತು ಬೇಂಟೆಗಾಜಿರ ತಂಡಂ ೧೦೨

ಕೋಸುವಲೆ ದೋಂಟಿವಲೆ ಬಾ
ಣಾಸನವಲಗಂಬು ಕಲ್ಲಿ ಕೈಪೊಡೆ ಗಾಳಂ
ಮಾಸಿದ ಮಯಣದ ಹಳೆಯೊರೆ
ಪಾಶದ ನಾಯ್ವೆರಸು ಬನಕೆ ಬೇಡರ್ ನಡೆದರ್ ೧೦೩

ಸೋಪಿನ ತೋಪಿನ ಪಳಹದ
ಕೋಪಿನ ಪಾಳಿವದ ಗೋರಿವೇಂಟೆಗೆ ಮತ್ತಂ
ಚಾಪಪ್ರವೀಣರುದ್ಗತ
ಕೋಪರ್ನಡೆತಂದರಲ್ಲಿ ಮುಂದೆ ಪುಳಿಂದರ್ ೧೦೪

ವಿಕರಾ[3]ಳಾಳೋ[3]ಕನೀಕ್ಷಜ್ಜ್ವಳಗತನಳಿನೀಶ್ಯಾಮನುದ್ಭ್ರಾಮ್ಯದೇಕಾ
ಸ್ತ್ರಕರಾಗ್ರಂ ವೇಣುಬಾಣಾಸನವಿನಿಹಿತಕಕ್ಷಂ ಸಕೌಳೇಯಕಸ್ತ್ರೀ
ನಿಕರಂ ಹ್ರಸ್ವಾಸಿಧೇನುಸ್ಥಗಿತಜಘನನಂದೊಪ್ಪಿದಂ ದ್ವೀಪಿಲಾಂಗೂ
ಲಕೃತೋಷ್ಣೀಷಂ ಶಿರಾಳಂಕೃತದರವಿಕಸತ್ಕಿಂಕಿರಾತಂ ಕಿರಾತಂ ೧೦೫

(ಚಂದ್ರಪ್ರಭಪುರಾಣಂ, ೫–೫೭.)

ಕರ್ಬೊನ್ನಿಂದಂ ವಿಧಾತ್ರಂ ಸಮೆದನಿವನನೆಂಬೊಂದು ಕಾರ್ಕಶ್ಯದಿಂದಂ
ಸರ್ಬಾಂಗಂ ಕಣ್ಗೆ ಗುರ್ವಂ ಪಡೆಯುಲಡವಿಯುಂ ಕೂಡೆ ಕಾಳಿಂದಿ [4]ಸು[4]ತ್ತಂ
ಪರ್ಬಿತ್ತೆಂಬಂತೆ ನೀಳೋತ್ಪಳ [5]ರುಚಿರತರ[5] ಶ್ಯಾಮದೇಹಾಂಶು ಪರ್ಬ
ಲ್ಕೊರ್ಬಂ ಬಂದಂ ಪುಳಿಂದಪ್ರಕರಬಹುಳಸೇನಾಪರೀತಂ ಕಿರಾತಂ ೧೦೬

(ಕಾದಂಬರಿ, ಪೂ.ಭಾ. ೧೬೫).

[1] ೦ (ಕಖಬ) [2] ನೇ (ಖಬ) [3] ಳಲ್ಲೋ (ಖ) [4] ಯಿ (ಕಖಬ)
[5] ದಳರುಚಿರ (ಅಖ).

ನಡೆ[1]ಸಲ್[1] ಬಿಲ್ವಿಡು ಸಾ[2]ರ್ದ[2]ಮರ್ಚು ಮರನಂ ಬಂದೇ[3]ಱು ಕೈದೋಱಿ ಬಿ
ಲ್ವಿಡಿಸುತ್ತಂ ಬಲಿ ಸೋಂಕವುಂಕು ಕೆಡು ಕಯ್ಯೊಳ್ ನಿಂದು ಕೀಳ್ನಾಯ್ಗಳಂ
ಬಿಡು ಪಾರ್ದಾರ್ದೆಸೆನುತ್ತೆ ತಮ್ಮೊಳದಟಿಂದಾ ಬೇಡರೋರೊರ್ವರಂ[3]
ನುಡಿವೊಂದಬ್ಬರಮುರ್ಬಿತಾಗಳೆನಿಸುಂ ವಿಂಧ್ಯಾಟವೀ ಮಧ್ಯದೊಳ್ ೧೦೭

(ಕಾದಂಬರಿ, ಪೂ.ಭಾ. ೧೫೯.)

ಇದೆ ಪರ್ವಿತ್ತು ಮತಂಗಜೋ[4]ಚ್ಚ[4]ಳಿತ ಕಂಜಾಳೀ ರಜಸ್ತೋಮಮಿಂ
ತಿದೆ ತೀವಿತ್ತು ವರಾಹಸಂಕುಳದಳನ್ಮುಸ್ತೋ[5]ತ್ಕರಾಮೋದಮಿಂ[5]
ತಿದೆ ಬಂದತ್ತಿಭಯೂಧನಾಥದ[6]ಳಿತೋ[6]ದ್ಯತ್ಸಲ್ಲಕೀ[7]ಗಂಧ[7]ಮಿಂ
ತಿದೆ ತೋಱಿತ್ತು ಮದಾಂಧ[8]ಸೈರಿಭಖುರಪ್ರೋದ್ಧೂತ[8]ರೇಣುವ್ರಜಂ ೧೦೮

(ಕಾದಂಬರಿ, ಪೂ.ಭಾ. ೧೫೮.)

ಬರೆದಪೆ ನೆತ್ತರಿನೆಂಬಂ
ತಿರೆ ಪಜ್ಜೆಗಳೆಸೆಯೆ ನಾಂದು ನೆತ್ತರೊಳೆತ್ತಂ
ಕರಿ ಮಸ್ತಕ[9]ದಳಮುಕ್ತೋ
ತ್ಕರಮಿಂತಿದೆ ತೋಱಿದತ್ತು ಮೃಗಪತಿರಾಜಂ[9] ೧೦೯

ಕಾದಂಬರಿ, ಪೂ.ಭಾ. ೧೫೮.)

ನಸುಮೆಲ್ದಚ್ಚಗಱುಂಕೆ ಸೂಸುತಿದೆ ಪೋದತ್ತಿಲ್ಲಿ ನಾನಾಮೃಗಂ
ಮುಸುಱುತ್ತಿರ್ಪುದು ಗುಂಗುರೀಯೆಡೆಯೊಳಂ ಪೋದತ್ತು ಸೊಕ್ಕಾನೆ ಕೋ
ಳ್ಗಿಸ [10]ಱಿಲ್ದಿರ್ಪುವು ಪೋದರ್ವೀಯೆಡೆಯೊಳಂ[10] ಪೆರ್ಬಂದಿಗಳ್ ನೆತ್ತರಿಂ
ಬಸಿಯುತ್ತಿರ್ಪುದು ಪೋದವಿಕ್ಕಿ ಮಱಿಯಂ ಪುಲ್ವಟ್ಟೆಯೊಳ್ ಪುಲ್ಲೆಗಳ್ ೧೧೦

(ಕಾದಂಬರಿ, ಪೂ.ಭಾ. ೧೫೭.)

ರುರುಗಣಮಿತ್ತಲಿತ್ತ ವಿಚರನ್ಮೃಗಸಂಕುಳಮಿತ್ತಲಿತ್ತ ಸೂ
ಕರಚಯಮಿತ್ತಲಿತ್ತ ವನಸೈರಿಭಸಂಕುಳಮಿತ್ತಲಿತ್ತ ಕುಂ
ಜರಕುಳಮಿತ್ತಲಿತ್ತ [11]ಶಿಖಿಮಂಡಲವಿಸ್ತರ[11]ಮಿತ್ತಲಿತ್ತ ಕೇ
ಸರಿರವಮಿತ್ತಲಿತ್ತಮೆನುತಿರ್ಪ ರವಂ ನೆಗಟ್ದಿತ್ತು ಸುತ್ತಲುಂ ೧೧೧

(ಕಾದಂಬರಿ, ಪೂ.ಭಾ. ೧೫೫.)

---

[1] ಸಲ್ಗಿ (ಅ) [2] ರ್ಚಮರ್ಚು (ಅ) ರ್ದುಮೆಚ್ಚು (ಬ) [3] ಱು ಬಿಲ್ವಿಸುತುಂ ಜಡಿ ಸೋಂಕೌಂಕು ತೆರಳ್ಚು ನೋಡು ಕಡು ಗೆಯ್ದೋಳ್ ನಿಂದು ಕೀಳ್ನಾಯ್ಗಳಂ ಜಿಡು ಕೋಲಂ ತುಡು ಸಾರ್ದುಪೊರ್ದಿನೆನುತಂ ತಂತಮ್ಮೊಳೋರೋರ್ವರೋಳ್ (ಅ) [4] ತ್ರ (ಕಖಬ) [5] ರಂನೋಚಲಿಂ (ಖಬ) [6] ಳನೋ (ಖಬ) [7] ದಂಡ (ಖಬ) [8] ಸೈನ್ಯ ......ಭಕರದ್ವಲ್ಲೀಕ (ಖಬ) [9] ಮೌಕ್ತಿಕದಂತುರವೀಥಿಯ ತೋಱುವಪುಮ ಮೃಗಪತಿ ಪಾರ್ಗಂ (ಅ) [10] ಜಾಗಿರ್ಪುದು ಬಟ್ಟೆ ಪೋದವಿದಱೊಳ (ಕಖಬ) [11] ವೆಶಿಖಂಡಿಕುಲಸ್ವನ (ಅಕ).

ಪಱಿ ಬೆಂಬತ್ತೆಯ್ದು ನಾಯುಂ ಬಿಡು ನಡೆಯಿ[1]ಸು ದೀಹಂಗಳಂ ಪಾಶಮಂ[1] ವಾ
ಗುರೆಯುಂ ಬೀಸಾಂಕೆಗೊಳ್ಳಾರ್ದಿಸು ಪೊಣರ್ದಿಱಿ ಕೊಲ್ಲೆಂಬ ಘೋರಸ್ವನಂ ಪೊ
ಣ್ಮಿರೆ ವನ್ಯಪ್ರಾಣಿಗಳ್ಗಂತಕನ ಪಡೆಯೆ ಧಾಳಿಟ್ಟವೋಲ್ ಬೇಡರಿರ್ದರ್
ತರುಶಾಖಾಳೀವನಾಂತಸ್ತಿಮಿರಮೆ ಶಬರವ್ರಾತಮಾಯ್ತೆಂಬಗುರ್ವಿಂ ೧೧೨

(ಜಗನ್ನಾಥವಿಜಯಂ, ೧೬—೧೫.)

ಪುಲಿಯಿದೆ ಸಿಂಹವಜ್ಜೆಯನೆ ಕಾಣಿಸು ಕ್ರೂರಮೃಗಕ್ಕೆ ಮಾರ್ಗಮಂ
ಬಿಲವೊಗಿಸಂಗಪನ್ನಗನ ಶಂಕಿಸದೋಲ್ ಬಿಡು ನಾಯಕುನ್ನಿಯಂ
ಬಲುಸರಳಿಂದೆ ನೋಡಿಯೆಸು ಪಕ್ಕಿಗೆ ಪಾಶವ ಪಾಸು ತಂಬೆಲ
ರ್ಗೊಲಿದಿದಿರಾಗು ಶಾಂತಮೃಗಮೆಬ್ಬಿಸಿ ಪೋಪೊಡೆ ಪೋಗಲೀಯದಿರ್ ೧೧೩

ನಡು ಗಿಡುವಿಂಗೆ ಸಾರ್ವೆರಳೆಯಟ್ಟಿದೊಡೊತ್ತಿಗೆ ಪೋಗಿ ಸಂದಿಯಿಂ
ದಿಡು ಕೆಲನೋಡುವಂತಿರದೆ ಬಂದೊಡೆ ಹಂದಿಯನೊಂದಿ ನಾಯ್ಗಳಂ
ತುಡುಕಿಸಿ ಕೋಲಿನಿಂದಿಡು ಘನಾಸ್ಯವದಕ್ಷರವಕ್ಷಸಂಧಿಯಂ
ಮಿಡುಕದೆ ತೀವಿ ನೀನಿಸುವುದೆಂಬ ವನೇಚರರಾವಮೆತ್ತಲುಂ ೧೧೪

ತುಡು ಕೋಲಂ ಹರಿಣಂಗೆ [2]ಪಾಸು[2] ಬಲೆಯುಂ ಕೋಕಂಗೆ ನೀರ್ದಾಣಮಂ
ಬಿಡು ಪೆರ್ಬಂದಿಗೆ ನಾಯ ಬಾಯ ಮೊಲನಂ ಕೈಗುತ್ತಿ[3]ಕೊಲ್[3] ಕಂಡಿಯೊಳ್
[4]ಕೆಡೆಕುತ್ತೆಟ್ಟಿಬ್ಬಸು[4] ಮೇಲೆ ಪಾಯ್ವ ಪುಲಿಯಂ ಪುಲ್ಗಾ[5]ನೊ[5]ಳಾ [6]ಪೋಪ[6] ಪೇ
ರುಡುವಂ ಸೋವುವಡಂಗಿಯೆಯ್ದು ಸರುವಂ ಕಟ್ಟಿಟ್ಟು ಸಾರಂಗಮಂ ೧೧೫

ಮಱೆ ಹರಿದಾಡೆ ಹಂದಿ ಹರಿಗೆಟ್ಟಿರೆ ಪೆರ್ಬುಲಿಯುರ್ಬುಗುಂದೆ ಕೇ
ಸರಿ ಮುರಿದೇಱೆ ಕಾಯ್ದು ಕರಿ ಮೇಲ್ಸೞಿದಾಲಿಸೆ ಪುಲ್ಲೆವಿಂಡು ಗೋ
ಣ್ಮುರಿದು ಬಿಗುರ್ತು ನೋಡೆ ಕಡವುಂ ಕಡವುಲ್ಲೊಳಡಂಗಿ ರ್ಝೊಂಪಿಸು
ತ್ತಿರೆ ಭರದಿಂದೆ ಬೇಂಟೆವಱೆಯುಬ್ಬರಮುಬ್ಬರಮಾಯ್ತರಣ್ಯದೊಳ್ ೧೧೬

ಪುಲ್ಲೆಯ ಹಿಂಡು ಮಲ್ಲಣೆಸಿ ತಲ್ಲಣಗೊಂಡವು ಬೊಬ್ಬೆಯುಬ್ಬರ
ಕ್ಕೊಲ್ಲದೆ ಮೇಪುಗಾಡೊಳಿರದೋಡಿತು ಪೆರ್ಮಱೆ ಸೊಕ್ಕಿದೆಕ್ಕಲಂ
ಬಿಲ್ಲಿಗೆ ಸಾರ್ದುದೆಬ್ಬಿಸುವ ಪೆರ್ಬುಲಿ ಱೊಪ್ಪವನೊತ್ತುಗೊಂಡವ
ಲ್ಲಲ್ಲಿ ಮೃಗಂಗಳುಂ ಮಿಡುಕುಗೆಟ್ಟಿರುತಿರ್ದುದು ಕೂಡೆ ಬೇಂಟೆಯೊಳ್ ೧೧೭

---

[1] ಯಿಡವಗ್ಗಂಗಳಂ ಸುತ್ತಿತಾ (ಖಬ) [2] ಸಾರ್ಚು (ಕ) [3] ನೊಳ್ (ಕ)
[4] ಡೆಕುತ್ತೆ ಬೀಸು (ಕ) [5] ಡೊ (ಖ) [6] ಯೇಱಿ (ಬ).

ಇಡು ಜೇನೊಳ್ ಕಿಚ್ಚನಾ ಬಪ್ಪವೆ ಮರೆ ಸರುವಂ ಕಟ್ಟು ಪೊಯ್ಯನ್ನೆಗಂ ಪೇ
ರುಡುವಂ ನಾಯಂ ಮೃಗಕ್ಕಂ ಬಿಡು ಬಿಡು ಮೊಲನಂ ಸೇಡು[1]ಗೋಲಿಂವ[1]ಲಂಬಿಂ
ಬಿಡು ಸಾರಂಗಕ್ಕೆ ಱಿಪ್ಪಂಬುಗಲೆಡೆಗೊಡದಿರ್ ಪಂದಿಯುಂ ನೀನೆಸುತ್ತಿರ್ಪಂ
ದೆಡೆಯೊಳ್ ಸಂಧಾನಮಾಗಿರ್ದುದು ಬಹುಮೃಗಯಾಕ್ರೀಡೆಯಿಂ ವ್ಯಾಧಯೂಥಂ

ಸರಳಿಪ ಹುಲ್ಲೆ ಪಾಯ್ವ ಪುಲಿಯೋಡುವ ಪೆರ್ಮರೆ ದಾಡೆಗುಟ್ಟಿ ಬೆ
ಳ್ನೊರೆ ಸುರಿಸುತ್ತೆ ಕೆಕ್ಕಳಿಪ ಸೂಕರಮುರ್ಬಿಪ ಕಾಡಕೋಣನ
ಬ್ಬರಿಪ ರವಕ್ಕೆ ಕೆಂಗಲಿಪ ದೊ[2][ಡ್ಡ][2] ಬಿಲಂಗಳೊಳೋಡಿ ಪೊಕ್ಕು ವ್ಯಾ
ಗರೆವುಡು ಸೂಳಿವಪ್ಪ ಮೊಲಗಳ್ ನೆರೆದೊಪ್ಪಿದುವಲ್ಲಿ ಬೇಂಟೆಯೊಳ್ ೧೯

ಸುಟ್ಟುರೆಯ ತೆಱದೆ ಸುೞಿವುದು
ನೆಟ್ಟನೆ ಪೊಱಮಟ್ಟೊಡಟ್ಟುವುದು ಮಗುೞ್ದೊಡೆ ಬೆಂ
ಗೊಟ್ಟುದು ಮುಟ್ಟುವ ಪದದೊಳ್
[3]ನೆಟ್ಟನೆ[3] ತಿರುಪಿತ್ತು ನಾಯನಂದೊಂದು ಮೊಲಂ ೨೦

[ಕೊಂಡುದು] ಕೊಂಡುದಂತದುವೆ ಸಾಳುವನಲ್ಲದು ತಪ್ಪಿತತ್ತಲಾ
ಕೊಂಡುದು ಜಾಯಿಲಂ ಮಗುೞ್ದು ಪೋಪುದನತ್ತಿರವೆಯ್ದೆ ಕೊಂಡುವಾ
ಕೊಂಡುದು ನಮ್ಮ ಪುತ್ತಳಿಯೆನಲ್ ಕಿಱುನಾಯ್ಗಳ ಬಾಯ್ಗಳಿಂದೆ ನೂ
ಲುಂಡೆಯನಿಟ್ಟವೋಲ್ [4]ಮಿಡುಕು[4]ತುಂ ಪರಿದಾಡಿದುದೊಂದು ಪೆರ್ಮೊಲಂ ೨೧

ಅಳವಿಯೊಳಿರ್ದ ಪೆರ್ಮೊಲನನಾ ನೃಪನಿಟ್ಟೊಡೆ ಸೆಂಡುಕೋಲ ಬೆ
ಳ್ಪೊಳಗೊಳಪೊಯ್ದು ಸುತ್ತುವೆಡೆಯೊಳ್ ಬಿಡು ತಾಗುಗುಮೆಂದು ಭೀತಿಯಿಂ
ಜಳಧರಮಾರ್ಗದಿಂದಿೞಿದು ಬಿರ್ದ ಮೊಲಂ ಬೆರಸೊಂದುಮೆಂದು ಮಂ
ಡಳದವೊಲಿರ್ದದೆಂದೊಡಪರ್ನೇವೆಸಗೊಂಡಪೆ ಬೇಂಟೆಯೊಪ್ಪಮಂ ೨೨

ವನಜಜನಂಚೆ ಗೌರಿಯುಡುವಂಬುಜನಾಭನ ಪರ್ದ ಕಾರ್ತಿಕೇ
ಯನ ನವಿಲಿಂದುಬಿಂಬದ ಮೊಲಂ ಕಲಿಮೂಕವರಾಹನಗ್ನಿಮಿ
ತ್ರನ ಹರಿಣಂ ವಿನಾಯಕನ ಮೂಷಕ ಕಾಲನ ಕೋಣ ವಿಂಧ್ಯವಾ
ಸಿನಿಯ ಮೃಗಾರಿ ನಾಯಿಗರಿಪಲ್ಲವು ಸಾಹಸಮಲ್ಲದೇವನಾ ೨೩

ಪರಡಿಗೆ ಸೋಗೆ [5]ಗಿ[ಂ][5]ಡುಗೊರಳಿಂ ಶಿಖಿ ಮುಂದೆಜಗಿಪ್ಪಿನಂ ತೃಷಾ ?
ಪರಿವೃತನಾಗಿ ನೀಗರ್ದಡಿಯುತಿರ್ದವನೊಯ್ಯನೆ ಬಂದು ಭೂತಳೇ
ಶ್ವರನಿಸೆ ಭೋಂಕನುಚ್ಚಳಿಸೆ ಪಾಱುವ ಸೋಗೆಯ ಕಂಠನಾಳದಿಂ
ಸುರಪತಿ ಚೋದ್ಯಮಪ್ಪಿನೆಗಮೊರ್ಮೆನೆ ನೆತ್ತರ ನೀರಧಾರೆಯೊಳ್ ೨೪

[1] ಜೇಂಗೋಲ (ಕಖ) [2] ಡ (ಕಖಬ) [3] ತೊ (ಬ) [4] ತಿಱುಕು (ಖಬ)
[5] ಗೀ (?).

ಓರಂತೆ ಬಂದು ಹರಿಣಂ
ನೀರುಣುತಿರೆ ಕಂಡು ಭೂಪನಿಸ[1]ಲ್ಬ್ಬರಿಗಂ[1]
ಕಾರಮೊಗೆದಂತೆ ನೆತ್ತರ
ನೀರುಂ ಬೆರಸೊಡನೆ ಸುರಿಯುಲಿರ್ದುದಯ್ಯಂದಂ ೧೨೫

ಬಱಿಯುಂ ಬಂದೆಚ್ಚಡೆ ಪ
ಣ್ಗಳ ಭರದಿಂ ಕೊಂಬು ಪಱದುದೆನೆ ತುಱುಗಿ ತಳ
ರ್ತೆಳಮಾವಿನ ಸೆಳೆಗೊಂಬಿಂ
[2]ಓ[2]ಳಗೆಱಯುಲ್ ಪಾರ್ದ ನಪಿ[3]ಲನಿ[3]ಱನ ಬೆಡಂಗಂ ೧೨೬

ಕರಡಿಗೆ ಕೇಶಮುಂ ಕೆದಱಿ ಪುಲ್ಲಿಗೆ ಮೋಲುದನೆತ್ತಿ ಬಪ್ಪ ಬೆ
ಳ್ಪರಳೆಗೆ ತಾಂ ಬೆರಲ್ಪುಡಿಯೆ ಪೆರ್ಬುಲಿಗೊಯ್ಯನೆ ಕಚ್ಚಿ [4][ದಾ][4]ಡೆಯುಂ
ಮರೆಗಿರದಂಸಮುಂ ಮುಗಿಯೆ ಪಂದಿಗೆ ಬೆನ್ನನೊಡರ್ಚೆ ಬಾಗೆ ಚ
ಚ್ಚರಮುಱದೆಚ್ಚನಂದು ಜವ[5]ನಗ್ಗಳ[5]ಯಾತನ ಸನ್ನೆಯಿಂ ನೃಪಂ ೧೨೭

ಬೆರಸಿದ ಗಾಳಿಗೂಡಿ ಪೊಸತಾಗಿರೆ ಬೆಂಬಱಗೊಂಡು ಕಂಡು ಕಾ
ತರಿಸುವ ದಿಟ್ಟಿ ಕೆತ್ತು ಪೊಡಲೆತ್ತಿದ ಕಂಠಮುರಲ್ಬ ಕರ್ಣಮು
ಬ್ಬರಿಸುವ [6]ಮೈನವಿರ್[6] ಪನಿಪ ಮುಂಬದನೊಪ್ಪಿರೆ ಪುಲ್ಲಿಗಾಸೆಗೆ
ಯ್ಪರಳೆಯ ಭಾವಮುಂ ನೃಪತಿ ಕಂಡಿಸಲಾಱದೆ ನಿಂದು ನೋಡಿದಂ ೧೨೮

ಅದೆ ಹೋಯಿತ್ತಿಲ್ಲಿ ಸಿಕ್ಕಿತ್ತೆಸು[7]ವ[7]ಳಸಿಗೆ ಗೆಂಟಾದುದಲ್ತಲ್ತು ಗೆಂಟಾ
ದುದೆ ಪೋದಪ್ಪುದಿನ್ನೆಚ್ಚಪೆನೆನುತೆ ನೃಪಂ ತೀವಿ ತೊಟ್ಟಾ[8]ರೆ[8]ತಱಿಕಲ
ಸಿದ ಮುಂಗಾಲ್ ಪೊಕ್ಕ ಪಿಂಗಾಲ್ ನೆಗೆದುಡಿಗಿದೊಡಲ್ ಬಿಟ್ಟ ಕಣ್ ನೆಟ್ಟ ಕರ್ಣಂ
ಪದಪಿಟ್ಟೆಲ್ದಾಱನೇಱಂ ಸರಳಿಸಿದುದು ಭೀತಾಂತರಂಗಂ ಕುರಂಗಂ ೧೨೯

ಕೀಲಿಸಿ ಕಂಧರದೊಳ್ ಭೂ
ಪಾಲಕನಿಡೆ ನೊಂದು ಪಂದಿ ತಿರುಗುವ ಪದದೊಳ್
ಕೇಲಂ ಮಾಡುವ ತಿಗುರಿಯ
ಕೋಲಂತೆವೊಲಿರ್ದುದಿಟ್ಟಿ ತನು ಕೆಡೆವಿನೆಗಂ ೧೩೦

ದಿಟ್ಟಿಸಿ ನೋಡುತುಂ ನಡೆವ ನಾಯಿಗಳಂ ತಗುಳುತ್ತುಮೆಚ್ಚ ಕೋ
ಲ್ಗಿಟ್ಟು ತುಮುಗ್ರರೂಪದೊಳೆ ಬರ್ಪುದನಂತಸಹಾಯಶೂರನಾ

[1] ಪಿಬ್ಬರಗಿಂ (ಕ) [2] ಗ (ಖ) ದಿಳಗೆಱದಪ್ರೋಲೋರ್ವನಿಱದನಪಿಲಬೆಡಂಗಂ (ಬ) [3] ಲಿಗಿ (ಖ) [4] ದಂ (ಕಖಬ) [5] ಸುಗ್ಗಳೆ (ಖಬ) [6] ಮೆಯ್ಯನೀರ್ (ಬ) [7] ನ (ಕ) [8] ಲಿ (ಕ).

ದಿರ್ಟಟ್ಟಿಯೊಳಾಲಿಸಿಟ್ಟಡಿರದಂತದು ಕಂಥಮನುರ್ಚಿ ಧಾತ್ರಿಯೊಳ್
ನಟ್ಟರೆ ಕಂಭದೊಳ್ ಕಳಭಮಿರ್ಪವೊಲಿರ್ದುದು ಸೊಕ್ಕಿದೆಕ್ಕಲಂ ೧೩೧

ಒತ್ತಿನೊಳಿರ್ದು ಕೈಪಱಿದ ದಂತಿಯ ವೋಲ್ ಕಡುಪಿಂದೆ ದಾಡಿಗು
ಟ್ಟುತ್ತಿರೆ ನೋಡಿ ಕಂಡಿರದೆ ಚಾಪಮನೋಪಳ ಕೈಗೆ ನೀಡಿ ನೀ
ನತ್ತಿರು [1]ಎಂ[1]ದು ಸಾರ್ದಲಗನೊಯ್ಯನೆ ಕಿತ್ತಡೆ ಕಂಡು ದಿಂಡುವಾ
ಯ್ದೆತ್ತಿದ ಹಂದಿಯಂ ಮುಳಿದು ಕುತ್ತಿದನೊತ್ತಿದನಾ ವನೇಚರಂ ೧೩೨

ಮುನಿಸಿಂ ಬೊಬ್ಬಿಱಿದುಬ್ಬಿಯಬ್ಬರಿಸಿ ಕಾಯ್ದುಟ್ಟಟ್ಟಿಗಳ್ ತನ್ನ ಮೈ
ಗಿನಿಸಂ ಮುಟ್ಟಿಸಲಾಗದೆಂಬನೆಗಮುತ್ತ್ಯಾಭೀಳ ದೇಹಂ ಮಹಾ
ಶನಿದಂಷ್ಟ್ರಂ ಘನಘೋರ ಘುರ್ಘುರರವಂ ಬಲ್ವಂದಿ ಬಲ್ವಂದಿಕಾ
ಱನವೋಲ್ ಪಿಂಡೊಡೆದೊಂದೆ ಪೋಯ್ತು ಮಲೆದಂತಿಂತಿಕ್ಕೆಲಕ್ಕೆಕ್ಕಲಂ ೧೩೩

ಇದು ನೀಲಾಚಲಶೃಂಗಮಲ್ಲ ದಿಟದಿಂ ಕಯ್ಯಿಲ್ಲದುಗ್ರೇಭಮಿಂ
ತಿದು ನಿ[2]ರ್ಬಂ[2]ಧದ ಬಂಧಮಿಂತಿದೆನಲಾದಿಕ್ರೋಡನಂ ಪೋಲ್ತುದು
ನ್ಮದದಿಂ ಗರ್ಜಿಪ ನಾಯ್ಗಳಂ ತುಳಿವ ಪಿಂಡಂ ಕಾಯ್ವ ಬಲ್ಪಕ್ಕು ಕೊ
ರ್ವಿದ ಪೆರ್ಬಂದಿಯನೊರ್ವನೊಂದೆ ಸರಳಿಂದೆಚ್ಚಂ ಪುಳಿಂದಾಧಿಪಂ ೧೩೪

ಅಡಸಿದಡೆಕ್ಕಲಂ ಮುಗುಳ್ದು ಭೋಂಕನೆವಾಯೆ ಬೆದರ್ದ ನಲ್ಲಳಂ
ಸೆಡೆಯದಿರೆಂದು ಹಿಂದಿರಿಸಿ ಗಾತ್ರಮನಿಕ್ಕಿ [3]ಕುನುಂಗಿ[3] ವೋಱಿಯಂ
ಪಿಡಿದೆಡಗಯ್ಯೊಳುದ್ಧರಿಸಿ ಸಱ್ರನೆ ಕಿತ್ತಲಗಿಂದ ಹಂದಿಯಂ
ನಡು ಕಡಿ[4]ವೋಪಿ[4]ನಂ ತಿವಿದು ಮೆಚ್ಚಿಸಿದಂ ಶಬರಂ ಪುಳಿಂದಿಯಂ ೧೩೫

ಇಕ್ಕೆಲದೆ ಶಬರನಾರ್ದಿಸೆ
ಯೆಕ್ಕಲನನದೊಂದು [5]ಬಾಣ[5] ನಡದಿರೆ ಸತಿ ಕಂ
ಡಕ್ಕಟ ಬಿಲ್ಲಾಳೇ ಎನ
ಲಕ್ಕಾ ನೀಂ ಪೆ[6]ಣ್ಣೆನಲ್ಕೆ[6] ಲಜ್ಜಿತೆಯಾದಳ್ ೧೩೬

ಜಡಿವನ್ನಂ ಸ್ಥೂಲವಾಲಂ ಕುಸಿದು ಘುಳುಘುಳುಧ್ವಾನದಿಂ ಗರ್ಜಿಸುತ್ತುಂ
ಕಿಡಿಗಳ್ ಕಣ್ಣಾಲಿಯಿಂದಂ ಕೆದಱಿ ಮುಳಿದು ಮೇಲ್ವಾಯ್ವ ಶಾರ್ದೂಲಮುಂ ಪೊ
ಕ್ಕುಡಿಯೊಳ್ [7]ಮೆಲ್ದಂ[7]ಡೆಗೊಂಡುರ್ಚಿದ ಕಿಱಿಯಲಗಿಂದೊಂದೆರಟ್ಟ್ಮೂಱು ನಾಲ್ಕಿಂ
ದಡಕಿಲ್ಗೊಂಡೇಱು ಬೆನ್ನೊಳ್ ಪೊಳೆವಿನಮಿಱಿದಂ ವೀರ[8]ದಿಂದಾ[8] ನರೇಂದ್ರಂ

---

[1] ವೆಂ (ಕಖಬ) [2] ಬ್ಬಂ (ಕಖ) [3] ಕುರಂಗ (ಬ) [4] ಯಪ್ಪಿ (ಖಬ) [5] ತಾಗಿ (ಬ)
[6] ಣ್ಣೇ ಎನೆ ಸ (ಖ) [7] ಕೆಂದಂ (ಕ) ತಾಗಿ (ಬ) [8] ಧೀರಂ (ಬ).

ಬಳಸುತ್ತುಂ ಪಾಯಿಸುತ್ತುಂ ತುಡುಕಿ ತುಡುಕಿ [1]ಪಿ[1]ನ್ಮೆಟ್ಟುತುಂ ಮುಂದೆ ಬಂದ
ವ್ವಳಿಸುತ್ತುಂ ಕುಕ್ಕುರಂಗಳ್ ತೆಗೆಯೆ ಮಿಗೆ ಬಳಲ್ದೊಯ್ಯನಂತಂತೆ ಕಿ[2]ಟಿ[2]
ಣ್ಣೊಳ್ ನೋಡುತ್ತೋರೆಯಿಂದಂ [3]ಗಿರಿಯ ಸರಿಯ[3]ನಾನಲ್ಕೆ ಸಾರ್ದಂಡುಗೊಂಡಿ
ರ್ದಿಳೆ ಕಂಪಂಗೊಳ್ವಿನಂ ಗರ್ಜಿಸಿದುದು ಮುಳಿದಾಭೀಳದೇಹಂ ವರಾಹಂ ೧೩೮

ಬಿದಿರ ಸಿ[4]ಡುಂ[4]ಬಿನೊಳ್ ಗಜಱಿ ಗರ್ಜಿಸಿ ಪೆರ್ಬುಲಿವಾಯೆ ಕಯ್ದುಗೆ
ಯ್ಯದೆ ಕೆಲಸಾರ್ದು ಮೆಯ್ ಪೊಣರ್ದು ತೊಟ್ಟನೆ ಗಂಟಲನೊತ್ತಿ ಕಿಬ್ಬಿಸಿರ್
ತಿದಿಯವೊಲಾಗೆ ಕಣ್ತುಮುಟಿ ಬಿರ್ದು [5]ಮು[5]ಸುಂಬಿ ಜವಂಗೆ ಬಿರ್ದನಿ
ಕ್ಕಿದನುಸಿರಿಕ್ಕಲೀಯದುಸಿರಿಕ್ಕುವವೋಲ್ ಶಬರಂ ಮಹಾಬಳಂ ೧೩೯

(ಮಲ್ಲಿನಾಥಪುರಾಣಂ, ೧೦–೭೩.)

ಕಡು ಕಡುಪೇಱಿ ಪೆರ್ಬುಲಿಯುಗುರ್ವಿಸೆಯೊಯ್ಕನೆ ಮೇಲುವಾಯೆ ಮುಂ
ದಡಿಯಿಡುತ್ತೈದೆ ಗಂಟಲಿಡೆಯಂ ಪಿಡಿದೊತ್ತುವ ತಾಣದೊಳ್ ನಖಂ
ಮುಡುಪನವುಂಕೆ ಕಂಡು ಸತಿ ಕಂ[6]ಟಿ[6]ಸಿ ಕಾಡುವಳೆಂದು ಬಂದ ತ
ನ್ನೊಡನೆಯ ಬೇಂಟೆಕಾಱವಡೆಯಂ ತೊಡೆಸಕ್ಕೆಯನುಂಟುಮಾಡಿದಂ ೧೪೦

ಬಗಿದು ಪುಗಲ್ಕರಿದೆಲ್ಲಿಯು
ಮೊಗೆದ ಮರಂ ಪೊದಱು ಬಳ್ಳಿಗಿಡುವೆಂಬಿವಱಿಂ
ಮಿಗಿಲೆನಿಪ ಬಲ್ಲೆ ನಗಸಾ
ನುಗಳೊಳದಂತಾವ ಮೆಯ್ಯೊಳಂ ಪುದಿದಿರ್ಕುಂ ೧೪೧

(ಕಾವ್ಯಾವಲೋಕನಂ, ೯೭.)

ಸುರಪತಿಯಂತೆ ವಿಸ್ಫುರಿತನೇತ್ರಸಹಸ್ರವಿರಾಜಿತಂ ನರೇ
ಶ್ವರಭವನಾಗ್ರದಂತೆ ದೃಢವೇತ್ರಲತಾಶತದುಷ್ಪ್ರವೇಶಮುಂ
ಬರತಳದಂತೆ ಋಕ್ಷಮೃಗಲುಬ್ಧಕಸಂಗತಮುಂಬುರಾಶಿಯುಂ
ತಿರೆ ತತವಿದ್ರುಮದ್ಯುತಿನಿರಂತರವೊಪ್ಪುಗುಮಾ ವನಾಂತರಂ * ೧೪೨

(ಕಾವ್ಯಾವಲೋಕನಂ, ೩೩೮.)

ಸೊಗಯಿಸಿ ತೋರ್ಪ ಸೋಗೆ ಕೊರಲೊಳ್ ಪೊಗರ್ವಟ್ಟೆಸೆದಿರ್ಪ ಕರ್ಪು ಕೆ
ಯ್ಮಗೆ ಕಡೆಗಣ್ಗೊಳೊಳ್ ಪೊಳೆವ ಬೆಳ್ಪು ಶಿಖಾಗ್ರದೊಳೊಂದಿದೊಳ್ಪು ಮೆ

[1] ಪೆ (ಕ) [2] ಗ್ಗ (ಖಬ) [3] ಪರಿಯದೊರೆಯ (ಬ) [4] ಱುಂ (ಕ) [5] ಮಾ (ಅಕ) [6] ಪಿ (ಕ).

* ಇಲ್ಲಿಂದ ಮುಂದಿನ ೮ ಪದ್ಯಗಳು (ಜ.ಬ) ಪ್ರತಿಗಳಲ್ಲಿ ಆಶ್ವಾಸದ ಆದಿಯಲ್ಲಿ ಕಂಡುಬರುತ್ತವೆ.

ಲ್ಪೊಗೆದಿರೆ ಕೇಗುವಿಂಚರದ ಸುಣ್ಪು ಮನಂಗೊಳೆ ಚೆಲ್ವನಾಳ್ದುದೀ
ನಗವನರಾಜಿಯೊಳ್ ಸುೞಯುತಿರ್ಪ ವಿಚಿತ್ರ ಶಿಖಂಡಿಮಂಡಲಂ ೧೪೩
(ಕಾವ್ಯಾವಲೋಕನಂ, ೬೦೯.)

ಕೋಗಿಲೆ ಚಾದಗೆ ಪೋದಗೆ
ಮೂ[1]ಗಿಲಿ ಕೌಂ[1]ಗಂಚೆ ಕೊಂಚೆ [2]ನೂಲೆಳೆಗಂ[2] ಹಂ
ಗಾಗೆ [3]ಪೊಣರ್ವ[3]ಕ್ಕಿ ಪಿಂಗು[4]ರಿ[4]
ಗೂಗೆ [5]ಮುಕುಂದ ಬಳಾಹಕ ಲಾವುಗೆ ಶೇನಂ[5] ೧೪೪

ಕಾರಂಡಂ ಕೆಂಗಣ್ಣಂ
ಭೇರುಂಡಂ ಪೊಱಸು ಕೌಶಿಕಂ ಕು[6]ಣಿವ[6] ನವಿಲ್
ಕಾರೆ ಗಿಳಿ [7]ಯೇ[7]ಳೆ ಬಾವಲಿ
ಕೀರಂಚೆ ಪರಡೆ ಪರ್ದು ಹಸುಬಂ ಗಿಡುಗಂ ೧೪೫

ಪುರುಳಿ ಕುಳಿ[8]ರ್ವಂ ನವಿಲ್ಕೇ[8]
ಕೊರೆಸಣಗಂ ಪಣ್ಪರಸವಲೂರಲ್ ವಾವಲ್
ದುರಿಸೆ ಗಿಳಿ ಪರ್ದು ಮರವಂ
ಮರಕುಟಿಗಂ ಪುಱಲೆ ಬುಱುಗಿ ಹಸುಬಂ ಪುಣಿವುಲ್ ೧೪೬

ಪರಮೇಷ್ಠಿಯಂಚೆ ಕೃಷ್ಣನ
ಗರುಡಂ ಪವಮಾನನೆರಳೆ ದುರ್ಗಿಯ ಸಿಂಹಂ
ಸುರರಾಜನಾನೆ ಮುನ್ನೀ
ಗಿರಿವರದೊಳ್ಪುಟ್ಟೆ ನೆಗಳ್ದುವೆನಿಸುವು [9][ವನಿಶಂ][9] ೧೪೭

ಬೆಟ್ಟಕ್ಕೆಱಂಕೆವೆಟ್ಟಂ
ಪುಟ್ಟಿದವೋಲ್ ತೋರ್ಕುಮ[10]ಲ್ಲಿ ಭೇರುಂಡಂ[10]ಗಳ್
ದಿಟ್ಟಿಗೆ ಭಯಮಂ ಮಾಳ್ಕುಂ
ತೊಟ್ಟನೆ ಶರಭಾ[11]ದಿ[11] ಮೃಗಮನೆಡೆಗೊಳ್ಪಿಡಯೊಳ್ ೧೪೮

---

1 ಗಿಂ ನಾ (ಕ) 2 ಮೂಲೆಗಳೆಗ (ಖ) 3 ಕೊಳರ್ವ (ಬ) 4 ರು (ಕ)
5 ಸುಕರ್ು ಬಕರ್ು ಗೀಜಗನೊಱವಂ (ಕ) ಯುಮುಖ ಬಕಬಳಾಮುಳಗೆದಱಂ (ಖ)
6 ಳಿರ್ವ (ಕ) 7 ಪಿ 8 ವಂಗವಿಲ್ಕೆ (ಕ) 9 ಮನಗಂ (ಕ) ದುವನಂ (ಖಬ)
10 ದಱಬೇರುಂಕ (ಕ) 11 ರಿ (ಕ).

ಮರಿ ಹಂದಿ ಹುಲ್ಲೆ ಹುಲಿ ಕಡ
ವೆರಳೆಯು[1]ಮಾ ಬೆಕ್ಕು[1] ತೋಳನೆಯ್ ಸಾರಂಗಂ
ಕರಡಿ ಮೊಲಂ ಕೋಡಂಗುರಿ
ನರಿದರಿ ಕೂರಂಗಿ ಬೆಕ್ಕು ಹೇರುಡು ಕಾಕಂ ೧೪೯

ಚರಣಾಗ್ರೋದೀರ್ಣ ಭಾಸ್ವತ್ಖರನಖಚರಣಂ ನಿಶ್ಚ[2]ಲಂ ಪ[2]ಶ್ಚಿಮಾಂಗಾಂ
ತರಗುಪ್ತಸ್ಥೂಲವಾಲಂ ಪ್ರಕಟಿತ ಕೃತಕಾಕಾರಿ ವಿಭ್ರಾಂತ[3]ಕಾ[3]ರ್ಯ
ಸ್ಥಿರಸರ್ವಾಂಗಂ ಬಿಲ[4]ಕ್ಕೋಸರಿಸಿ ದರಿ[4]ಗೆ ಸಾರ್ದಿದರ್ುದಂಗಾರಭಂಗ
ಸ್ಫುರಿತಾಭೀಳಾಕ್ಷನಾಖುಗ್ರಹಣವೆಸನನಪ್ಪೀ ಬಿಡಾಳಂ ಬಿಡಾಳಂ ೧೫೦

ನೋಱೆ[3]ಯ ಬೆಳ್ಪಿಂದುವನ್ನೆ
ದಾಱಿಂಗುಲಮುಟ್ಟೆಯೆ ರಾಹು ನುಂಗಿದ ತೆಱದಿಂ
ತೋಱುವ ತೆಱನೆಸೆವಿನ ನ್ನೆ
ದೋಱುಪ್ಪುವು ಪುಂಡುಗರಡಿ ಶೈ[5]ಲಾಂತರ[5]ದೊಳ್ ೧೫೧

ಕಲ್ಲ ಗವಿಯೊಳಗೆ ಕಟ್ಟಲೆ
ಮಲ್ಲಟಿಗೊಂಡಿರ್ದ ತೆಱದಿನಿರ್ಪುವು ತಾಂ ಭೂ
ವಲ್ಲಭ[6]ನನಜಿಸಿ ಮುಱಿಯುಂ[6]
ಭಲ್ಲೂಕಪ್ರತತಿ ನಗದ ನಾಲ್ಕುಂ ದೆಸೆಯೊಳ್ ೧೫೨

ಮೆಲ್ಲನೆ ನೀಡಿ ಮೆಟ್ಟುವಡಿ ನಿಶ್ಚಲವಾಲಮುರಲ್ದ ಕರ್ಣಮು
ಲ್ಲಲ್ಲಿಗೆ ನಿಂದು ನಿ[7]ಳ್ಕಿ ನ[7]ಸು ನೋಟ್ಪ ಪಿಶಂಗವಿಲೋಚನಂಗಳೊ
ತ್ತಿಲ್ಲದ ತಾಣದೊಳ್ ನೆಲಕೆ ಪರ್ಬುವ ಗಾತ್ರಮುಗುರ್ವನೀಯೆ ಪೆ
ರ್ಬುಲ್ಲೆಗೆ ಬಂದು ಸಾರ್ದು[8]ದು[8] ತರಕ್ಷು ಮೃಗಾವಳಿಯಿಕ್ಕೆದಾಣಮಂ ೧೫೩

ತೀಡುವ ಗಾಳಿಯಿಂದಱಿದು ಮೈಸೊವಡಂ ಮೊಗವೆತ್ತಿ ಸುತ್ತಲುಂ
ನೋಡಿ ಕಱುಂಕೆ ಸೂಸೆ ಕಡೆವಾಯ್ಗಳೊಳಾಲಿಸಿ ಕಾಲ ಸೊಪ್ಪುಳಂ
ಕೂಡೆ ಪೊದಟ್ದು ಪೊಣ್ಮಿದ ಭಯಾತುರದಿಂದೆರ್ದೆವಾಯೆ ಗಂಡುಗೆ
ಟ್ಟೋಡಲೊಡರ್ಚೆ ಪೆಪ್ಪಳಿಪಿನಂ ಪುಲಿವಾಯ್ದುದು ಪುಲ್ಲೆವಿಂಡಿನೊಳ್ ೧೫೪

---

[1] ಬೆಕ್ಕದೊರ್ಡ್ದು (ಬ) [2] ಲತ್ಪ (ಕ) [3] ಭಾ (ಕ) [4] ಕೊರಿಸೆ ಸರಿ (ಕ)
[5] ಲಸ್ಥಳ (ಕ) [6] ಮುಱಿಯುಂ ತಾಯುಂ (ಖಬ) [7] ಬ್ಬುವ (ಕ) [8] ವು (ಕ).

ಚಳಲಾಂಗೂಲಂ ಸಮುದ್ಯದ್ಘುಳು[1]ಘುಳಿತ ಗಳ[1]ಧ್ವಾನರೌದ್ರಾನನಂ ಪಿಂ
ಗಳಿತ ಪ್ರೋಜ್ಜೃಂಭಿ[2]ತಾಕ್ಷಂ[2]ಪು[3]ಲಿ ನಿಲಲಿ[3]ದಿರೊಳ್ ತದ್ಭಯಭ್ರಾಂತೆ ಕೌತೂ
ಹಳೆ ನಲ್ಲಳ್ ಭೋಂಕೆನಲ್ ಪೆರ್ಬುಲಿಯ ಭಯದೆ ತನ್ನಪ್ಪ ಬಿಟ್ಟಪ್ಪಳೆಂದು
ಪ್ಪೃಳದಿಂದಂ ತೀವಿ ತೊಟ್ಟುಂ ಮಿಸುಕದೆಸದೆ ನಿಂದಂತೆ ನಿಂದಂ ಪುಳಿಂದಂ ೧೫೫

ಇದಿರೊಳ್ [4]ಗರ್ಜಿಸಿ ಪುಲಿ ನಿಲೆ[4]
ಬೆದಱಿ ಕರಂ ಶಬರಿ [5]ಬರಿಯ[5]ನಪ್ಪಲೊಡಂ ರೋ
ಷದಿನಲರ್ದುದೊಂದು ಕಣ್ ರಾ
ಗದೆ ಮುಗುಳ್ದುದದೊಂದು ಕಣ್ ವನೇಚರಪತಿಯಾ ೧೫೬

(ಚಂದ್ರಪ್ರಭಪುರಾಣಂ, ೫–೫೯.)

ಉಗುವುರ್ಯಿಲ್ಲ ತನ ಮೆಯ್ಯೊಳೀ ಪುಲಿಯ ಪೊಯ್ಲಿಂದಾದುವೆಂದೋಪವಳ್
ಬಗೆವಂತನ್ಯವಧೂರತೋತ್ಸವ ನಖಾಂಕಾನೀಕಮಂ [6]ಮುಚ್ಚುವು[6]
ಜ್ಜುಗದಿಂದಂ ಪಿಡಿದೊಂದು ಪೆರ್ಬುಲಿಯನೊರ್ವಂ [7]ಕಕ್ಷದಿಂ[7]ದೊತ್ತಿ ತ
ನ್ನ ಗೃಹಕ್ಕೆಯ್ತರುತಿರ್ದನೊಂದೆಡೆಯೊಳುದ್ಯದ್ಧೀವರಂ ಧೀವರಂ ೧೫೭

(ಜಗನ್ನಾಥವಿಜಯಂ, ೧೬–೨೦.)

ಉರವಣಿಯಿಂ ಕೃತಾಂತ[8]ನವೊ[8]ಲೆಯ್ದುವ ದಂತಿಯ ಮುಂದೆ ಪೊಕ್ಕು ಸಾ
ರ್ದುರಮನೆಸಲ್ [9]ಪೆಡಂ[9]ಮಗುಬ್ದು ದಂತಿಯ ವಕ್ಷಮನುರ್ಚಿ ಪೇಚಕಾಂ
ತರದೆ ನುಸುಳ್ದು ತನ್ನುರಮನುರ್ಚಿದೊಡಚ್ಚರಿವಟ್ಟನೆಚ್ಚ ಬಿ
[10]ಚ್ಚ[10]ರಿಕೆಗಮಾ ತೆಱಂ [11]ಮು[11]ರಿದ ದಂತಿಗಮಾ ವನದೊಳ್ ವನೇಚರಂ ೧೫೮

ವನಚರಿ ಪಾಡೆ ಪಾಡಱಿದು ಸಾರ್ದೊಲೆದಾಲಿಸುತಿರ್ಪ ದಂತಿಯಂ
ವನಚರನೆಚ್ಚೊಡೈದೆ ಬಿರಿದಾನೆಯ ಕುಂಭದಿನುನ್ನಮುನ್ನಿಜ
ಸ್ತನಭರಕುಂಭಮಂಡಲಕೆ ಸೋಲ್ತದು ಸೇಸೆಯನಿಕ್ಕುವಂತೆ ಮು
ತ್ತಿನ ಸರಿ ಸೋರೆ ಹಾರರಚನಾತುರೆಯಾಯ್ದುಳವಳ್ ವಿಳಾಸದಿಂ ೧೫೯

(ಲೀಲಾವತಿ, ೮–೩೫.)

ಭಾಸುರ ಕೇಸರಪ್ರತತಿ ಕೇ[12]ಸು[12]ರಿಯಂ ಕುಡುದಾಡೆ ನಾಡೆ ಸಂ
ಧ್ಯಾಸಮಯೋದ್ಗತಾಮೃತಕರಾಂಕು[13]ರ[13]ಮಂ ತನು ಬಾಲಭಾಸ್ಕರೋ

[1] ಘುಳುಘುಳಿತ (ಕ) [2] ತಾಂಗಂ (ಖಬ) [3] ದಿದಿಡಿದಿ (ಖಬ) [4] ಪುಲಿ ಗರ್ಜಿಸಿ ಬರೆ (ಖಬ) [5] ಪ್ರಿಯನ (ಖಬ) [6] ವಂಚಿಪು (ಅ) [7] ಕುಕ್ಷಿಯಿಂ (ಗ) [8] ಕನೊ (ಕ) [9] ಕರಂ (ಕಗ) ಖೆಡಂ (ಖ) [10] ತ್ತ (ಖಬ) [11] ದಿ (ಕಖ) [12] ಸ (ಕ) [13] ಶ (ಖಬ).

ದ್ಭಾಸಿತ ದೀಪ್ತಿಯುಂ ಮಸುಳಿಸುತ್ತಿರೆ ಕಟ್ಟದಿರಾಗಿ ಪಾಯ್ವುದಂ
ಕೇಸರಿಯುಂ ಮೃಗಕ್ಕರಿಯನಾಂತಿಱಿದಂ ಪ್ರತಿರೂಪಶೂದ್ರಕಂ ೧೬೦

ಮುಗಿಲೊಡೆಯೆ ಗಜಱಿ ಗರ್ಜಿಸಿ
ಮೃಗಾರಿ ಮೇಲ್ವಾಯೆ ಕಟ್ಟದಲಗಂ ಕಿತ್ತಾ
[1]ಯು[1]ಗವಾಂಕೆಯಾಗೆ ನೆತ್ತರ್
ಭುಗಿಲೆಂದೊಡನೆಗೆಯೆ ಸುಭಟಶೂದ್ರಕನಿಱಿದಂ ? ೧೬೧

ಸಿಂಗಂಗಳನವಯವದಿಂ
ನುಂಗುವ ಶರಭಂಗಳೆಂಟನೆಂಟುಂದೆಸೆ ಮಾ
ತಂಗ[2][ವ][2] ಮಸುಳಿಪ ಗರ್ಭದೆ
ಪೊಂಗಿದ ಕೌಂಕುಳಿನಿಱುಂಕಿ ಬರ್ಪರ್ ಶಬರರ್ ೧೬೨

ಪುಲಿಯುಗುರಿಂದಮಾದ ಕಲೆ ದಂಡೆಯೊಳೆಕ್ಕಲವಂದಿ ಪಾಯ್ದು ಪೆ
ರ್ಗಲೆ ತೊಡೆಯೊಳ್ ಗಜಂ ರದನದಿಂದಿಱಿದೆತ್ತಿದ ಡೋಣಿ[3]ವಾಯ್ದು[3] ಪೆ
ರ್ಗಲೆ ನಿಜವಕ್ಷದೊಳ್ ಮಿಱುಗೆ ಮಿಾನ್ ಮೃಗಪಕ್ಷಿಯನಾಂತುಕೊಂಡು ಕೋ
ಸಲೆಯ ಪುಳಿಂದನೊಂದೆ ಗುದುಕಿಂ ಬರುತಿರ್ದನದೊಂದು ತಾಣದೊಳ್ ೧೬೩

ಕರಿ ಪೊಣರ್ದೆಕ್ಕಲಂ ಮಲೆತು ಪೆರ್ಬುಲಿ ಪಾಯ್ದುಗಿಯಲ್ಕೆ ಡೋಣಿವಿ
ಟ್ಟುರದ ಪಿಸುಟ್ಟು ಪೆರ್ಗೊಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾ
ಗಿರೆ ನೆಱೆ ಮೂಱು ಬೇಂಟೆಯುಮನಾಡಿ ತದಾಮಿಷಭಾರದಿಂದೆ ಜೀ
ರ್ಗರೆಯು[4]ತುಮಂತೆ ಕಾಲ್ಸೋಲಪಿನಿಂ[4] ಬರುತಿರ್ದನದೊರ್ವ ಲುಬ್ಧಕಂ ೧೬೪
(ಜಗನ್ನಾಥವಿಜಯಂ, ೧೬–೨೧.)

ಗಗನತಳಂಬರಂ ನೆಗೆದು ಮತ್ತಗಜಂಗಳ ಮಸ್ತಕಕ್ಕೆ ಪಾ
ಯ್ದುಗಿಬಗಿಮಾಡುವಲ್ಲಿ ಪೊಳೆವಂಕುಶದಂತಿರೆ ಕೊಂಕುವೆತ್ತ ಕೂ
ರುಗುರ್ಗಳೊಳೆಯ್ದೆ ತೆತ್ತಿಸಿದ ಮುತ್ತಿನ ಲೋಭದೆ ಕೊಲ್ವರೆತ್ತಲುಂ
ಮೃಗಪತಿಸಂಘಮಂ ಪಲರುಮಾ ಬನದೊಳ್ ಶಬರಾಧಿನಾಯಕರ್ ೧೬೫
(ಕಾದಂಬರಿ, ಪೂ. ಭಾ., ೯೯.)

ಕಾಯ್ ಸತ್ತೆಂ ಕೆಟ್ಟೆನೋವೋ ಬೊಬೊಬೊಬೊಬೊಬೊಬೋ ಕೂಗು ಕೂಗು
[ಸಾಯ್‌ಸಾಯ್
ಸಾಯ್ ಸಾಯೆತ್ತೆತ್ತ ಪತ್ತೊತ್ತೊರಸಿ ಬೆರಸು ಬಾಯ್ಮಾಡಿದೇನೆಂದು ನಿಂದಾ

[1] ಯು (ಕ) [2] ಳ್ (ಕಖಬ) [3] ಯೋದ (ಬ) [4] ತೆ ಮಾಂಸವಾಂತೊಲವಿನಿಂ (ಅ).

ರಯ್ಸುತ್ತೊತ್ತಿತ್ತು ಬಿಲ್ಲಂ ನಡೆದಿಡು ದಡಿಯಂ ಕೊಳ್ಕೊಳೆಯ್ದಿಯ್ದು ಬಯ್ಪೊಯ್
ಕೊಯ್ ಸೀಳ್ಕೊಳ್ಳುತ್ತು ಕೊಲ್ ಕೊಲ್ ಕೆಡೆ ಕೆಡೆ ಕೆಡೆ ಯೆಂಬಬ್ಬರಂ ಪರ್ಬಿತೆತ್ತಂ

(ಲೀಲಾವತಿ, ೫—೧೩೩.)

ದಡಿಯೊಳೆ ಕೋದ ಪಂದಿ ಕೊನೆವಿಲ್ಲೊಳೆ ಕೈ[1]ಪೊಡೆಯಂತೆ[1] ನೇಲ್ವ ಪೇ
ರುಡು [2]ಮುಱಿದಿಕ್ಕೆ[2] ಕಲ್ಲಿಯೊಳೆ ಸಾಯದೆ ಸಂಕಟಗೊಳ್ವ ಪಕ್ಕಿ ಪೆ
[3]ರ್ಬು[3]ಡಿಕೆಯೊಳಿರ್ಪ ಗುಂದಿ ನಸು[4]ಗೆ[4]ತ್ತುವ ಮೀನ್ಗಳ ಸೇದೆಯಿಂದೆ ಪೇ
ರಡವಿಯೊಳಂದು ಬೇಡವಡೆ ಬಂದುದು ಕೂಡೆ ತೊೞಲ್ದು ಬೇಂಟೆಯೊಳ್ ೧೬೭

ಉಡು ಸವಿಲಾವೆ ಬೆಕ್ಕು ನರಿ ಲಾವುಗೆ ದೊಡ್ಡಿನಹೋರಿ ಹೇರಣಿಲ್
ಗಿಡುಗ ಮೊಲಂ ಕವುಂಜು ಮರೆ [5]ಮುಂಗ[5]ಲಿ ಕಕ್ಕರವಕ್ಕಿ ಕೋಡಗಂ
ಕಡವೆಳೆ ಬಳ್ಳು ಕೊಂಡುಗುಱಿ ಕೂರಗೆಯೆಂಬಿವನೈದೆ ಕಾ[6]ಸಿ[6]ನೊ
ಳ್ಗಡಣದೆ ಪೊತ್ತು ಬೇಡವಡೆ ಬಂದುದು ಕಾನನದೊಳ್ ನಿರಂತರಂ ೧೬೮

ಬಿದಿರು[7]ದಿರ್ದ[7]ಕ್ಕಿ ಪಕ್ಕಿ[8]ವೊಱೆ[8] ಪುಲ್ ಮಯಣಂ ಗುಱುಗುಂಜಿ ಜೇನುತು
ಪ್ಪದ ಕೊಡನೆಯ್ಯ ಮುಳ್ ಪುಣಿಸೆ [9]ಪಣ್ಗಳು[9] [10]ಹೂತಿ[10]ಯ ಬೆಕ್ಕು ಸೀಳ್ದ ಮು
ತ್ತದ ಪೊಸನಾರ್ ಸೆಣಂಬು ಪಲವುಂ ಮೃಗವಕ್ಕಿಗಳಿಂದವೊತ್ತಿ ಕ
ಟ್ಟಿದ ಮರ[11]ಗಂಬಿ[11] ಜೀರ್ಗರೆವಿನಂ ಗುದುಕಿಂ ಮಗುೞ್ದರ್ ವನೇಚರರ್ ೧೬೯

ಕರಿದಂತಂಗಳನಾಂತು ಪೀಲಿವೊಱೆಯಂ ತೞ್ಕೈಸಿ ಗಂಧೇಭ ಬಂ
ಧುರಮುಕ್ತಾಫಳಭಾರಮಂ ತಳೆದು ಮಾಂಸವ್ರಾತಮಂ ಪೊತ್ತು ಕೇ
ಸರಿ ಚರ್ಮವ್ರಜಮಂ ತೆರಳ್ಚಿ ಚಮರೀವಾಲಂಗಳಂ ತಾಳ್ದು ಬಂ
ದರನೇಕರ್ ಬೞಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ ೧೭೦

(ಕಾದಂಬರಿ, ಪೂ. ಭಾ., ೧೬೯.)

ಬಾೞೆಯ ಗುದಿ ಬಲಗಯ್ಯೊಳ್
ಬಾೞೆಯ ಗೊನೆ ಪೆಗಲೊಳೊಪ್ಪೆ ಹಕ್ಕಿಯ ಸಿಲುಕಂ
ತೋಳ ಮೊದ[12]ಲೆತ್ತಿ[12] ಬರುತಿರೆ
ಬಾಳೆಯ[13] ಕಯ್[13] ಪಿಡಿದು ವನಚರಂ ನಡೆತಂದಂ ೧೭೧

---

[1] ಪಡೆದಂತೆ (ಕ) [2] ತನುಸೋಂಕೆ (ಖಬ) [3] ಬರ್ (ಕ) [4] ಗಿ (ಕಬಖ) [5] ಮೂಗಿ (ಕ) [6] ನಿ (ಕ) [7] ದುಳ್ದಳಿ (ಕ) [8] ಪೊಡೆ (ಕ) [9] ಕಣ್ಗಂ (ಕ) [12] ಹುತ್ತಿ (ಖಬ) [11] ಗುಂಜಿ (ಖಬ) [12] ಲಲ್ಲಿ (ಖಬ) [13] ಕಾಯ್ (ಖಬ).

ಕರೆವಂತಾಡುವ ಪಲ್ಲವಪ್ರಕರದಿಂ ಮಂದಾನಿಲಂ ಸೋಂ[1]ಕೆ[1] ಬೀ
ಟ್ವರಲಿಂದರ್ಚಿಸುವಂತೆ ಕೋಕಿಲರವಪ್ರಧ್ವಾನದಿಂ ಸ್ವಾಗತ
ಸ್ವರಮುಂ ಬಿತ್ತರಿಪಂತೆ ತೋಱಿ ಮೆಱೆಯುತ್ತಿರ್ದಪ್ಪವಲ್ಲಿರ್ದ ಮಾ
ಸುರ[2]ಗಳ್[2] ಪೊರ್ದಿದ ಮಾನಸರ್ಗೆ ನಿಜದಿಂದಾತಿಥ್ಯಸತ್ಕಾರಮಂ ೧೭೨

ಪಿಡಿವುದು ಸೋಗೆ ಸೋಗೆವೊದಱಿಂ ನೆಟಿಲಂ ಜರತಾಪಸರ್ಗೆ ಕೈ
ಗುಡು[3]ವುವು[3] ಕೋಡಗಂ [4]ಜಲ[4]ಗಳಂ ಕುಡಿಗೈಗಳ[5]ನೊ[5]ಯ್ದು ತಂದು ಮುಂ
ಗುಡುವುವು ಹಸ್ತಿ ತಂದು ಮರದೊಳ್ [6]ಸ[6]ಮುಕಟ್ಟರೆ ನಿಂದು [7]ವಾಕ್ಯ[7]ಮಂ
ನುಡಿವುವು ರಾಜಕೀರಕುಳಮಾಶ್ರಿತಪಾವನಮಾ ತಪೋವನಂ ೧೭೩

ಜಲರುಹಬೀಜರಾಜಿಗಳನಾಱಿಪ ಪರ್ಣಕುಟೀರಕಂಗಳಂ
ನಿಲಿಸುವ ದಂಡಮೊತ್ತುವ ಮೃಗಾಜಿನಮಂ ಪೊಲುತಿರ್ಪ ಮುಂಜಮೇ
ಖಲೆಗಳನೊಪ್ಪಮಾಡುವ ಸಮಿತ್ಕುಶಮಂ ತರವೋಪ ಧೌತವ
ಲ್ಕಲಮನಲುಂಬುವಕ್ಷಮಣಿಯುಂ ಸಮೆವೀ ವ್ಯವಸಾಯಮೆತ್ತಲುಂ ೧೭೪

(ಕಾದಂಬರಿ, ಪೂ. ಭಾ., ೨೨೪.)

ಅತಿಥಿಯನಾದರಿಪ್ಪ ಪಿತೃದೈವಮನರ್ಚಿಪ ಧರ್ಮಶಾಸ್ತ್ರಸಂ
ಗತಿಗಳೊಳಿರ್ಪ ಯಜ್ಞವಿಧಿವೇಟ್ಪ ಪುರಾಣಮನೋದುವಾಗಮ
ಪ್ರತತಿಗಳಂ ವಿಚಾರಿಸುವ ತತ್ವನಿರೀಕ್ಷಣೆಗೆಯ್ವ ಯೋಗದು
ನ್ನತಿಕೆಯನಪ್ಪುಗೆಯ್ವ ಮುನಿಸಂಘದಿನೊಪ್ಪುವುದಾ ತಪೋವನಂ ೧೭೫

(ಕಾದಂಬರಿ, ಪೂ. ಭಾ., ೨೨೫.)

ಪರಮ ತಪೋನಿಧಿಗಳ್ಗಂ
ಬರ[8]ನದಿ[8]ಯುಂ ಮೀಯ[9]ಲಿಟ್ಟ[9] ನಿಚ್ಚಣಿಗೆವೊಲ
ಚ್ಚರಿವಡೆಯೆ ನೆಗೆವುದೆನಸುಂ
ತೆರೆ ಮಸಗುವ ಹೋಮಧೂಮಮಾ ಮುನಿವನದೊಳ್ ೧೭೬

ಶರಭಂ ಕೇಸರಿಗಳ್ಗೆ ಕೇಸರಿ ಕರೀಂದ್ರಂಗಳ್ಗೆ ಕಾಡಾನೆ ಬೇ
ಡರ ಕಪ್ಪಿಂಗೆ ಪುಳಿಂದ[10]ಸಂಕುಳಮೆ[10] ಶಾರ್ದೂಲಕ್ಕೆ ಶಾರ್ದೂಲಮ
ಚ್ಚರಿ ಸಾರಂಗಮೃಗಕ್ಕೆ ಚಿತ್ರಕಮೃಗಂ ಪಾವಿಂಗೆ ಪಾವಲ್ಲಿ ಮುಂ
ಗುರಿಗಳ್ಗಂಜದೆ ಬಿಟ್ಟು ಪೊ[11]ರ್ದುವು[11]ವಲಂಪಿಂ ಜಾತಿವೈರಂಗಳಂ ೧೭೭

(ಅನಂತನಾಥಪುರಾಣಂ, ೯—೯೮.)

---

1 ಕಿ (ಕ) 2 ಮಂ (ಕ) 3 ಗುಗು (ಕ) 4 ಋಷಿ (ಖಬ) 5 ನಾ (ಖಬ) 6 ಸು (ಖಬ) 7 ಹವ್ಯ (ಖಬ) 8 ನಿಧಿ (ಕ) 9 ಲುಂ (ಕ) 10 ರರ್ಬಿಸುವ (ಕ) 11 ದಿರ್ದು (ಕ).

ಒಡವರ್ಪೇಬೆಸನೆಂಬ ಕೈಗುಡುವ ತೀರ್ಥಕ್ಕುಯ್ವ ದೇವಾರ್ಚನ
ಕ್ಕೆಡೆಯಂ ಮಾಡುವ ಹೋಮಸಾಧನಸಮಿ[1]ದ್ದರ್ಭಾ[1]ರ್ಘ್ಯತೋಯಂಗಳಂ
ಕುಡುವಿರ್ದಲ್ಲಿಗೆ ಕಂದಮೂಲಫಲಮಂ ತಂದೀವ ಪರ್ಯಾಪ್ತಿಯಂ
ಪಡೆವನ್ನಂ ಬಿಡದಿಂತು ವೃದ್ಧಯತಿಗಳ್ಗಾ ಸ್ಥಾನದೊಳ್ ವಾನರರ್ ೧೭೮

ಕರಿ[2]ಣಿ ಕರಾಂಗುಲಿಯಿಂ[2] ಕೇ
ಸರಿಯ [3]ಚಲ[3]ತ್ಕೇಸರಂಗಳಂ ತೊಡೆದುದು ಕೇ
ಸರಿಣಿ ಮೊಲೆಯೂಡುತಿರ್ದುದು
ಕರೇಣುಜಾತಕ್ಕಮಾತ್ಮಸಂಜಾತಕ್ಕಂ ೧೭೯

(ಅನಂತನಾಥಪುರಾಣಂ, ೩—೩೭.)

ಪರಮ ತಪೋನಿಧಿಗಳ್ ಸಂ
ಚರಿಸುವ ಬಟ್ಟೆಯನಗಲ್ದು ನಟ್ಟವಿಸಲ್ ಕಾ
ಯ್ದುರಗಂ ಪುಡಿಯೊಳ್ ಪೊರಳು
ತ್ತಿರೆ ಸೋಗೆಯನೆತ್ತಿ ಸೋಗೆ ಪಿಡಿದುದು ನೆೞಲಂ ೧೮೦

(ಅನಂತನಾಥಪುರಾಣಂ, ೩—೩೮.)

ಬೆಚ್ಚದೆ ಬೆದಱದೆ ಮೊಲೆಯಂ
ಸಾರ್ಚಿದ [4]ಮಱ[4]ವೆರಸು ಸುೞಿವ ಮಾನಿಸರುಲಿಪಂ
ಮುಚ್ಚಿದ ಪುಲ್ಲೆಗಳಲ್ಲಿ ಪೊ
ಣರ್ಚುತ್ತಿರ್ದಪುವು ಶಾಂತರಸಪರಿಣತಿಯಂ ೧೮೧

ಜಡೆಗಳ ಬಂಬಲೊಳ್ ತೊಡರ್ದು ಬಳ್ಳಿಗಳಿರ್ದವು ಮೆಯ್ಯನೆಯ್ದೆ ಪು
ತ್ತಡರ್ದವು ಗಡ್ಡಮಂ ಬಳಸಿ ಗೂಡುಗಳಿಟ್ಟವು ಪಕ್ಕಿ ಕಂಗಳಂ
ಕಡಿದವು ಪತ್ತಿ ಕಟ್ಟೆ[5]ಱುಪೆಗಳ್[5] ಬೆಮರಂ ನಸುನಕ್ಕುತಿರ್ಕು[6]ಮಾ
ಗಡ[6]ಮುರಗಂಗಳೇವೊಗೞ್ವೆನೇದೊರೆಯುಗ್ರತಪಂ ತಪಸ್ವಿಯಾ ೧೮೨

ಒರಸಿಕೊಳಲೆಂದು ಪೊರ್ದಿದ
ಹರಿಣಂ ಮೇಗಡರ್ದ ಪುತ್ತು ಶಾರ್ದೂಲಂ ಶಾಂ
ತರಸಪ್ರ[7]ವಾಹ[7]ಮೆಸೆದಿರೆ
ಧರೆಯೊಳ್ ಮೂಡಿದ ಸುಧಾಂಶುವಂ ಮುನಿ ಪೋಲ್ತಂ ೧೮೩

(ಅನಂತನಾಥಪುರಾಣಂ, ೪—೨೯.)

---

[1] ದ್ದಂಗಾ (ಖಬ) [2] ಣೀಕರಂಗಳಂ (ಕ) [3] ಜರ (ಕ) [4] ಮೊಲೆ (ಖಬ)
[5] ಪೆಗಲೊಳ್ (ಖಬ) [6] ವಡಗಂ (ಕ) [7] ಭಾವ (ಖಬ).

ಹರನಂ ಗೆಲ್ವೆನವೋಘವೆಂದು ಮದನಂ ಪೆರ್ಚಿಂ ವ್ರತಂಗೊಂಡನೋ
ಸ್ಮರನೀಶಾಗ್ನಿಯೊಳಟ್ಟೆ ಶೋಕದೆ ವಸಂತಂ ಯೋಗಿಯಾಗಿರ್ದನೋ
ಹರಜೂಟೇಂದು ಸಮಸ್ತಮಂಡಲನಿಮಿತ್ತಂ ವರ್ಣಿಯಾಗಿರ್ದನೋ
ಪಿರಿದುಂ ತಾನೆನಲೊರ್ವ ತಾಪಸಕುಮಾರಂ ಧೀರನೊಪ್ಪಿರ್ದನೋ ೧೮೪

ಮನಮಿರೆ ಪುರ್ವಿನ [1]ಮೊದಲೊಳ್[1]
ಮನದೊಳಗಿರೆ ವಾಯು ಕರಣತತಿ ವಾಯುವಿನೊಳ್
ಕುನಿದಿರೆ ಪದ್ಮಾಸನದೊಳ್
ತನುವಿರೆ ಯೋಗೀಂದ್ರನಾತ್ಮಚಿಂತೆಯೊಳಿರ್ದಂ ೧೮೫

(ಯಶೋಧರಚರಿತ್ರೆ, ೪–೧೩.)

ಪರಮತಪಃಪ್ರಭಾವ ನೆಲೆನಿಂದು ದೃಢಾಸನನಾಗಿ ನೀಗಿ ದು
ಷ್ಕರಣಗುಣಂ ಕುನುಂಗಿರೆ ಮನಂ ನೊಸಲಲ್ಲಿರೆ ಲೋಚನಂಗಳು
ಳ್ಳರೆಮುಗಿದಿಂಬುವೆತ್ತಿರೆ ಸುದಂತಚಯಂ ಸಮನಾಗಿ ತಮ್ಮೊಳೊಂ
ದಿರೆ ಸಮಸಂದುದಾ ಪರಮಯೋಗಿಯ ಯೋಗ ನಿಯೋಗಭಾವಮಂ ೧೮೬

ಹರನಂ ಶಂಕರನಂ ಜಿತತ್ರಿಪುರನಂ ನೇತ್ರಾಗ್ನಿಭಸ್ಮೀಕೃತ
ಸ್ಮರನಂ] ತುಂಗಹಟಜ್ಜಟಾಭರನಸುದ್ಯದ್ಭಕ್ತಿಭಾ[2]ವಾ[2]ನತಂ
ವರಗಂಗಾಧರನಂ ಮೃಡಾಣಿವರನಂ ವ್ಯಾಲೋಲಬಾಲೇಂದುಶೇ
ಖರನಂ ತಾಳ್ದಿದನಾತ್ಮಹೃತ್ಕಮಲದೊಳ್ ಯೋಗೀಂದ್ರವೃಂದಾರಕಂ ೧೮೭

(ಕನ್ನಡ ಪಂಚತಂತ್ರಂ—ಪುಟ ೭೫, ಪದ್ಯ ೨೫.)

[3]ಖಂಡಿಸಿದಂ[3] ಮುನಿ ಸುಮನಃ
ಕಾಂಡ[4]ನನೆಂದಲ್ಲಿ ಮಱೆಗೆ ಬಂದುದು ಹಿಮರು
ಜ್ಮಂಡಳಮೆನೆ ಶಶಿಕಾಂತಕ
ಮಂಡಲು ಪೊಳೆದತ್ತು ಪುಳಿನ ನಳಿ[5]ನಾಂತರ[5]ದೊಳ್ ೧೮೮

(ಅನಂತನಾಥಪುರಾಣಂ, ೩–೪೯.)

ಪ್ರೀಣನಮಾದುದು ಮುನಿಗೀ
ವಾರ್ಣಮುಖಾಂಬುಜಮನಡರ್ದಿರಲ್ ಶೈಶವದೊಳ್
ವಾಣೀವಧು ನಿಱಿಸಿದ ನಿ
ಶ್ರೇಣಿಯವೋಲ್ ಶ್ರುತದ ಶವಣಕೋಲ ವಿ[6]ಕಾ[6]ಸಂ ೧೮೯

(ಅನಂತನಾಥಪುರಾಣಂ, ೩–೫೦)

---

[1] ಕೊನೆಯೊಳ್ (ಅ) [2] ರಾ (ಕ) [3] ಕಂಡರಸಿದ (ಖಬ) [4] ಮಿದಂ (ಖಬ) [5] ನಾಂತಿಕ (ಕ) [6] ಳಾ (ಅ).

ನನೆಯಂಬಂ ಬಿಸುಟಿಕ್ಷುಚಾಪಲತೆಯಂ ಬಾಟಿಜ್ಜೊಂ[1]ಪ[1]ದೊಳ್ ಸೆಕ್ಕಿ ಕೇ
ತನಮಂ ಮಿಾನ್ಗೊಳದೊಳ್ [2]ಮಡಂಗಿ[2] ಮುನಿಪಾದೋಪಾಂತದೊಳ್ ಸಾ[3]ರ್ದು[3]
ಷನಿಷಣ್ಣಂ ರತಿಯಂ ಮಗುಟ್ಚಿ ಕಳೆದಂ [4]ದೌಶ್ಚಿ[ತ್ರ್ಯಪಶ್ಚಾತ್ಪ]ೃ[4]ಯಾ [ವೇ
ಯಿನಿಯಂ ಕಿಂಚಿದಪಾಂಗಸಂಸ್ಫುರಿತಸಂಜ್ಞಾಲೋಕದಿಂ ಮನ್ಮಥಂ ೧೯೦

(ಅನಂತನಾಥಪುರಾಣಂ, ೩–೫೧.)

[5]ಕ್ಷಮಯುತ ತಾಪಸವ್ರಜಗಳಂದವನೀರುಹ[5] ದೋರ್ಲತಾ
ಸಮುದಯ ಹಸ್ತಪಲ್ಲವದಿನೆಣ್ದೆಸೆ ಪಲ್ಲವಿತಂಗಳಾಗೆ ಜೋ
ಲ್ದಮೃತಫಲಂಗಳಂತಿರೆ ಕಮಂಡುಲು ಜಂಗಮಪಾರಿಜಾತದಾ
ರಮೆಯವೊಲಾಯ್ತು ನೋಡೆ ಸಮುದಾಯಸಮಾಗಮನಂ ಮುನೀಂದ್ರರಾ ೧೯೧

ತಲೆವಾಗುತ್ತಿರ್ದುವೆಂಬಂತೆಱಪ ಮರಗಳಿಂದರ್ಚಿಸುತ್ತಿರ್ದುವೆಂಬಂ
ತಲರ್ಗಳ್ ತಳ್ತಲ್ಲೊಗುತ್ತಿರ್ದಖಿಳ ತರುನಿಕಾಯಂಗಳಿಂ ಕೂಡೆ ಬದ್ಧಾಂ
ಜಳಿಯಾಗುತ್ತಿರ್ದುವೆಂಬಂತೆಸೆವ ಕಿಸಲಯಾಬದ್ಧ ಸಂಛನ್ನ ಶಾಖಾ
ಕುಲದಿಂ ಚೆಲ್ವಾದ ಋಷ್ಯಾಶ್ರಮದ [6]ರಚನೆ[6]ಯಂ [7]ಬಣ್ಣಿಸಲ್ ಬಲ್ಲನಾವಂ[7] ೧೯೨

(ಕಾದಂಬರಿ, ಪೂ. ಭಾ., ೨೨೫.)

ಪ್ರತಿಮಾಯೋಗ[8]ದೊಳೊ[8]ಪ್ಪುವ
ಯತಿಪತಿಗಳ ಕುರುಳ ಬಂಬಲೊಳ್ ಚಳಶಾಖಾ
ತತಿ [9]ಕೂಡೆ[9] ತೊಡ[10]ರ[10] ಬಿಡಿಸುವ
ದತಿಸಂಭ್ರಮದಿಂದಮೆಯ್ದೆ ಮರ್ಕಟನಿಕರಂ ೧೯೩

(ಲೀಲಾವತಿ, ೮–೬೩.)

ಪೊಕ್ಕು ಕುಟೀರಮಂ ಕೆದಱಿ ಹೊತ್ತಗೆಯಂ ಮಸಿಯಕ್ಕರಂಗಳಂ
ನೆಕ್ಕಿ ಬಿಸುಟ್ಟು ಬೊಕ್ಕಣದ ಬೂದಿಯನುಃಪೆನಲೂದಿ ಮೂಗಿನೊಳ್
ಪೊಕ್ಕೊಡೆ ಸೀಂತು ಮಾಣ್ದಿರದೆ ಪಾಯ್ದು ವಿಜೃಂಭಿಸಿ ಕೊಂಬನೇಱಿ ಪು
ರ್ವಿಕ್ಕಿ ಕುಮಾರತಾಪಸರನೇಡಿಸುತಿರ್ದುದದೊಂದು ಕೋಡಗಂ ೧೯೪

(ಕಾವ್ಯಸಾರಂ, ೪೪–೧೧೧೮.)

ತುದಿಗೋಡಂ ಮೆಟ್ಟಿ ಕೊಂಬಂ ಪಿಡಿದು ಜಡಿದು ತೂಗಾಡಿ ಕಿಱಿ[?]ಂದು ಮುನ್ನೇ
ಱಿದ ಕೋಡಂ ನೋಡಿ ಪಲ್ಲಂ ಕಿಱಿದಗಿಮುರವಂ ಪಿಕ್ಕಿ [11]ಪೇನಿಂದೆ[11]ತಿನ್ನುರ್ವಿ

---

[1] ನ್ನ (ಕ) [2] ಬೆಲಂಗಿ (ಅ) [3] ಧು (ಅ) [4] ದೌಶ್ಚಿಂತ್ಯಪಾಶ್ಚಾತ್ಯ (ಅ) ದೌಶ್ಚಿತ್ತಪಶ್ಚಿತ್ಯ (ಕ) ದೌಶ್ಚಿತ್ತಪಶ್ಚಾತ್ತ (ಖಬ) [5] ಕ್ರಮನಮನೀರಜಾವಳಿಗಳಿಂ ಧರೆನೀರಜ (ಖಬ) [6] ಮಹಿಮೆ (ಖಬ) [7] ನೋಡುತಂ ಪೋದನಾಗಳ್ (ಅ) [8] ದಿನೊ (ಕಖಬ) [9] ತೂಗಿ (ಅ) [10] ರೆ (ಕ) [11] ಪೇನ್ದಿಂದುಱಿನು (ಕ) ಪಿಂದಿಂದುರೆ (ಖ).

ದ ಮೆಯ್ಯಂ ಕಯ್ಯೊಳೆತ್ತಂ ತುಱಿಸಿ ಮಱಿಗಳಂ ಸಾರ್ಚಿಕೊಂಡಂತೆ ಕುಳ್ಳಿ
ರ್ದು[1]ದು ಕೋಡಂ[1] ಕೋಡಹೇಮಂತದೊಳೆಳವಿಸಿಲಂ ಕಾಯುಲೆಂದಾತ್ಮಧೂರ್ತಂ

ಪಲ್ಗಿಱಿದು ಪುರ್ವನುರ್ವಿ ಬೆ
ರಲ್ಗೊನೆಯಿಂ ತುಱಿಸಿ [2]ಪಿರಿಯ ನೀಳ್ದು[2]ಪ್ಪುಟಿ ಬಂ
ಬಲ್ಗಳನುಗುರಿಸಿ [3]ಪಿ[3]ಕ್ಕಿ ಬಿ
ಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ ೧೯೬
(ಜಗನ್ನಾಥವಿಜಯಂ, ೧೪–೧೧.)

ದರಿಯಂ ಬಳಸಿದ ಕರ್ಪುರ
ಮರಂಗಳಿಂ ಸುರಿದ [4]ಪ[4]ಳುಕು ತೀವಿರೆ ಪಲವುಂ
ದರಿ ಸರಿಸವಾಗಿ ವರಪಾ
ದರಿಯಲ್ಲದೆ ದರಿಗಳಿಲ್ಲೆನಿಪ್ಪುವು ನಗದೊಳ್ ೧೯೭

ಅಸಿತಾಹಿವ್ಯೂಹಮೋಹಂ ಪುದಿಯೆ ಮದಮಯೂ[5]ರೋತ್ಕರಂ[5] ಚಂದ್ರಕಾಂತ
ಪ್ರಸರಗ್ರಾವಂಗಳೊಳ್ ಮಾರ್ಪೊಳೆವ ನವತಮಾಲಸ್ಫುರಚ್ಛಾಖೆಯಂ ಖಂ
ಡಿಸ[6]ಲೆಂದೈತಂದವಂ[6]ತಾ ಶಿಲೆಯೊಳೊಗೆದಶೋಕಚ್ಛದಚ್ಛಾಯೆ ತಳ್ತು
ರ್ವಿಸೆ ಮಾಂಸಭ್ರಾಂತಿಯಿಂ ತದ್ಗಿರಿಯೊಳೆಳಸುಗುಂ ಬಾಲಶಾರ್ದೂಲಜಾಲಂ

ಪಾಶದ ನೇಣ್ಗಳಂ ಪೊಸೆವ ಜಾಲಮನೊಪ್ಪಿರೆ ಮಾಟ್ಪ ಕಲ್ಲಿಯಂ
ಕಾಸಿನ ಕಂಬಿಯಂ ಸಮೆವ ಮಾರ್ಗಣಮಂ ಗಱಿಗಟ್ಟುತಿರ್ಪ ಬಿ
ಲ್ಗಿಸುವ ಬಾಣಮಂ ತಿರುಪಿ ತಿರ್ದುವ ಮಾರ್ತಿರುವಂ ತೊಡರ್ಚಿ ನೋ
ಟ್ಪ ಸಹಜಕ್ರಿಯಾವನ ವನೇಚರರಿಂ ಬಗೆಗೊಂಡುದಾ ವನಂ ೧೯೯
(ಜಗನ್ನಾಥವಿಜಯಂ, ೧೬–೧೬.)

ಪೊಸಪೊದೆಗಟ್ಟುವಂಬುಗಳ ಕುಪ್ಪೆಯನಾ[7]ವ[7]ರಿಪಾರ್ದ್ರಜಾಲಮಂ
ಪಸರಿಪ ಸೆಂಡುಗೋಲ [8]ಪಿಡಿಗ[8]ಟ್ಟುವ ಪೀಲಿಗಳಿಂ ತರಂಗಮಂ
ಪೊಸೆಯಿಪ [9]ಬೆತ್ತಗಣ್ಣಿವಲೆಯಂ[9] ಸಮುಕಟ್ಟುವ [10]ಕಟ್ಟು[10]ಗೂಂಟಮಂ
ಬಸಿವ ಪುಳಿಂದ ಸಂಕುಳದ ಪೆರ್ಕಣದಿಂದೆಸೆದತ್ತು ಪಕ್ಕಣಂ ೨೦೦
(ಚಂದ್ರಪ್ರಭಪುರಾಣಂ, ೫–೫೪.)

ಒತ್ತುವ ಕೋಡ ಕಾಳೆ ಕುಣಿವೋಜೆಗೆ ಬಾಜಿಪ ಜುಂಜೆ ಬೇಂಟೆಯಿಂ
ದೆತ್ತಣಿನಪ್ಪ ಬಕ್ಕುಡಿಯ ಬಿಲ್ಲುಲಿ ಪೋತದ ಗಲ್ಲದಿಂದೆ ಗಂ

---

[1] ದದೊಂದಂ (ಖಬ) [2] ಬಿದಿಯನೀರ್ದು (ಕ) [3] ಬಿ (ಕ), ಪ (ಖಬ) [4] ಹು (ಕ) [5] ರಭೃತಂ (ಖಬ) [6] ಲೈತಂಮುಂಮುತಂ (ಕ) [7] ದ (ಕಖಬ) [8] ಪಿಡಿದ (ಕಖಬ) [9] ತತ್ತ ಕಣ್ ಕಿವಿಯ ತಾಂ (ಬ) [10] ಬಿಟ್ಟು (ಅ).

ಡೆತ್ತುವ ಕುಕ್ಕುಟಂಗಳ ಸರಂ ಕಿಱು ನಾಯ್ಗಳ ಪಿಂಡ ತಕ್ಕೆ ಮ
ತ್ತೊತ್ತುವ ಗರ್ಜಿತಂ ಮೆಱೆವ ಬೆಟ್ಟದ ಬೇಡರಪಳ್ಳಿ ಪಳ್ಳಿಯೊಳ್ * ೨೦೧

ಹರಿ ಪೊಯ್ಯೆ ಬಿರಿದ ಮದವ
ತ್ಕರಿಕುಂಭದಿನಗದೊಳೊಕ್ಕ ಸಿಕ್ತಾರಕ್ತ
ಸ್ಫುರಿತ ನವಮೌಕ್ತಿಕಂಗಳ
ನರೆ ಉಳಿ ವನಚರಿಯರೆರದ ಪಣ್ಗೆತ್ತಾಯ್ದರ್ * ೨೦೨
(ಕಾವ್ಯಾವಲೋಕನಂ, ೪೩೩.)

ಎನಿತ್ತೆನಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ
ಅನಿತ್ತನಿತ್ತಂ ವನದೊಳ್ ವನೇಚರಂ
ತನತ್ತು ಬಿಲ್ಲಾನದ[1]ನಂತು[1] ಕೇಸುಗುಂ ೨೦೩

(ಕಾವ್ಯಾವಲೋಕನಂ, ೩೫೯.)

ಎಣ್ಣೆಯೊಳರನೇಱೆಲ ತನಿ
ವಣ್ಣಂ ನುಣ್ಣಿಸಿದನಬ್ಜಭವನೆನಿಸುವ ಮೆ
ಯ್[2]ವಣ್ಣದ ಶಬರಿ ತಮಾಲದ
ತಣ್ಣೆಲೊಳ್ ಕಣ್ಣ ಬೆಳಗೆ ಬೆಳಗಾಗಿರ್ದಳ್ ೨೦೪

(ಗಿರಿಜಾಕಲ್ಯಾಣಂ, ೩).

ಬೆಳಗಂ ಕಟ್ಟಲಿಸುವ ಮೆಳೆ
ಯೊಳಗಂ ಪೊಕ್ಕಲ್ಲಿ ತನ್ನ ಕಣ್ಗಳ ಬೆಳಗಿಂ
ಬೆಳಗಾಗಿರೆ ಬೆಳಗಿಲ್ಲದ
ಮೆಳೆಯಿಲ್ಲೆಂದಬಲೆ ಶಬರಿ ಸೊಬಗಟ್ದಿರ್ದಳ್ ೨೦೫
(ಗಿರಿಜಾಕಲ್ಯಾಣಂ, ೧–೧೨೭.)

ಇರೆ [2]ತಚ್ಛಬರಿ[2] ಕಿರಾತಂ
ತರುಣಿಯ ಮುಗ್ಧತೆಗೆ ಮೆಚ್ಚಿ [3]ತರಳೇಕ್ಷಣಮುಂ[3]
ಬರೆ ಮುಚ್ಚೆಯಿಡಿದ ಕಟ್ಟಲೆ
ದೊರೆಕೊಂಡತ್ತೆಂದು ನೆರೆದು ಸುಖಿಯಾಗಿರ್ದಳ್ * ೨೦೬

(ಗಿರಿಜಾಕಲ್ಯಾಣಂ, ೧–೧೨೮.)

ತಳಿರ [4]ಸವಂಗ[4] ಪೂತ ಸೆಳೆಗೊಂಬಿನ ಬಿಲ್ ನವಫುಲ್ಲ ಕಂಕಣಂ
ಬಿಳಿಯುಸಿಯುಂಬು ಮಾಂದಳಿರ ಕೈಪೊಡೆ ತೋರದುಱುಂಬಿನೊಳ್ ತೆಱಂ

---

* ಈ ಚಿಹ್ನೆಯಿರುವ ಪದ್ಯಗಳು (ಕ) ಪ್ರತಿಯಲ್ಲಿಲ್ಲ [1] ನೇಕೆ (ಕಖಬ) [2] ಸುಪ್ರಾಢ (ಅ) [3] ಪ್ರಿಯಳ ಕಣ್ಣಂ (ಅ) [4] ತರಂಗ (ಖಬ).

ಬೊಳೆವಲರ್ಗೊಂಚಲೊಪ್ಪೆ ತನು ನೀಲಶಲಾಕೆವೊಲಾಗೆ ಕಾಮನಂ
ತಳವಡೆ ನಿಂದಳಂದು ಮೊಲೆ ಬಾರದ ಬಾಲೆ ಪುಳಿಂದ ಲೀಲೆಯಿಂ ೨೦೭

(ಲೀಲಾವತಿ, ೮–೨೮.)

ನನೆವೆರಸುಟ್ಟ ಮೂಂದಳಿರುವೊಪ್ಪಿರೆ ಕಾಡಲರಂ ತುಱುಂಬಿ ಚಂ
ದನದೊರಲಲ್ಲಿ ಪೊಯ್ದು ಬಿದಿರಕ್ಕಿಯನುನ್ಮದದಂತಿದಂತದೊಂ
ದೊನಕೆಯನೆತ್ತಿ ಸುಣ್ದನಿಯ ಸುವ್ವಿಯ ಗಾವರದೊಳ್ ತೊಡರ್ಚಿ[1] ಜ
ವ್ವನಿಗ[1] ಪುಳಿಂದಿ ಪಾಡಿದಳೊಱಲ್ದು [2]ಗುಣಪ್ರಿಯ[2]ನಂಕಮಾಲೆಯಂ ೨೦೮

(ಲೀಲಾವತಿ, ೮–೩೦.)

ಮಿಸುಗುವ ದಂತಿದಂತಮುಸಲಂ ಕರಪಲ್ಲವದೊಳ್ ಬೆಡಂಗುವೆ
ತ್ತೆಸೆದಿರೆ ರಕ್ತಚಂದನದೊರಲ್ ಬಿದಿರಕ್ಕಿಯನಾಂತುಕೊಂಡು ರಂ
ಜಿಸೆ ಬಗೆಗೊಂಡು ಗಾವರದೊಳೊಂದಿದ ಸುವ್ವಿ ಮನಕ್ಕೆ ರಾಗಮಂ
ಪಸರಿಸೆ ಪಾಡಿದಳ್ ಶಬರಿ ದೇಸೆವೆಡಂಗಿನ ದೇಸಿಯೋಳಿಯಂ ೨೦೯

ಬಿಡುಗಿವಿ ಮಿಂಚುವೆತ್ತ ಸುಲಿಪಲ್ ಕುಣಿದಾಡುವ ಕುಂತಳಂ ನೊಸ
ಲ್ವಿಡಿದ ಬೆಮರ್ ಕದಕ್ಕದಿಪ ಪೆರ್ಮೊಲೆ ಪಾಡುವ ಸುವ್ವಿಯಿಂಚರಂ
ಪಿಡಿವ ತಳಕ್ಕೆವರ್ಪೊನಕೆ ಜಾಱುವ ಸೋರ್ಮುಡಿ ನೀಡಿದಂಘ್ರಿ ಚೆ
ಲ್ವಡರ್ದಿರೆ ಕಟ್ಟಗುಟ್ಟುವ ಪುಳಿಂದಿಯರೊಪ್ಪುಗುಮಾ ನಗೇಂದ್ರದೊಳ್ ೨೧೦

ಅಡವಿಯ ಹುಲ್ಲೆಗಳ್ ಬರೆದ ಹುಲ್ಲೆಗಳಂತಿರೆ ವನ್ಯದಂತಿಗಳ್
ತೊಡ[3][ರ್ದು][3] ತೊಡರ್ಪಿನೊಳ್ ತೊಡರ್ದ ದಂತಿಗಳಂತಿರೆ ನುಣ್ಪು ವೀಣೆಯಂ
ಮಿಡಿದವೊಲಾಗೆ ಪಾಡಿದಳೊಱಲ್ದರನೇಱಲಪಣ್ಣನೆಣ್ಣೆಯೊಳ್
ತೊಡರ್ದವೊಲಪ್ಪ ಬಣ್ಣದ ಪುಳಿಂದಿ ಮನೋಭವನಂಕಮಾಲೆಯಂ ೨೧೧

ದನಿಯ ಪೊಗರ್ ಮನೋಭವನ ಬಾಳ್ಪೊಗರಂತಿರೆ ಚಿತ್ತಮಿತ್ತು ಮೇ
ಪನೆ ಮಱೆದಾಲಿಸುತ್ತೆಸೆವ ಪುಲ್ಲೆಯುಮಾಗಳದರ್ಕೆ ಸಾರ್ದ ಬೇ
ಡನುಮಿರೆ ಚಾಪಮಂ ತೆಗೆದು ಚಿತ್ರಿಸಿದಂತೆ ಮನೋನುರಾಗದಿಂ
ವನಚರಿ ಪಾಡಿದಳ್ ಮಧುರಗೀತಗಳಂ ಕವಿರಾಜಮಲ್ಲನಾ ೨೧೨

(ಲೀಲಾವತಿ, ೩೮–೩೨,)

ತುಱುಗೆವೆಗಣ್ಣ ಕಾಂತಿ ಮುರಗಟ್ಟಲೆಯಂ ಬೆದಱಿಟ್ಟಿ ತೊಂಡೆವಾ
ಯ್ದೆಱೆ ಕಿಸುಸಂಜೆವೀಱೆ ದಶನಾಂಶು[4]ರಸಾಮೃತಪೂರಮಿಂಬಿನಿಂ[4]

[1] ದೋಷಸನಿಗ (ಅ) [2] ಮನೋಭವ (ಬ) [3] ರೆ (ಕಖಬ) [4] ನವಾಮೃತ ಪೂರವೆಂಬಿನಂ (ಅ) ರಸಾಮೃತಪೂರವೆಂಬಿನಂ (ಕ).

ತುಱುಗಿರೆ ಸಿಂಹವಾನೆ ಪುಲಿ ಪುಲ್ಲೆ ನವಿಲ್ ಫಣಿ ತಮ್ಮ ವೈರಮಂ
ಮಱೆದೊಡನಾಲಿಸಲ್ ಶಬರಿ ಪಾಡಿದಳಚ್ಯುತನಂಕಮಾಲೆಯಂ ೨೧೩

(ಜಗನ್ನಾಥವಿಜಯಂ, ೧೬-೨೫.)

ಪೊಳೆದು ಕದಂಪನಪ್ಪಳಿಸಿ [1]ಪಾಲೆ[1]ಯೊಳೊಪ್ಪುವ ದಂತದೋಲೆಯಂ
ದಳವಡೆ ಲೀಲೆಯಿಂ ಪಸಿಯ ಬಣ್ಣದ ಬೇಡಿತಿ ತಬ್ಬಿಲೊಳ್ ತಳ
ತ್ತಳಿಸುವ ತೋರಮುತ್ತುಗಳನಾಯ್ದಳಗಂ ಮುಗಿಲಂ ಪಳಂಚಿ ಬಿ
ರ್ದಳೆಯುಡುಜಾಲಮಂ ಹಿಮಕರಂ ಬೆರಸಾಯ್ವ ನಿಶಾವಧೂಟಿವೋಲ್ ೨೧೪

(ಲೀಲಾವತಿ, ೮-೩೬.)

ಅಲರ್ಗಣ್ ಪೊಂಗಿದ [2]ಲೋಳೆ[2]ವಾಯ್ ನಗೆಮೊಗಂ ತೊಂಗಲ್ಗುರುಳ್ ಕೆಂದಳಂ
ಸುಲಿಪಲ್ ಸೋರ್ಮುಡಿ ತೆಳ್ವಸಿಱ್ ಪೆಱೆನೊಸಲ್ ಪೊಂಬಾಟೆ ಪಚ್ಚೋಲೆ ನೇ
ಱಲಪಣ್ಣಿಂ ತಿಳಿಯೆಣ್ಣೆಯೊಳ್ [3]ಬಳಸಿ[3] ತೊಯ್ದಂತಪ್ಪ ನುಣ್ಗುರ್ಪು [4]ಪೆ
ರ್ಮೊಲೆ[4] ಚೆಲ್ವಾಗಿರೆ ನಿಂದ ಬೇಡಿತಿಯುರಂ ಕಂಡಂ ಮಹೀವಲ್ಲಭಂ ೨೧೫

(ಕಾವ್ಯಾವಲೋಕನಂ, ೨೦೬.)

ಕಾಡಿಗೆಯೆಚ್ಚಿ ಪಲ್ ಸುಲಿದು ಕೆಂದಳಿರಂ [5]ತಿಱಿದು[5]ಟ್ಟು [6]ಮಾಲೆ[6]ಯಂ
ಸೂಡಿ ಮದೇಭಮಸ್ತಕದ ಮುತ್ತಿನ ಹಾರಮನಿಕ್ಕಿ ಬೇಡನಂ
ಬೇಡಿತಿ [7]ಮತ್ತೆ[7] ತಂಬುಲಮನಾನನಮಂ [8]ನಡೆ[8]ನೋಡೆ ಪಂದಿ ಕೋ
ಡಾಡಿಸಿದಂದಮಾಯ್ತುಡರೆ ನೋಡಿದ [9]ನೋಟಮ[9] ಪೂರ್ವರೂಪೆಯಾ ೨೧೬

ತಳಿರೊಳ್ ಮುಚ್ಚಿ[10]ಟ್ಟ[10] ಕೂಸಂ ಶಬರಿ ತೆಗೆಯೆ ನಿಶ್ಚೇಷ್ಟಮಾಗಿರ್ಪುದುಂ ಕ
ಣ್ಗಳ ನೀರಂ ತೀವಿ ಬೇಗಂ ತೊಡೆದು ಹಿಮಕಣಾನೀಕಮಂ ತೇಂಕುದಾಣಂ
ಗಳನಂಟಂಟಿಲ್ಲಿಯುಂ ಕಾಣದೆ ಹರಣಮನತ್ಯುಷ್ಣದಿಂ ಸುಯ್ಯೆ ಸುಯಿಂ
ದೆಳಗೂಸೆಚ್ಚಿತ್ತು ಕಾವ್ ಕಾವೆನೆ ತೊರೆದ ಕುಚಾಗ್ರಂಗಳಂ ನೀಡುತಿರ್ದಳ್ ೨೧೭

(ಲೀಲಾವತಿ, ೯-೨೧.)

ನಸು ಸೊಕ್ಕಿ ಪಾಡಿ ಕಿನ್ನರಿ
ರಸಮೊಸರ್ವಿನಮೊಸರ್ವ ಬೆರಲ ಬೆಮರ್ವನಿಯಿಂ ತ
ಣ್ಣಸಗೊಂಡ ತಂತಿಗಳನಾ
ಱಿಸುವರ್ ಬಿಸುಸುಯ್ದು ಕಿನ್ನರರ್ ಬೀಣೆಗಳಂ ೨೧೮

(ಲೀಲಾವತಿ, ೯-೫೧.)

---

[1] ಪುಲ್ಲೆ (ಕ) [2] ಲಾಳೆ (ಅ) ತೊಂಡೆ (ಕ) [1] ಬೆರಸಿ (ಖಬ) [4] ಕಣ್ಗೊಳೆ (ಕ) [5] ನೆಱೆಯು (ಕ) [6] ಮೊಲ್ಲೆ (ಖಬ) [7] ಮಾಡಿ (ಖಬ) [8] ನೆಱೆ (ಖಬ) [9] ನೊರ್ವನ (ಖಬ) [10] ಟ್ಟು (ಅ).

ಚರಿಯಿಪ ಕಿನ್ನರಿಯರ ಮೊಗ
ಸಿರಿಗೊಯ್ಯನೆ ಗೋರಿಗೊಂಡು ಕೂಡೆ ಕುಕಿಲ್ದು
ಪ್ಪರಿಸಿ ರವಿರಥದ ವಾಜಿಗ
ಳರುಣನನೋರೊರ್ಮೆ ಗಸಣಿಗೊ[1]ಳ್ವವು[1] ನಭದೊಳ್ ೨೧೯

ಕರಣೀಶೃಂಗಾರಮುಗ್ರೋರಗಭೆಯಮುಗದ್ಯೈಘ್ರ್ಯಾದ್ಭುತಂ ದಸ್ಯುವೀರಂ
ಶರಭಾಕಾರೋರು ರೌದ್ರಂ ಪ್ಲವಗವಿಕೃತಿಹಾಸ್ಯಂ ಚಮೂರುಪ್ರಣಶ್ಯ .
ದ್ರುರುಬೀಭತ್ಸಂ [2]ದವ[2]ವ್ಯಾಕುಲಖಗಕರುಣಂ ಯೋಗಿ[3]ರಾಟ್ಶಾಂತ[3]ಶಾಂತಂ
ದೊರೆವೆತ್ತಾಶ್ಚರ್ಯಭೂತಂ ನವರಸಮಯಮಾಯ್ತಾ ನಗೇಂದ್ರೋಪಕಂಠಂ ೨೨೦
(ಚಂದ್ರಪ್ರಭಪುರಾಣಂ, ೧೦–೪೩.)

ಇರೆ ಶಬರಾಧಿರಾಜಕಟಕಂ ಕಟಕಂ ಕಟಕಂಧರೋಗ್ರಸಿಂ
ಧುರಮೆನೆ ನಿರ್ಝರೋಲ್ಲಹರಿಯುಂ ಹರಿಯುಂ ಹರಿಯುಂ ವಿಜೃಂಭಿಪಾ
ಗಿರಿತಟದಲ್ಲಿ ದಾವಶಿಖಿಯುಂ ಶಿಖಿಯುಂ ಶಿಖಿಯುಂ ಪ್ರಭೂತಮಾ
ಗಿರಿ ಬೆಳಗಂ ತಮಂ ತವಿಪಿನಂ ವಿಪಿನಂ ವಿಪಿ[4]ನದ್ಧ[4]ಮೊಪ್ಪುಗುಂ ೨೨೧
(ಜಗನ್ನಾಥವಿಜಯಂ, ೧೬–೨.)

ಅ[5]ಳ[5]ಗನನಾಳಿಗೊಂಡು ಸಲೆ ಜಾಯಿಲನಂ ನಲವಿಂದೆ ಮೀಱಿ ಪು
ತ್ತಳಿಯನೆ ದಾಂಟಿ ಸಾಳುವನ ಝುಂಕಿಸಿ ಜೋಗನ [6]ಬಾಯ ಬಾಡುಮಂ[6]
ಸಲೆ ನಿಲೆ ಕೋದು ಚಂದ್ರನ ಮೊಲಕ್ಕೆಣೆಯಪ್ಪಿನ [7]ಮೀಱಿಪೋಯ್ತು ಕೇಳ್
ಸಲೆ[7] ಬಡಿಕೋಲ ಸಾಲೊಳಗೆ ಪೆರ್ಚಿನ ಠಕ್ಕಿನದೊಂದು ಪೆರ್ಮೊಲಂ ೨೨೨

ಅಡಿ ಮಿಡಿ ತೊಡೆ ನಡುವಿನಿತಂ
ಪಿಡಿವೆಡೆಯೊಳ್ ನಾಯನೊಂದು ಕೋಡೊಳ್ ಕ್ರೋಡಂ
ಜಡಿದಡಸಿ ಪೊಡೆ[8]ಯಲಿಕ್ಕಡಿ[8]
ಗೆಡೆದುದು [9]ಕಡಿದೆಡೆ[9]ಯೊಳಂದು ಶಬರಾಧಿಪನಾ ೨೨೩

ಮಕ್ಕಳ ಮೋಹ[10]ಮಂ ತೊಱೆದು[10] ಪಾಲನಿದಕ್ಕೆಱೆದುಂಬ ಕೂಟನೊ
[11]ಲ್ದಿ[11]ಕ್ಕಿಯುಮಂತದುಂ ನೆಱೆಯದಾನೊಡಗೂಡಿಯುಮೊಂದುಮುಗ್ಗುಲೊಳ್
[12]ಪಕ್ಕೆಯನಿತ್ತು[12] ಸಾಕಿ[13]ದುದ[13] ನೋಡುತಲೆನ್ನಯ ನಾಯನೆಕ್ಕಲಂ
ಗಿಕ್ಕಿದೆನೆನ್ನ ಜೀವಮಿರಲಾನಿದಱಿಂದಕಟೇಕೆ ಮುಂಚೆನೋ ೨೨೪

---

[1] ಳಿಸುಗು (ಕ) [2] ಧನು (ಖಬ) [3] ಸಂಜಾತ (ಕ) [4] ನಾಂಧ (ಕ)
* ಈ ಪದ್ಯ (ಖಬ) ಪ್ರತಿಗಳಲ್ಲಿಲ್ಲ [5] ಳಿ (ಕ) [6] ತೋರಬಾಲಮಂ (ಕ) [7] ಮೊಲೆ ಪೋಗಿ ಪೆರ್ಬಲೆ (ಕ) [8] ದು ಹೊರಳಲ್ಕೆ (ಖಬ) [9] ವಿರ್ದೆಡೆ (ಖಬ) [10] ದಿಂತೆಗೆದು (ಖಬ) [11] ಯ್ದಿ (ಕ) [12] ಸಕ್ಕೆಯನಿಕ್ಕಿ (ಖಬ) [13] ದಪೆ (ಕ).

ಒಡನಾಡಿಸಿಯೊಡನೋದಿಸಿ
ಯೊಡಬೆಳಯಿಸಿದೆನ್ನ ಚೆನ್ನ ಕುನ್ನಿಯನೀ ಕ
ಕ್ಕಡವಂದಿ ಕೊಂದುದಿನ್ನದ
ಱೊಡನೞಿವೆಂ ಕೊಲ್ಲದುೞಿಯೆನೀ ಸೂಕರನಂ* ೨೨೫
(ಗಿರಿಜಾಕಲ್ಯಾಣಂ, ೧–೧೦೮.)

ವೀರಾವತಾರನಸುರನ
ಬಾರಿಗೆ ಗುಱಿಯಾದುದೆನ್ನ ನಾಯ್ಗಂ ನೀರೊಳ್
ನೀರಿೞಿವನಲ್ಲ ಪಂದಿಯ
ಬಾರಂ [1]ಕೊಱೆದ[1]ದಱ ನೆತ್ತರೊಳ್ ನೀರಿೞಿವೆಂ ೨೨೬

ಪಿಂಗದೆ ಕಿರಾತ ನಲವಿಂ
ಬೆಂಗೊಂಡೆಕ್ಕಲನನಟ್ಟಿ ಪಿಡಿದತಿ ಮುದದಿಂ
ಮುಂಗಾಣದೆನ್ನ ನಚ್ಚಿನ
ಸಿಂಗಮನುಗುೞುಗುೞೆನುತ್ತೆ ವನಚರನಿಱಿದಂ ೨೨೭

ಹುಲಿ ಬಿಲದಿಂ ಬಿಸಿಲ್ಗೆಳಸಿ ಪಟ್ಟಿರೆ ಕಂಡು ವನೇಚರಂ ಕಱು
ತ್ತಲಗನೆ ಕಿೞ್ತು ದಂಡೆಗುಡೆ ಕೊರ್ಬಿದ ಪೆರ್ಬುಲಿ ಮೇಲುವಾ[2]ಯಲಾ
ಪುಲಿಯನೆ[2]ಕುತ್ತಿಯಪ್ಪಳಿಸೆ ಕಂಡು ಪುಳಿಂದಿ ಮನೋನುರಾಗದಿಂ
ಕಲಿ ಕಲಿದೇವ ಭಾಪೆನುತಮಪ್ಪಿದಳೋವುತೆ ತನ್ನ ನಲ್ಲನಂ ೨೨೮

ಪೊಸ ನಸೆಯಿಂ ಮೃಗಂ ಮೃಗಿಯ ಮಗ್ಗುಲಿಸುತ್ತಿರೆ ಬೇಡ[3]ನಂದು ತಾ
ನೆ[3]ಸಲೆರಡಂಬನಂಬಿನೊಳೆ ಮಾರ್ಮಸೆಯುತ್ತಿರೆ ಪುಲ್ಲೆ ಕಂಡು ಚಿಃ
ಕಿಸುಗುಳಿ ಬೇಡ ನೀನೆಸೆವೊಡಂಬೆರಡಂ ತೊಡುವಾ ಪತಾಕೆಯೆ
ಮ್ಮಸುವೆರಡೊಂದೆ ಜೀವಮೆಸು ಮೇಣೆಸೆ[4]ಯಲ್[4] ಸರಳೊಂದೆ ಸಾಲದೇ ೨೨೯

ಹರಿಣಿಯನೆಚ್ಚು ತ[5]ತ್ಪ್ರಿಯ[5]ಕುರಂಗಮನಾರ್ದೆಸಲೆಂದು ಬಾಣಮಂ
ತಿರುವಿನೊಳಿಟ್ಟು ತೀವಿ ತೆಗೆವನ್ನಗಮಂಗಜಬಾಣಘಾತದಿಂ
ದೆರಳೆ ನೆಲಕ್ಕೆ ಬೀೞೆ ಮುರ್ಛು ಭಾಪುಪಕಾರಿಯೆನುತ್ತೆ ಬಿಲ್ಲುಮಂ
ಸರಳುಮನಿಕ್ಕಿ ಕೈಮುಗಿದು ಬಣ್ಣಿಸಿದಂ ಸ್ಮರನಂ ವನೇಚರಂ ೨೩೦
(ಕಾವ್ಯಸಾರಂ, ೪೩–೧೧೦೦.)

---

* ಈ ಪದ್ಯ (ಖಬ) ಪ್ರತಿಗಳಲ್ಲಿಲ್ಲ [1] ಸೀಳ್ದ (ಖಬ) [5]ಯೆ ಗಾಘುರ್ಣಲಿಲೆನೆ (ಕ) [3] ಕಂಡದಂತೆ (ಕ) [4] ವೀ (ಕ) [5] ತ್ಪತಿ (ಕ).

ಕರಡಿಯನೆಚ್ಚೊಡುರ್ಚಿ ಸರಲುರ್ಕಿನ ಪಂದಿಯನುರ್ಚಿ [1]ಭೀಕರೋ
ತ್ರ[1]ರತರಮಪ್ಪ ಪೆರ್ಬುಲಿಯನುರ್ಚಿದೊಡಂತವು ರೌದ್ರ ಕೋಪದಿಂ
ದಿರದಱಿ[3]ಯಟ್ಟಲಂಜದೆ [2]ಕ್ರಮಂ ಪಿಡಿ[2]ದೊಯ್ಯನೆ ನೇಣ ಕಿತ್ತುಮಾ
ಕರಡಿಯನಾ ವರಾಹನುಮನಾ ಪುಲಿಯಂ ತಿವಿದಂ ವನೇಚರಂ ೨೩೧

(ಕಾವ್ಯಸಾರಂ, ೪೩–೧೧೦೩.)

ತೋರ ಬಿದಿರ್ಮುತ್ತಿನ ನವ
ಹಾರದ ಕೆಂದಳಿರ್ಗಳುಡೆಯ ವನಚರಿಯೊರ್ವಳ್
ತಾರಾವಳಿಯಿಂ ನವಸಂ
ಧ್ಯಾರಾಗದೊಳೆಸೆವ ನಿಶೆಯನನುಕರಿಸಿರ್ದಳ್ ೨೩೨

(ಜಗನ್ನಾಥವಿಜಯಂ, ೧೬–೧೪).

ಪರಿಕಿಸೆ ವೃಕ್ಷಾರೋಹಣ
ವರಾಹಚರ್ವಿತಕ ವೇಣುದಾರಿತಕಂಗಳ್
ಕರಮೆಸೆಯೆ ಕಾಮಶಾಸ್ತ್ರದ
ದೊರೆಯಾದುದು ಶಬರಶಿಶುಗಳುಜ್ಜುಗಮದಱೊಳ್ ೨೩೩

(ಚಂದ್ರಪ್ರಭಪುರಾಣಂ, ೫–೫೫).

ತುಱುಗಿರೆ ತಮ್ಮ ನುಣ್ದೊಡೆಯ ಕಾಂತಿ ಕವಲ್ತುದೆನಿಪ್ಪ ಪೀಲಿಯೊಳ್
ಮಿಱುಗುವ ವಿದ್ರುಮಾಧರದೆ ಸೂಸಿದ ಕಾಂತಿಕಣಂಗಳೆಂಬಿನಂ
ಮಿಱುಗುವ ಗುಂಜಿಯಾಭರಣಮುಣ್ಮುವಪಾಂಗಮರೀಚಿಮಾಲೆ ಸು
ತ್ತಿಱಿದುದೆನಿಪ್ಪ ಕೇತಕಿಯ ಬಲ್ಸುೞಿಯೋಲೆ ಬೆಡಂಗವಂದಿರಾ ೨೩೪

(ಚಂದ್ರಪ್ರಭಪುರಾಣಂ. ೧೦–೪೫.)

ಪೊಸತಳಿರ ಚಮರಿ ಕೊಸಗಿನ
ಕುಸುಮದ ಪೊರೆ ಪುಲ್ಲಕಂಕಣಂ ಕಣಗಿಲೆಯೊಂ
ದಸಿಯ ಪಸಿಯೋಲೆ ನೆಲ್ಲಿಯ
ತಿಸರಂ ಸರಸಿಜದ ನೂಲೆ ನೂಲ್ ವನಚರಿಯಾ ೨೩೫

ಆಱ[3]ದಿ[3]ರೆ ತೆಗೆಯಲಿನಿಯಂ
ಮಾಱಲ್ ಪೋದಳ್ ಮೃಗಕ್ಕೆ ಬಿಲ್ಲಂ ಭಿಲ್ಲ
ಗೇಱಿದ ಜವ್ವನ ಸಿರಿಯಂ
ಬೀಱಲ್ ಪೋಪಂತೆ ಶಬರಿ ಶಬರಾಲಯದೊಳ್ ೨೩೬

(ಲೀಲಾವತಿ, ೮–೩೪.)

[4]ಕಟ್ಟೊಪ್ಪಮಾದ[4] ಬಿಂಕದ
ಬೊಟ್ಟಕ್ಕಿದ ಪುಲ್ಲಕಂಕಣಂ ಬಿಳಿಯಲರ್ಗಣ್

---

[1] ಘೋಗಿ ಭೀಕ (ಕಖಬ) [2] ತನುಂ ಬಿಡ (ಖಬ) [3] ಲಿ (ಕ) [4] ಉಟ್ಟು ತಳಿರುಟ್ಟು (ಕ).

ಬಟ್ಟವೊಲೆ ಪೊಳೆವ ಕದಪಳ
ವಟ್ಟರೆ ಚಂಚರಿಯರಲ್ಲಿ ಮೆಲ್ಲನೆ ನಡೆವರ್ ೨೩೭

ಬೆರಸದಿರೆ ನುಣ್ಪಿನಿಂ ಕಿ
ನ್ನರಿಯರ ಸರದೊಡನೆ ತಮ್ಮ ಕಿನ್ನರಿಯ ಸರಂ
ಬೆರಲಂ ಮಿಡಿಯದೆ ಮಱೆದಂ
ಬೆರಲಂ ಮಿಡಿದಪರು ಕಿನ್ನರರ್ ಕಿನ್ನರಿಯುಂ ? ೨೩೮

(ಲೀಲಾವತಿ, ೯–೫೦.)

ಓರಂತೆ ಮೆಚ್ಚಿದಂ ಕೃತಿ
ಸಾರಂ ಗಿರಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೨೩೯

ಇದು *ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ಪರ್ವತವರ್ಣನಂ ತೃತೀಯಾಶ್ವಾಸಂ ಸಂಪೂರ್ಣಂ.

---

* ಇಲ್ಲಿ (ಕ) ಪ್ರತಿಯಲ್ಲಿ "ಸರಸ್ವತೀ ಸರ್ವಾಂಗ" ಎಂಬುದರ ಹಿಂದೆ "ಸಮಸ್ತ ಭುವನಾನಂದ" ಎಂಬ ವಿಶೇಷಣವಿದೆ.

# ಪುರವರ್ಣನಂ



ಬನಮುಂ ಕೆಯ್ವೊಲಗಾವ ಪಾಮರಿಯರುಂ ಮಾರ್ಗ[1]ಪ್ರಪಾಪಾಲಿಕಾ[1]
ಜನಮುಂ ಗೋಕುಲಮುಂ ಜಲಾ[2]ಶ[2]ಯಮುಮಾರೂಢಾಸ್ತ್ರಶಸ್ತ್ರಶ್ರಮಾ
ವನಿಯುಂ ಕೋಂಟೆಯುಮೆತ್ತಿದಂಗಡಿಗಳುಂ ವಾರಾಂಗನಾವಾಟ ದೇ
ವ ನೃ[3]ಪೇಂದ್ರಾ[3]ಲಯವರ್ಗಮುಂ ಪುರವರವ್ಯಾವರ್ಣನಕ್ಕಾಸ್ಪದಂ ೧

ಜನಪದಮುಂ ವನಾವಳಿಗಳುಂ ಬೆಳೆಗೆಯ್ಗಳುಮಾಳ್ದ ಗೋಪುರಂ
ತೆನೆ ಬೆಳೆಗಾಯ್ವ ಪಾಮರಿಯರುಂ ಪ್ರಪೆಯುಂ ಪುರುಳಿ[4][ಪ್ರರೋಹ][4]ನಂ
ದನ ಪರಿಘಾಪರೀತವಳಯಾಪಣ ಪಣ್ಯಗೃಹಾಳಿ ದೇವತಾ
ಜನಪ ಗೃಹಂಗಳುಂ ಪುರವರೋಚಿತವರ್ಣನಕಪ್ಪುದಾಸ್ಪದಂ ೨

ಅದು ಮತ್ತೆಂತೆನೆ ತೆನೆಗಳ
ಪುದಿವು ತರಂಗಂಗಳಾಗೆ ನೀರ್ಗೋಂಟೆಯದೆಂ
ಬುದಧಿಯ ಬಳಸಿಂ ಮೆಱೆದಿ
ರ್ಪುದು ಪುರದಿಂದೇೞ್ಗೆವೆತ್ತು ಜಂಬೂದ್ವೀಪಂ ೩

ಮೇರುವಿ[5]ನಂದ[5]ಮುಂ ಜನನಿದಾನಮುನಗ್ಗದ ಜಂಬು[6]ದೀವ[6]ಮುಂ
ವಾರಿಧಿಸರ್ಪನಪ್ಪಿದುದು ವಾರಿಧಿವೇಷ್ಟಿತಭೂಮಿಭಾಗದೊಳ್
ಭಾರತವರ್ಷಮೊಪ್ಪಿದುದು ಭಾರತವರ್ಷದ ತೆಂಕ[7]ವಂಕ[7]ದೊಳ್
ಧಾರಿಣಿಗುಜ್ಜ್ವಲಶ್ರವಣ[8]ಕುಂಡಲ[8]ಮಾಯ್ತು ಸುರಮ್ಯಮಂಡಲಂ ೪

(ಅನಂತನಾಥ ಪುರಾಣಂ, ೧೧–೪.)

ಅದು ನಗರನಿಕರಪೂರಿತ
ಮದು ಖರ್ವಟಕಲಿತಮದು ಮಡಂಬಾಸ್ಪದಮುಂ
ತದು ಸಂವಾಹಮನೋಹರ
ಮದು ತಾಂ ಗ್ರಾಮೋಪಸೇವ್ಯಮದು ಖೇಟಮುಯಂ ೫

---

[1] ಪ್ರಕಾಮಿನೀ (ಕ) [2] ಶ್ರ (ಕ) [3] ಪಾಲಾ (ಖಬ) [4] ಪ್ಪರೋಪ (ಕ) ಪ್ಪದೋಪ (ಖಬ)
[5] ನರ್ಥ (ಅ) [6] ದ್ವೀಪ (ಖಬ) [7] ವಕ್ಕ (ಕಖಬ) [8] ಖಂಡಳ (ಅ) ಮಂಡಳ (ಬ).

ಆ ನಾಡು ಸಿರಿಯ ಕಣಿ ನೋ
ಡಾ ನಾಡು ಮನೋಜಕಲ್ಪವೃಕ್ಷದ ತಳಿ[1]ರ್ಗಾ
ಡಾ[1] ನಾಡು ಚಿತ್ತಭವನೆಂ
ಬಾನೆಯ ತಾ[2]ಯ್ನಾ[2]ಡು ವಿಶ್ವವಿಶ್ವಂಭರೆಯೊಳ್ ೬

(ಶಬ್ದಮಣಿದರ್ಪಣಂ, ೭೭–೧೭)

ಒದವಿದ ದೇಶದುನ್ನತಿಯನೇವೊಗೞ್ವಂ ಮದಮತ್ತಹಸ್ತಿ ಪು
ಟ್ಟದ ಮಲೆ ಮುತ್ತು ಪುಟ್ಟದ ಬಿದಿರ್ ಮಣಿ ಪುಟ್ಟದ ಬೆಟ್ಟು ಕೌಂಗು ಪು
ಟ್ಟದ ಪೊಲನಂಚೆ ಪುಟ್ಟದ ಕೊಳಂ ನದಿ ಪುಟ್ಟದೊಸಜ[3]ನ[3]ವೇರು ಪು
ಟ್ಟದ ಪುರನಂದನಂ ಜರಗು ಪುಟ್ಟದ ಭೂತಳಮಿಲ್ಲ ದೇಶದೊಳ್ ೭

ಊರೂರ್ಗೆ ಮುಂದಣೂರ್ಗಳ್
ದೂರಮು[4]ವೊಪ್ಪ[4]ರಿಯೆ ನಡುವೆ [5]ಕೈಗೆಯ್ದ[5] ಪೊದ
ಱ್ದಾರವೆಯುಂ ತುಱುಪಟ್ಟಿಯ
ದಾರಿಯ ಬೀೞ್ಕೆಲನದೇನುಮಿಲ್ಲಾ ನಾಡೊಳ್ ೮

ಮಾಮರನಲ್ಲದಿಲ್ಲ ತನಿಗಂಪಿನ ಮಲ್ಲಿಗೆಯಲ್ಲದಿಲ್ಲ ಪೊಂ
ದಾಮರೆಯಿಲ್ಲದಿಲ್ಲ ಪೊಣರ್ವಕ್ಕಿಗಳಿಂಚರಮಿಲ್ಲದಿಲ್ಲ ಗೀ
ತಾಮೃತಮಿಲ್ಲದಿಲ್ಲ ಕಡುಮುದ್ದಿನ ಚೆಲ್ವಿನ ಪೆಂಡಿರಿಲ್ಲದಿ
ಲ್ಲಾ ಮಹಿ ಭೋಗಭೂಮಿಯೊ ಮನೋಭವರಾಜನ ಜನ್ಮಭೂಮಿಯೋ ೯

(ಶಬ್ದಮಣಿದರ್ಪಣಂ, ೭೪–೧)

ಬನಮೋ ಕೀರಾಳಿ ಪುಂಸ್ಕೋಕಿಲಮಧುರರವೋದ್ದಾಮಕೋಳಾಹಳಂ ಕಾ
ನದಮೋ ಗಂಧೇಭದಾನಪ್ಲವಪರಿಮಳಚಂಚನ್ನ[6]ದೀವಾಃಪ್ರವೃದ್ಧಂ[6]
ಜನಮೋ ಭೋಗೋಪಭೋಗಾಸ್ಪದಸಮುಚಿತಲಕ್ಷ್ಮೀವಿಳಾಸಾಶ್ರಯಂ ತಾ
ನೆನೆ ಮತ್ತೇನೆಂ[7]ಬುದಂ[7]ಗೋದ್ಭವನರಪತಿಗಾ ಪೂರ್ಣಸಪ್ತಾಂಗಮಂಗಂ ೧೦

ಸ್ಮರಶರಕೋಟಿಗಾರ ಬಗೆಯಂ ಗುಱುಮಾಡವೆ ನಾಡೆ ನೀಱವೆಂ
ಡಿರ ಬೞಿಸಲ್ವಗಲ್ವ ಬಸದಾಗಿಪ ಭೋಗಿಪ ಕಾಯ್ವ ಬಯ್ವ ನಾ

---

[1] ರಂತಾ (ಕ) [2] ಯ್ನಾ (ಬ) [3] ರ್ವೆ (ಕ) ರ್ಸು (ಬ) [4] ಮುಪ್ಪ (ಕ) ವೊಪ್ಪು (ಬ) [5] ಕೈಗಟ್ಟ (ಕ) [6] ಟೀವಾತಪ್ರೋದ್ಧಂ (ಕ) ಟೀವಾನವೃದ್ಧಾಂ (ಬ) [7] ಬರಂ (ಕ).

ಣ್ಗರೆವೆಡೆವೇಟ್ವಬಿಲ್ವ ಬಿಡೆ ಪತ್ತಿಪ [1]ಜೊತ್ತಿ[1]ಪ ಪಾಡುವಾಡುವಾ
ದರ ಪಿರಿದೊಪ್ಪೆ ಮೆಚ್ಚಿಸು[ಗು]ಮಿಚ್ಚಿಸುವಂಗಜರಾಜಚೇಷ್ಟೆಗಳ್ * ೧೧
(ಪುಷ್ಪದಂತಪುರಾಣಂ, ೨-೩೭)

[2]ತ[2]ನಿತು ತೊಡಂಬೆವಿಟ್ಟುದಿರ್ದ ಪಣ್ಗಳನಟ್ಟಿಯೆ ಮೆಲ್ದು ಸೋರ್ವ ತೆಂ
ಗಿನ ತಿಳಿನೀರನೀಂಟಿ ಲತೆಯಿಂದುಗುತಂದಲರೊಳ್ ಪುಲಂಗಿ ಮೆ
ಲ್ಲನೆ ತೊನೆಯುತ್ತಮಿರ್ಪೆಲೆಯ ತಣ್ಣೆಲರಿಂ ಬೆಮರಾಜ[3] ಪೌರನಂ
ದನದೊಳಗಪ್ರಯತ್ನಸುಖಮಂ ಪಥಿಕರ್ ಪಡೆವರ್ ನಿರಂತರಂ ೧೨
(ಚಂದ್ರಪ್ರಭಪುರಾಣಂ, ೩–೧೫.)

ಪಾಱಿಯು ನಂದನಂ[3]ಬಿಡಿದು[3] ಪೂತ ಕೊಳಂ ಕೊಳದೊಳ್ ಬಟಲ್ಕೆಯುಂ
[4]ಜಾ[4]ರಿಸಲೆಂದು ನಿಂದ ಪಥಿಕರ್ ಪಥಿಕಾನಯನಪ್ರಭಾಮೃತಾ
ಸಾರ[5]ದೆ[5] ತೀವಿ ಬರ್ಪ ಪರಿಕಾಲ್ ಪರಿಕಾಲ್ಗಳ ನೀರನುಣ್ಬ ಕೇ
ದಾರವನಂ ಮನಂಗೊಳಿಸುತಿರ್ಪುವು ಭೂವನಿತಾವಿಭೂತಿವೋಲ್ ೧೩
(ಜಗನ್ನಾಥವಿಜಯಂ, ೨–೪.)

[6]ಧೃ[6]ತನಾನಾವರ್ಣಪರ್ಣಚ್ಛವಿ[7]ಸಮುದಯ[7]ಸಂದರ್ಶನೀಯಂ ದಳತ್ಪು
[8]ಷ್ಪಿತಮಲ್ಲೀಘ್ರಾಣ್ಯ[8]ಮುದ್ಯತ್ಫಲರಸವಿಳಸಾಸ್ವಾದನೀಯಂ [9]ಪಿಕೋಚ್ಚಾ
ರಿತ[9]ನಾದಾಕರ್ಣನೀಯಂ ಸಿಕತವಿಮಳಶಯ್ಯಾತಳಸ್ಪರ್ಶನೀಯಂ
ಸತತಂ ಪೌರರ್ಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಟ್ಪುದೆಂದುಂ ೧೪
(ಚಂದ್ರಪ್ರಭಪುರಾಣಂ, ೧–೧೧೨.)

ಅಲರ್ಗಣ[3] ಪುಷ್ಪವಾಟಿಕುಲದೊಳ್ ಬೆಳೆದಿರ್ಪುವು ಮೀನಕೇತುಗಳ್
ಜಲರುಹಷಂಡದೊಳ್ ಮೆಱೆಯುತಿರ್ಪುವಿಕ್ಷು[10]ವನಂ[10]ಗಳಲ್ಲಿ ಬಿ

---

[1] ಚಾರಿ (ಬ)

*ಅರಲಸರಲ್ಗದಾರ ಮನಮಂ ಗುಱಿಮಾಡವೂ ನಾಡೆ ನೀಱಿವೆಂ
ಡಿರ ನಡೆವೊಪ್ಪುವಪ್ಪುವೊಡಗೂಡುವ ನೋಡುವ ಸುತ್ತುವೊತ್ತುವಾ ।
ದರಿಪೊಲಿಪೋಲ್ವ ಗೆಲ್ವ ಬಸದಾಗಿಪ ಭೋಗಿಸ ಕಾಯ್ವ ಬಯ್ವ ನಾ
ಣ್ಗರೆವೆರೆವಿಂಬುಕೆಯ್ಸುವೊಳಪೊಯ್ಸುವನೇಕ ವಿಚಿತ್ರ ಚೇಷ್ಟೆಗಳ್ ॥
(ಪುಷ್ಪದಂತ ಪುರಾಣದ ಲೈಬ್ರೆರಿಯ 51 ನೆನೆಯ ನಂಬರ್ ಓಲೆಯ ಕೋಶದ ಪಾಠ.)

[2] ಪ (ಬ) [3]ಜಡಿಯೆ (ಕ) [4] ಚಾ (ಅ) [5] ಕೆ (ಖಬ) [6] ದ್ರು (ಕ) [7] ಯೆನ ಯನ (ಕ) [8] ಷ್ಪತತಿಜಾಘ್ರಾಣೀಯ (ಅ) ಷ್ಪತತಿಜಾಘ್ರಾಣ (ಬ) [9] ಪಿಕಪ್ರೋಕ್ಷಿತ (ಬ) [10] ಕಣಂ (ಬ).

ಲ್ಗೊಲೆಗೆ ಬರುತ್ತಮಿ[1]ರ್ದಪುವು[1] ಕಾದಪೆನೆಂದು ವಸಂತನೆತ್ತಲುಂ
ತೊಲಗದೆ ನಿಂದನಂಗಭವನಾಜ್ಞೆಯಿನಾ ವಿಷಯಾಂತರಾಳದೊಳ್ ೧೫
(ಅನಂತನಾಥಪುರಾಣಂ, ೩–೮.)

ಬಳಸಿರ್ದ[2]ದ್ರಿ[2]ಯ ಕಲ್ಗಳೆಲ್ಲಮುವು ಪೊನ್ನುಂ ರನ್ನಮುಂ ಪೂಗೊಳಂ
ಗಳ ನೀರೆಲ್ಲಮನೇಕಸಿದ್ಧರಸಮುಂ ಪೀಯೂಷಮುಂ ಕೆಯ್ವೊಲಂ
ಗಳ ಸಸ್ಯಾವಳಿಯೆಲ್ಲಮೊಳ್ಗಟವೆಯುಂ ಪುಂಡ್ರೇಕ್ಷುವುಂ ನಂದನಂ
ಗಳ ಧಾತ್ರೀರುಹಜಾತಮೆಲ್ಲಮುಮರೋರ್ವೀಜಾತಮುಂ ಚೂತಮುಂ ೧೬
(ಜಗನ್ನಾಥವಿಜಯಂ, ೯–೮೬)

ಒದವಿದ ಮುಟ್ಟು ತೀವಿದ ಕಳಂ ಬೆಳೆ ತೀವಿದ ಗದ್ದೆ ಕೌಂಗು ತೀ
ವಿದ ಬನವಂಚೆತೀವಿದ ಕೊಳಂ ವಿವಿಧಾಂಬುಜಷಂಡಮೆಯ್ದೆ ತೀ
ವಿದ ಕೆಱೆ[3] ಹಟ್ಟಿತೀವಿದ ಹಯಂ ಮನೆ ತೀವಿದ ಮಕ್ಕಳೋಳಿ ಪಿಂ
ಗದ ಸಿರಿ ತೀವಿದಂಗಡಿಗಳೆಲ್ಲಿಯುಮಲ್ಲಿಯ ಪಳ್ಳಿಪಳ್ಳಿಯೊಳ್ ೧೭

ಮೇಳಿಸಿ ಕಾಯ್ದಿಱಿವುದು ವನ
ಪಾಲರೊಳಾಱಡಿಯ ಮುಸಕದೆಸಕಂ ಸುಮನೋ
ಮಾಲೆಗಳೊಳ್ ಕದ್ದೋಡುವ
ಶೀಲಂ ಶೌಂಡಿಕರೊಳಲ್ಲದಿಲ್ಲಾ ನಾಡೊಳ್ ೧೮

ಮೇದರೊಳಲ್ಲದೆ ವಂಶ
ಚ್ಛೇದಂ ಗಾರುಡದೊಳಲ್ಲದಹಿತತ್ವಂ ಹೊಂ
ಗೇದಗೆಯ ಹೊದಱೊಳಲ್ಲದಿ
ಳಾ ದುರ್ಧರ ಕಂಟಕತ್ವಮಿಲ್ಲಾ ನಾಡೊಳ್ ೧೯

ಬಡತನಮೆಂಬುದು ನಡುವಿನೊ
[3]ಳೆಡೆಗಿಱಿ[3]ವುದು ಬಿಗಿದ ಮೊಲೆಯೊಳತಿಕುಟಿಲತ್ವಂ
ಮಡದಿಯರ ಕುರುಳೊಳಲ್ಲದೆ
ಪಡಿವಾತೇಂ ಜನರ ದೆಸೆಯೊಳಿಲ್ಲಾ ನಾಡೊಳ್ ೨೦

ಶ್ರುತದೊಳ್ ಚಿಂತೆ ಮದೇಭದೊಳ್ ಸೆಱೆ ನಿರೋಧಂ ಪಂಜರಾನೀಕದೊಳ್
ಯತಿಭಂಗಂ ಕೃತಿಯೊಳ್ ಭಯಂ ನಟನದೊಳ್ ನಿಷ್ಕಿಂಚನತ್ವಂ ಮಹಾ
ವ್ರತದೊಳ್ ಶೂನ್ಯಗೃಹಂ ದುರೋ[4]ದ[4]ರದೊಳಾದಂ ವಿಗ್ರಹಸ್ಥಾನಮು
ನ್ನಿತವಾದಂಗಳೊಳಲ್ಲದಿಲ್ಲ ಮಱಿದುಂ ಮತ್ತೆಲ್ಲಿಯುಂ ದೇಶದೊಳ್ ೨೧

---

[1] ರ್ದಪುಱಿ (ಬ) [2] ಲ್ಲಿ (ಕ) [3] ಳಡರ್ದುರ್ದಿ (ಕ) [4] ವ(ಬ).

ಬವರಂ ಜಡಸಂಗಂ ರಾ
ಜವಿರೋಧಂ ತಪನವಿಕೃತಿ ಗುಣಗೋಪನಮೆಂ
ಬಿವು ಮಾನಸರೋಳ್ ದೊರೆಕೊ
ಳ್ಳವು ಪದ್ಮದೊಳಪ್ಪೊಡಕ್ಕುಮಂತಾ ನಾಡೊಳ್ ೨೨

[1]ನಿಗಳಂ[1] ಸೊಕ್ಕಾನೆಯೊಳ್ ವಿಗ್ರಹವೊದವಿದ ವಾದಂಗಳೊಳ್ ದಂಡಮುತ್ಕೀ
ತುಗಳೊಳ್ ಕಾರ್ಶ್ಯಂ ವಧೂಮಧ್ಯದೊಳತಿಕಠಿನತ್ವಂ ಕುಚದ್ವಂದ್ವದೊಳ್ ವ
ಕ್ರಗಮಂ ನಕ್ಷತ್ರದೊಳ್ ಭಂಗದ ಪರಿ ತೆರೆಯೊಳ್ ಕಂಟಕಂ ಹರ್ಷದೊಳ್[2]ಸ್ವಾ
ತಿಗೆ[2] ಕಾವ್ಯಪ್ರೌಢಿಯೊಳ್ ತಳ್ತಿಱುವುದಿವೆಯೊಳುಂಟಲ್ಲಿ ಬೇಱಿಲ್ಲ ನಾಡೊಳ್ ೨೩

(ಅನಂತನಾಥಪುರಾಣಂ, ೧—೮೫.)

ಸತತಂ ಮಾರ್ಗೋಲ್ಲಂಘನ
ಗತಿ ಹಯದೊಳವಗ್ರಹಂ ಮದೇಭಸಮೂಹಾ
ಕೃತಿಯೊಳ್ ಸಮರಾಗಮುನ
ಸ್ಥಿತಿ ನಲ್ಲರೊಳಲ್ಲದಿಲ್ಲ ಪೆಱತೊಂದೆಡೆಯೊಳ್ ೨೪

(ಚಂದ್ರಪ್ರಭ ಪುರಾಣಂ, ೧—೮೬.)

ತಿವಿವ ಸೆಱೆವಿಡಿವ ಕಟ್ಟುವ
ತವೆ ಕೊಲ್ವ ಪರಾರ್ಥತತಿಗೆ ಬಯಸುವ ದುಷ್ಟ
ವ್ಯವಹೃತಿ ನೆತ್ತದೊಳಲ್ಲದೆ
ಸವನಿಸದಾ ವಿಷಯಜನಸಮಾಜದೊಳೆಂದುಂ ೨೫

ಸಿರಿ ನೆಲೆಗೊಂಡುದಲ್ಲಿ ಮದನಂ ಮನೆಗಟ್ಟಿದನಲ್ಲಿ ಸೌಖ್ಯಮುಂ
ಕುರಿಸಿ ಮಡಲ್ತುದಲ್ಲಿ ಋತುಗಳ್ ನೆಲೆಗೊಂಡುವು ತಮ್ಮೊಳಲ್ಲಿ ಜಾಣ್
ಪರಿವೆಸಗೈವುದಾರ್ಗಮಿರದಲ್ಲಿ ಗುಣಂ ಪೆಣೆಗೊಂಡುದಲ್ಲಿ ನಾ
ಲ್ಗರಸನದೆನ್ನದಾ ವಿಷಯಮುಂ ಪೆಱತೆಂದೊಡೆ ದೋಷಮಾಗದೇ ೨೬

(ಶಬ್ದಮಣಿದರ್ಪಣಂ, ೧೨೯-೨.)

ಮುದಮೂರೂರಬಲಾಜನಕ್ಕೆ ಪರಿನೀರೂರೂರ ತೋಂಟಕ್ಕೆ ಸಂ
ಪದಮೂರೂರ ಗೃಹಕ್ಕೆ ಪಂಕಜದ ಚೆಲ್ವೂರೂರ ಗುಯ್ಯಲ್ಗೆಯಾ
ಸ್ಪದಮೂರೂರ ಬುಧಾಳಿಗಂಚೆಗಳ ಪೆಂಪೂರೂರ ಷಂಡಕ್ಕೆ ಪಾ
ಲೊದವೂರೂರ ದನಕ್ಕತ[3]ಕ್ಯರ್[3]ಮುದಱಿಂ [4]ರಮ್ಯಂ[4] ತದುರ್ವೀತಳಂ ೨೭

(ಕಾವ್ಯಾವಲೋಕನಂ, ೨—೮೯.)

ಪೊಱಲಿಂದ್ರಪುರಂ ಕಾಲೂರ್
ಪೊಱಲಿಂದ್ರರ್ ಪೊಱಲ ಮಾನಸರ್ ಕಾಲುರಿಚರ್

[1] ವಿಗಡಂ (ಕ ಖ ಬ) [2] ಸಲ್ವಿಗೆ (ಬ) [3] ಕ್ಕು (ಬ) [4] ದುಷ್ಯಂ (ಬ).

ಪೊೞಲಿಚರೆನೆ ಸೊಗಯಿಸುವುದು
ಪೊೞಲಿಂ ಕಾಲೂರ್ಗಳಿಂದಮಂತಾ ವಿಷಯಂ ೨೮

(ಕಾವ್ಯಾವಲೋಕನಂ, ೩೩೫.)

ಜನಪನ ಕಾದು ರಕ್ಷಿಸುವ ನೀತಿ ಜನಂಗಳ ಮೇಲ್ಮರಲ್ವ [1]ವ
ರ್ಧನ[1]ಸುಖಲೀಲೆಯೋಂ ಪಿರಿದೊ ಕುಂದದ ಕಾಲ್ ಸಲೆ ಸಂದ ಸುಗ್ಗಿ ಬಂ
ದನುದಿನಮಿರ್ಪ ದೀವಳಿಗೆ ನಾೞಿ[3] ಬಸಂತನ ಕಾಪು ಕಾಮದೇ
ವನ ರತಿಯಾಜ್ಞೆ ಚಂದ್ರನ [2]ಭಡಾಳಿಕೆ[2] [3]ತಂ[3]ಬೆಲರೊಂದು ಬೊಂಬಲಂ ೨೯

(ಅನಂತನಾಥಪುರಾಣಂ, ೧–೪೬.)

ಜನಪತಿಯಿರ್ಪ ಪೆರ್ಗುಱುಹಿನಿಂದಿವು ಬೀಡಿವು ನಾ[4]ಡೊಳಾರ್ಗಳಂ
ದನುವಿಸಲೊಲ್ಲದಂ[4]ತಱಿಯುಬಾರದು ಭೇದಿಸಿ ಬೇಱೆವೇಱೆ [5]ಸೊಂ
ಪಿನ ಸಿರಿ ಬೇಱೆವೇಱೆ ಮಣಿಮಾಡದ[5] ತಿಂತಿಣಿ ಬೇಱೆವೇಱೆ ಸಂ
ದನತತಿ ಬೇಱೆವೇಱೆ ಪರಿಖಾ[6]ವಳಿ[6] ತೋರಣ ವಪ್ರಗೋಪುರಂ ೩೦

(ಅನಂತನಾಥಪುರಾಣಂ, ೧–೪೬.)

ಪಿಕಕೋಳಾಹಳಮಲ್ಲದಿಲ್ಲ ಪೆಱ[7]ತುಂ[7] ಕೋಳಾಹಳಂ ನಾಗಚಂ
ಪಕಗಂಧೋದ್ಗಮಮಲ್ಲದಿಲ್ಲ ಪೆಱ[7]ತುಂ[7] ಗಂಧೋದ್ಗಮಂ ಭೃಂಗಗಾ
ಯಕಗೀತಸ್ವನಮಲ್ಲದಿಲ್ಲ ಪೆಱ[7]ತುಂ[7] ಗೀತಸ್ವನಂ ರಾಜಕೀ
ರಕವಾಕ್ಪಾಟವಮಲ್ಲದಿಲ್ಲ ಪೆಱ[7]ತುಂ[7] ವಾಕ್ಪಾಟ[8]ವಂ[8] ಸುತ್ತಲುಂ ೩೧

(ಶಾಂತಿಪುರಾಣಂ, ೩–೩.)

ಎಳಲತೆ ತಳ್ತ ಚಂದನದ ಸಾಲೆಳವಳ್ಳಿಗಳಂಡುಗೊಂಡು ಗೊಂ
ದಳಿಸಿದ ಬಳ್ಳಿಗೌಂಗು ವನಮಾಲಿಕೆ ಸುತ್ತಿದ ನಾಗಕೇಸರಂ
ಪೊಳೆವಲರ್ದೊಂಗಲಿಂ ಮಿಳಿರ್ವ ಮಲ್ಲಿಗೆಯುಪ್ಪಿದ ಮಾವು ಜಾಜಿ ಮುಂ
ಡಳಿಸಿದ ಕೇಸರಂ ಮೆಱೆವುದೆಲ್ಲಿಯುಮಲ್ಲಿಯ ನಂದನಾಳಿಯೊಳ್ ೩೨

ಪಾಡುವ ತುಂಬಿ ತುಂಬಿಯೊ[9]ಳರಲ್ವ ಮರಲ್ ಮರಲೊಂದು ಸೊಂಕಿನಿಂ[9]
ತೀಡುವ ಗಾಳಿ ಗಾಳಿಗೆ ಬೞಲ್ವ ತಳಿರ್ ತಳಿರಿಂ ಫಲಂಗಳಿಂ
ದಾಡುವ ರಾಜಕೀರತತಿ ಕೀರಚಯಂಗಳ ಕೂಡೆ ಜೈದು ಬೈ
ದಾಡುವ ತೊಂಡುವೆಣ್ಬುರುಳಿ ಮಾಡು[10]ವುವಾ[10]ರ್ಗಮನಂಗದಾಹಮಂ ೩೩

---

[1] ಮರ್ದನ (ಕಖಬ) [2] ತಳಾರಿಕೆ (ಅ) [3] ಕೆಂ (ಅ) [4] ಡೆಯೂರ್ಗಳೆಂ ದನುಮಿಪರೆಲ್ಲರುಂ (ಅ) [5] ತಾಂ ಮಣಿಮಯಮಪ್ಪಮಾಣಿಕದ ಮಾಡದ (ಕಖಬ) [6] ಮಣಿ (ಅ) [7] ದುಂ (ಅ) [8] ವುಂ (ಖಬ) [2] ಮರಲ್ವರಳೊಳ್ ಕರಮೆಂದು ಸಾದಿನಿಂ (ಬ) [10] ಗುಮಾ (ಬ).

ಕುಸುಮರಜಂಗಳೇರಿಗಳ ನೀ[1]ರ್ಗಳ ಚಂಚಲ ಬಿಂದುವರ್ಗದಿಂ[1]
ದೊಸರ್ವ ರಸಂಗಳೊಳ್ದೊಱೆ[3]ಗೆ ಪಂಕಜಪತ್ರದ ಸಾಲೆ ಮಾವಿನೊಳ್
ಮಿಸುಗುತಮಿರ್ಪ ಬಲ್ಸೊನೆಯ ಸನ್ನೆಗೆ ಕಾಂಚನಕೇತಕೀದಳ
ಪ್ರಸವದಳಂಗಳೋಲೆಗೊಡೆ ನಲ್ಲಳಿಗಪ್ಪುವು ನಂದನಂಗಳೊಳ್ ೩೪
(ಶಬ್ದಮಣಿದರ್ಪಣಂ, ೭೮–೧೦.)

ಗೊಲೆಯೊಳ್ ಪಣ್ತುಮ ವ್ಯೈಂದವಾಟಿ[3] ಪಥಿಕರ್ ಬರ್ಕೆಂದು ಭೃಂಗಂಗಳಿಂ
ದುಲಿಯುತ್ತಿರ್ದುದು ಪ[2]ಣ್ತು[2] ಬಕ್ಕೆ ತನಿವಣ್ಣಾಗಿರ್ದುದಿಮ್ಮಾವು ಕ
ಟ್ಟಲಿಸಿರ್ದತ್ತೆಲೆವಳ್ಳಿ ಕಾಯ್ತು ಕರೆವಂತಿರ್ದತ್ತು ಚೆಂದೆಂಗು ಸಾ
[3]ಲಲೆಯುತ್ತಿರ್ದುದು[3] ಬಂದ ಕರ್ಬಿನೆ ವನಶ್ರೀ ಬಣ್ಣಿಸಲ್ಬಕ್ಕುಮೇ ೩೫
(ಆದಿಪುರಾಣಂ, ೧೧–೬೮.)

ತಿಂತಿಣಿವಣ್ಣನಾಂತ ಕದ[4]ಳಂ ಪದವಣ್[4] ಪುದಿದೀಳೆ ಬೀಡೆವ
ಣ್ಣಿಂ ತುಱುಗಿರ್ದ ದಾಡಿಮಚಯಂ ಕಿಸುವಣ್ [5]ಕುಸಿದಿರ್ದ[5] ನಾ[6]ಗರಂ
ಗಂ[6] ತನಿವಣ್ ಪೊದ[7]ಟ್ಟಿಡಿದ[7] ಮಾವೆಳಗಾಯ್ಪೊಱೆ[3] ತಳ್ತ ತೆಂಗು ಬೇ
ರಿಂ ತುದಿಮುಟ್ಟೆ ಕಾಯ್ತು ಪಲಸೆಂಬಿವು ಕುಂದವು ನಂದನಂಗಳೊಳ್ ೩೬
(ಜಗನ್ನಾಥವಿಜಯಂ, ೨–೧೫.)

ಪುದಿದ ಫಲಂಗಳಿಂ ತೊನೆವ ತೆಂಗಿನ ತಿಂತಿಣಿ ಕೌಂಗಿನುರ್ಬಲುಂ
[8]ಗ[8]ದ ಹೊದಱೀಳೆಯಿರ್ದೆಡೆ ನವಾಮ್ರದಿಱುಂಬರನೇಱೆಲಾಗರಂ
ಕದಳಿಯ ಕಂಟೆ [9]ಕಮ್ಮರ[9]ದ ಸಂದಣಿ ದಾಡಿಮದೊತ್ತು ಸುತ್ತಲುಂ
ಸದಮದ ಮಾದಲಂ ಪಲಸಿನುಬ್ಬರಮಲ್ಲಿ ಕರಂ ಮನೋಹರಂ ೩೭

ಪದವಣ್ ಪೇಱೆರ್ದ ನಾರಂಗದ ತರು ತನಿವಣ್ ಪೇಱೆದಿಮ್ಮಾವು ಜೇನೆಯ್
ಪುದಿದಂತಿರ್ದಚ್ಚವಣ್ ಪೇಱೆದ ಕದಳಿವನಂ ಬೀಡೆವಣ್ ಪೇಱೆ ಚೆಲ್ವೇ
ಱೆದ ದಾಳಿಂಬಂ ಪಯಃಪೂರಿತಫಲತತಿ ಪೇಱೆರ್ದ ಚೆಂದೆಂಗು ಬೇರಿಂ
ತುದಿಕೋಡಂ ಮುಟ್ಟೆ ಕಾಯ್ಪೇಱೆದ ಪಲಸು ಪುರೋದ್ಯಾನದೊಳ್
ಕುಂದವೆಂದುಂ * ೩೮

ನಲಿವುಲಿವಂಚೆ [10]ಕೊಂ[10]ಚೆ [11]ನಳಿನಂ[11] ಪುಳಿನಂ ಗಿಳಿವಿಂಡು ಬಂಡು ಕೋ
ಗಿಲೆ ಗೊಲೆ ತೆಂಗು ಕೌಂಗು ವಕುಳಂ ಮುಕುಳಂ ಲತೆ ಪರ್ಬಿ ಕೊರ್ಬಿದೊ

---

[1] ಗುರ್ಡಿಚೆಂಚೆಯೆಬಂದಕರ್ವಿನಿಂ (ಬ) [2] ಣ್ತು (ಖಬ) [3] ಲೆಳೆಮುತ್ತಿರ್ದುದು (ಕ) ಱನೆ ಮುತ್ತಿರ್ದುದು (ಖ) [4] ಳೀಫಲಮುಂ (ಖಬ) [5] ಮುಸುಕಿರ್ದ (ಅ) [6] ರಂಗಮುಂ (ಖಬ) [7] ಳ್ದಿಸೆವ (ಅ) [8] ಕ (ಖ) [9] ಮಾಮರ (ಖ).

* ಈ ಪದ್ಯ (ಕ) ಪ್ರತಿಯಲ್ಲಿಲ್ಲ [10] ಚೆಂ (ಕ) [11] ವಳಿವಂ (ಖ).

ಳೈಲರೆಲೆವೀಳೆ ಬಾೞ[3] ಮಧುಪಾವಳಿ ಪೂವಳಿ ಕಂಪು ಸೊಂಪಗುಂ
ದಲೆ ಸಲೆ ಕಂತು ನಿಂತ ನೆಲೆವೀಡೆನಿಸಿರ್ದುವು ನಂದನಂಗಳೊಳ್ ೩೯

ಕುಸುಮರಸಂಗಳೊದ್ದೆ ತನಿವಣ್ಣ ರಸಂಗಳ ಸೋನೆ ಸಾ[1]ರ[1]ಕೋ
ೞ್ಕೆಸರೆಳನೀರ ಬೆಂಚೆ ಸೊನೆಯೊ[2]ಳ್ಗೆ ಸಱಿಂ[2]ಬಿವಱಿಂದಮೆಲ್ಲಿಯುಂ
ಬಸನದ ಬಾೞ್ತೆಯುಪ್ಪೆಡೆಗಳಿಲ್ಲದೆ ನಲ್ಲರನಂಗರಾಗಮು
ರ್ಬಿಸೆ ಭರದಿಂ ತೊೞಲ್ದಱಸುವರ್ ಬನದೊಳ್ ಕೃತಕಾ[3]ಚಲಂ[3]ಗಳಂ ೪೦
(ಮಲ್ಲಿನಾಥಪುರಾಣಂ, ೨–೩೫.)

ವಿರಹಿಗೆ ಬೇಗೆಯಂ ಪ್ರಿಯರ್ಗೆ ರಾಗಮುನಾಗಿಸುಗುಂ ಬನಂಗಳೊಳ್
ಮೊರೆವ ಮದಾಳಿ ಕೂ[4]ಱಿ[4]ಸುವ ಕೋಗಿಲೆ ಕೇಗುವ ಸೋಗೆ ಚಪ್ಪರಿ
ಪ್ಪರಗಿಳಿ ಕುಪ್ಪೆವಾಯ್ವ ಕಪಿ ಮೂಡಿ ಮುಳುಂಗುವ ಜಕ್ಕವಕ್ಕಿ ಸಂ
ಚರಿಸುವ ಹಂಸೆ ಕೂಡುವ ತುರಂಗಮು ಘುಮ್ಮೆನುತಿರ್ಪ ಪಾರಿವಂ ೪೧

ಮೂಂದಳಿರೋಲಿ ಕಂ[5]ಠ[5]ರವಮಾ ಮಱಿದುಂಬಿಗಳಕ್ಕರಂಗಳೊಳ್
ಪೊಂದಿದ ಮುದ್ರೆ ಚಂದ್ರಸದನಂ ಮಲಯಾನಿಲನುಯ್ವನಟ್ಟಿವಂ
ಬಂದ ಬಸಂತರಾಜನೊಡಗೂ[6]ಡಿರುತೋತಿರಿ[6]ಯೊಂದದಿರ್ದವರ್
ನೊಂದಪರೆಂದು [7]ಕೊಕ್ಕುದೆಱಿದೋದುವವಂ[7] ಕಳಕಂಠವಾಚಕಂ ೪೨

ಪ್ರಣವೋತ್ಥಶ್ರುತಿಮಧುರ
ಕ್ವಣಿತಂ ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ
ಪೆಣೆದಿರೆ ಪುರೋಹಿತ ಬ್ರಾ
ಹ್ಮಣನೆನಿಸಿತ್ತತನುನೃಪತಿಗೀ ಪರಪುಷ್ಟಂ * ೪೩

ಗಿಳಿ ಗಿಳಿವಿಂಡಿನೊಳ್ ಸೆಣಸಿ ಬಯ್ವುವು ಕೋಗಿಲೆ ಕೋಕಿಲಕ್ಕೆ ಕೆ
ಕ್ಕಳಿಸಿ ಕುಕಿಲ್ವುವುದ್ಭ್ರಮರಮುದ್ಭ್ರಮರಂಗಳ ಗಾವರಕ್ಕೆ ಗಾ
ವಳಿಸಿ ಛಡಾಳದೊಳ್ ಮೊರೆವುವಾದೊ[8]ಡಮೂ[8]ರಬನಂ [9]ಬ[9]ನಂಗಳೊಳ್
ಕೆ[10]ಳೆಗೆಡೆ[10]ದಂತೆವೊಲ್ ಗಡಣಿಸಿರ್ಪುವು ತದ್ವಿಷಯಾಂತರಾಳದೊಳ್ ೪೪
(ಅನಂತನಾಥಪುರಾಣಂ, ೧–೭೭.)

---

1 ಱಿ (ಕ) 2 ಳ್ಸೆಱಿಯಿಂ (ಖ) 3 ತಳಂ (ಬ) 4 ಚಿ (ಖ) 5 ತು (ಖಬ)
6 ಡಿದರೋತಿರಿ (ಕ) 7 ತೆಱಿಂ ತೆಱಿದೋದುವುವಲ್ಲಿ (ಕ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ
8 ಡೆಯೂ (ಕಖಬ) 9 ಜ (ಕ ಖ) 10 ಳಗಿಡ(ಅ).

ಅಲರ್ದಲರ್ವಂಡನುಂಡು ಕಳನಾದದಿನಾಣತಿಗೆಯ್ವ ತುಂಬಿ ಕೋ
ಮಲ ಕಳಿಕಾರಸಾಸವಮನೀಂಟಿ ಮದೋತ್ಸವದಿಂ ಕುಕಿಲ್ವ ಕೋ
ಗಿಲೆ ಮಿಡಿಯಂ ಕರ್ದುಂಕಿ ನಲಿದಾಡುವ ರಾಜಶುಕಂ ಸರೋಜ ಕಂ
ದಳಮನೊಱಲ್ದು ಕರ್ಚಿ ಸುೞಿವಂಚೆಗಳಿಲ್ಲದುದಿಲ್ಲ ನಂದನಂ ೪೫

(ಜಗನ್ನಾಥವಿಜಯಂ, ೩–೧೦.)

ಸರಸ ಪರಿಪಕ್ವಫಲಕುಲ
ಭರದಿಂದಂ ಜೊಂಪಜೊಂಪದೊಳ್ ಶೋಧಿಸುತುಂ
ವಿರಹಿಗಳನಱಿಸಿ ಕಾವನ
ಗರವಟ ಬರ್ಪಂತೆ ಸುತ್ತಿ ಬರ್ಪುವು ಗಿಳಿಗಳ್ ೪೬

ಶಬ್ದಮಣಿದರ್ಪಣಂ, ೭೭–೩೧.)

ಊರೂರ್ಗೆ ಪೆಸರ ನಂದನ
ಮೂರೂ[1]ಗುರ್ತುಂಗ[1]ಶಿಖರ ದೇವಾಲಯಮಿಂ
ತೂರೂರ್ಗೆ ಚದುರ [2]ಚ[2]ಲ್ಲದ
ವಾರಸ್ತ್ರೀನಿಕರಮೆಸೆ[3]ವು[3]ದಾ ಜನಪದದೊಳ್ ೪೭

ಭೂತಳವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀ
ಮಾತೃಕ ದೇವಮಾತೃಕಮೆ ತದ್ವಿಷಯಂ ನವನಾಳಿಕೇರ ವಾ
ರ್ಮಾತೃಕಮಿಂದುಕಾಂತಜಳಮಾತೃಕಮಿಕ್ಷುರಸಾದ್ರ್ರನಾಳಿಕಾ
ಮಾತೃಕಮಾಮ್ರಕಮ್ರಪರಿಪಕ್ವಫಲೋತ್ಕರಸಾರಮಾತೃಕಂ ೪೮

(ಚಂದ್ರಪ್ರಭಪುರಾಣಂ, ೧–೯೦.)

ಕೂರಿದುವೆನಿಪೆಲೆಗಳ ಬಾ
ಯ್ದಾರೆಗಳೆಲರಲೆಯೆ ತಾಗಿ ಪಱಿದುಗುವ ರಸಾ
ಸಾರಮೆ ಕೊಳಗೊಂಡೆಂದುಂ
ನೀರೂಟಕ್ಕೆಳಸವಲ್ಲಿ ಕರ್ವಿನ ತೋಂಟಂ ೪೯

(ಚಂದ್ರಪ್ರಭಪುರಾಣಂ, ೧–೯೬.)

ಮಿಡಿಯಲೊಡನೊಸರ್ವುವೆಂಬೀ
ನುಡಿಗಳವಂತಿರ್ಕೆ ಬೆರಲೆರಲ್ ತಾಗಿದೊಡಿಂ
ಗಡಲ ಮಡುವೆನಿಸಿ ರಸಮುಂ
ಬಿಡುವುವು ಪುಂಡ್ರೇಕ್ಷುದಂಡವಿತತಿಗಳೆತ್ತಂ ೫೦

ನೆಲ್ಲುಂ ಕೌಂಗುಂ ಮಾವುಂ
ಮಲ್ಲಿಗೆಯುಂ ಬೆಳೆವುವಲ್ಲಿ ಕರ್ವಿನ ರಸದಿಂ

[1] ಗುರ್ಂತುಂಗ (ಕ) [2] ರ (ಕ) [3] ಯ (ಕ).

ದೆಲ್ಲಾ ಕಾಲಮುಮೆಂದೊಡ
ದಲ್ಲದೆ ಮತ್ತಾವುದಿಂಬು ಕಣ್ಗಂ ಮನಕಂ ೫೧
(ಶಬ್ದಮಣಿದರ್ಪಣಂ, ೭೯—೨.)

ಕುಡಿ[1]ಯುಂ[1] ಪೊನ್ನನೆ ಬಿತ್ತಿ ಪೊನ್ ಬೆಳೆದೊಡಾ ಪೊಂಗಾಯ್ತು ಕಂಪೆಂಬವೋಲ್
ಕಡುಗೆಂಪುಂ ಕಡುಗಂಪುಮುಗ್ಗಲಿಸೆ ನಾಡೂರೂರ ಸುತ್ತುಂ ಬೆಡಂ
ಗಿಡಿದಿರ್ಕುಂ ಕೆಱೆ[3]ಯೇರಿಯುದ್ದದೊಳೊಡಂಬಟ್ಟುದ್ದದಿಂದೆತ್ತಲುಂ
ಕುಡುಗೋಲುರ್ಚದ ಗಂಧಶಾಳಿವನಮುತ್ಕೀರಾಳಿ ಲೀಲಾಸ್ಪದಂ ೫೨

ಭೋಂಕನೆ ಬಂದುವಂದು [2]ತೆನೆಯಕ್ಕಿಯ ಮುಕ್ಕಿ ಕಲಂಕಿ ಸೂಸು[2]ವ
ನ್ನಂ ಕುಟುಕಿಂಗೆ ಪಾಯ್ದುಲಿ[3]ಯುತುಂ ಕವಿಯಲ್[3] ಗಿಳಿಸೋವ ಪಾಮರೀ
ಸಂಕುಲದೊಂದು ಮೆಲ್ಲುಲಿ[4]ಗಳಿಂಚರಮುಂ ನಸುಗೇಳ್ದು[4] ಕೀರವೃಂ
ದಂ ಕಳಕೂಜಿತಾನುಮಿತಮಾದುದು ಶಾಡ್ವಲಗಂಧಶಾಲಿಯೊಳ್ ೫೩
(ಜಗನ್ನಾಥವಿಜಯಂ, ೨—೭.)

ತೆನೆ ಫಲಭಾರದಿಂದೆಱಗೆ ಪಾಯ್ದುದಱೊಳ್ ಕುಟುಕಿಂಗೆ ಮೆಲ್ಲಮೆ
ಲ್ಲನೆ ಗಿಳಿ ಪಾಯೆ ಪಕ್ಷತತಿ ಮೇಗೆ ಪೊದೞ್ದಿರೆ ಪಚ್ಚನಪ್ಪ ತ
ದ್ವನ ನವಪತ್ರಮೋ ಶುಕಪತತ್ರಮೊ ಪೇೞಿಮಿದೆಂಬ ಶಂಕೆಯುಂ
ಜನಿಯಿಸೆ ಗಂಧಶಾಳಿಯ ಶುಕಾಳಿಯ ಲೀಲೆ ಕರಂ ಮನೋಹರಂ ೫೪

ತ್ವರಿತಂ ಗೋಪಂ ಸಕೋಪಂ ಪೆಱಗೆ ಪರಿಯೆ ಹೂಂಕಾರದಿಂದಳ್ಕೆ ಬೀಗು
ತ್ತಿರೆ ಬಾಯಿಂ ಬಿಟ್ಟಿ[5]ಗಳ್[5] ಸಾಲಿಡೆ ಪಸುನೊರೆಯಿಂ ನಾಂದು ಪುಲ್[6]ತಿಳ್ಳಿ[6]ಗೊಂಡ
ಬ್ಬರಿಸುತ್ತುಂ ತನ್ನ ಕಣ್ಗಳ್ ಕರೆಯೆ ನಿಕಟದೊಳ್ ಕೇಳ್ದು ಗಾ[7]ಳ್ಕೀ[7]ಳೆನುತ್ತುಂ
ಪರಿತಂದತ್ತೂರ್ಧ್ವದಿಂದಂ ಬಿರಿವಿಡೆ ಮೊಲೆವಾಲಂದು ಧೇನುಪ್ರತಾನಂ ೫೫
(ಲೀಲಾವತಿ, ೫—೧೦೧.)

ಅಡೆಯುಂ ಕೋಡೆತ್ತುತುಂ ಮಾರ್ದನಿಗೆ ಮುಸಗುತುಂ ದರ್ಪದಿಂ ಛಾಯೆಯೊಳ್
ಕೋ]
ಡಿಡುತುಂ ಮುಂ ಕಾದಿ ಪು[8]ಣ್ದಿಂತಿಣಿ[8]ಗೆಱಗೆ ನೊಱಂ ಶೀರ್ಣಶೃಂಗಾಗ್ರದಿಂ ಮಾ
ರ್ದೊಡೆಯುತ್ತುಂ ಪೊಕ್ಕು ಪಿಂಡಂ ಕಲಕಿ ಕೆಲೆಯುತುಂ ಬೆರ್ಚೆ ಬಲ್ಗೂಳಿಗಳ್ ಬೆಂ
ಗುಡೆ ಗಂಡಂ ಸೂಸುತುಂ ಬಂದುದು ಮುದವಿದಳತ್ಪಿಂಗಳಾಕ್ಷಂ ಮಹೋಕ್ಷಂ ೫೬
(ನೇಮಿನಾಥಪುರಾಣಂ, ೮—೧೮, ಲೀಲಾವತಿ, ೫—೧೦೨.)

---

[1] ಯೊಳ್ (ಕಖ) [2] ತೊನೆದಿಕ್ಕೆಯಿನಿರ್ಕೆಲದೊಳ್ ಕಲಂಕು (ಅ) [3] ವತ ಮ್ಮುಲಿಪಿಂ (ಅ) [4] ಪಮುಂ ನಸುಗೇಳದ ನಿಂದ (ಅ) [5] ಯೊಳ್ (ಅ) [6] ಮಿಳ್ಳೆ (ಅ) [7] ಳ್ಕೀ (ಕ) [8] ಣ್ಬೆತ್ತಿಣೆ (ಕಖಬ).

ಬಲಭಿನ್ನಾಗೇಂದ್ರನೊಳ್ ಮಾರ್ಮಲೆತ ಹರವೃಷಾಧೀಶನೊಳ್ ಪೋರ್ದ ಕೀನಾ
ಶಲುಲಾಯಶ್ರೇಷ್ಠನೊಳ್ ತಾಗಿದ ರಣಗಣನಾರೇಖೆಯೆಂಬಂತು ರೇಖಾ
ವಳಿ ಪೀನಸ್ಕಂಧದೊಳ್ ತಳ್ತಮರ್ದಿರೆ ಪೊಱಮಟ್ಟತ್ತು ಕಾಂತಾರದಿಂ ಪಾ
ಟಳನೇತ್ರಂ ತುಂಗಗಾತ್ರಂ ಘನತರ ಕಕುದಂ ಶಾತಶೃಂಗಂ ಗವೇಂದ್ರಂ ೫೭

(ಜಗನ್ನಾಥವಿಜಯಂ, ೫–೩೫.)

ಪೊಸನಸೆಯ ಸೊವಡನಾಘ್ರಾ
ಣಿಸಿ ಮ[1]ಣಿ[1]ಕದ ಮಿಡಿವ ಕಚ್ಚೆಯೊಳೆ ಮೊಗವೆತ್ತು
ತ್ತೆಸೆದುದು ವೃಷಮುಮರರನೇ
ಡಿಸುವವೊಲೇನುಂಟೆ ನಿಮಗಮಿಾ ಸುಖಮೆನುತುಂ ೫೮

(ಲೀಲಾವತಿ, ೫–೧೦೮.)

ಎಡಪಿ [2]ಪ[2]ರಲ್ಗಳಂ ದೆಸೆಗೆ ಬೆರ್ಚುತೆ ಗೋವನ ಗಾಳಿಗೆಯ್ದೆ ಪಿಂ
ಡಡಸುತೆ ಕಂದಮುಂ ನೆಗಪಿ ನೋಡುತೆ ಪಕ್ಕಮನಗ್ರವಾಲದಿಂ
ತೊಡೆವುತೆ ಕರ್ಣಮುಂ ತೆಱ[3]ದು ತಿತ್ತಿರಿಗಾಳೆಯನಾಲಿಸುತ್ತೆ ಪಿಂ
ಡೊಡೆಯದೆ ಕೂಡಿ ಬರ್ಪ ಪಲವಾಕಳಿನೊಪ್ಪುವುವಲ್ಲಿ ಪ[3]ಟ್ಟ[3]ಗಳ್ ೫೯

(ಲೀಲಾವತಿ, ೫–೧೦೩.)

ಬರಲಾಱದೆ ಪೆರ್ಗೆಚ್ಚಲ
ಭರದಿಂದಂ ಪೆಱಗು ಕುಸಿಯೆ ಪೊಱ[3]ಯುಂ ಕಳೆವಂ
ತಿರೆ ತೊರೆದ ತೋರವೊಲೆಯುಂ
ಬಿರಿವಿಡುತುಂ ಬಂದುವಲ್ಲಿ ಪಲವು ಪಯುಂಗಳ್ ೬೦

(ಲೀಲಾವತಿ, ೫–೧೦೪.)

ಕಿಱುಗೊಂಬು ನಳಿದಬೆನ್ನುಂ
ಕಿಱುಕಿದ ತೊಡೆಗೆಚ್ಚಲಲೆವ ಬಾಲಂ ತೆಳುವೈ
ಮೆಱ[3]ಯೆ ಬಿಳಿದಾಗಿ ಮಾಣದೆ
ಕಱ[3]ವೆಮ್ಮೆಯ ಪಿಂಡು ಪಳ್ಳಿಪಳ್ಳಿಯೊಳೆಸೆಗುಂ ೬೧

ಸುರಭಿ ಘಟೋಧ್ನಿ ದುಗ್ಧನಿಧಿ ನಂದಿನಿ ವತ್ಸಲೆ ಕಾಮಧೇನು ಪೀ
ವರಕುಚಿ [4]ಗೋಪಿ ಸಲ್ಲಕಿ[4]ಯೆನಿಪ್ಪಭಿಧಾನದ ಗೋಕದಂಬಮುಂ
ಕರೆದು ಮುರಾರಿ ಮೈದೊಡೆದು ಮೇಯಿಸಿಯುಂ ತಿಳಿನೀರನೂಡಿಯುಂ
ಮರದ ನೆಟಿಲ್ಗಳೊಳ್ ನಿಲಿಸಿಯುಂ ಮೆಱ[3]ದಂ ನಿಜಗೋಪಲೀಲೆಯಂ ೬೨

(ಜಗನ್ನಾಥವಿಜಯಂ, ೫–೪೨.)

---

[1] ಸ (ಖಬ) [2] ಸ (ಕಖಬ) [3] ಳ್ಳಿ (ಅ) [4] ಗೋಮತಲ್ಲಕಿ (ಬ).

ಕಿಱಿಕಿಱಿದೆ ಮೆಟ್ಟಿ ಕೆಚ್ಚಲ
[1]ನಿ[1]ಱುಂಕಿ ಕುಡಿವಾಲವೆತ್ತಿ ಕೊಣಕಿಟ್ಟೆಡೆಯೊಳ್
ಕಱುಗಳನೆ ನೆನೆದು ಮನೆಗಳೆ
ಗುಱಿಯಾಗಿರೆ ಬರ್ಪ ಪಲವು ಧೇನುಗಳೆಸೆಗುಂ ೬೩

ಕಱುವಂ ಬಿಡುಬಿಡು ತೊಳೆ ನೀ
ರೆಱೆ ಕಂದಲನೊರ್[2]ಸಿ ತೊಳೆ ತಗುಳ್ದೊದೆವಾ[2]ವಂ
ತುಱಿಸು ತೞೆಯಿಕ್ಕು ತಡೆಯದೆ
ಮುಱುವಂ ಸುರಿಯೆಂಬ ಸರಮೆ ತುಱುಗಾರ್ತಿಯರೊಳ್ ೬೪

(ಲೀಲಾವತಿ, ೫–೧೨೧.)

ಮಡದಿ ನಿತಂಬಮುಂ ಮಡದಿನಾಂತು ಕೆಲಕ್ಕೊ[3]ಱಗಿ[3]ರ್ದ ಕಂದಲಂ
ತೊಡೆಯೊಳಿಱುಂಕಿ ಬಳ್ಕಿ ನಡು ಬೆನ್ನೊಳೆ ಪೊಕ್ಕಿರೆ ದುಗ್ಧಧಾರೆಯೊ
ಳ್ಗಡಣದಿ ನಾಡೆ ಕಣ್ಬೆಳಗು ಬ[4]ಲ್ಬೆ[4]ಡಗಂ ಬಿಗಿದೊತ್ತೆ ಕೈಗಳಿಂ
ಪಿಡಿದು ಕುಚಾಗ್ರದೊಳ್ ತುಱುಗೆ ಪಾಲ್ವನಿಗಳ್ ಕಱೆದಳ್ ಘಟೋಧ್ನಿಯಂ ೬೫

(ಲೀಲಾವತಿ, ೫–೧೨೫.)

ಇನಿಸಂ ಪೊಕ್ಕೂರು ಮಿಕ್ಕೊಸರಿಸಿದ ಚರಣಂ ಶೋಭೆಯಂ ಬೀಱೆ ಕುಂಭ
ಕ್ಕೆ ನಿತಂಬಂ ಸು[5]ತ್ತು[5] ನೇಣಂ ತೆಗೆವ ಪುಗುವ ಕೈಗಳ್ ಬೆಡಂಗಾಗೆ ತುಂಗ
ಸ್ತನಯುಗ್ಮಂ ತೂಗೆ ಫೂತ್ಕಾರದಿನುಸಿರ್ವಿಡುತುಂ ಲೋಳೆವಾ[6]ಯುರ್ಚೆ
ಯೊ[6]ರ್ವಳ್]
ತೊನೆಯುತ್ತುಂ ಪಾಡಿ ಪಾಲಂ ಪೊಸೆದಳಸದಳಂ ಪೊಣ್ಮೆ ಘರ್ಮಾಂಬುಜಾಲಂ ೬೬

ಅನಿಲಾಯತ್ತೋಚ್ಚಲಚ್ಚಾಳಿಯೊಳವ[7]ದಳ[7]ದಿಂ ಪಾಯ್ದು [8]ಕಾಲೋಡೆ[8] ತೂಗುಂ
ದೆನೆಯಂ ತೞ್ಕೈಸಿ ಕಿರ್ಕೀಱೆನು[9]ತೆಡೆ[9]ಗೆಸಱೊಳ್ ಬಿೞ್ದು ಬಲ್ಗಡ್ಡಿಯಂ ಸಾ
ರ್ದೊನಲುತ್ತಚ್ಛಾಂಬುವಿಂ ಬಿಂಬಿಸುವ ಕಣಿಶಮಂ ಕರ್ಚಿ ತುಂಡಾಗ್ರಮಂ ನೂ
ತನ ಪಕ್ಷಪ್ರಾಂತದೊಳ್ ಮಾರ್ದೊದೆದುದು ಧೃತಜಂಬಾಲಮಂ ಬಾಲಕೀರಂ ೬೭

(ಲೀಲಾವತಿ, ೫–೫೯.)

ಇದು ದಲ್ ಪಕ್ಕಿಗಳೆಲ್ಲಮಂ ನೆರಪುವಂದಂ ಪಕ್ಕಿ ಸೋವಂದಮು
ಲ್ತಿದೆನಲ್ ಸೋಗೆನವಿಲ್ ಬೞಲ್ಕುಮಡಿಗೆ ಭೃಂಗಂ ಕುಂತಳಕ್ಕಂಜೆಗಳ್

---

[1] ಸೆ (ಕ) [2] ಸುತಗೊಳ್ದೊಡೆಯಾ (ಕ) [3] ಲದಿ (ಖಬ) [4] ಲ್ದ (ಖ) [5] ತ್ತಿ (ಅ)
[6] ಯುರ್ಬಲೊ (ಖಬ) [7] ಯವ (ಅ) [8] ಕಾಲ್‌ಜಾಱೆ (ಅ) [9] ತಡಿ (ಅ).

ನೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮಾ ಸ್ವಜಾತೀಯ ಸ
ನ್ಮದದಿಂ ಪಾಮರಿಯರ್ ಜಿತಾಮರಿಯರಿರ್ಪರ್ ಕಾದು ಕೇದಾರಮಂ ೬೮
(ಮಲ್ಲಿನಾಥಪುರಾಣಂ, ೨–೨೧.)

ಅವಿರಳಮಾದ ತುಂಗ ಕುಚಭಾರದೆ ತೋಳ್ ಸೆಳೆ[1]ದಿಟ್ಟ[1] ತಕ್ಕಿನೊಳ್
ಕವಣೆಯ ಗುಂಡು ಪಾ[2]ಯು[2]ವು ಮೃಗಾವಳಿ ಪಾ[2]ಯ್ದು[2]ವು ಕೆಯ್ಗೆ ಪಾಮರೀ
ಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಿಂಚರವೆಂದು ಬೆರ್ಚಿ ಪಾ
ಱವು ಗಿಳಿವಿಂಡು ಪಾಂಥರೆರ್ದೆ ಪವ್ವನೆ ಪಾಱುವುವಾ ಪ್ರದೇಶದೊಳ್ ೬೯
(ಅನಂತನಾಥಪುರಾಣಂ, ೧–೮೨.)

ಇಡಲನುಗೆ[3]ಯ್ವು[3]ದುಂ ಬಟಿಲೆ ಕಯ್ಪುರಿಗೆಯ್ಯಲೊಡರ್ಚಿ ಪೋಗೆ ಮೆ
ಲ್ಲಡಿ ತಡವಾಗೆ ದಿಂಡು ಜಡಿವುಜ್ಜುಗದಿಂ ದನಿಯೆತ್ತಿ ಮುಂ ತೊದಳ್
ನುಡಿಗೊಳೆ ಲೀಲೆಯಿಂದೆಱಗೆ ಶಾಳಿವನಕ್ಕೆ ಶುಕಾಳಿ ನೋಡಿ ನಿಂ
ದೆಡೆಯೊಳೆ ನಿಂದು ಚಿತ್ತದೊಳೆ ಸೋವರು ಪಾಮರಕಾಮಿನೀಜನಂ ೭೦

ತೋಳ ಮೊದಲ್ವರಂ ಬಳೆದು ಕೊರ್ವಿದ ಪೆರ್ಮೊಲೆಯೊಡ್ಡಿನಂತೆ ಕಯ್
ತಾಳಮೆಗೂಡವೆತ್ತಿದ ಕಳಧ್ವನಿ ಕೇಳಿಸದೂರುಭೂರಿಭಾ
ರಾಲಸಯಾನಮೆಯ್ದೆಸೆವ ಶಾಳಿವನಾಳಿಗೆ ಬಂದು ಪಾಯ್ವ ಕೀ
ರಾಳಿಗೆ ಕೆಮ್ಮನುಮ್ಮಳಿಪರಿರ್ದೆಡೆಯಿಂದಮೆ ಪಾಮರೀಜನಂ ೭೧

ಕವಯುರದಂತೆ ಬಟ್ಟಿತಳವಟ್ಟು ಕುಚಂ ಕಡುಕೊರ್ವಿ [4]ಪರ್ವೆ[4] ನಿ
ಕ್ಕುವ ಪೊಱವಾಱು ಸುತ್ತಿದ ಶಿರೋಜಭರಂ ತಲೆಗೊಪ್ಪೆ ಕೈಗಳಂ
ಕವಿವ ಮೃಗಂಗಳಂ ತಗುಳ್ವ ಮಂಚಿಗೆಯೇಱುವ ಪಕ್ಕಿಸೋವ ಪಾ
ಡುವ ಪಟುಚೇಟಿಯರ್ ಚರಿಯಿಪಧ್ವಗರ್ಗೀಗುಮನಂಗರಾಗಮಂ ೭೨

ಕವಣೆಯ ಬಿಟ್ಟು ಮಾಮಿಡಿಯ ಮಿಟ್ಟೆಗಳಿಂ ತೆಗೆದೆಚ್ಚು ಕಂಕಣಾ
ರವಮೊಗೆವಂತು ಚಪ್ಪರಿಸಿ ಛಿಱ್ರನೆ [5]ತೆಂಗಿನ[5]ಪತ್ರದಂಡದಿಂ
ಸವಡಿಸಿ ಚಚ್ಚಲಚ್ಚಲಲಚಚ್ಚಲಚಚ್ಚಲಲೆಂದು ಬೈದು ಪಾ
ಟವದೊಳೆ ಪಕ್ಕಿ ಸೋದು ಬೆಳೆಗಾಯ್ದುದು ಪಾಮರ ಕಾಮಿನೀಜನಂ ೭೩

ಗಿಳಿ ಸೋವ ಮುಗ್ಧವಧುಗಳ
ಪೊಳೆವಧರಮುನಾಲ ಪಣ್ಗಳೆಂದಿರದಾಗ
ಪ್ಪಳಿಸಿ ಬಿಡೆ ಕರ್ಚಿ ಬೆಚ್ಚಿಸಿ
ಗಿಳಿ ಸೋದುವು ಕೆಯ್ಪೊಲಂಗಳಿಂದಾಕೆಗಳಂ ೭೪

---

[1] ಪಿಟ್ಟು (ಕ) [2] ಯ್ದ (ಖಬ) [3] ಯ (ಖಬ) [4] ತರ್ಬ (ಖಬ) [5] ತೇಗಿ ತು (ಕ).

ಮಡಿಯೊಳ್ ಪಾಲೆಱಗಿರ್ದ ಶಾಲಿವನದೊಳ್ ಕೀರಾಳಿಯುಂ ಸೋವಲೊ
ಳ್ಮಿಡಿಯಿಂದಂ ಮಿಡಿವಿಲ್ಲೊಳೆಚ್ಚೊಡೆಡೆಯೊಳ್ ಪುಂಡ್ರೇಕ್ಷುವಂ ತಾಗೆ ಗಂ
ಟೊಡೆದೆತ್ತಂ ರಸವೆಚ್ಚು ಪಾಯೆ ಪಥಿಕರ್ ಪೊಕ್ಕೀಂಟುತುಂ ಕಯ್ಯ ಬಾ
ಯೆಡೆಯೊಳ್ [1]ಸಾರ್ಚುಗೆ[1] ಕಂಡು ಬೆಂಡುಬೆಱಗಪ್ಪರ್ ಪಾಮರೀವಕ್ತ್ರಮಂ ೭೫
(ಅನಂತನಾಥಪುರಾಣಂ, ೧–೮೧.)

ತರಳಾಪಾಂಗಮರೀಚಿಗಳ್ ಕಳಮಕೇದಾರಕ್ಕೆ [2]ಬೆಳ್ಳಾರ[2]ದೋ
ಲಿರೆ ಸುತ್ತುಂ ಗಿಳಿಸೋವ ನುಣ್ದನಿಯದೆತ್ತಂ ಗೋ[3]ರಿ[3]ಯುಂ ಪಾಡುವಂ
ತಿರೆ ಪಾಂಥರ್ ಬಲವಂದು ಬೆಳ್ಮೃಗದವೋಲ್ ಸಾರ್ತಂದು [4]ಬೆಳ್ವಾಗೆ[4] ಪಾ
ಮರಿಯರ್ ಕಾಮನ ಬೇಂಟೆಗಾರ್ತಿಯರೆನಿಪ್ಪಾ ಶಂಕೆಯಂ ಮಾಡುವರ್ ೭೬

ಗಗನದೊಳೆಯ್ದೆ ಮಂಡಳಿಸಿ ನಿಂದ ಶುಕಾಳಿಯನಂದು ಬೆರ್ಚಿಪು
ಜ್ಜುಗದೊಳೆ ನೋೞ್ಪ ಪಾಮರಿಯ ಚಾರುಕಟಾಕ್ಷಮರೀಚಿ ನೀಳ್ದು ಶೋ
ಭೆಗೆ ನೆಲೆಯಾಯ್ತು ತತ್ಕಳಮಭೂರಮೆಗೆತ್ತಿದ ಪಚ್ಚನಪ್ಪ ಸ
ತ್ತಿಗೆಗಳವಟ್ಟು ತೋರ್ಪ ಶಶಿಕಾಂತದ ಕಾಂತದ ಕಾವಿದೆಂಬಿನಂ ೭೭
(ಚಂದ್ರಪ್ರಭಪುರಾಣಂ, ೧–೯೫.)

ಇರದಿದಿರ್ಗೊಳ್ವುದು ಪಿಕತತಿ
ಕರೆವುವು ಶುಕರಾಜಿ ಕಾಣ್ಕೆಗೊಡುವುದು ಫಳಮಂ
ಝುರಿ ಕಾಲ್ದೊಳೆವುದು ಪಾಂಥರ
ಬರವಿಂಗಿಂತಿದು ವನಾಳಿ ಮಾೞ್ಪಾತಿಥ್ಯಂ ೭೮

ಕುಡಿನೀರೆತ್ತುವವೋಲ್ ಪ್ರಪಾಪ್ರಮದೆಯರ್ [5]ಸತ್ರಂಗಳೊಳ್ ಸುಮ್ಮನಂ[5]
ಬಡೆವೇಕಾಕಿನಿಯರ್ ಮನೋಜಸುಖದಾನಾಗಾರದೊಳ್ ಚಿತ್ತಮಂ
ಪಿಡಿವೊಳ್ಪಿಂಡಿರೊಡ[6]ರ್ಚೆ[6] ಮ[7]ಚ್ಚ[7]ನೊಲವಿಂದೊರ್ಗಾವುದಕ್ಕೊಯ್ಯನೆಂ
ಟೆಡೆಗೆಯ್ದಪ್ಪುವು ಕಾರ್ಯಹಾನಿ ಪಥಿಕರ್ಗೂರೂರ ನಾೞ್ಬಟ್ಟೆಯೊಳ್ ೭೯
(ಅನಂತನಾಥಪುರಾಣಂ, ೧–೮೪.)

ಪಱೆಪಡೆ ಸೇದೆ ಪಿಂಗೆ ತೃಷೆ ತಣ್ಗಳಸಂಗಳನೆತ್ತಿಕೊಂಡು ನೀ
ರೆಱೆವ ಚಳಲ್ಲತಾಂಗಿಯರ ಕೊಂಕಿದ ತೋಳ ಮೊದಲ್ಗೆ ತೀವಿ ಕಿ
ಕ್ಕೆಱೆದ ಕುಚಕ್ಕೆ ಕಣ್ಬರಿಯೆ ಧಾರೆಗಳೋರೆಗೆ ಸೂ[8]ಸೆ ಮುಟ್ಟೆ[8] ಕೈ
ಮಱೆದು ಬಯಲ್ಗೆ ಬಾಯ್ವಿಡುವರಧ್ವಗರಧ್ವತಟಪ್ರಪಾಳಿಯೊಳ್ ೮೦
(ಅನಂತನಾಥಪುರಾಣಂ, ೧–೮೩.)

---

[1] ಪಾಯ್ದುಗೆ (ಅ) ಸಾರುಗೆ (ಬ) [2] ಬೇಳಾರ (ಖ) [3] ಲಿ (ಖ) [4] ಬೆಳಗಾಗೆ (ಖಬ) ಸಾರಂಗಳೊಳ್ ಸಾಧನಂ (ಖ) ಶ್ರೋತ್ರಂಗಳೊಳ್ ಸುಮ್ಮನಂ (ಕ) [6] ರ್ಚೆ (ಖ) [7] ಚ್ಚಿ (ಖ) [8] ಸಿಮೀಱೆ (ಖಬ).

ಕರಗಮನೆತ್ತಿ ನೀರೆಱೆವ ನೀಱೆಯರಧ್ವಗರಧ್ವಖೇದವೋ
ಸರಿಸಿದೊಡಂ ಪ್ರಪಾಪ್ರಕರದೊಳ್ ಕುಡಿವರ್ ಬಿನದಕ್ಕೆ ಬಿಚ್ಚತಂ
ಪರಿಮುಱಿಯಾಡಿ ಕಣ್ಬೊಳೆಯೆ ವೇಳೆಗಳೊಳ್ ಸುೞಿಗೊಂಡ ನಾಭಿಯೊಳ್
ಗುರುಕುಚ ಕೂಟದೊಳ್ ತೊಳಪ ತೋಳ ಮೊದಲ್ಗಳೊಳಾನನಾಬ್ಜದೊಳ್ ೮೧

[1]ಕೊ[1]ನೆವನಿ ಸೂಸೆ ಸಣ್ಣವನಿ ಕೆಂದಳದೊಳ್ ಸರಿಗೂಡೆ ದಿಟ್ಟ ಮೂ
ಗಿನ ಕೊನೆಯಲ್ಲಿ ಸಯ್ತು ನಿಲೆ ಕೊಂಕಿ ಕೊರಳ್ ಮಿಡುಕಾಡೆ ಸಾರ್ಚಿಕೊ
ಳ್ಳೆನೆ ಕು[2]ಡಿ[2]ಗೋಡುತಿರ್ಪ ಕಳಶಾಂಬುಗಳಂ ತೃಷೆ ತೀರೆ ಸುಱ್ಱಸು
ಱ್ರೆನೆ ಪಥಿಕಾಳಿ ಪೀರ್ದು ಪಡೆಗುಂ ಪರಿತೃಪ್ತಿಗಳಂ ನಿರಂತರಂ ೮೨

ಕಳಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ
ತೊಲಗಿಸೆ ನೋಡಿ ನುಣ್ಬೊಗರನೀಂಬ ಕುಚದ್ವಯ ಮೂಲಮಂ ಸಮು
ಜ್ಜ್ವಲಭುಜಮೂಲಮಂ ನೆಱೆಯೆ ಕಂಡೆರ್ದೆಯಾಱಿದೊಡಂ ನಿರೀಕ್ಷಣಾ
ಕುಲತೆಯಿನೀಂಟುವರ್ ಪಥಿಕರಾ ಕಲಶಾಂಬುವೆ ಸೀಮೆಯೆಂಬಿನಂ ೮೩

(ಚಂದ್ರಪ್ರಭಪುರಾಣಂ, ೧–೯೮.)

ಅಱವಟ್ಟಗೆಯೊಳ್ ಕುಡಿನೀ
ರೆಱೆವ ಬೆಡಂಗಿಯರ ಭಾವಮಂ ಭೋಂಕನೆ ಕ
ಣ್ದೆಱೆದಡರೆ ನೋಡಿ ಪೀರುವ
ತೆಱದಿಂದಂ ಸೊಗಸೆ ತಂಪುಮಂ ತೃಷ್ಣೆಯುಮಂ ೮೪

ಗರುಡಿಯೊಳಂಕ[3]ದೋ[3]ಜೆಗಳ ತಾಳಲಯಂಗಳ ಸೂಠಿ ವಾಹಳೀ
ತುರಗಖುರಪ್ರಹಾರಗತಿಯೊಳ್ ಜಗಜಟ್ಟಿಗಳಕ್ಕಡಂಗಳೊಳ್
ಮರಳದೆ ಪೋರ್ವ ಶಕ್ತಿ ತೞಿಯೊಳ್ ನೆಱೆ ಪೋರ್ವ [4]ರುತ[4]ದ್ವಿಪಂಗಳೊಳ್
ಪುರುಡಿಸೆ ಸುತ್ತಲುಂ ಪೊಱವೊಟಲ್ ಮೆಱೆಗುಂ ವಿಜಯೋತ್ಸವಂಗಳಿಂ ೮೫

(ಅನಂತನಾಥಪುರಾಣಂ, ೧–೮೯.)

ಪದಪಂ ಬೀಱುಗುಮಾ ಪುರೋಪವನದೊಳ್ ಪೆಣ್ದುಂಬಿವಿಂಡಿಂ ಕಱಂ
ಗಿದ ನೈದಿಲ್ಗೊಳನಂಚೆವಿಂಡನೊಳಕೊಂಡಂಭೋಜಷಂಡಂ ತಳಿರ್
ಪುದಿದೇಲಾವನಮೊಡ್ಡುಗೊಂಡ ಕದಳೀಕಾಂಡಂ ತರಂಗೊಂಡ ಚೂ
ತದ ಸಾಲ್ ಚಂದನವೀಧಿ ಸಂಪಗೆಯ ಜೊಂಪಂ ಮಾಧವೀಮಂಡಪಂ ೮೬

(ಪಂಪರಾಮಾಯಣಂ, ೧–೧೧೦.)

---

[1] ತೊ (ಕ) [2] ಳಿ (ಕ) [3] ಜೂಜು (ಕ) [4] ಮದ (ಅ).

ಮದನಂ ತೋಂಟಿಗನಾದ ಚೂತವತನುಜ್ಯಾರಾವದೊಳ್ ಕೂಡಿ ಪಾ
ಡಿದ ಪೆಣ್ದುಂಬಿ ವಸಂತದೊಳ್ ಮದನಕೇಳೀ ಸೂತ್ರಮುಂ ಖ್ಯಾತವೋ
ದಿದ ಕೀರಂ ರತಿಯೊಳ್ ಪದನ್ಯಸನಮುಂ ಕಲ್ತಂಚೆ ಶೀತಾಂಶು ತೀ
ವಿದ ನೈದಿಲ್ಗೊಳನಲ್ಲದಿಲ್ಲೆನೆ ಬನಂ ಚಿತ್ತೋತ್ಸವಾಲಂಬನಂ ೮೭

(ಮಲ್ಲಿನಾಥಪುರಾಣಂ, ೨–೩೭.)

ಮದನಂ ಕೊಂಬುಗೊಳಲ್ಕೆ ನಚ್ಚುವ ನವಾಮ್ರಂ ಕಂತುಚಾಪಕ್ಕೆ ಚಿ
ತ್ತದೊಳಾಳ್ದಿರ್ಪ ಸಿತೇಕ್ಷು[1]ವಾಟಿ[1] ವಿಷಮಾಸ್ತ್ರಂ ಪಂಚಬಾಣಕ್ಕೆ ಮಾ
ಣದೆ ಕಣ್ಗಾದಿರಿಸಿಟ್ಟ ಮಲ್ಲಿಗೆ ಮನೋಜಂ ಸ್ವಚ್ಛವಾಃಕೇಳಿಸ
ಮ್ಮದಕೆಂದೋವುವ ಪದ್ಮಷಂಡಮೆಸೆಗುಂ ತನ್ನಂದನೋಪಾಂತದೊಳ್ ೮೮

(ಚಂದ್ರಪ್ರಭಪುರಾಣಂ, ೧–೧೦೪.)

ನವಪುತ್ರಪ್ರೀತಿಯಿಂದಂ ರತಿಯೆ ಸಲಹಿದಿಮ್ಮಾವು ಮೀನಾಂಕಿತಂ ಕೇ
ತುವಡ[2]ಪಿರ್ಂ[2]ಗಂಗಜಂ ಪರ್ವಿಸಿದ ಲತೆ ಸುಧಾಸೂತಿ ಪೀಯೂಷಧಾರಾಂ
ಬುವೆ ಪೊಯ್ನೀರಾಗೆ ಮುದ್ದಿಂ ಬಳಯಿಸಿದೆಳದೆಂಗೆಯ್ದೆ ಮಂದಾನಿಲಂ ತೋಂ
ಟವೆಸಂಗೆಯ್ದಟ್ಟಿಕೞ್ಂ ಪೆರ್ಚಿಸಿದ ವಿಚಕಿಳಂ ರಮ್ಯಮಲ್ಲಲ್ಲಿಗೆಲ್ಲಂ ೮೯

(ಚಂದ್ರಪ್ರಭಪುರಾಣಂ, ೧–೮೭.)

ಪಾಡುತ್ತುಂ ಮಱಿದುಂಬಿಯೊಳ್ಗಡಣದಿಂ ಪಾರಾವತಕ್ರೀಡೆಯುಂ
ನೋಡುತ್ತುಂ ಪದಪಿಂ ವಿಚಿತ್ರ[3]ತರ[3]ಕೇಳೀವಾರ್ಧಿಯೊಳ್ ಮೂಡಿ ಮು
ಳ್ಗಾಡುತ್ತುಂ ಶತಪತ್ರಪತ್ರಶ[4]ರ[4]ದಿಂದಂ ಪತ್ರಭಂಗಂಗಳಂ
ಮಾಡುತ್ತುಂ ಪ್ರಿಯರಿಂತು ಪೊೞ್ತುಗಳೆವರ್ನಿಚ್ಚಂ ಪುರೋದ್ಯಾನದೊಳ್ ೯೦

(ಮಲ್ಲಿನಾಥಪುರಾಣಂ, ೨–೩೮.)

ಮಲರ್ದಲರ್ಗಳ್ಕಿ ಬಳ್ಕಿ ಮಱಿದುಂಬಿಯ ಮಾಲೆಗೆ ಕಾಯ್ದು ಬಯ್ದು ಕೋ
ಗಿಲೆಗೆ ಕನಲ್ದೊನಲ್ದು ಗಿಳಿವಿಂಡಿನ ತೊಂಡಿಗಟಲ್ದೆಟಲ್ದು ತ
ಳ್ತಲರ್ದೆಳಮಾವು ಮಲ್ಲಿಗೆಗೆ ಕೋಳ್ಗುದಿಗೊಂಡು ಬಟಲ್ದು ಜೋ[5]ಲ್ವ[5]ರು
ತ್ಕಳಿಕೆಯಿನಾಮ್ರವಲ್ಲರಿಯೊ[6]ಳೋಪ[6]ವರಾ ಪುರನಂದನಂಗಳೊಳ್ ೯೧

(ಅನಂತನಾಥಪುರಾಣಂ, ೧–೯೫.)

ಎಳಲತೆ ಪೆಕ್ಕಣಕ್ಕೆ ತಳಿರಂ ತೆಗೆದುಟ್ಟುದದರ್ಕೆ ನಟ್ಟುವಂ
ಮಲಯಸಮೀರಣಂ [7]ಪವನದಂಡದೊಳಿಂತಿದೆ ಪಣ್ಣಿಬಂದ[7] ಮ

[1] ಮಾಲೆ (ಅ) [2] ವಾರ್ಂ (ಅ) [3] ರತ (ಅ) [4] ತ (ಅ) [5] ಲ್ದಡು (ಕ ಖ ಬ) [6] ಳೊಪ್ಪು (ಬ) [7] ಪನಸರಂಗಳೊಳಿಂತಿವೆಬಣ್ಣಿಮಿಂದ (ಅ).

ದ್ದಳೆ ಮಧುದೂತಿ ನಾಗಲತೆ ಮಲ್ಲಿಗೆ ಮಾಲತಿ ಬನ್ನಿವೆಂದು ಸೂ
ಟ್ಬಳನವೊಲೆತ್ತಲುಂ ಕರೆಗುಮಾ ವನದೊಳ್ ಕಿಸುಗಣ್ಚಿ ಕೋಗಿಲಂ ೯೨
(ಅನಂತನಾಥಪುರಾಣಂ, ೩–೧೧.)

ಕಡೆಗಡೆಯೊಳಿರ್ದು ನಗದಿಂ
ಕಡಿವಡೆದೆಂ ಕುಬ್ಜನಿಂದೆ ಕುಡಿವಡೆದೆನಿ[1]ಪೆ[1]
ನ್ನೆಡೆಯಲ್ಲವೆಂದು ಕಡಲಾ
ಯೆಡೆಗೆಟ್ಟಿಂದಂತೆ ಪರಿಖೆ ಪಡೆದುದು ಗುಣ್ಪಂ ೯೩

ಬಡಪಾರ್ವಂ ಜಾಮದಗ್ನ್ಯಂ ತುಡೆ ವಿಶಿಖಮನೀರೆಟ್ಬುತೆಣ್ಗಾಪ್ರದಂ ಮೆಯ್
ಸೆಡೆ[2]ದೋ[2]ಡಿತ್ತೊರ್ಬಗಸ್ತ್ಯಂ ತನುಮುನಿ ಮುನಿತಾಪೋಶನಂಗೊಂಡೊಡೆತ್ತಂ
ಪುಡಿ[3]ಯಿಟ್ಟಿತ್ತೆಂದೆ ಧೀಂಕಾದುದು[3] ಕಪಿಗಣುವಂಗೆಂದಗೞ್ ವಾರ್ಧಿಯುಂ ಕೀ
ಟ್ಬಡಿಕುಂ ನಾನಾಮರಾಳೀಬಹುಳಕಳಕಳಧ್ವಾನಸಂತಾನದಿಂದಂ ೯೪
(ಜಗನ್ನಾಥವಿಜಯಂ ೨–೧೮.)

ಎನ್ನಂತೆ ರತ್ನವಿತತಿಗೆ
ತಾನ್ನೆಲೆಯಾಯ್ತೆಂಬ ಸಮುಗುಣಪ್ರಣಯದಿನಾ
ಮುನ್ನೀರ್ ಬಂದಪ್ಪಿದುದೆನೆ
ತನ್ನಗರಮನಮಳಪರಿಖೆ ಬಳಸಿದುದೆತ್ತಂ ೯೫
(ಚಂದ್ರಪ್ರಭಪುರಾಣಂ, ೧–೧೧೫.)

ಪರಿಖಾವಳಯಮಲಂ[4]ಘ್ಯಂ[4]
ಪರಿವೇಷ್ಟಿಸಿ ಕಡೆಯಲೆಂದು ಪಾಲ್ಗಡಲೊಳ್ ತಂ
ದಿರಿಸಿದ ಮಂದರಗಿರಿಗೇಂ
ದೊರೆಯಾದುದೋ ಪೊನ್ನ ಕೋಂಟೆ ವಿಕಟಾಟ್ಟಾಳಂ ೯೬
(ಮಲ್ಲಿನಾಥಪುರಾಣಂ. ೨–೫೧.)

ಸುರನಗಮಂ ನಿಮಿರ್ಚಿ ತೆರೆಸುತ್ತಿದನಲ್ತೆ ಸರೋಜಸಂಭವಂ
ಪುರಕೆನೆ ಚೆಲ್ವನಪ್ಪ ನವ[5]ಹಾಟಕ[5]ನಿರ್ಮಿತಮಪ್ಪ ಕೋಂಟೆ ಮು
ಟ್ಟಿರೆ ಮುಗಿಲಂ ರಥಕ್ಕೆ ಪಥಮಿಲ್ಲದೆ ಬಿಟ್ಟಿರಡುಂ ಕೆಲಂಗಳೊಳ್
ಚರಿಯಿಪನಲ್ಲದಂದು ರವಿಗೆತ್ತಣದುತ್ತರದಕ್ಷಿಣಾಯನಂ ೯೭
(ಚಂದ್ರಪ್ರಭಪುರಾಣಂ, ೧–೧೧೪.)

---

[1] ಪೆ (ಕಖ) [2] ಯಾ (ಬ) [3] ವಟ್ಟಿತ್ತೊ ಮೆರ್ಚಿ ತಾಂ ಪೋದುದು (ಬ) [4] ಪಿಂ (ಖಬ) [5] ಪಾಟಲ (ಖಬ).

ಬಳಸಿದ ಮುಗಿಲಟ್ಟಳೆಗಳ
ನೆಳಸಿದ [1]ಪೞಯಿಗೆಗ[1]ಳೆಲರ್ಗಳಾಱಿಸುತಿರ್ಕುಂ
ಜಲಜಪ್ರಿಯನ ರಥಾಶ್ವಂ
ಗಳ ಮೆಯ್ಯೊಳ್ ತಳೆದ ಗಗನಗಮನಶ್ರಮಮಂ ೯೮

ತೂಗಿದೊಡಮರಾವತಿ ಲಘು
ವಾಗಿ ನಭಕ್ಕೊಗೆದುದಂಜಿ ಪೊಕ್ಕುದು ರಸೆಯಂ
ಭೋಗವತಿ ತೆಗೆದು ನಾ[2]ೞ್ಕ[2]ಡಿ
ಯಾಗಿರ್ದಪುದಳತೆ ತನಗೆನಿಪ್ಪುದು ನಗರಂ ೯೯

ತ್ರಿದಶಜನಾನ್ವಿತಂ ಗಡ ಮಹೀರುಹಪಂಚಕಸಂಚಿತಂ ಗಡಂ
ತದು ದಿಟದಿಂದಮಾನಪರಿಮೇಯವಿದಗ್ಧಬುಧಾಶ್ರಯಂ ರಸಾ
ಸ್ಪದ ಬಹುವೃಕ್ಷಕೇಳಿವನಸಂಗತಮೆಂದು ನಗುತ್ತುಮಿರ್ಪುದಾ
ತ್ರಿದಶರ ಲಕ್ಷ್ಮಿಯಂ ನಿಯತಲಕ್ಷ್ಮಿಪುರಂ ನವಸೌಧರೋಚಿಯಿಂ ೧೦೦
(ಚಂದ್ರಪ್ರಭಪುರಾಣಂ, ೧–೧೩೭.)

ವಾರಿಧಿ ತನ್ನಗೞ್ ತನಗೆ ರೈವತಶೈಲಮುಪಾಂತಶೈಲಮಂ
ಭೋರುಹಲೋಚನಂ ತ್ರಿಭುವನಪ್ರಭು ತನ್ನಧಿನಾಥನೆಂದೊಡಿ
ನ್ನಾರಭಿವರ್ಣಿಸಲ್ ನೆಱೆವರೆಂಬಿನಮಿರ್ದುದುದಗ್ರಗೋಪುರಂ
ದ್ವಾರವತೀಪುರಂ ಜಿತಸುರೇಂದ್ರಪುರಂ ವಸುಧಾಂಘ್ರಿನೂಪುರಂ ೧೦೧
(ಜಗನ್ನಾಥವಿಜಯಂ, ೯–೮೫.)

ಅದಱೊಳ್ ಪುಟ್ಟಿದ ಗಂಡರೆಲ್ಲಮತಿವೀರರ್ ಪೆಂಡಿರೆಲ್ಲಂ ವಿಳಾ
ಸದ ಸೌಭಾಗ್ಯದ ಸೀಮೆಗಳ್ ಕಿಱುಳರೆಲ್ಲಂ ಪಂಡಿತರ್ [3]ಸೆಟ್ಟಿವ
ಟ್ಟದ[3]ರೆಲ್ಲಂ ಕಡು [4]ಚಾಗಿ[4]ಗಳ್ ಬದಗರೆಲ್ಲಂ ಭೋಗಿಗಳ್ ಗಾಂಪರುಂ
ಚದುರರ್ ಲೆಂಕರುಮಾಯಕಾಱರಧಮವ್ಯಾಪಾರರುಂ ಧಾರ್ಮಿಕರ್ ೧೦೨
(ಅನಂತನಾಥಪುರಾಣಂ, ೧೧–೧೨,)

ನಯಮುಳವಟ್ಟ ಜವ್ವನದ ರೂಢಿಯ ಗಾಡಿಯ ಪೆಂಡಿರೆಲ್ಲಮ
ಲ್ಲಿಯೆ ಸಿರಿಗೊಪ್ಪಮಂ ಪಡೆದ ಚಾಗದ ಭೋಗದ ಗಂಡರೆಲ್ಲಮ
ಲ್ಲಿಯೆ ಪೆಸರಾನೆಯುಂ ಕುದುರೆಯುಂ ಪೆಸರಾದ ಸಮಸ್ತ ವಸ್ತುವ
ಲ್ಲಿಯೆ ಪೆಱತೊಂದು ಪಟ್ಟಣದೊಳಿಲ್ಲೆನೆ ಪಟ್ಟಣಮೊಪ್ಪಿ ತೋಱುಗುಂ ೧೦೩

---

[1] ಪೞೆನೆಗಳೆ (ಕ) [2] ೞ್ಗ (ಕ) ಲ್ವ (ಖಬ) [3] ಕಟ್ಟಿವಟ್ಟದ (ಕ) [4] ಜಾಣ (ಖಬ).

ಮುರ[1]ಳಿಯು[1] ತಿವಳಿಯು ತಿಸರಿಯ
ಕರಡೆಯು ಮದ್ದಳೆಯ ಕೊಟಿಲ ಪಳವದ ಪಲವುಂ
ಗಿರುಗಟಿಯು ಸಿವುರ ಸಿಪ್ಪಿನ
ಕೊರಗಿನ ಕಿನ್ನರದ ಸರಮೆ ಸರಮಾ ಪೊಟಿಲೊಳ್ ೧೦೪

ಜನವಕ್ತ್ರೋನ್ಮುಕ್ತನಿರ್ಯದ್ಧಿಮಪರಿಮಳತಾಂಬೂಲ[2]ಸಂಸಂಗಿ[2] ಭೃಂಗೀ
ಸ್ವನದಿಂ ಪ್ರತ್ಯಂತರಾಜಾತ್ಮಜವಿಭವಸಮಾಕ[3]ರ್ಣಿತೋತ್ತಾ[3]ನಗಾನ
ಧ್ವನಿಯಿಂ[4]ದುದ್ವೃತ್ತಮತ್ತ[4]ದ್ವಿರದನಿಗಡನಿರ್ಘೋಷದಿಂ ಸಂಚರದ್ವಾ
ರನಿತಂಬಿನ್ಯಂದುಕಾರಾವದಿನತಿಮುಖರಂ ತತ್ಪುರೀ ಪಟ್ಟಮಾರ್ಗಂ ೧೦೫
(ಚಂದ್ರಪ್ರಭಪುರಾಣಂ, ೧–೧೩೧.)

ಘನತರಮಾದ ಕತ್ತುರಿಯ ನೀರ್ದಳಿಪಂ ಪುದಿದಿರ್ದ ತೋರಮು
ತ್ತಿನ ಕಡೆ ತಳ್ತ ಹೇಮಮಯಪುಷ್ಪದ ಪೂವಲಿ ನೀ[5]ಳ್ದ[5] ಚೀನಕೇ
ತನತತಿ ಮಾಲೆಗೊಂಡ ಮಣಿದೋರಣಮೆಂಬಿವು ಬೀದಿಬೀದಿಯೊಳ್
ಮನೆಮನೆಯೊಳ್ ವಿರಾಜಿಸೆ ವಿರಾಜಿಸುತಿರ್ಪುದು ತತ್ಪುರಾಂತರಂ ೧೦೬
(ಜಗನ್ನಾಥವಿಜಯಂ, ೯–೯೭.)

ಚಂದನದ[6]ಗ[6]ರುವ ಮೃಗಮದ
ಮೊಂದಿದ ಕೇಸರದ ಸರಸಿಜಾಸವ[7]ದಳುರ್ದೆಂ[7]
ಟುಂದೆಸೆಗೆ ಮಿಳಿರ್ವ ಧೂಪದ
ಸಾಂದಿನ ಸೌರ್ಸ್ಮವದ ಕಂಪೆ ಕಂಪಾ [8]ಪೊಟಿಲೊ[8]ಳ್ ೧೦೭

ಪೊಂಗಳಸಂಗಳಿನೆಸೆವು
ತ್ತುಂಗಧ್ವಜತೋರಣಂಗಳಿಂ ಸೊಗಯಿಪ ಕೂ
ಟಂಗಳಿನೆಲ್ಲಂ ನಾಡೆ ಮ
ನಂಗೊಳಿಪುವು ಪುರದ ರಮ್ಯಹರ್ಮ್ಯಚಯಂಗಳ್ ೧೦೮
(ಕಾವ್ಯಾವಲೋಕನಂ, ೯೯.)

ಪುರದೊಳಗಲ್ಲಿಗಲ್ಲಿಗೆರಡುಂ ತರದಿಂ [9]ಸೊಡರ್ವೆಳ್ಪಿನಿಂ[9]ದವಂ
ಬರಚರಕಾಮಿನೀತತಿಗೆ ಚಂದನದಣ್ಪಿನ ಸೊಂಪನೀಯುತುಂ

---

[1] ವದ (ಕ) [2] ಸಂಪತ್ತಿ (ಖ) [3] ರ್ಣನೋತ್ತಾ (ಕ) ರ್ಣಿತಂಧ್ವಾ (ಖ)
[4] ವ್ಯಾಪಾರಮುಕ್ತ (ಅಖಬ) [5] ಲ (ಅ) [6] ತ (ಕ) [7] ದೊಳಗೆಂ (ಕ) [8] ಪುರದೊ (ಕ)
[9] ಪೊಡೆವೆಳ್ಪಿನಿಂ (ಕ) ದೆಸೆವೊಳ್ಪಿನಿಂ (ಖ).

ಸಿರಿಗೆ ನಿವಾಸಮಾದ ಪಿರಿಯಂಗಡಿಗಳ್ ಬಗೆಗೊಪ್ಪಿ ತೋರ್ಪುವಾ
ಪುರವರಲಕ್ಷ್ಮಿ ತೊಟ್ಟ ಪೊಸಮುತ್ತಿನ ಹಾರದ ಮೊತ್ತ[1]ಮೆಂಬಿನಂ[1] ೧೦೯

(ಜಗನ್ನಾಥವಿಜಯಂ, ೯–೧೦೫.)

ತಪ್ಪದೆ ಸರಸಿಜಸಂಭವ
ನಪ್ಪೊಡಮೆಣಿಸಲ್ಕೆ ನೆಱೆಯನೆನಿಸುವ ಪಲವುಂ
ಕಪ್ಪುರದ ರಾಸಿ ಬೀದಿಯೊ
ಳುಪ್ಪಿನ ರಾಸಿಯವೊಲೊಟ್ಟಿ ಬೆಟ್ಟಾಗಿರ್ಕುಂ ೧೧೦

ಸುರಪನ ವಜ್ರಮುಂ ಹರಿಯ ಕೌಸ್ತುಭಮುಂ ಹರನಿಂದುಲೇಖೆಯುಂ
ವರುಣನ ಮುತ್ತಿನೆಕ್ಕಸರಮುಂ ಗರುಡಾಂಗದ ಪಚ್ಚೆಯುಂ ಫಣೀ
ಶ್ವರಫಣರತ್ನಮುಂ ಬೆಲೆಗೆ [2]ವೇಟ್ಟುದುವ[2]ಲ್ಲಮೆನಿಪ್ಪ [3]ರತ್ನದಿಂ[3]
ದೆರಡನೆಯಬ್ಧಿ ರನ್ನವಸರಂ ಗೆಲೆವಂದುದು ರೋಹಣಾದ್ರಿಯುಂ ೧೧೧

(ಪಂಪರಾಮಾಯಣಂ. ೧–೧೧೯.)

ಗಿರಿಜೆಯ ರನ್ನದಾಳಿ ಸಿರಿಯಿಕ್ಕಿದ ಮುತ್ತಿನ ಹಾರಮುೞ್ತಿಯಿಂ
ಸರಸತಿ ತೊಟ್ಟ ಪಚ್ಚೆ ಪಡಿಯಲ್ಲವು ಕೀೞ್ತರಮುಂತವಿರ್ಕೆನಲ್
ವರುಣನೆ ಮಾಱಲಟ್ಟಿ ವರುಣಾನುಚರರ್ ಪರಿದಾಡುತಿರ್ಪರೀ
ಪುರದೊಳಗೆಂಬಿನಂ ಮೆಱೆವರಾ ಪುರದೊಳ್ ಮಣಿಗಾಱರಾವಗಂ ೧೧೨

ಪುರದೊಳ್ ಗಂಧವಣಂಗಳೊಳ್ ಶಶವಿಷಾಣದ್ವೀಪಿನೀಸ್ತನ್ಯವ
ನ್ಯರಸಾದ್ಯಂಗಳೊಳಾವುದಿಲ್ಲಮೆನಲುಂಟಾ ಕೇರಿಯೊಳ್ ಸಿದ್ಧಸಿ
ದ್ಧರಸಂ ದೇಹರಸಾಯನಂ ಮೃತಪುನಸ್ಸಂಜೀವನಂ ವಿಕ್ರಿಯಾ
ಪರ ದಿವ್ಯೌಷಧಿ ದೇವಲೋಕದಮೃತಂ ಪಾತಾಳಭೇ[4]ದ್ಯಂ[4]ಜನಂ ೧೧೩

(ಅನಂತನಾಥಪುರಾಣಂ, ೧–೧೦೬.)

ಮೃಗಮದಮೆಯ್ದೆ ಕಣ್ಣ ಬೆಳಗಿಂ ಮಲಯೋದ್ಭವದಂತೆ ತೋಱೆ ತುಂ
ಬಿಗಳದಱಚ್ಚಗಂಪುಗಳನುಂಡೆಳಗರ್ಪನೆ ಪೋಲ್ತುದೆಂಬವೋಲ್
ನೆಗೆಯೆ ತೆರಳ್ವ [5]ಕಂಪು ನೆಲದೊಳ್[5] ನಱುಸುಯ್ಗಳ ಗಾಳಿ ತೋಟಿಯಂ
ತೆಗೆದು ಮಗುೞ್ಚಿ ಕತ್ತುರಿಮಗುೞ್ಚುವರಲ್ಲಿಯ ಘಟ್ಟವಳ್ತಿಯರ್ ೧೧೪

(ಲೀಲಾವತಿ, ೭–೧೨.)

---

[1] ದಂದದಿಂ (ಅ) [2] ಬಿಣ್ಣಿದುವು (ಅ) [3] ಪೆಂಪಿನಿಂ (ಅ) [4] ದ್ಯಾಂ (ಖಬ)
[5] ಕಂಪಿನೆಲರೊಳ್ (ಅ).

ಒಳ್ನಡು ಬಳ್ಕೆ ಪೆರ್ಮೊಲೆ ವಿಜೃಂಭಿಸೆ ಕಂಕಣಕಿಂಕಿಣೀರವಂ
ಗಳ್ನಸುಪೊಣ್ಮೆ ಹಾರಲತೆ ನರ್ತಿಸೆ ಸುಯ್ ನೆಲೆವೆರ್ಚೆ ಕುಂತಳಂ
ಗಳ್ಮಿಮಿರ್ದಾಡೆ ಘರ್ಮಜಲವುಣ್ಮೆ ವಿರಾಜಿಸುತಿರ್ದರಲ್ಲಿ ತೋ
ಳ್ಗಳ್ನಲಿದೊಪ್ಪೆ ನೀಳ್ದುಡುಗಿ ಘಟ್ಟವುಗುಟ್ಟುವ ಘಟ್ಟವಳ್ತಿಯರ್ ೧೧೫

(ಜಗನ್ನಾಥವಿಜಯಂ, ೯–೧೦೨).

ಚಳನಯನಾಂಶುಚಂದ್ರಿಕೆಯಿನೊಯ್ಯನೊಸರ್ತರೆಪಕ್ಕೆ ತಾನೆ ನೀ
ರ್ದಳಿಯೆ ಪಳಚ್ಚನಪ್ಪ ಶಶಿಕಾಂತದ ಸಣ್ಣಿಗೆ ನೋಡಲೀಯದ
ವ್ವಳಿಸೆ ಕುಚದ್ವಯಂ ಪದದಿನುಣ್ಮುವ ಸು[1]ಯ್ನಱುಗಂ[1]ಪುಗಳ್ ದಳಂ
ಗಳನಧಿವಾಸಿಸುತ್ತಮಿರೆ ಘಟ್ಟವುಗುಟ್ಟುವುದಂಗನಾಜನಂ ೧೧೬

(ಚಂದ್ರಪ್ರಭಪುರಾಣಂ, ೧-೧೩೦.)

ತನಿಗಂ[2]ಪಿನತ್ತ[2] ಪುಗಲರಿ
ದೆನಿಸುವ ಸುರಿದರಲ ಬಂಡು ಕಣಕಾಲುದ್ದಂ
ಜನಕೆನಿಸುವ ಪೆಂಪಿನ ಪೂ
ವಿನ ಸಂತೆ ಕರಂ ಮನೋಹರಂ ಪುರವರದೊಳ್ ೧೧೭

(ಲೀಲಾವತಿ, ೭–೧೩.)

ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯಂ ಕಟ್ಟಿ ತೂಪಂದದಿಂ ಚಾ
ನುರಮುಂ ವಕ್ಷೋಜಪೀಠಸ್ಥಿತಮುಬನನ್ನಪಂಗೆತ್ತುವಂತೆತ್ತಿ ಪೂವಂ
ದರಹಾಸಶ್ರೀಯನೀವಂತಿರೆ ಪೊಸನನೆಗಳ್ಗಂತವಂ ಸುಯ್ಯ ಕಂಪಿಂ
ಪೊರೆವಂತಾ ಸಂತೆಯಿಂದಂ ತೊಲಗದು ಸತತಂ ಪುಷ್ಪಲಾವೀಕದಂಬಂ ೧೧೮

(ಲೀಲಾವತಿ, ೭–೧೪.)

ನಱುಸುಯ್ಗಂ ಮಾಲೆಗಂ ಸೂಱೆಱೆದೆಱಗುವಿನಂ ತುಂಬಿಗಳ್ ನೋಡಿದರ್ ಮೆಯ್
ಮಱೆವನ್ನಂ ಬಾಹುಮೂಲಂ ಪೊಗರನುಗುೞ್ವನಂ ಕಣ್ಮಲರ್ ಬಳ್ಳಿಮಿಂಚಂ
ಕಱೆವನ್ನಂ ಮಾಲೆಪೂವಂ ನೆಗಪಿ ಸೊಗಯಿಕುಂ ನೀಱರೊಳ್ ಪುಷ್ಪಚಾಪಂ
ಗುಱಿಯೇಸಂ ತೋಱಲಂಬಂ ಪೊದೆಗೆದಱಿದವೋಲ್ ಪುಷ್ಪಲಾವೀಕದಂಬಂ ೧೧೯

(ಪಂಪರಾಮಾಯಣಂ, ೧–೧೨೦.)

ತರಳಕಟಾಕ್ಷಮಾಲೆಯೊ [3]ಸಿತೋ[3]ತ್ಪಲಮಾಲೆಯೊ ಕಯ್ಯ ಮಾಲೆಯೋ
ಸಿರಿಸದ ಮಾಲೆ[4]ಯೋ ಮಿಸುಪ ಜಾಜಿಯ ಮಾಲೆಯೊ ಪೇೞೆನಿಪ್ಪ[4] ನೀ

---

[1] ಯ್ಯೆಲರ್ಗಂ (ಅ) [2] ಪನೆತ್ತಿ (ಅ) [3] ನವೋ (ಅ) [4] ಯೊಳ್ತೊಡರ್ದ ಮಾಲೆಯೊ ವಿಸ್ಮಯಮೆಂದು ನೋಟ್ಟ (ಅ).

ಜಿರ ಸೊಬಗಂ ಮೊದಲ್ಗೆಡಿಸಿ ತೋಳ ಮೊದಲ್ [1]ಜೆಲೆ[1]ವೂವನೆತ್ತುವಂ
ತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ ೧೨೦
(ಮಲ್ಲಿನಾಥಪುರಾಣಂ, ೨–೫೯.)

ಉಗುರ್ಗಳ ಕಾಂತಿಯುಂ ನಯನಕಾಂತಿಯುಮೊಂದಿ ಕದಂಬಮಾಗಿ ಸಂ
ಪಗೆಯೆಸಲಿಂತೆ ನೈದಿಲೆಸಲಿಂತೆ ವಿಮೋಹಮನೀಯೆ ಮಾಱುಗೊಂ
ಡಗಲಲೊಡಂ ಬೞಿಕ್ಕೆ ಬಱಿಮಲ್ಲಿಗೆಯಾಗಿರೆ ಬಂದು ಮಾಯವಾ
ಸಿಗಮಿದು ಸಲ್ಲದೆಂಬ ವಿಟರಂ ನಗುವರ್ ಮಿಗೆ ಮಾಲೆಗಾರ್ತಿಯರ್ ೧೨೧

ತೆಗೆಯೆ ಚಕೋರಿ ಕರ್ಚಿ ಶಶಿಮಂಡಲದಿಂದಮೆ ಕಿೞ್ತು ಬಿಟ್ಟ ರ
ಶ್ಮಿಗಳೆಡೆಯಂತೆ ತೋಱಿದುದು ನುಣ್ಗಱಿಯಾ ಕೆಡೆದುನ್ಮಯೂಖಮಾ
ಲೆಗಳೆನೆ ಚಂದ್ರಮಂಗೆ ಕುಡಲೆತ್ತಿದವೋಲೆಸೆದಿರ್ದರಲ್ಲಿಗ
ಲ್ಲಿಗೆ ಮಿಗೆ ತೋರಮಲ್ಲಿಗೆಯ ಮಾಲೆಯನೆತ್ತಿದ ಮಾಲೆಗಾರ್ತಿಯರ್ ೧೨೨
(ಲೀಲಾವತಿ, ೨–೨೯.)

ಕೇಳಿದು ನೋಡಲರ್ಥಮನನೇಕಮನೀವವೊಲಾ ಸುವರ್ಣಸಂ
ಮೇಳವಿಚಿತ್ರಬಂಧರಸಭಾವದೆ ಛಂದಸುಸೂತ್ರದೋಜೆಯಿಂ
ಮೇಳಿಸಿ ತೋರ್ಪರಲ್ಲಿ ನವಚಂಪಕಮುತ್ಪಲಜಾತಿಮಲ್ಲಿಕಾ
ಮಾಲೆಗಳಂ ಕವೀಂದ್ರರೊಡನಾಡಿದರೆಂದೆನೆ ಮಾಲೆಗಾರ್ತಿಯರ್ ೧೨೩

ಆವಂ ಸ್ವರ್ಗಾಪವರ್ಗಕ್ಕೆಳಸುವನವನಂ ಗಂಡುದೊ[2]ೞ್ತ್[2]ಳ್ವರಾವಂ
ಕಾವಂದೇವವ್ರತಖ್ಯಾತಿಯನವನವಲ್ ಮಾೞ್ಪುದೆಂದಾ ಪುರಸ್ತ್ರೀ
ಭ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತನಾಟಂ
ದಾ ವೇಶ್ಯಾವಾಟದೊಳ್ ಧೂರ್ಜಟಿಯ ನೊಸಲ ಕಣ್ಣಿಂಸ್ಮರಂ ನಂದೆವೊಯ್ದಂ ೧೨೪
(ಮಲ್ಲಿನಾಥಪುರಾಣಂ, ೨–೫೬.)

ಬತ್ತಲೆ ಬಂದ ಮುನೀಂದ್ರರ್
ಸುತ್ತುವರತಿವಿಭವದಿಂದಲುಟ್ಟಿರ್ದವರುಂ
ಬತ್ತಲೆ ಪೋಪರ್ ಸೊಬಗಿನ
ಬಿತ್ತರದಿಂದೆಸೆವುವವಜಿ ವೇಶ್ಯಾವಾಟಂ ೧೨೫

ಮಕರಾಂಕಧ್ವಜಮಾಲಿಕಾಪ್ರಕಟಿತಂ ಪ್ರದ್ಯುಮ್ನಪಕ್ಷಕ್ರಮಂ
ಶುಕಸಾರಿಪ್ರಕರಪ್ರಕಾಶಿತರತಿವ್ಯಾಪಾರಚಾತುರ್ಯಮು

[1] ನನೆ (ಅ) [2] ತ್ರಾ (ಅ).

ತ್ಸಕಭೂಪಾಲಭುಜಂಗತಾಟಿತಹಟದ್ಘಂಟಾರವಾವಿಷ್ಕೃತಾ
ಧಿಕಸೌಭಾಗ್ಯಮದೇಂ ಬೆಡಂಗಮುರ್ದುದೋ ಗಾಣಿಕ್ಯಸೌಧೋತ್ಕಟಂ * ೧೨೬

(ಚಂದ್ರಪ್ರಭಪುರಾಣಂ, ೧-೧೩೩.)

ಮಿಱುಗುವ ಮಿಂಚಿಗಿಂದುಕಳೆಯುಂ ಮಿಗೆ ರೊಂಕಣೆಯಿಕ್ಕುವಂತಿರ
ಲ್ಕೆಱನವಟ್ಟೆಪ ನಾಡ ಕಡುನೀಱೆಯರಂ ನಡೆ ನೋಡಿ ಸೋಲದಿಂ
ಮಱೆವುದು ರಂಭೆಯೂರ್ವಶಿ ತಿಲೋತ್ತಮೆ ಮೇನಕೆ ಮಂಜುಘೋಷೆಯೆಂ
ಬಱಕೆಯ ದೇವಸೌಂದರಿಯರಂ ಚರಿಯಿಪ್ಪ ನಿಳಿಂಪಸಂಕುಳಂ ೧೨೭

(ಶಬ್ದಮಣಿದರ್ಪಣಂ, ೧೩೪–೫,)

ಬೞಲದು ಜವ್ವನಂ ತವದು ಮೆಯ್ಸಿರಿ ಖಂಡಿಸದಾಯು ಮೆಚ್ಚು ಕೆ
ಟ್ಟೞಿಯದು ನಣ್ಪು ನಣ್ಪುಗೆಡದಾಸೆಱು ಪೋಗದು ಬೇಟದಿಂಬು ಕ
ಯ್ಗೞಿಯದು ಸೋಂಪು ಸೊಂಪಡಗದಲ್ಲಿ ಜನಂಗಳ ಸೊಂಪಿನಿಂದೊಸ
ರ್ತೞಿದುದು ಸಗ್ಗದುಳ್ಳ ಸವಿಯೆಲ್ಲಮಿದೀ ನೆಲಕೆಂಬ ಮಾಱ್ಕೆಯಿಂ ೧೨೮

ಒದವಿದ ತಮ್ಮ ಕೆಂದಳದ ಕೆಂಪುಗಳಿಂ ಗಿಳಿ ಪದ್ಮರಾಗರ
ತ್ನದ ಗಿಳಿಯಂತೆ ತಮ್ಮ ನಯನಾಂಚಲ ಚಂದ್ರಿಕೆಯಿಂದಮಿಂದುಕಾಂ
ತದ ಗಿಳಿಯಂತೆ ಕೌತುಕಮನಾಕ್ಷಣದೊಳ್ ನೆಱೆ ಮಾಡೆ ನೋಡಿ ಮಾ
ಯದ ಗಿಳಿಯೆಂದು ಪಂಜರದೊಳಿಕ್ಕುವರೋದಿಸಲಂಜಿ ಮುಗ್ಧೆಯರ್ ೧೨೯

ಗಿಳಿಯೊಡನೋದಿಯೋದಿ ನುಡಿಗಲ್ತು ಮದಾಲಸರಾಜಹಂಸಮಂ
ಡಳಿಯೊಡನಾಡಿಯಾಡಿ ನಡೆಗಲ್ತು ಕಳಾಪಿಗಳಾಟಮಂ ಮನಂ
ಗೊಳೆ ನಡೆನೋಡಿ ನೋಡಿ ಕುಣಿಯಲ್ ನೆಱೆ ಕಲ್ತು ಕಲಾಗುಣಂ[1]ಪೊದ
ಳ್ದಿಳವಡೆ ಬಾಲಭಾವದೊಳೆ[1] ಬಾಲಕಿಯರ್ ಬಳೆವರ್ ನಿರಂತರಂ ೧೩೦

(ಕಾವ್ಯಾವಲೋಕನಂ, ೨೯೦.)

ಗಱೆಯಿಂ ಗೋಳುವರಿಂದ್ರನಂ ಗಿರಿಶನಂ ಸರ್ವಸ್ವಮಂ ಕೊಂಡು ಮು
ನ್ನುೞಿವರ್ ಕಂತುವನೀಯ[2][ರಂ][2]ತೆ ಕರೆಯರ್ ವಿತ್ತೇಶನೇನಿತ್ತೊಡಂ
ಪೞಿಕಯ್ವರ್ ವರುಣಂ ಕರಂ ಕರುಣದಿಂ ಲಲ್ಲೈಸೆ ತಾವೊಲ್ಲರಾ
ಪೊೞಲೊಳ್ ಪೆಂಡಿರ[3][ಗೋಲೆವೋಗದವರಾರ್][3] ನಿರ್ವಾಹಮಂ ಸ್ನೇಹಮಂ*೧೩೧

(ಶಬ್ದಮಣಿದರ್ಪಣಂ. ೭೫–೨.)

ಸುರರಾಜಂ ಕಣ್ಣಮೆಯ್ಯಿಂ ನನೆಗಣೆಗೊಡಲಾದಂ ಜವಂ ಛಾಯೆಯೊಳ್ ಮೆಯ್
ಗರೆದಂ ರತ್ನಾಕರೇಶಂ ಕಡಲೊಳಗುಳಿದಂ ಭಿಕ್ಷುವಂ ಪೊರ್ದಿ ಯಕ್ಷಂ

---

* ಈ ಚಿಹ್ನೆಯಿರುವ ಪದ್ಯಗಳು (ಕ) ಪ್ರತಿಯಲ್ಲಿಲ್ಲ [1] ಗಳಂತಳವಡೆ ಭಾಗ್ಯಭೋಗದೊಳೆ (ಕಖಬ) [2] ಮಂ (ಖಬ) [3] ಗೊಲೆವೂಗವದಱೊಳ್ (ಖಬ).

ಮರುಳಾದಂ ಮಿಕ್ಕಿಸರ್ ಗೊಂಟಿನೊಳಿ ಮುದುಡಿದರ್ ಚಿತ್ರಮುಂ ವಿತ್ತಮುಂ ತ
ಬ್ಬರಿಗೊಂಡಿಚ್ಚೈಸಿದಾ ಸೂಳೆಯುರುಱಿದೊಡೆ ಸಂತಾಪದಿಂ ದೈನ್ಯದಿಂದಂ ೧೩೨
(ಅನಂತನಾಥಪುರಾಣಂ, ೧–೧೧೨).

ಗಿರಿಜಾವಲ್ಲಭನೊತ್ತಿಗೊಟ್ಟ ಪೆಱೆಯುಂ ಸೈತ್ರಿಕ್ಕವೇೞ್ ಬಂದಪಂ
ಹರಿ ಮುಂದಟ್ಟಿದನಿಂದು ಕೌಸ್ತುಭಮನಕ್ಕಂ ಕಂಡಳೇ ವಜ್ರಮಂ
ಸುರರಾಜಂ ಬಿಡಿಸಲ್ಕೆ ಬಂದು ಪೊಱಗಿರ್ದಂ ಕಾಮದೇವಂ[1]ಗೆ[1] ಬೋ
ಸರಿಗಂ ನಿಂದುಱಿಯೆಂಬರಾ ಪುರದ ವೇಶ್ಯಾವಾಟದೊಳ್ ಚೇಟಿಯರ್ ೧೩೩
(ಕಾವ್ಯಸಾರಂ. ೫-೧೨೬.)

ಸರಸಿಜನಾಭನಂ ಸಿರಿ ಮನೋಭವನಂ ರತಿಯಿಂದುಮೌಳಿಯಂ
ಗಿರಿಜೆ ಸುರೇಶನಂ ಶಚಿ ಚತುರ್ಮುಖನಂ ವರವಾಣಿ ತಾರಕಾ
ಪರಿವೃಢನಂ ಸಮಂತೆಸೆವ ರೋಹಿಣಿ ಪಾರ್ಶ್ವದೊಳಿಟ್ಟು ಕಾವರಾ
ಪುರದ ವಿಳಾಸಿನೀಜನದ ಗಾಡಿಗೆ ಮೆಚ್ಚಿ ನಿಜಾತ್ಮನಾಥರಂ ೧೩೪

ಮದನವಿಕಾರಮಂ ಮೆಱೆವ ಪಾರಿವಮಿಲ್ಲದ ರಾಜಕೀರಮಿ
ಲ್ಲದ ನೆಲೆಮಾಡಮಿಲ್ಲದ ನೆಗೞ್ತೆಗೆ ನೇರಿದ ಪೊನ್ನಘಂಟೆಯಿ
ಲ್ಲದ ತಳಿರುಯ್ಯಲಿಲ್ಲದ ಲತಾಗೃಹಮಿಲ್ಲದ ಗೊಟ್ಟಗಾಣ[2]ಮಿ[2]
ಲ್ಲದ ಕಡೆಪಟ್ಟ ಸೂಳೆವನೆಯಿ[3]ಲ್ಲೆನೆ ತತ್ಪುರವೊಪ್ಪಿ ತೋಱುಗುಂ[3] ೧೩೫
(ಮಲ್ಲಿನಾಥಪುರಾಣಂ, ೨–೫೭.)

ನಡೆಗಲಿಸುತ್ತುಮಂಚೆಗಳನೋದಿಸುತುಂ ಗಿಳಿಯಂ ಪಿಕಕ್ಕೆ ಮಾ
ಮಿಡಿಗಳನಿಕ್ಕುತುಂ ನವಿಲನಾಡಿಸುತುಂ ಪೊಣರ್ವಕ್ಕಿಯಂ ಪಿಣಿ
ಲ್ವಿಡಿದು ಬಟಲ್ವಿನಂ ತಗುಳುತುಂ ಬನದೊಳ್ ಬಿನದಂ ವಿಲಾಸಮಂ
ಪಡೆಯೆ ನಿರಂತರಂ ತೊಲಗದಿರ್ಪುದು ವಾರವಿಳಾಸಿನೀಜನಂ ೧೩೬
(ಮಲ್ಲಿನಾಥಪುರಾಣಂ, ೨–೪೯.)

ಮನಸಿಜನಾಣೆ ಮನ್ಮಥನ ಘೋಷಣೆ ದರ್ಪಕನೇೞ್ತೆ ಕಂತುರಾ
ಜನ ವಿಜಯಪ್ರಶಸ್ತಿ ರತಿನಾಥನ ದೃಷ್ಟಿ ಮನೋಜನಾಜ್ಞೆ ಕಾ
ಮನ ಹೊಸದೇಸಿ ಚಿತ್ತಜನ ಬೀರ ರತೀಶನ ಬಿಂಕವಂಗಜಾ
ತನ ಬಿರುದಲ್ಲದಿಲ್ಲ ಮಱೆದೆಲ್ಲಿಯುಮಲ್ಲಿಯ ಸೂಳೆಗೇರಿಯೊಳ್ ೧೩೭

ಮಕರಾಂಕಾವಾಸಭೋಗಪ್ರಹತಪಣವಸಂವಾದಿ ಸೌಭಾಗ್ಯಘಂಟಾ
ನಿಕುರುಂಬಾಂದೋಳಲೀಲಾ ಯುವತಿಕಬರಿಕಸ್ತೂರಿಕಾರೇಣುಸಂವಾ

[1] ಗೆಂ (ಕ) [3] ರಿ (ಅ) [3] ಲ್ಲದವಿಲ್ಲವುಸೂಳೆಗೇಱಿಯೊಳ್ (ಅ).

ಹಕಚಂಚತ್ಕೀರಪಾರಾ[1]ವತಪರಿತಸುರಾದ್ರೀಂದ್ರಧಾಮಂ[1] ಮಾಟಕೂಟಾಂ
ತಿಕಹೇಳೋದ್ಯಾನಪಾಳಂ ಸುೞಿದುದು ಗಣಿಕಾವೇಶ್ಮಚಾರಂ ಸಮೀರಂ ೧೩೮
(ಅನಂತನಾಥಪುರಾಣಂ, ೧–೧೧೩.)

ಗಣಿಕಾರತ್ಯಂತಸುಪ್ತಿಸ್ಖಲನಚತುರಸಂಭೋಜಕಿಂಜಲ್ಕ ಸಂಚಾ
ರಣಶೀಲಂ ಪುಷ್ಪವಲ್ಲೀನಟನಪಟುನಟಂ ಸಂಚರಚ್ಚಂಚರೀಕ
ಕ್ವಣನಜ್ಯಾಸಂಗಚಿತ್ತೋದ್ಭವಭುವನಜಯೋತ್ಪಾದನಪ್ರೌಢಸೇನಾ
ಗ್ರಣಿ ಚೇತಃಪ್ರೀತಿಯಂ ಪೆರ್ಚಿಸುವುದು ಪವನಸ್ಸ್ವೈರಚಾರಂ ಸಮೀರಂ ೧೩೯
(ಮಲ್ಲಿನಾಥಪುರಾಣಂ, ೨–೪೦.)

ಸುೞಿಗುರುಳೊಳ್ ತೊಡಂಕಿ ವದನಾಂಬುಜಸೌರಭದೊಳ್ ಮುೞುಂಗಿ ಪೊಂ
ಪುೞಿಗೊಳುತಿರ್ಪ ಸೋರ್ಮುಡಿಯೊಳೊತ್ತಿದ ಕತ್ತುರಿಯಂ ಕಲಂಕಿ ವೈ
ವೞಿಯೊಳೆ ಮೇಲುದಂ ತೊಲಗಸೂಂಕಿ ಕುಚದ್ವಯದೊಳ್ ಪಳಂಚಿ ಪೊ
ಕ್ಕುೞಿಯೊಳಿೞಿದಾಡಿ ತೀಡಿದುದು ವಲ್ಲಭನಂತಿರೆ ಮಂದಮಾರುತಂ ೧೪೦

ಅಳಿಮಾಲಾಕೇಶಮಂ ಮೆಲ್ಲನೆ ಬರೆತೆಗೆದಬ್ಜಾಸನಾಮೋದಮಂ ಪೀ
ರ್ದು ಲತಾಂಗಾಲಿಂಗನಂ ಸಂಗಳಿಸಿ ಕೃತಕಶೈಲೇಂದ್ರಶುಂಭನ್ನಿತಂಬ
ಸ್ಥಳಮಂ ತನ್ನಿರ್ಝರಾಂಬುಸ್ಮರರಸಮೊಸರ್ವಂತೆ ತೇಱಿ ನಿಚ್ಚಂ ವನಸ್ತ್ರೀ
ಗೊಲವಂ ಮಾಡುತ್ತಮಿರ್ಕುಂ ಚತುರವಿಟನವೋಲ್ ದಕ್ಷಿಣಾಶಾಸಮೀರಂ * ೧೪೧
(ಜಗನ್ನಾಥವಿಜಯಂ, ೯–೯೧.)

ನಿಱಿಯ ಸೆಱಂಗನೆತ್ತಿ ಮಿಸುಪೊಳ್ದೊಡೆಯೊಳ್ ನಸುಸೋಂಕಿ ಮೇಲುದಂ
ತೆಱೆದು ಕುಚಾಗ್ರದೊಳ್ ಪೊರಳ್ದು ಹಾರಮನೀಡಿಱಿದಾಡಿ ಪೀರ್ದು ಬಾ
ಯ್ದೆಱೆಯನಲಂಪಿನಿಂದೆಸೆವ ಲೋಲಕುರುಳ್ಗಳನೊಕ್ಕಲಿಕ್ಕಿ ಮೆ
ಯ್ಯಱಿಯದೆ ಸೂಳೆಗೇರಿಯೊಳೆ ಸಂಚರಿಪಂ ವಿಟನಂತೆ ಮಾರುತಂ ೧೪೨

ಸ್ತನಚೀನಾಂಶುಕಭಾರಮಂ ಸೆಳೆಯುತುಂ ರೋಮಾಂಚಮಂ ಮೆಯ್ಗಳೊಳ್
ತೊನೆಸುತ್ತುಂ ಕುರುಳಂ ಚಲಂದೆಗೆಯುತುಂ ಶೃಂಗಾರಸಾರಾನ್ವಿತಾ
ನನಪಂಕೇಜದ ಕಂಪನೀಟ್ಟುಕೊಳುತುಂ ಮಂದಾನಿಲಂ ಸೋಂಕೆ ತ
ನ್ನಿನಿಯಂ ಬಂದಮರ್ದಪ್ಪಿದಂತೆ ಸುಖದಿಂ ಕಯ್ಗೆಯ್ದಳಂದಱ್ತಿಯಿಂ * ೧೪೩
(ಲೀಲಾವತಿ, ೧೦–೪೦.)

ವನಿತಾಕೇಶಕಲಾಪನವ್ಯಕುಸುಮಾಮೋದಂಗಳೊಳ್ ಕಮ್ಮಕ
ಮ್ಮನೆ ನಾರೀನಿಬಿಡೋನ್ನತಸ್ತನಘಟಪ್ರೋದ್ಘಟ್ಟದೊಳ್ ಮೆಲ್ಲಮೆ

---

[1] ಪತಿತಸುರನಗೇಂದ್ರಾಧಿಕೂಟಂ (ಖ)   * ಈ ಚಿಹ್ನೆಯಿರುವ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಲ್ಲನೆ ಕಾಂತಾಸುರತಪ್ರಮೋದಬಹಳಸ್ವೇದಾಂಬುವಿಂ ತಣ್ಣಿತ
ಣ್ಣನೆ ತೀಡಿತ್ತು ವಿಲಾಸಿನೀಸದನದೊಳ್ ಬಂದೊಂದು ಮಂದಾನಿಲಂ * ೧೪೪

ಯುವತೀಸಂತಾನನಾನಾಚಳದಲಕಲಸಲ್ಲಾಸ್ಯಲೀಲಾಪ್ರಬಂಧಂ
ವಿವಿಧಾಗಾರಾಂಗನಾಪ್ರಸ್ಫುರಿತಕೃತಕಕಾಸಾರಪಾನೀಯಭಂಗೋ
ದ್ಭವಬಿಂದುವ್ರಾತಶೀತಾವರಣನೊಲವಿನಿಂ ತೀಡಿದಂ ಸ್ತ್ರೀಕುಲೋದ್ಯ
ನ್ನವಕಸ್ತೂರೀಹಿಮಪ್ರೋನ್ಮಲಯಜಘುಸೃಣಾಮೋದಭಾರಂ ಸಮೀರಂ * ೧೪೫

ಆ ಪುರದ ದೇವಭವನಕ
ಳಾಪದ ಮಾಣಿಕಕಳಶದೆಳವಿಸಿಲಿರುಳಂ
ವ್ಯಾಪಿಸೆ ಗೃಹದೀಪಿಕೆಗಳೊ
ಳೀ ಪೊತ್ತುಂ ಜಕ್ಕವಕ್ಕಿಗಳ್ ನೆಲಸಿರ್ಕುಂ ೧೪೬

ಅರಮನೆಗಿಂಬುವೆತ್ತ ರಣಮಂಡಲಮಾ ರಣಮಂಡಲಕ್ಕೆ ಬಿ
ತ್ತರಿಸಿದ ವೀಥಿ ವೀಥಿಗಳ [1]ತೌದಲೆ[1]ಗೊಪ್ಪುವ ಮಂಟಪಂ ಮನೋ
ಹರತರಮಂಟಪಕ್ಕೆ ಕರುವಿಟ್ಟವೊಲಿಪ್ಪ ಸುಧಾಗೃಹಂಗಳ
ಚ್ಚರಿಯೆನೆ [2]ಚೈತ್ರಚಂದ್ರಮರೆ[2] ಚಿತ್ರಿಸಿದಂತೆಸೆದಿರ್ಪುದಾ ಪುರಂ ೧೪೭
(ಅನಂತನಾಥಪುರಾಣಂ, ೧೧–೧೩.)

ಬರೆಯಲ್ ಬಾರದು ಬಚ್ಚಿಸಲ್ಕರಿದು ಮಾಡಲ್ ಕೂಡದೊಡ್ಡೈಸಲ
ಚ್ಚರಿ ಭೂಮಂಡಲಮಧ್ಯದಿಂದೊಡೆದು ಮೂಡಿತ್ತೆಂಬಿನಂ ಚೆಲ್ವನಾ
ಕರುಮಾಡಂ ನವಭೂಮಿಕಾಪ್ರಕಟಿತಂ ವಿಷ್ಕಂಭವಿಸ್ತಾರಬಂ
ಧುರಸಂಧಿಪ್ರತಿಭಾಸಿ ನಾಟಕದ ಪಾಂಗಿಂ ಚೂಳಿಕಾ [3]ಲಾಲಿತಂ[3] ೧೪೮
(ಅನಂತನಾಥಪುರಾಣಂ. ೧–೧೧೪.)

ಆಡುವ ಡಕ್ಕೆವಾಜಿಸುವ ನೋಡುವ ಸಂಗಡಮೊಪ್ಪೆ ರಾಗಮಂ
ಪಾಡುವ ತಳ್ತು ಕುಂಬಿಸುವ ಬೀಣೆಯ ತಂತಿಯ ನಂಟುನೋಟ್ಪಿ ಮಾ
ತಾಡುವವಂತೆ [4]ಪೂಮುಡಿವ[4] ಕನ್ನಡಿಯಂ ಪಿಡಿದಿರ್ಪ ಭಾವದಿಂ
ಗಾಡಿಯನಾಂತ ಪುತ್ತಳಿಗಳಾ ಕರುಮಾಡದೊಳೊಪ್ಪಿ ತೋಱುಗುಂ ೧೪೯

ಬಳಸಿದ ನೀಲದ ಮುತ್ತಿನ
ತೊಳಗುವ ಮಾಣಿಕದ [5]ರನ್ನ[5]ವೆಳಗಿನ ಬೆಳಗಂ

---

* ಈ ಚಿಹ್ನೆಯಿರುವ ಪದ್ಯಗಳು (ಕ) ಪ್ರತಿಯಲ್ಲಿಲ್ಲ [1] ಕಾಲ್ನೆಲೆ (ಕ) [2] ಚಿತ್ರಚಂದ್ರಮರೆ (ಕ) [3] ಲಾಳಿಕಂ (ಕ) [4] ಮೋಲ್ಮುಡಿಯ (ಕ) [5] ಬೆರಕೆ (ಅ).

ಥಳಥಳಿಸಿ ಬಿಸಿಲ ಬೆಳ್ದಿಂ
ಗಳ ಕಾಳದ ಕಣಿ[1]ಯೊಲಿ[1]ಪ್ಪುದಾ ಕರುಮಾಡಂ ೧೫೦
(ಅನಂತನಾಥಪುರಾಣಂ, ೧–೧೧೬.)

ಭಂಗವಡೆದೆಸೆಗುಮವರ ಗೃ
ಹಂಗಳ್ ಮಾಣಿಕದ ಸಂಜೆಯಿಂ ನೀಲದ ಕ
ರ್ದಿಂಗಳಿನೆಳಮುತ್ತಿನ ಬೆ
ಳ್ದಿಂಗಳಿನುಜ್ವಲಿಸಿ ಪೊಳೆವ ವಜ್ರದ ಬಿಸಿಲಿಂ ೧೫೧

ಆ ರಾಜಸ್ನಪನದ ಪಚ
ನಾರಂಭದ ಸೆಜ್ಜೆಯಸ್ತ್ರದಾರೋಗಿಪ ಕೊ
ಟ್ಟಾರದ ಭಂಡಾರದ ದೇ
ಹಾರದ ಮನೆ ಮೂಡಣಿಂ ಪ್ರದಕ್ಷಿಣಮುಚಿತಂ ೧೫೨
(ಲೋಕೋಪಕಾರಂ, ೪–೧೮.)

ಕರಿ[2][ಯೆ][2]ಂತಪ್ಪುವು ಸಾರ್ವಕಾಳಿಕಮದಶ್ರೀರಾಜಹರ್ಷಂಗಳಾ
ಪುರದಶ್ವಂಗಳದೇನತರ್ಕ್ಯಹಯಮುಂ ಕೀೞ್ಮಾಡಿ ಸಾಲ್ವನ್ನಮೋ
ದೊರೆಯರ್ ವೀರಭಟರ್ ದಶಾನನನ ಬಾಹಾಚಂದ್ರಹಾಸಾಸಿಯುಂ
ಧುರದೊಳ್ತಾಗಿದ ಬಳ್ಪಿನೇೞಿ ಕಲೆಯಂ ಪೇೞ್ವನ್ನರೇವೇೞ್ದಪೆಂ ೧೫೩

ನೆಲೆಮಾಡಂಗಳಿನೋಳಿವಟ್ಟ ನೃಪಗೇಹಂ ವಸ್ತುವಂ ಬಿಲ್ಲ ಬ
ಲ್ಲುಲಿಯಂ ಘೂರ್ಣಿಸುವಾ ರಣಂ ಕಳಸದಳ್ಕೇಱಿಂ ಮುಗಿಲ್ ಮುತ್ತುಗಳ್
ನೆಲೆಯಿಂ ಸೂಸುವ ದೇಗುಲಂ ತಪಕೆ ತಂಪಂ ಮಾೞ್ಪ ವಾರಾಂಗನಾ
ನಿಳಯಂ ನೋೞ್ಪರ ಕಣ್ಗೆ ರಮ್ಯಮೆನೆ ಪೆಂಪಂ ಪೆತ್ತುದಾ ಪಟ್ಟಣಂ ? ೧೫೪

ಅದನಾಳ್ವಂ ನಿಜಬಾಹುರಾಹುಕಬಳೀಭೂತಾರಿಸಂತಾನನಂ
ಘ್ರಿದಳತ್ಪಂಕಜರೇಣುಶೋಣಿತಶಿರೋಭೂಭೃತ್ಸಮಾಧಾನನಾ
ಸ್ಪದಸಂಭಾವಿತಸತ್ಯಶೌಚಗುಣರತ್ನಾಂಭೋನಿಧಾನಂ ಧರಾ
ಸುದತೀಹೃತ್ಪತಿ ಸಿಂಹಸೇನನನಘಂ ಸಾಹಿತ್ಯರತ್ನಾಕರಂ ೧೫೫
(ಅನಂತನಾಥಪುರಾಣಂ, ೧–೧೨೧.)

---

[1] ವೊ (ಅ) [2] ಯ (ಕಖಬ).

ಓರಂತೆ ಮೆಚ್ಚಿದಂ ಕೃತಿ
ಸಾರಂ ಪುರವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೫೬

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣ
ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮಷ್ಟಾದಶ
ಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ ಸೋಯಿ
ದೇವರಾಯ ವಿನೋದಾಕರ್ಣನಕೌತುಕೋತ್ಪಾದಿತಮುಂ
ಯಾದವಕಟಕಾಚಾರ್ಯಸುಕವಿ ಸುಮನೋಬಾಣ
ಜಾಮಾತೃ ಪರಮಚಿದಾನಂದಮಲ್ಲಿಕಾರ್ಜುನ
ಕವೀಶ್ವರಸಂಯೋಜಿತಮುಮಪ್ಪ
ಸೂಕ್ತಿಸುಧಾರ್ಣವದೊಳ್

ಪುರವರ್ಣನಂ ಚತುರ್ಥಾಶ್ವಾಸಂ ಸಂಪೂರ್ಣಂ



# ನಾಯಕಾಭ್ಯುದಯವರ್ಣನಂ

---

ಮುನಿ[1]ಸಿಂದಾಂತರನಿಕ್ಕಿ[1] ಭೂವಳಯಮಂ ನಿಷ್ಕಂಟಕಂ ಮಾಡಿ ಕೀ
ರ್ತಿನಿಜಾಜ್ಞಾಸಹಿತಂ ದಿಶಾವಳಯಮಂ [2]ತಳ್ತಪ್ಪಿ[2] ಸಂಗೀತಮಂ
ಜನನಾಥಂ ಮುದದಿಂದವೋಲಗದೊಳಿತ್ತಂ ಕೇಳ್ದು ತಾಂ ತ್ಯಾಗವ
ರ್ಧನಮಂ ಮಾೞ್ಪುದು ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ೧

ಗೆಲವಿಂ ಭೂಮಿಜೆ ಕೈಗೆವರ್ಪುದೆ ಫಲಂ ರಾಮಂಗೆ ಮುಂ ಪೋದ ಭೂ
ತಳರಾಜ್ಯಂ ಕ್ರಮದಿಂದೆ ಬರ್ಪುದೆ ಫಲಂ ಧರ್ಮಾತ್ಮಜಂ[3]ಗಾರ್ಪಿನಿಂ[3]
ಸಲೆ [4]ರಾ[4]ಗೋತ್ಸವಸಿದ್ಧಿ ಸಾರ್ಪುದೆ ಫಲಂ ಶ್ರೀಖೇಚರಂಗಂತಱಿಂ
ಫಲಯೋಗಸ್ಥಿತಿ ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ೨

ಯಮದಂಡಾಶನಿಪಾತದೊಂದು ಸವಿಯಂ ಶ್ರೀಸಿಂಹಸೇನಪ್ರತಾ
ಪಮನುಗ್ರಾಜಿಯೊಳುಂಡು ಕಂಡು ಬಱಿಯಂ ಪ್ರಾಣೈಕಮಾತ್ರಪ್ರಸಾ
ದಮಹಾಲಾಭದಿ[5]ನಾಜ್ಞೆ ಯಿಂದಲಿಳೆಯಂ[5] ತತ್ಕೀರ್ತಿ ಪೂಮಾಲೆ ತೇ
ಜಮೆ ಚೂಡಾಮಣಿಯಾಗೆ ಬಾೞ್ವರಿಳೆಯೊಳ್ ವೀರಾರಿಭೂಪಾಲಕರ್ ೩

(ಅನಂತನಾಥಪುರಾಣಂ, ೨–೮.)

[6]ಪೊಡರ್ದಡೆ[6] ಕಪ್ಪಮಂ ಕುಡದ ಮಂಡಳಿಕರ್ ಮನೆಮಕ್ಕಳಂದದಿಂ
ಪಡೆದಬಳಾಜನಂ ನೆಱೆದ ಮಕ್ಕಳೆ ಮಕ್ಕಳನೀಳ್ವುದೊಂದು ದಾಂ
ಗುಡಿವಿಡಿದೀವ ಜಾಗವೆಡಱೋಡುವಿನಂ ಪೊರೆದಾ ನೆಗೞ್ತೆಯೊಳ್
ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೊ ನಭಶ್ಚರೇಂದ್ರನಾ ? ೪

(ಆದಿಪುರಾಣಂ, ೨-೨೪,)

ಉಂಟು ಭುಜಾಬಲಂ ಪಿರಿದು ಚಾಗದ ಸಂಪದಮೇೞುವಾರ್ಧಿಯಂ
ದಾಂಟಿದುದಾತ್ತ ಕೀರ್ತಿ ಕಳೆಯೊಳ್ ಬಿನದಂ ತನಗೆಂದು ನಿಚ್ಚಲುಂ
ಕಂಟಕಿತಾಂಗಮಾದಪುದು ಪಂಡಿತಮಂಡಳಿ ರಾಜ್ಯಮಂತೆ ನಿ
ಷ್ಕಂಟಕಮೆಂಬಿನಂ ಪಡೆದನಚ್ಚರಿಯಂ ನೃಪನೀತನೊಚ್ಚತಂ ೫

(ಶಬ್ದಮಣಿದರ್ಪಣಂ, ೨೫೫-೧.)

---

[1] ಸಿದ್ಧಾಂತರು ಮೆಚ್ಚ (ಕ) [2] ತಳ್ತೊಪ್ಪೆ (ಕ) [3] ಗೊಪ್ಪಿನಿಂ (ಖ) [4] ನಾ (ಕ)
[5] ನಾತನಾಜ್ಞೆ ತಿಳಕಂ (ಅ) [6] ತೊಡರ್ದಿರೆ (ಖಬ).

ಸಿರಿ ವಕ್ಷೋರಂಗದೊಳ್ ನರ್ತಿಸೆ ವಿಜಯಭುಜಾದಂಡದೊಳ್ ವಿಕ್ರಮಶ್ರೀ
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ ನೆಲಸೆ ತನ್ನಾಜ್ಞೆ ವಿದ್ವಿಷ್ಟಭೂಪಾ
ಲರ ಕೋಟೀರಂಗಳೊಳ್ ನರ್ತಿಸೆ ವಿಶದಯಶಂ ಪೆರ್ಚೆ ವಾರಾಶಿಯೇಱುಂ
ಬರವಾಳ್ದಂ ವಿಶ್ವಧಾತ್ರೀತಳಮನತಿಬಳಂ ರಾಯರೊಳ್ ಸೋಯಿದೇವಂ ೬

(ಮಂಡ್ಯ, ೭೭ ; ನಾಗಮಂಗಲ, ೨೫.)

ಅದಟನಳುರ್ಕೆಯಂ ಮೆಱೆವ ಚೋಳನ ಪಂದಲೆಯೊಂದೆ ಕೈಗೆವಂ
ದುದೆ ಕರಿಕೋಟಿ ಬಂದುದು ಹಯಾವಳಿ ಬಂದುದು ರತ್ನರಾಶಿ ಬಂ
ದುದು ಬಗೆದಂತೆ ಚೇರಮನ ಚೋಳನ ಪಾಂಡ್ಯನ ನಾಡೆ ಕೈಗೆವಂ
ದುದು ಕಡಿತಕ್ಕಮುಂಡಿಗೆಗವೋಲೆಗಮಾ ಶುಭತುಂಗದೇವನಾ ೭

ಧಾರಾಮುದದಿಂದೆ ನೆಲಂ
ಬೈರಗಿಬೀೞ್ವಂದದಿಂದೆ ಬಿಡುತಪ್ಪ ಮಹಾ
ವಾರಣಘಟೆಯಿಂ ನಿಚ್ಚಂ
ಕಾರಂ ಕೈಕೊಂಡು ಮೆಱೆವುದಾತನ ರಾಜ್ಯಂ ೮

ಬಡಗಣ ತುರಂಗಮುಂಗಳೆ
ನಡುಪಟ್ಟೆ ನೆಗೞ್ತೆವಡೆಯೆ ಕಟ್ತೆಗಳೆ ಪೊದ
ೞ್ದೊಡವೆಗಳ ಸವೆದ ಮಾಣಿಕ
ದುಡಿಗೆಗಳೆ ಸಮಸ್ತಮಿನಿತುಮಾತನ ಮನೆಯೊಳ್ ! ೯

ಅರುಣಸರೋರುಹದಲರಂ
ಮುಱುಮುಱಿದೀಡಾಡುವಂತೆ ನಟಿಯಿಸಿ ಮೊದಲೊಳ್
ಕರಮರಿದೆನೆ ಕರಮವು ಸಾ
ಸಿರಮೆನೆ [1]ರಚಿಯಿಸಿ[1]ದಳಾಕೆಯೆಡಕಂ ಬಲಕಂ ೧೦

(ಲೀಲಾವತಿ, ೪–೧೪೧.)

ಜತಿ ತೊಡರೆ ರಣಿತ ನೂಪುರ
ಹತಿಗಳ ಬೞಿವಿಡಿದು ವಾದಕಂ ಬಾಜಿಸಿದಂ
[2]ತತವಾವುಜನಾಗಸಗತಿ
ತತಿಯಿಂ ನೃತ್ಯಾನುಗಂ[2]ಬೊಲಾಗಿರೆ [3]ವಾದ್ಯಂ[3] ೧೧

(ಲೀಲಾವತಿ, ೪–೧೪೨.)

---

[1] ರೇಚಿಸಿ (ಅ) [2] ಧೃತದಾವುಜ್ಜಮುದಾರಸವತಿಯುಂ ನೃತ್ಯಾಂಗಮೆಂ (ಅ)
[3] ರಾಜ್ಯಂ (ಕಖಬ).

ಕರಣದೊಳೊಂದುಂ ಭಾರತಿ
ಕರಣಮಿದಂ ಮೆಚ್ಚರೆನಿಪುದಿಲ್ಲೆನೆ ಮೆಲ್ಪಿಂ
ಪರಿವಿಡಿಯಿಂ [1]ಪರಿಶೋಭಿಸಿ[1]
ಪರಿವಿಡಿಯಿಂದಂಗ[2]ಹಾರ[2]ಮಂ ಪೊಸಯಿಸಿದಳ್

(ಲೀಲಾವತಿ, ೪–೧೪೩.)

ಒತ್ತಿದ ಶೃಂಗಾರದ ರಸ
ದೊತ್ತನೆ ಕೈಗೆಯ್ದ ಸರಸಕವಿತೆಯ ನೆಲೆಯಂ
ಪೆತ್ತು [3]ಜತಿವೆತ್ತು[3] ಶೋಭಿಸೆ
ವೃತ್ತಸ್ತನೆ ಲಾಸ್ಯಲೀಲೆಯಿಂ ಶೋಭಿಸಿದಳ್ ೧೩

(ಲೀಲಾವತಿ, ೪–೧೪೪.)

ಚರಣಾಗ್ರಂ ಜಾನುವಂ ಜಕ್ಕುಲಿ[4]ಸಡರೆ[4] ನಿತಂಬಕ್ಕೆ ಪಕ್ಕಾ[5]ಗಿ[5] ಮಧ್ಯಂ
ಮುರಿವನ್ನಂ ದಕ್ಷಿಣಕ್ಕವ್ವಳಿಸಿದ ಕುಚದೊಳ್ ಕೈದ[6]ಳಿರ್ಕೂ[6]ಡೆ ವಾಮಂ
ಕರಕಂಜಂ [7]ಕಾಂತಿಯಂ ತಳ್ತಳುರ್ದು ಮಿಳಿರೆ[7] ವಕ್ತ್ರಾಂಬುಜಂ ಕೊಂಕಿ ಚೆಲ್ವಾ
ಗಿರೆ ಕಾಮೋತ್ಪತ್ತಿಯಂ ಕಾಮಿಸಿ ತರುಣಿ ತಪಂಗೆಯ್ವವೋಲ್ ಕಣ್ಗೆವಂದಳ್ ೧೪

(ಲೀಲಾವತಿ, ೪–೧೪೫.)

ಬಲಗಾಲ್ ಸೈತೊಪ್ಪೆ ವಾಮಂ ಕೆಲಕೆ ತೊಲಗೆ ವಕ್ಷಸ್ಥಿತಂ ಮುಟ್ಟೆ ಚೆಲ್ವಾ
ಗೆ ಲತಾಖ್ಯಂ ಕೈ ಕರಂ ಕಣ್ಗೊಳೆ ನೆಗೆಯೆ ಕುಚಂ ಕೊಂಕೆ ಮಧ್ಯಂ ದಳತ್ಕು
ಟ್ಮಲನೇತ್ರಂ ಬೀಱೆ ಬೆಳ್ಪಂ ಪ್ರಹಸಿತವದನಂ ಶೋಭೆಯಂ ಸೂಸೆ ಲೀಲಾ
ಲಲಿತಾಸ್ಯಾಕ್ರಾಂತದಿಂ ನಿಂದಮರನರ ಸಭಾಚಿತ್ತದೊಳ್ ಕಾಂತೆ ನಿಂದಳ್ ೧೫

(ಲೀಲಾವತಿ, ೪–೧೪೬.)

ವಿವಿಧಾಲಂಕೃತಿ ಕೂಡೆ ಕೊಂಡ ಗಮಕಂ ಮಂಥಾದ್ರಿಯಂ ಮುಂದೆ ವ
ರ್ಣವಿಭಾಗಂ ಪವಣಾಗೆ ರಾಗರಮಣೀಯಚ್ಛಾಯೆಯುಂ ಕೂಡೆ ನೀ
ಡುವ ವೀಣಾಕಲಕೋಮಳಕ್ವಣಿತದೊಳ್ ತಳ್ಪೊಯ್ದು ಕೈಗಣ್ಮೆ ಪೊ
ಣ್ಮುವ ಗೀತಕ್ಕೆ ಮೃಗಾಕ್ಷಿಯಾಡಿ ಮೆಱೆದಳ್ ಗೀತಾನುಗಪ್ರೌಢಿಯಂ ೧೬

(ಲೀಲಾವತಿ, ೪–೧೪೭.)

ಕಚಭಾರಾಲಸಗಾಮಿನೀಪರಿವೃತಂ ಗಂಗಾತರಂಗೋಪಮಾ
ನ ಚಲಚ್ಚಾಮರವಾತಸೀತನಿಜಘರ್ಮಾಂಭಃಕಣಂ ದ್ರೌಪದೀ

---

[1] ದಂ ತಾನೆನೆ (ಅ) [2] ರಾಗ (ಅ) [3] ಜಡಿಯುತ್ತೆ (ಅ) [4] ಸೆ ಬರಿ (ಕಖಬ)
[5] ಗೆ (ಖಬ) [6] ಳಂಕೂ (ಕಖಬ) [7] ಕಾಂಚಿಯಿಂದಳ್ಳಿಱಿದು ನಿಮಿರೆ (ಕಖಬ).

ಕುಚಕುಂಭಾರ್ಪಿತಕುಂಕುಮದ್ರವವಿಲೇಪೋರಃಸ್ಥಲಂ ದಾಂಟೆ ಕೀ
ರ್ತಿಚತುರ್ವಾರ್ಧಿಯ[1]ನಿ[1]ರ್ದನಂದು ಸುಖದಿಂ ವಿದ್ವಿಷ್ಟವಿದ್ರಾವಣಂ ೧೭

(ಪಂಪಭಾರತಂ, ೩—೮೫.)

ತಾಳನಿವರ್ತನಂ ಲಯದ ಮೆಯ್ಸಿರಿಯೊಳ್ ನಿಲೆ ಬೈಕೆದೋಱುವಂ
ತಾಳತಿಗೆಯ್ವ ನಾದದೊದವುಂ ಶ್ರುತಿಯುಂ ಪರದಲ್ಲಿ ತೋಱೆ[3] ಮೇಣ್
ಚಾಳಿಪ ರಾಗಮಂ ನಿಲಿಸಿ ಗೀತದ ಭಾವದೊಳಂಗಸಂಭ್ರಮಂ
ಮೇಳಿಸಿ ಲೀಲೆಯಿಂ ಮುಖರಿಗಾಣತಿ ದೇವನ ಮುಂದೆ ಪಾಡಿದಳ್ ೧೮

ತೋಳ ತೊಡರ್ಪುಗ ಕಣ್ಗೆಸೆಯೆ ಸಾರ್ಚಿದ ವಕ್ತ್ರಸರೋಜಮೋಜೆಯೊಳ್
ಮೇಳಿಸಿ ಪುಂಖಶುದ್ಧಮೆನೆ ಭೋಂಕನೆ ಪುಂಖಿಸಿ ಮಧ್ಯಮಾದಿಯಂ
ಚಾಳಿಸಿ ತುಂಬಿಯಿಂಚರದ ಮೊತ್ತಮನೆತ್ತುವವೋಲ್ ಮೃದುಸ್ವರಂ
ಪಾಳಿಯಿನೊಪ್ಪುವಂತೆಸೆಯ ಬಾಜಿಸಿದಳ್ ಸುವಿಲಾಸೆ [2]ವೀಣೆಯಂ[2] ೧೯

ಕೆಲದೊಳ್ ಕೆನ್ನೇತವಂಶಂವೆರಸಿ ಪಿಡಿವ ಕಿಱ್ವಾಳಗೋವಂ ತುರುಷ್ಕಂ
ಬಲಮುಖ್ಯಾಧ್ಯಕ್ಷದಿಂದಂ ನಡೆವ ಪಡೆವಳಂ ಚೋೞನುಚ್ಚಂಡಬಾಹಾ
ಬಲದಿಂ ಮೆಯ್ದೋರ್ಪ ಮಾವಂತರ ಬೞಿವೆಸರಾಳ್ಗಳನಿನ್ನಾವ ರಾಯರ್
ತಲೆದೋರ್ಪರ್ ನಾರಸಿಂಹಂಗಮರಸಮರಸಿಂಹಂಗೆ ವಿಕ್ರಾಂತದಿಂದಂ ೨೦

ನೀತಿಯೆ ರೂಪುಗೊಂಡ ತೆಱದಿಂ ನೆಲಸಿರ್ಪ ಮಹಾಪ್ರಧಾನರಿಂ
ಮಾತಿನ ಬಲ್ಮೆಯಿಂ ಸಭೆಗೆ ರಂಜಿಪ ವಾಗ್ಮಿಗಳಿಂ ಪ್ರಬಂಧದಿಂ
ಪ್ರೀತಿಯನೀವ ಸತ್ಕವಿಗಳಿಂ ಗಣಿಕಾಗಣದಿಂ ಪ್ರಭೂತಮಾಂ
ಧಾತನ ರಾಜ್ಯದಂತಿಳೆಗೆ ದಕ್ಷಿಣಚಕ್ರಿಯ ರಾಜ್ಯಮೊಪ್ಪುಗುಂ ೨೧

ಭಾವರಸಂಗಳಂ ಮೆಱೆ[3]ವ ಸ[3]ತ್ಕವಿ[3]ಸಂಕುಲ ಗೋಷ್ಠಿಯಲ್ಲಿ ರ
ತ್ನಾವಳಿ [4]ಸರ್ವರಾಗರಸ[4]ಸಂಭೃತಗಾಯಕಸಂಘದಲ್ಲಿ ರ
ತ್ನಾವಳಿ ವಾಜಿವಾರಣವಿನೋದವಿಲಾಸವಿಶೇಷದಲ್ಲಿ ರ
ತ್ನಾವಳಿ ವತ್ಸಭೂಪತಿಗದೇನೆಸೆದಿರ್ದುದೊ ರಾಜ್ಯಸಂಪದಂ ೨೨

ಆ ಸಕಲಪ್ರಧಾನಜನಮುಂ ಪೆಸರೋಲಗಕಾರ್ತಿಯರ್ಕಳುಂ
ಕೂಸುಗಳುಂ ಮಹಾಕವಿಗಳೇವೆಸ[5]ಗೇ[5]ಳ್ವ ಸರಸ್ವತೀಗಣೇ
ಶಾಸಮೆ ಬೀಡಿನೊಳ್ ಮಗುೞೆ[3] ಮಜ್ಜನ ಭೋಜನ ತೃಷ್ಣೆ ರಾಜನಾ
ದೇಶವಿಳಾಸಮುಂ ಪಡೆದು ನಿಂದುದು ದಕ್ಷಿಣಚಕ್ರವರ್ತಿಯಾ? ೨೩

---

[1] ಲಿ (ಬ) [2] ವಾಸಮುಂ (ಬ) [3] ತ್ಕಲ (ಕ) [4] ಯಪ್ಪರಾವಗವ (ಬ)
[5] ರೇ (ಕ).

ಬಾರಿಸಿ ಚಾಮರಾದಿಗಳನಿಕ್ಕಿದ ಗದ್ದುಗೆಯೊಳ್ ಮಹಾಪ್ರತೀ
ಹಾರರ ಪೇಟಿಕ್ಕಯಿಂದೆಳಸಿ ಮತ್ತ[1]ವರಂ[1] ಪೆಸಗೊಂಡು ಪೋಗವೇ
ಟ್ಟಾರವಕೇಳ್ವ ಮನ್ನೆಯರ ಮಂಡಳಿಕರ್ಕಳ ಭೂಷಣಾಂಶು ವಿ
ಸ್ತಾರದಿನೆತ್ತಲುಂ ಪರಿವಿನಂ ಪರೆಗುಂ ನೃಪಧೀರನೋಲಗಂ ೨೪

[2]ನಿ[2]ನಗೆ ಶುಭಮೆಂದ ವಂದಿಯ
ಮನೆಯಂಗಣದಲ್ಲಿ ಪಣ್ತು ಪರ್ವಿದ ಮಂದಾ
ರ ನಮೇರು ಪಾರಿಜಾತದ
ಬನದೊಳ್ [3]ಸಿರಿ ಮೆಚ್ಚಿವಳಲ್ಲಿ[3] ವನಕೇಳಿಗಳಂ ೨೫
(ಯಶೋಧರಚರಿತ್ರೆ ೩-೨)

ಓರಂತೆ ಮೆಚ್ಚಿದಂ ಕೃತಿ
ಸಾರಂ ನೃಪವಿಜಯರಾಜ್ಯಪುಳಕಂ ಶುಭದಾ
ಕಾರಂ ಹೊಯ್ಸಳವಂಶೋ
ದ್ಧಾರಂ ಛಲದಂಕರಾಮ ಸೋಮನೃಪಾಲಂ ೨೬

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧ ಸಾರೋದ್ಧಾರಮುಮ
ಪ್ಪಾದತ ಸ್ಥಳವರ್ಣನ ಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮ ಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ನಾಯಕಾಭ್ಯುದಯವರ್ಣನಂ ಪಂಚಮಾಶ್ವಾಸಂ ಸಂಪೂರ್ಣಂ

---

[1] ಮವರ್ (ಕ) [2] ತ (ಕಖಬ) [3] ಚಿರ ಮೆಚ್ಚಿವರಲ್ಲಿ (ಕಖಬ)

# ವಿವಾಹವರ್ಣನಂ

ಪಸೆ ಪಂದಲ್ ದಟ್ಟೆ ಜಾಗಂ ಜಗಲಿ ಬಿಗಿದ ಭೃಂಗಾರಿ ಮೇಲ್ಕಟ್ಟು ಚಿತ್ರಂ
ಪೊಸಕುಂಭಂ ಶಂಕು ನೂಲ್ಮೆರಣೆ ತಳಿಗರ್ಗಳಸಂ ಸರ್ವಧಾನ್ಯಂ ಮೊಸರ್ ಭ
ಕ್ಷ್ಯಸಹಸ್ರಂ ಲಾಜೆ ಹೋಮಂ ಪಱೆ ಕಡೆ ಗುಡಿ ಪೂದೋರಣಂ ಬಾಸಿಗಂ ಸೇ
ಸೆ ಸಮಸ್ತಸ್ತ್ರೀಜನಂ ಕನ್ನಡಿಜವಳಿಗಳುದ್ವಾಹದೊಳ್ ವರ್ಣನೀಯಂ ೧

ಅಮರೇಂದ್ರಂಗಮರೀಮಹತ್ತರಿಯರಿಂ [1]ಪೇಟ್ವಿಲ್ಲಿ[1] ವೈವಾಹಿಕೋ
ದ್ಯಮಮಂ ತಾಂ ಮಯವಿಶ್ವಕರ್ಮಸಹಿತಂ ದೇವೇಶನಿಂದ್ರಾಣಿ ದಿ
ವ್ಯಮನೋಹಾರಿಣಿಯರ್ ಸಮಂತು ಬರೆ ಬಂದೊಡ್ಡೈಸಿದಂ ನೇತ್ರಹಾ
[2]ರಮನಃ[2]ಕೌತುಕಮಪ್ಪಿನಂ ಜಗತಿ ಜಾತೋದ್ವಾಹಮಂ ಗೇಹಮಂ ೨

(ಅನಂತನಾಥಪುರಾಣಂ ೬-೩೭)

ಕಡುಚೆಲ್ವಿನ ಮಂಟಪಮಂ
ನಡೆ ನೋಡಲ್ ಬಂದು ಬಾಗಿಲೊಳ್ ಪುತ್ಥಳಿಯುಂ
ಪಡಿಯ[3]ಱತಿಯರೆಂ[3]ದರೆಬರ್
ನುಡಿಯಿಪೆ ನುಡಿಯದೊಡೆ ನಾಣ್ಚಿ [4]ನೆ[4]ಲನಂ ನೋಟ್ಪರ್ ೩

(ಅನಂತನಾಥಪುರಾಣಂ ೬-೪೨)

ಎಱಕೆ ಮರಲ್ದು ಗೋಣ್ಮುರಿದು ಚಂಚುಪುಟಂ ತೆಱದಳ್ಳೈವಾಱ ಬಂ
ದೆಱಗುವುದಲ್ಲಿ [5]ಚಂಚುಲೊವೆಯೊಳ್ ಕಡೆಯಿಕ್ಕಿದ ಪಚ್ಚೆ[5] ಸಾರಮಂ
ಕಿಱುಮಿಡಿಗಿತ್ತು [6]ಸಾರಿ ಕಿಟಕಾರಿಯ[6] ಮಾಣಿಕವಟ್ಟೆಯಂ ಪಿಕಂ
ಕಿಱುದಳಿರ್ಗೆತ್ತು ಲಂಬಳದ ಮುತ್ತುಗಳಂ ಮಱಿಗೆತ್ತು ಚಾತಕಂ ೪

(ಅನಂತನಾಥಪುರಾಣಂ ೬-೪೩)

ನೀಲಾಬದ್ಧಸ್ಥಳೀಕಂ ಮರಕತಜಗತೀಮಂಡನಂ ಸ್ಫಾಟಿಕಸ್ತಂ
ಭಾಲಂಬಂ ಚಾರುಚಾಮೀಕರಮಯರುಚಿಮದ್ಭಿತ್ತಿ ವೈಡೂರ್ಯ ನಿರ್ಯೂ

---

[1] ಪೇಟ್ಬಿಟ್ಟೆ (ಅ) ಕೇಳ್ವಲ್ಲಿ (ಖಬ) [2] ರಮನಂ (ಬ) [3] ರರೆಂದ (ಖಬ) [4] ಕೆ (ಕಬ) [5] ಚಂಚುಗಳ ಲೋವೆಗಳೊಳ್ ಕಡೆಯಿಕ್ಕಿ (ಅ) [6] ಸಾರಿಕೆಟಕಾರಿಯು (ಅ)

ಹಾಲೀಢಂ ವ್ಯಕ್ತಮುಕ್ತಾಘಟಿತಪಟಳಸಂಪರ್ಕಕರ್ಕೇತನದ್ವಾ
ರಾಲಂಕಾರಂಗಳಿಂ ಕಣ್ಗೆಸೆವುದನುಪಮಂ ತತ್ಕೃತೋದ್ವಾಹಗೇಹಂ ೫
(ಚಂದ್ರಪ್ರಭಪುರಾಣಂ ೬-೪೪)

ಅದಱ ನವರತ್ನಕೂಟಾ
ಗ್ರದಿನುಣ್ಮುವ ಬೆರಕೆವೆಳಗು ತುಂಗಧ್ವಜಚಿ
ಹ್ನದ ಕಡೆಗಡೆಯೊಳ್ ಕಣ್ಗೆಸೆ
ದುದು ಸಾರಾವಳಿಯ ವಿಳಸವಿಕ್ಕಿದ ತೆಱದಿಂ ೬
(ಚಂದ್ರಪ್ರಭಪುರಾಣಂ ೬-೪೫)

ದಿಟ್ಟಿಗೆವರೆ ಬಂಧವಿಧಂ
ಕಟ್ಟಿದ ಪಲತೆಱದ ಮಣಿಯ ಸೂಸಕದ ನೆಱಲ್
ಕುಟ್ಟಿಮತಲದೊಳ್ ಪೊಳೆದಿಡೆ
ಗೊಟ್ಟೆತ್ತಲ್ಲಲ್ಲಿ ಬಣ್ಣವುರಮಂ ತೀವಲ್ ೭
(ಚಂದ್ರಪ್ರಭಪುರಾಣಂ ೬-೪೬)

ಸುೞಿಂವೆಳವೆಂಡಿರ ಕಡೆಗ
ಣ್ಬೞಿಯಂ ಪಸರಿಸುವ ಬೆಳಗು ಬೆಳದಿಂಗಳ ಪೊಂ
ಪುೞಿಯೆಂದು ಸು[1]ರಿವುವ[1]ದಱಿತೊಳ್
ಮಱೆಯಿಲ್ಲದೆಯುಂ ಪ್ರಣಾಳಶಶಿಕಾಂತಂಗಳ್ ೮
(ಚಂದ್ರಪ್ರಭಪುರಾಣಂ ೬-೪೭)

ಸಿರಿಸದ ಮಾಲೆಯೆಂದೆಸೆವ ದಾಡಿಮಬೀಜಸಮಾಜವೆಂದು ಸೌಂ
ದರಬಿಸಕಾಂಡವೆಂದು ನಲವಿಂದಳಿಯುಂ ಗಿಳಿಯುಂ ಮರಾಳಮುಂ
ಪರಿಮುರಿಯಾಡಿ ವಾಸಿಸವೆ ಪೀರವೆ [2]ಕಚ್ಚದೆ[2] ಮಾಣ್ದು ಪಜ್ಜೆಯೊ
ಳ್ಪರಲ ತೊಳಪ್ಪ ಮಾಣಿಕದ ಮುತ್ತಿನ ಲಂಬಣ[3]ಮಿಲ್ಲದೆಲ್ಲಿಯುಂ[3] ೯
(ಚಂದ್ರಪ್ರಭಪುರಾಣಂ ೬-೪೮)

ಅದಱ ವಿತಾನಚೀನರಸಚಿತ್ರಕದಂಬಕಮಿಂದ್ರನೀಲರ
ತ್ನದ ನೆಲಗಟ್ಟಿನೊಳ್ ಮಿಱುಗು ಮಾರ್ಪೊಳೆಯುತ್ತಿರೆ ಕಂಡು ಕುಂತಳಂ
ಕೆದಱಿ ಕುಚಂ ಕದಕ್ಕದಿಸೆ ಕೆತ್ತೆ ನಿತಂಬಮಿದೊಂದು ಧೂಳಿಚಿ
ತ್ರದ ಕಣಮೆಂದು ಮೆಯ್ಯುಲಿಪೆ ಧಿಂಕಿಡುವರ್ ಕಡೆಯೊಳ್ ಲತಾಂಗಿಯರ್ ೧೦
(ಅನಂತನಾಥಪುರಾಣಂ ೬-೪೪)

1 ಛಿಪರ (ಕಬ) 2 ನಿಜ್ಜದೆ (ಅ) 3 ವೆತ್ತ ಸೋಲೞ್ದಪ್ಪುಡಂ (ಕ)

ಕಳಶದ ಮೇಲೆ ಕನ್ನಡಿ ತಗುಳ್ಚಿ ಕೆಲಂಬಿಡಿದಿರ್ದ ವೇದಿಕಾ
ವಿಳಸಿತ ಮಂಟಪಂ ಸ್ಫಟಿಕಭಿತ್ತಿಯೊಳಚ್ಚಿಱಿದಂತೆ ತೋಱೆ ಪೊಂ
ಗಳಸದ ಬಾಯ್ಗೆ ತಂದು ತಳಿರಂ ಮಣಿವೇದಿಕೆ[1]ಗೆತ್ತು ಭಿತ್ತಿಯಂ[1]
ಬಳಸೆ ಮಹತ್ತರಾಮರಿಯರಂ ನಗಿಪರ್ ಕೆಲರಲ್ಲಿ ಮುಗ್ಧೆಯರ್ ೧೧
(ಅನಂತನಾಥಪುರಾಣಂ ೬-೪೫)

ವಿವಹನದುತ್ಸವಕ್ಕೆ ನೆಲೆಯಾದುದಿದೆಂಬನಿತಲ್ತು ಕಾಮನು
ತ್ಸವಕೆ ವಸಂತನುತ್ಸವಕೆ ನಾಟಕದುತ್ಸವಕಾದು[2]ದಕ್ಕೆ[2] ನೋ
ಡುವೊಡೆನೆ ನಲ್ಲರೊಳ್ ನಲಿವ ಸಿಂಪಿಣಿಯಾಡುವ ನರ್ತಿಪೊಂದು ಚಿ
ತ್ರವಿಧದ ಚಿತ್ರಕಾಮಿನಿಯ[3]ರಿಂ ಪೆ[3]ಸೆದಿರ್ದು[4]ದು[4] ತಜ್ಜನಾಶ್ರಯಂ ೧೨
(ಚಂದ್ರಪ್ರಭಪುರಾಣಂ ೬-೪೯)

ಮರಕತಸೋಪಾನಚತು
ಷ್ಕರಾಜಿತಂ ಕೋಣಶೋಣ[5]ರುಚಿತಳಿತ[5]ಮನೋ
ಹರಮುತ್ತುಂಗಂ ಭಾಸುರ
ಹಿರಣ್ಮಯಂ ವಿಪುಳವೇದಿಯೆಸೆದತ್ತಾದಂ ೧೩
(ಚಂದ್ರಪ್ರಭಪುರಾಣಂ ೬-೫೦)

ಪಳುಕಿನ ಭೃಂಗಾರದ ಬೆ
ಳ್ಪಿಳಗುಂ ಜಾಗಂಗಳೆಸೆವ ಪಸುರ್ವೆಳಗುಂ ಪ್ರ
ಜ್ವಳಿಸ ಮಣಿಸ್ತಂಭದ ಕೆಂ
ಬೆಳಗುಂ ಪಸರಿಪುವು ಸುರಶರಾಸನ [6]ಶತಮಂ[6] ೧೪
(ಚಂದ್ರಪ್ರಭಪುರಾಣಂ ೬-೫೧)

ಒದವಿದ ಬೆಳ್ಪು ನೂರ್ಮಡಿಸೆ ನೂರ್ಮಡಿಕುಂ ಹರಿತಾಶ್ಮಭಿತ್ತಿ ಜಾ
[7]ಳ[7]ದ ಪಸುರಿಂದೆ ಜಾಗದ ಪಸುರ್ಪುಪಹಾರಮನೋಹರಪ್ರಸೂ
ನದ ಕ[8]ಡು[8]ವೆಳ್ಪಿನಿಂದೆ ಕಡೆಯಿಕ್ಕಿದ ಮುತ್ತಿನ ಬೆಳ್ಪು ರತ್ನದೀ
ಪದ ಬೆಳಗಿಂದೆ ಮಾಣಿಕದ ಕಂಬದ ಕೆಂಬೆಳಗಾ ನಿವಾಸದೊಳ್ ೧೫
(ಜಗನ್ನಾಥವಿಜಯಂ ೧೦-೯೪)

ಅನಿಮಿಷವಧು ಕತ್ತುರಿಗದ
ಡಿನ ಚಳಯಂಗೊಟ್ಟಳಲ್ಲಿ ಸೆಳ್ಳುಗುರ್ಗಳ ತೆ

---

1 ಗಿತ್ತು ಭಕ್ತಿಯಿಂ (ಖಬ) 2 ಡಿಚ್ಚಿ (ಖಬ) 3 ರೇನೆ (ಕಬ) 4 ದೊ (ಖಬ)
5 ಮಣಿಕಲಶ (ಅ) 6 ತತಿಯೋಲ್ (ಖಬ) 7 ಗ (ಬ) 8 ಡೆ (ಬ)

ಳ್ಪನೆ ತಿಳಿದ ಕಾಂತಿ ಕುಸುಮಿಸು
ವಿನೆಗಂ ಕಡೆಗಣ್ಣ ಕಾಂತಿ ಧವಳಿಸುವಿನೆಗಂ ೧೬
(ಅನಂತನಾಥಪುರಾಣಂ ೬–೪೬)

[1]ತಾರಗೆಗಳ ತತ್ತಿಗಳಂ[1]
ಕಾರಿರುಳೊಳ್ ಕಱತಿವ ಗಗನಲಕ್ಷ್ಮಿವೊಲೊರ್ವಳ್
ಸೌ[2]ರಾಂಗನೆ[2] ಹರಿನೀಲದ
ಕೇರೊಳ್ ಚಂದನದ ಬಿಂದುಮಾಲೆಯನಿಟ್ಟಳ್ ೧೭
(ಅನಂತನಾಥಪುರಾಣಂ ೬–೪೭)

ಮಂಗಳಕೇತುವಿರಾಜಿತ
ಮಂಗೀಕೃತನೀಲಭಾನು ತನುಸಂ ಪರಿಷ
ತ್ಸಂಗತ ಬುಧ ಗುರು ಕವಿರಾ
ಜಂ [3]ಗದಿತ ನವಗ್ರಹಂ ತದು[3]ದ್ವಾಹಗೃಹಂ ೧೮
(ಅನಂತನಾಥಪುರಾಣಂ ೬-೪೮)

ಜಾಗದ ನೆಲೆನೆಡಲಗೆಗಳ
ಜಾಗಂಗಳ ಪಸುರ್ಗಳಿಸೆಯೆ ರತ್ನದ ಕೇಗ್ರ್ಗಳ್
ಜಾಗಂಬೊಯ್ದಂತಿರೆ ಪರ
ಭಾಗಂಬಡೆದುವು ವಿವಾಹಗೇಹಾಂತರದೊಳ್ * ೧೯
(ಆದಿಪುರಾಣಂ ೪–೩೧)

ನುಡಿವ ನಡೆನೋಡುವಾಡುವ
ಪೊಡಮಡುವವುರ್ದಪ್ಪಿಕೊಳ್ವ ತಮ್ಮನಿಯರ ಕಾ
ಲ್ಪಿಡಿವಂದದ ಚಿತ್ರುದ ಪೆ
ಣ್ಬಡೆಯಿಂ ಸ್ತ್ರೀರಾಜ್ಯದಂದದಿಂ ಕರಮೆಸೆಗುಂ ೨೦
(ಆದಿಪುರಾಣಂ ೪–೩೨)

ಬೆಳಗುವ ಮಂಗಳದೀಪಾ
ವಳಿಗಳ ಬೆಳಗತ್ತಲಿತ್ತಲಜ್ಯೋತಿದವೋಲ್
ತಳತಳಿಸಿ ಬೆಳಗೆ ಬೆಳಗನೆ
ಮೊಳೆತಂತೊಪ್ಪಿದುವು ತೊಳಪ ರನ್ನದ [4]ಕೇಗ್ರ್ಗಳ್[4] ೨೧
(ಆದಿಪುರಾಣಂ ೪–೩೪)

---

[1] ತಾರಸಿಗಳ ಪಂಕ್ತಿಗಳಂ (ಕ) [2] ರಂಗದ (ಬ) [3] ಗತಿನವಗ್ರಹಸರೀತಮು (ಅ: ಗಧಿಕ........(ಕ) [4] ಬೇಗ್ರ್ಗಳ್ (ಕ) ಸೊಡರ್ಗಳ್ (ಖಬ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ

[1]ತೊಟ್ಟಿಯ ಸುತ್ತುವೆತ್ತ[1] ಪಸುರ್ವಂದಲ ಮುತ್ತಿನ ಮಂಟಪಂಗಳೊಳ್
ಕಟ್ಟಿದ ಪಚ್ಚೆದೋರಣದ ಬಾಜಿಪ ತೂರ್ಯದ ಸಂಭ್ರಮಂಗಳಿಂ
ತೊಟ್ಟಿಡೆಯಾಡುನೆಯ್ದಿಯರ ಪಾವನಮಂಗಳದೊಪ್ಪುಗೂ[2]ಡಿ[2] ನೇ
ರ್ಪಟ್ಟುದು ನೋಟಕರ್ಗೊಸಗೆಯುಬ್ಬಣಮಪ್ಪಿನಮಾ ವಿವಾಹದೊಳ್ ೨೨

ಮಿಸುಗುವ [3]ಚೌಕ[3]ದ ಮುತ್ತಿನ
ಪಸೆವಾಸಿ[4]ನ[4] ಪಟ್ಟವಳಿಯ ದುಗುಲದ ರುಚಿಗಳ್
ಪಸರಿಸೆ ಪೊಂಜಗಲಿ ವಿರಾ
ಜಿಸುತಿರ್ದುದು ಗಾಂಗತುಂಗ ಪುಳಿನಶ್ರೀವೋಲ್ ೨೩

(ಜಗನ್ನಾಥವಿಜಯಂ ೧೦_೯೫)

ಬಳ[5]ಸಿತು ಚಾಪ[5]ಲತಾವಳಿ
ಬಳಸಿದ ಬೆಳ್ಮುಗಿಲ [6]ಮುಜ್ಜಯಿದೆನೆ[6] ಬಣ್ಣವುರಂ
[7]ಬಳಸಿರ್ದೊಡೆ[7] ಸೊಗಯಿಸಿದುದು
ಪಳುಕಿನ ಪಟ್ಟವಣೆ ವೇದಿಕಾಧಿತ್ಯಕದೊಳ್ ೨೪

(ಚಂದ್ರಪ್ರಭಪುರಾಣಂ ೬_೫೨)

[8]ಮಸೆವ[8]ಟ್ಟುಜ್ವಲದರ್ಪಣಂ ಪೊಸದಳಿರ್ ಪೂಮಾಲೆ [9]ಮುಕ್ತಾ[9]ಕ್ಷತಂ
ಬಿಸಸೂತ್ರಂ ಸಿತ[10]ದೂರ್ವೆ[10] ನೂತನ [11]ಯುವ[11]ಗ್ರೈವೇಯಕಂ ತನ್ನೊಳೊ
ಪ್ಪೆ ಸಮಸ್ತೌಷಧಿ ಪಂಚರತ್ನಸಹಿತಂ ಪೂತಾಂಬುಪೂರ್ಣಂ ವಿರಾ
ಜಿಸಿದತ್ತಂ[12]ದಭಿ[12]ಶಾತಕುಂಭಮಯಕುಂಭಂ ವೇದಿಕಾಮಧ್ಯದೊಳ್ ೨೫

(ಜಗನ್ನಾಥವಿಜಯಂ ೧೦_೯೬)

ಸ್ವಸ್ತಿಕಲಕ್ಷ್ಯಲಕ್ಷಮಣಿದರ್ಪಣಮಂಡಿತಮುಲ್ಲಸತ್ಪ್ರವಾ
ಳಸ್ತಬಕಂ ಪವಿತ್ರಬಿಸಸೂತ್ರವೃತಂ ನವ[13]ಯಷ್ಟಿ[13]ಚರ್ಚಿಕಾ
ಶಸ್ತಮುಪಾತ್ತದರ್ಭರಚನಂ ನಿಖಿಲೌಷಧಿ[14]ಪುಂಜಿತಂ ಪರಿ[14]
ನ್ಯಸ್ತಕಮೊಂದು ಪೂರ್ಣಕಲಶಂ ತಳೆದತ್ತತುಳಂ ವಿಳಾಸಮಂ ೨೬

(ಚಂದ್ರಪ್ರಭಪುರಾಣಂ ೬_೫ )

---

1 ಕಟ್ಟಿಯೆ ಸುಟ್ಟುವೆತ್ತ (ಕ) ತಟ್ಟಿಯ ಸುತ್ತುವೆತ್ತ (ಖಬ) 2 ಡೆ (ಕ) 3 ಚೊಕ್ಕ (ಖದ) 4 ದ (ಖಬ) 5 ಭಿಚ್ಚಾಪ (ಅ) 6 ಮಜ್ಜುಯುವನೆ (ಬ) 7 ಗಳಬೆಳಗಿಂ (ಖಬ) 8 ಪೆಸರ್ವು (ಖ) ಮೊಸವಾ (ಬ) 9 ಶೇಷಾ (ಅ) 10 ಧೋತ್ರ (ಖಬ) 11 ವರ (ಖಬ) 12 ಚಿತ (ಅಕ) 13 ಪಿಷ್ಟ (ಅ) 14 ಪುರಿತೋಪರಿ (ಖಬ)

ಆ ವೇದೀಸ್ಥಳದೊಳ್ [1]ಹರಿದ್ವಸುವ ಪಾತ್ರಂಗಳ್ ಲಸದ್ದೂರ್ವೆಯಿಂ[1]
ತೀವಿರ್ದುಂ ನವಚಂದ್ರಕಾಂತಚಷಕಂಗಳ್ ಚಂದನಕ್ಷೋದದಿಂ
ತೀವಿರ್ದುಂ ಮಣಿಶುಕ್ತಿಗಳ್ ಪರಿಮಳತ್ಕಾಶ್ಮೀರಸಾರಾಂಬುವಿಂ
ತೀವಿರ್ದುಂ ಬರೆದಿರ್ದವೋಲೆಸೆದುದಾದಂ ವರ್ಣಸಾಮಾನ್ಯದಿಂ ೨೭

(ಚಂದ್ರಪ್ರಭಪುರಾಣಂ ೬-೫೪)

ಯವೆ ದಿವ್ಯೌಷಧಿ ಪಾರಿಜಾತಕುಸುಮಂ ಸಿದ್ಧಾರ್ಥ[2]ಮಾ[2]ದ್ರಾಕ್ಷತಂ
ಧವಳಾಬ್ಜಂ ಸಿತದೂರ್ವೆ ನೂತನ ಫಲಂ ಗೋರೋಚನಂ ಲಾಜೆ ಬ
ಣ್ಣವುರಂ ರನ್ನದ ತಣ್ಜೊಡರ್ ಮಳಯಜಂ ಕಸ್ತೂರಿ ಕಾಶ್ಮೀರಮೆಂ
ಬಿವಜುಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದಾ ಸದ್ಮದೊಳ್ ೨೮

(ಜಗನ್ನಾಥವಿಜಯಂ ೧೦-೯೮)

ಘುಸೃಣಾಭ್ಯುಕ್ಷಣವರ್ಣಪೂರ[3]ಚರಣಂ[3] ಸ್ಥಾಲಾವಳೀಮಾರ್ಜನ
ಪ್ರಸವಾಬಂಧನ ದೀ[4]ಪ್ತಿ[4]ಕೋಜ್ಜ್ವಲನ ದರ್ಭಾಗರ್ಭಶಾಲ್ಯಕ್ಷತ
ಪ್ರಸರಕ್ಷಾಲನ ತೋರಣಗ್ರಥನ ಮುಕ್ತಾಮಾಲಿಕಾಲಂಬನ
ವ್ಯಸನವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ ೨೯

(ಚಂದ್ರಪ್ರಭಪುರಾಣಂ ೬-೫೫)

ಉಗುರ್ಗೊನೆ [5]ಸೋಂಕಪಂತುಗುರಿಪೋಜೆ[5] ತರಂತರದಿಂ ಶಿರೋಜಮಂ
ನೆಗಪುವ ಭಂಗಿ ಬಿತ್ತರದಿನೊತ್ತುವ ಕೆಂದಳದೊಂದು ಲಾಘವಂ
ಸೊಗಯಿಸುತಿರ್ಪಿನಂ ಸಹಜದಿವ್ಯಸುಗಂಧದ ಕೇಶಪಾಶಮಂ
ಮೃಗಮದಗಂಧಿ ಪೂಸಿದಳುಪಾಸಿತ ಚಂಪಕಗಂಧತೈಲಮಂ ೩೦

(ಜಗನ್ನಾಥವಿಜಯಂ ೧೦-೯೯)

ಕಲಶಮನಾಗಳ್ ಘನಕುಚ
ಕಲಶದ ಮೇಲಿಟ್ಟು ನೃಪನ ಕೆಲದೊಳ್ ಕೆಲಬರ್
ಕಲಶಸ್ತನೆಯರ್ ನಿಜ ಕುಚ
ಕಲಶದ ಚೆಲ್ವಿಂಗೆ ಕಲಶವಿಟ್ಟಂತಿರ್ದರ್ ೩೧

(ಕಾದಂಬರಿ, ಪೂ ೭೨)

ಬಿಗಿದುತ್ತುಂಗಕುಚಂ ಕದಕ್ಕದಿಸೆ ಹಾರಂ ತೂಗೆ ಕಣ್ಬೆಲ್ಲಮು
ಲ್ಲಂಗೆ ಪೊನ್ನೋಲೆ ಕಪಂಪಸಸ್ಥಳಿಸೆ ಮಧ್ಯಂ ಬಳ್ಕೆ ಘರ್ಮಾಂಬು ಕೈ

---

1 ಹರಿಂದ್ರನವಧಾನ್ಯಂಗಳ್ ಸಮಿದ್ಧರ್ಭೆಯುಂ (ಕ) ಹರಿಂದ್ರ ಪದಮಂತ್ರಾಂಗಂಗಳೊಳ್ ದೂರ್ವೆಯಿಂ (ಖಬ) 2 ಸಾ (ಖಬ) 3 ಭರಣ (ಅ) 4 ಪ್ತ (ಖಬ)
5 ಯಿಂದವೂಗರಿಸುಪೋಜೆ (ಅ) ಸೋಂದೂಗುರಿಸುತೊಯ್ಯಸೆ (ಕ)

ಮಿಗೆ [1]ಕೈಕೊಂಡು[1] ಜಗಜ್ಜನೈಕವಿಭುವಂ ಯೋಷಿಜ್ಜನಂ ಮಜ್ಜನಂ
ಬುಗಿಸಿತ್ತಂದು ಸುಹೃಜ್ಜನಂ ವಿರಚಿಪನ್ನಂ ಮಂಗಳಾಚಾರಮಂ ೩೨
(ಜಗನ್ನಾಥವಿಜಯಂ ೧೦–೧೦೦)

ಮನಮನಲರ್ಚುತಿರ್ಪ ನವಪುಷ್ಪಸಮೃದ್ಧಿ ವಸಂತಚೂತನಂ
ದನ[2]ಮಲರ್ವಂತು[2] ಮಾಂಗಳಿಕ[3]ಸಾಧನಂ[3] [4]ಧವಳಪ್ರಸಾಧನಂ[4]
ತನಗಮರ್ದೊಪ್ಪೆ ತದ್ವಿಮಲಮೌಕ್ತಿಕಮಂಡನಕಾಂತಿಪೂರದಿಂ
ನೆನೆಯಿಸಿದಂ ಮುಕುಂದನಮೃತಾಬ್ಧಿಯೊಳಿಪ್ಪ ನಿಜಾದಿಮೂರ್ತಿಯಂ ೩೩
(ಜಗನ್ನಾಥವಿಜಯಂ ೧೦–೧೦೧)

ಆ ರಾಜಶೇಖರಂಗೇಂ
ರಾರಾಜಿಸಿದುದೊ ವಿಚಿತ್ರಮಣಿಗಣರಚನೋ
ದಾರಂ ಶೇಖರಮುಜ್ವಳ
ಮೇರುಶಿಖರಿಶಿಖರರತ್ನದೊಳ್ ಸರಿವರುತಂ ೩೪
(ಚಂದ್ರಪ್ರಭಪುರಾಣಂ ೬–೫೬)

ಅಗಲದೆ ನೆಲಸಿದ ಲಕ್ಷ್ಮಿಯ
ನಗೆಗಣ್ಗಳ ಬೆಳಗು ಬಳೆದು ಬೀಱಲ್ವರಿದ
ತ್ತಗಲ್ದುರದೊಳೆಂಬ ತೆಱದಿಂ
ಸೊಗಯಿಸಿದುದು ವಿಮಲ ತರಳ ತಾರಾಹಾರಂ ೩೫
(ಚಂದ್ರಪ್ರಭಪುರಾಣಂ ೬–೫೮)

ಅರಿಬಳಜಳನಿಧಿ ಮಥನೋ
ದ್ಧುರಭುಜ[5]ಮಂದರ[5]ಮನೆಯ್ದೆ ಸುತ್ತಿದ ತಾರಾ
ಪರಿಕರಮೆನೆ ವಜ್ರಾವಳಿ
ವಿರಚಿತ ಕೇಯೂರವಳಯಮೇಂ ತೊಳಗಿದುದೋ ೩೬
(ಚಂದ್ರಪ್ರಭಪುರಾಣಂ ೬–೫೯)

ಕರಟನಿಘರ್ಷಣದೆ ಮದಂ
ಜೊರೆದಾನೆಯ ಕಯ್ಯನಳಿಗಳಾವರಿಸಿದವೋಲ್
ಮರಕತಕಂಕಣಮೆಸೆದುವು
ತಿರು[6]ವೊಯ್ಲಿಂ[6] ಕರ್ಪುವೆತ್ತ ತತ್ಕರಯುಗದೊಳ್ ೩೭
(ಚಂದ್ರಪ್ರಭಪುರಾಣಂ ೬–೬೦)

---

1 ಕಣ್ಗೊಂಡು (ಖಬ) 2 ಮುಮುರ್ವಂತು (ಅ) 3 ಸಾಧನವಂ (ಕ) ಸಾಧನಮುಂ (ಬ) 4 ದಳವಪ್ಪಸಾಧನಂ (ಕ) 5 ಮಂಡನ (ಖಬ) 6 ವಾಯಿಂ (ಖಬ)

ಅರುಣತಳದ್ಯುತಿತತಿಯೆಡೆ
[1]ಪೆಜಪ್ರಗಳಿಂ[1] ಪುಣ್ಯ ಸಂಪದಿಂ ಕೆಂಬಲುಂ
ಗುರದಿನೊಗೆವರುಣರುಚಿಮಂ
ಜರಿ ತಳಿರೇೞಿಸಿದುದೆಯ್ದೆ ಕರಶಾಖೆಗಳಂ ೩೮

(ಚಂದ್ರಪ್ರಭಪುರಾಣಂ ೬-೬೧)

ಪೂಗಣೆ ಕರ್ಪುರವಿಲ್ ಮಿಳಿರ್ವ ಮಿಾಂಗುಡಿ ಮಲ್ಲಿಗೆ ಮಾವು ತೆಂಬೆಲರ್
ಕೋಗಿಲೆ ಜೊನ್ನಮಿಂದೊೞದ ಸುಣ್ಣನಿ ಸುಗ್ಗಿಯೆನಿಪ್ಪಿವೆಲ್ಲಮೊಂ
ದಾಗಿಯೆ ದರ್ಪಕಂಗೆ ಸಮನಿಪ್ಪ ಜಗಜ್ಜಯದರ್ಪಮಂ ಸಮಂ
ತಾಗಿಸಲೊಂದೆ ಸಾಲ್ಗುಮೆನಿಸಿತ್ತು ಕುಮಾರಕೃತಪ್ರಸಾಧನಂ ೩೯

(ಚಂದ್ರಪ್ರಭಪುರಾಣಂ ೬-೬೩)

ಮನಸಿಜನಂಗನಾಜನವಶೀಕರಣೌಷಧಮಂಗಜನ್ಮನಂ
ಬಿನ ಮದಶಕ್ತಿ ಮನ್ಮಥನ ಮೋಹನಯಂತ್ರಮಿದಪ್ಪುದಲ್ಲದೇ
ಯೆನಿತುವರಂ ಮನಂಗೊಳಿಸದೆಂಬಿನಮುಜ್ಜ್ವಳ ಮಂಗಳಪ್ರಸಾ
ಧನಮೆ ಮನೋಜರಾಜಜಯಸಾಧನಮಾಯ್ತು ಕೃತಪ್ರಸಾಧನಂ ೪೦

(ಆದಿಪುರಾಣಂ ೪-೪೧)

ಲಲನಾಭೂಷಣವೀಕೆ ಭೂಷಣಕೆ ಭೂಷಾಲಕ್ಷ್ಮಿಯಂ ಮಾಳ್ಪುದೀ
ಲಲಿತಾಕಾರೆಯ ರೂಢಿವೆತ್ತವಯವಂ ತತ್ಕಾರಣಂ ಭೂಷಣಂ
ಗಳಿನೀಕಾಂತೆಗೆ ಶೋಭೆಯಂ ಪಡೆವ ಮಾತಂತಿರ್ಕೆ ದಲ್ ಭೂಷ[2]ಣಂ
ಗಳಿ[2]ಗೀ ಕೋಮಲೆಯಂಗಸಂಗದೆ ನವಶ್ರೀಶೋಭೆಯಂ ಮಾಡುಗುಂ ೪೧

(ಜಗನ್ನಾಥವಿಜಯಂ ೧೦-೧೦೩)

ವಿಳಸಿತಮಪ್ಪುದೊಂದು ಪೊಳೆಪಂ ತಳೆದಿರ್ದುದನಿಂದುಲೇಖೆಯಂ
ಪೊಳಪಿಡವೇಳ್ಪುದೇ ಸಹಜಸೌಂದರರೂಪೆಯನೀ ಮೃಣಾಳಕೋ
ಮಳೆಯನದೇನಲಂಕರಿಸವೇಳ್ಪುದೆ ಮಂಗಳವರ್ಧನಾರ್ಥಮಿಾ
ಲಲನೆ[3]ಗೆನುತ್ತಲಂಕರಿಸಿದರ್[3] ವಿವಿಧಾಭರಣಪ್ರತಾನದಿಂ ೪೨

(ಜಗನ್ನಾಥವಿಜಯಂ ೧೦-೧೦೨)

ಕರುವಿಟ್ಟಂ ಕಾಮದೇವಂ ರತಿಯತಿಶಯದಿಂ ಬಣ್ಣಮಿಟ್ಟಳ್ ಬಸಂತಂ
ಬರೆದಂ ಸರ್ವಾಂಗಮಂ ಕಣ್ದೆಱೆದನೊಸೆದು ಶೀತಾಂಶು ಚೈತ್ರಾನಿಳಂ ತೀ

[1] ಪೆರಳ್ಗಳಿಂ (ಖಬ) [2] ಣಾವಳಿ (ಅ) [3] ಯನಿಂದಲಂಕರಿಸುವಂ (ಅ) ಗಿದೆಂದಲಂಕರಿಸಿದರ್ (ಖ)

ಏರೆ ಜೀವಂಬೊಯ್ದು ನಂತಲ್ಲದೊಡೆ ಸೊಗಯಿಪೀ ರೂಪವೀ ಬಣ್ಣಮೀ ಮೇ
ಯ್ಸಿರಿಯೀ ಕಣ್ಚೆಲ್ಲವೀ ಭಾವಕವೊಗೆಯದೆನಲ್ಕಾಂತೆ ಕಣ್ಗೆಡ್ಡಮಾದಳ್ ೪೩
(ಲೀಲಾವತಿ ೩–೪೭)

ಜಗಮಂ ಮಾಡಿದ ಪದ್ಮಜಂ ಪಡೆ[1]ದನಿಲ್ಲೀ[1] ಕಾಂತೆಯಂ ಮಾಡುವ
ಲ್ಲಿಗೆ [2]ಚಂದ್ರಂ[2] ಮಲಯಾನಿಳಂ ಮಲಯಜಂ ನೀರೇಜಮಿಮ್ಮಾವು ಮ
ಲ್ಲಿಗೆಯೆಂಬಿಂ[3]ತಿದನಟ್ಕಿಱಿಂದಮರ್ದಿನೊಳ್ ತಾನಟ್ಟಿಯಿಂತೊಯ್ದು[3] [4]ಮೆ
ಲ್ಲಗೆ[4] ಸಂದಂಗಜನೆಂಬಜಂ ಪಡೆದನಿಂತೀ ಕಾಂತೆಗೀ ಕಾಂತಿಯಂ ೪೪
(ಪಂಪಭಾರತಂ ೪–೭೫)

ಇದು ಸುಖದೊಂದು ಪುಂಜಮಿದು ಪುಣ್ಯದ ಪಿಂಡಮಿದಂಗಜಂಗೆ ಬಾ
ೞ್ಮ್ಮಾದಲಿದು ಚಿತ್ತಜಂಗೆ ಕುಲದೈವಮಿ[5]ದಂಗಜ[5]ಚಕ್ರವರ್ತಿಗೆ
ತ್ತಿದ ಪೊಸ[6]ಛತ್ರಮಿಂ[6]ತಿದು ಮನೋಜನ ಕೈಪಿಡಿಯೆಂದು [7]ಮಾಣ್ದಿನಾ[7]
ಸುದತಿಯ ರೂಪನಿಂ ಪೆಱತನೆಂದೊಡೆ ಚೀಃ ಕರಮೆಗ್ಗನಾಗೆನೇ ೪೫
(ಆದಿಪುರಾಣಂ ೨–೭೪ ; ಕಾವ್ಯಾವಲೋಕನಂ ೧೫೯)

ವಚನದೊಳಿಲ್ಲ ಪೆರ್ಮೊಲೆಯೊಳಲ್ಲದೆ ಕರ್ಕಶವೃತ್ತಿ ವಕ್ರಿಮಂ
ಸುಚರಿತದೊಳ್ ವಿಚಾರಿಸುವೊಡಿಲ್ಲಳಕಾಳಿಯೊಳಲ್ಲದೆಲ್ಲಿಯುಂ
ವಿಚಳತೆಯಿಲ್ಲ ಚಿತ್ತದೊಳಪಾಂಗದೊಳಲ್ಲದೆ ಸಾರಸದ್ಗುಣೋ
ಪಚಯದೊಳಿಲ್ಲ ಮಾಂದ್ಯಮದು ಯಾನದೊಳಲ್ಲದೆ ತಲ್ಲತಾಂಗಿಯಾ ೪೬
(ಚಂದ್ರಪ್ರಭಪುರಾಣಂ ೧೧–೧೦೯)

ಬಂಬಲ್ನೆಱೆ ಮದನನ ನನೆ
ಯಂಬಿನ ಪೊದೆಯೆನಿಸೆ ಕಣೆಯುಮುಳವಟ್ಟರೆ ಮು
ಯ್ವಂ ಬಳಸಿದ ಮೇಲುದು ಕುಚ
ಮಂ ಬಿಗಿದಿರೆ ಗುರುನಿತಂಬೆ ದುಗುಲಮನುಟ್ಟಳ್ ೪೭
(ಜಗನ್ನಾಥವಿಜಯಂ ೧೦–೧೦೬)

ಲಲನೆಯ ಕೇಶ[8]ವ[8]ಲ್ಲಿಯಲರುಂ ತಳಿರುಂ ಪೊಳೆವಂದದಿಂದೆ ಕೋ
ಮಳನಖಕಾಂತಿಯುಂ ಮೃದುತಳದ್ಯುತಿಯುಂ ನಿಮಿರ್ವನ್ನಮೊಯ್ಯ[9]ನೊ
ಯ್ಯಲೆ[9] ತಲೆವಿಕ್ಕಿ ಕಟ್ಟಿಲೆಗಮಿಂದುಮರೀಚಿಗಮಾಯ್ತು ನಾಡೆ ಕ
ಣ್ಗಾಳವಡೆ ಮಲ್ಲಯುಪ್ಪಮೆನೆ ದೇಸೆಯ ಪೂಮುಡಿಯಂ ತೊಡರ್ಚಿದರ್ ೪೮
(ಚಂದ್ರಪ್ರಭಪುರಾಣಂ ೬–೬೪)

---

1 ದುದಿಲ್ಲೀ (ಅ) 2 ಪೊವಂ (ಕಬ) 3 ತಿವನಾಯ್ತುಕೊಯ್ದು ಮರ್ದಿನಿಂ ತನ್ನಿಚ್ಛೆಯಿಂದಂದು (ಕಖಬ) 4 ಮಲ್ಲಿಗೆ (ಖ) 5 ದುಸ್ಸರ (ಕಖಬ) 6 ವಟ್ಟಮಂ (ಅ) 7 ಕಾಣ್ಬುವೀ (ಕಖಬ) 8 ದ (ಅ) 9 ನಾಗಳೆ (ಅ)

ಮಳಯಜ ಮೃಗಮದಪಂಕಂ
ಗಳಿನಡಕಿಲ್ವೊಟ್ಟ[1]ನೊರ್ವಳಾಕೆಯ[1] ಭಾಳ
ಸ್ಥಳಿಯೊಳಳವಡಿಸಿದಳ್ ಸ್ಮರ
ಕುಳದೇವತೆ ಮಿಸುಪ ನೊಸಲ ಕಣ್ಬೊಟ್ಟಿಂದವೋಲ್ ೪೯

(ಚಂದ್ರಪ್ರಭಪುರಾಣಂ ೬–೬೫)

ಮಸೆದಸಮಾಸ್ತ್ರ[2]ನುನ್ಮದನ[2] ಬಾಣಶಲಾಕೆ ವಿಲಾಸದಿಂದಮೇ
ಱಿಸಿದಲರ್ವಿಲ್ಲನೈಕ್ಷವಧನುರ್ಲತೆ[3]ಯ[3]ರ್ಚಿಸಿ ಮೀನಕೇತುವೆ
ತ್ತಿಸಿದ ಸಮುಲ್ಲಸಜ್ಝಷಪತಾಕೆಯೆನಿಪ್ಪವೊಲಾಂತಳಾಕೆಯಾ
ಪಸವನದೊಳ್ ಜಗತ್ತ್ರಿತಯಚಿತ್ತವಿಮೋಹನಶಕ್ತಿಯೇಬಿಗ್ಗಿಯಂ ೫೦

(ಚಂದ್ರಪ್ರಭಪುರಾಣಂ ೬–೬೬)

ಕಟಿ ಕಳಕಾಂಚಿಯಿಂದೆ ಕಳಕಾಂಚಿಯುಮೀ ಕಟಿಯಿಂ ಕರಂ ಕನ
ತ್ಕಟಕದಿನೀ ಕನತ್ಕಟಕಮುಂ ಕರದಿಂ ನಿಟಿಲಂ ಲಲಾಮದಿಂ
ನಿಟಿಲದಿನಾ ಲಲಾಮಮುಮಲಂ[4]ಕೃತಿವೆತ್ತುದೆನುತ್ತೆ[4]ನೋಡಿದರ್
ಘಟಕುಚೆಯರ್ ಸಮಂ ತರತಮಾಕೆಯ ಭೂಷ್ಯವಿಭೂಷಣಂಗಳಂ ೫೧

(ಚಂದ್ರಪ್ರಭಪುರಾಣಂ ೬–೬೭)

ಬಡತನಮನಾಂ ನಡು ಕೊ
ರ್ವಡರ್ದ ಕುಚಂ ಬಿಣ್ಪನಾಳ್ದ ಜಘನಂ ಬೆಳರ್ಗೆಂ
ಪಿಡಿದಧರಮಿಂಪನಪ್ಪಿದ
ನುಡಿ ತಡೆಪಂ ತ್ತ ನಡೆ ನಿಜಂ ಕೋಮಳೆಯಾ ೫೨

(ಚಂದ್ರಪ್ರಭಪುರಾಣಂ ೬–೬೮)

ದರಹಾಸಜ್ಯೋತ್ಸ್ನೆಯಿಂ ದರ್ಪಕವಿಶದಯಶಂ ಕೊರ್ವೆ ಲಾವಣ್ಯದಿಂದಂ
ಸ್ಮರತೇಜಂ ಪೆರ್ಚೆ ಕಣ್ಗೊಂಡವಳ ಧವಳನೇತ್ರಾಂಚಲಾಲೋಕಮಾ[5]ದಂ[5]
ನೆರ[6]ಮಾದಂದಂ[6]ಗಜಂಗೀ ತ್ರಿಜಗಮುಮಿದಿರಿ[7]ಲ್ಲೆಂಬಿನಂ[7] ಪೂವಿನಂಬಂ
ತಿರುವಾಯೊಳ್ಪೂಡಿ ಪುಷ್ಪಾಯುಧನಿರೆ ಕೆಲದೊಳ್ ಲೀಲೆಯಿಂ ಬಾಲೆಯಿರ್ದಳ್ ೫೩

(ಜಗನ್ನಾಥವಿಜಯಂ ೧೦–೧೭)

ಉರದೊಳ್ ಸಂತತಮಿರ್ಪ ಲಕ್ಷ್ಮಿಯ [8]ದರ[8]ಸ್ಮೇರಪ್ರಭಾಪೂರದಂ
ತಿರೆ ಹಾರಂ ಭುಜದೊಳ್ ಜಯಾಂಗನೆಯ ಗಾಢಾ[9]ಶ್ಲೇಷ[9]ವೈಚಿತ್ರ್ಯದಂ

1 ನಿಟ್ಟರಾ (ಕಖಬ) 2 ಮನ್ಮಥನ (ಕ) ನೊಪ್ಪವಸಿ (ಖಬ) 3 ಬ (ಅ)
4 ಕರಿಸಿರ್ದುವೆನುತ್ತೆ (ಅ) 5 ತ್ರಂ (ಅ) 6 ನಾದತ್ತಂ (ಅ) 7 ಟ್ಟೆಂಬಿನವೋಲ್ (ಖ) 8 ಮುಖ (ಅ) 9 ಶ್ಲಿಷ್ಟ (ಅ)

ತಿರೆ ಕೇಯೂರಕಮಾಸ್ಯದೊಳ್ ನಲಿವ ವಾಣೀಕೇಕರಾಲೋಕದಂ
ತಿರೆ ಕರ್ಣಾಭರಣಂ ಬೆಡಂಗ[1]ಡ[1]ರ್ದು[2]ದಾ ಕಲ್ಪಂ[2] ಜಗನ್ನಾಥನಾ ೫೪
(ಅನಂತನಾಥಪುರಾಣಂ ೬–೪೯)

ಎಳವೆಱೆಯಂ ಶ್ರೀಕಂಠಂ
ತಳೆದಂತಿರೆ ಭಾಳಪಟ್ಟದೊಳ್ ಕಣ್ಗೆಸೆದಂ
ಮಳಯಜವಿಲಿಪ್ತಗಾತ್ರಂ
ತೊಳಗುವ ಬಾಸಿಗಮನಾಂತು ವರ ನರಸಿಂಹಂ ೫೫

ಪದೆದೊದವ ವೀರಸಿರಿಯ
ಪ್ಪಿದ ತೋಳ್ಸತ್ತೆನಿಪ ರನ್ನವಟ್ಟೆಯ ರುಕ್ಪಂ
ಜದ ಮಂಜರಿವೊಲ್ ರಂಜಿಸಿ
ದುದು ಪೊನ್ನಾಯುಗದ ಪೊನ್ನಬಜ್ಜರಿ ಕಟೆಯೊಳ್ ೫೬
(ಅನಂತನಾಥಪುರಾಣಂ ೬–೫೦)

ಶಂಕುಶಲಾಕೆಯುಂ ಗಱೆಗೆವಟ್ಟಲುವೊಪ್ಪಿರೆ ವೇದನಾದದೊಳ್
ಸಂಕರಮಾಗಿ ಪಾಠಕಪಟುಸ್ವನಮುಂಗಳಗೀತತೂರ್ಯಘೋ
ಷಂ ಕಡಲೂರ್ಮಿಯಂತುಲಿಯೆ ನರ್ತಿಸೆ ನಾರಿಯರಾಯ್ತು ಸಾರ್ಕೆ ಲ
ಗ್ನಂ ಕರೆಯಿಂ ವಧೂವರರನೆಂದುಸಿರ್ದರ್ ಹಿತದೊಳ್ ಪುರೋಹಿತರ್ ೫೭

ನಭಮಂ ಸಂಜೆ ಮುಗಿಲ್ ಪುಗಿಲ್ವ ತೆಱದಿಂ ತಳ್ಪೊಯ್ಯೆ ಭೂಷಾಮಣಿ
ಪ್ರಭೆ ದಿಕ್ಕಕಜಮನಚ್ಚಜೊನ್ನವೆಳಸಿತ್ತೆಂಬನ್ನೆಗಂ [3]ತೀವೆ[3] ವೃ
ಕ್ಸ್ರಭೆ ಭೂಭಾಗಮನೆಯ್ದೆ [4]ಬೆಳ್ಪಮರ್ದ[4] ಪಾಂಗಿಂ ಪೆರ್ಚೆ ಪಾದೋಲ್ಲಸ
ತ್ಪ್ರಭೆ ಬಂದಳ್ ಕುಡುತುಂ ಶಶಿಪ್ರಭೆ ಜನಾಕ್ಷೀಂದೀವರಾನಂದಮಂ ೫೮
(ಚಂದ್ರಪ್ರಭಪುರಾಣಂ ೬–೬೯)

ಕುಡುವುರ್ವಿಂ ಕರ್ಬುವಿಲ್ಲಂ ಪರಪುವ ಕಡೆಗಣ್ಣಿಂ ಮನೋಜಾಸ್ತ್ರಮಂ ಸಾ
ಲಿಡುವುದ್ಯನ್ಮೇಖಲಾಕೂಜಿತದಿನತನುಕೋದಂಡಟಂಕಾರುವಂ ಕ
ನ್ನಡಿಪಂಕ್ತಿನ್ಯಾಸದಿಂ ತಾವರೆಗೆಪಱುವ ಮಂದಸ್ಮಿತದ್ಯೋತದಿಂದಿಂ
ಗಡಲಂ [5]ಮತ್ತೊಂದ[5]ನುತ್ಪಾದಿಸುವ ತೆಱದಿನಾನಂದದಿಂ ದೇವಿ ಬಂದಳ್ ೫೯
(ಜಗನ್ನಾಥವಿಜಯಂ ೧–೩೩)

---

[1] ಮ (ಅ) [2] ಚೆಲ್ವಾಳ್ಗಂ (ಖಬ) [3] ತುಂಬೆ (ಅ) [4] ಪುಳ್ಳಲರ್ದ (ಖಬ)
[5] ಬೇಱೊಂದ (ಅ)

ಉರದೊಳ್ ಹಾರಾಂಶು ಗಂಡಸ್ಥಳಿಯೊಳಮಳಕರ್ಣಾವತಂಸಾಂಶು ಮತ್ತಂ
ಶಿರದೊಳ್ ರತ್ನಾವಳೀಶೇಖರಶಿಖರಸಮು[1]ಕ್ತಾಂ[1]ಶುಗಳ್ [2]ನೃತ್ತ[2]ಮಂ ಬಿ
ತ್ತರಿಪನ್ನಂ ಸಿದ್ಧವಿದ್ಯಾಧರದಿವಿಜಕುಮಾರರ್ಕಳಂ ಚೆಲ್ವಿನಿಂ ಮಾಂ
ಕರಿಸುತ್ತುಂ ಬಂದನಾ[3]ಸಾ[3]ದಿತ ನಿರುಪಮಶೃಂಗಾರ[4]ಸಾ[4]ರಂ ಕುಮಾರಂ ೬೦

(ಚಂದ್ರಪ್ರಭಪುರಾಣಂ ೬-೭೦)

ಬಳವದ[5]ಪಾರ[5]ವೇದರುತಿಗೇಯರವಂ ಪಟಹಸ್ವನಂ [6]ಘಟೀ[6]
ಕಳಕಳದಿಂ ದಳಂಬಡೆದು ವಿಶ್ವಜಗಜ್ಜನ[7]ನರ್ತ[7]ನಾರವಂ
ಗಳಿನಿನಿಸೀಟಿಗ್ಗವೆತ್ತು ದಿಗಿಭವ್ರಜಬೃಂಹಿತಭೂರಿನಾವದಿಂ
ಬಳವಿಯನಾಂತು ಘೂರ್ಣಿಪಿನಮಾ ಗೃಹಮಂ ಪುಗುತಂದನಚ್ಯುತಂ ೬೧

(ಜಗನ್ನಾಥವಿಜಯಂ ೧೦-೧೩೧)

ಪಾಸಿದ [8]ದಣಿಂಬದುಗುರ್ಗಳ್[8]
ಕೇಸ[9]ಡಿ[9]ಗಳ ಚರಣಭೂಷಣಂಗಳ ರುಚಿಗಳ್
ಬಾಸಣಿಸೆ ಚಿತ್ರಪಟಮಂ
ಪಾಸಿದವೋಲಿರೆ ವಧೂವರರ್ ನಡೆತಂದರ್ ೬೨

(ಅನಂತನಾಥಪುರಾಣಂ ೬-೫೪)

ಪೊಂಬಟ್ಟೆಯ ಬೋರೆಯದೊಳ್
ತುಂಬಿದ ಬಿಡುಮುತ್ತಿನಕ್ಕಿಯಂ ಮೆಟ್ಟಿದರ್ಗಂ
ದೇಂ ಬಗೆವುಗಿಸಿದುದೋ ಹೇ
ಮಾಂಬುಜದ ಮರಾಳಮಿಥುನಮಂ ತನ್ಮಿಥುನಂ ೬೩

(ಅನಂತನಾಥಪುರಾಣಂ ೬-೫೫)

ಕಿವಿವೇಟಮನಿ[10]ಱು[10]ಸುತ್ತಿರೆ
ನವವರನಂ ನೋ[11]ಡುವಪ್ಪು[11]ವುತ್ಕಳಿಕೆಯಿನೇಂ
ಯುವತಿಯ ಕಣ್ಣುಂ ಮನಮುಂ
ಜವನಿಕೆಯುಂ ಕನ್ನಮಿಕ್ಕಲ[12]ಟಮುಟೆಸಿದುವೋ[12] ೬೪

(ಅನಂತನಾಥಪುರಾಣಂ ೬-೫೬)

ಜವನಿಕೆಯೋಸರಿಸುವುದುಂ
ನವವರನಂ ಕಣ್ಣ ಬೆಳಗಿನಿಂ ಮುಸುಕಿದಳಾ

---

1 ತ್ತಾ (ಅ) 2 ಮೊತ್ತ (ಅ) 3 ಪಾ (ಖಬ) 4 ಹಾ (ಕಖಬ) 5 ವಾದ (ಕಖಬ) 6 ಪುರೀ (ಅ) 7 ಕೀರ್ತ (ಅ) 8 ದಣಿಬದಪೊಗರಿನ (ಖಬ) 9 ರ (ಕ) 0 ಲಿ (ಕಖ) 11 ಲೆಯ್ದುವ (ಕಖಬ) 12 ಡಹೆಡಿಸಿದುದೊ (ಅ)

ಯುವತಿ ದೆದಪ್ಪಿದುದು ಮಾ
ಧವನೀಕ್ಷಣಕಾಂತಿಯುವಳ ಸರ್ವಾಂಗಮುಮಂ ೬೫
ತೊಲಗೆ ದುಕೂಲಕಾಂಡಪಟಮುತ್ತಮಲಗ್ನದೊಳೊರ್ವರೊರ್ವರಂ
ನಲಿದೊಲವಿಂದೆ ದಂಪತಿಗಳೀಕ್ಷಿಸೆ ನೋಟದ ಬಳ್ಳವಳ್ಳಿ ನೆ
ಯ್ದಿಲ ಮಱಿವೊಲ್ ಸುಧಾರಸದ ಸೋನೆವೊಲಂಗಜಬಾಣವೃಷ್ಟಿವೊಲ್
ಸಲೆ ನಿಲೆ ಪರ್ವಿ ಕೊರ್ವಿದುದು ಕೂಡೆ ವಿವಾಹಗೃಹಾಂತರಾಳಮಂ ೬೬
(ಜಗನ್ನಾಥವಿಜಯಂ ೧೦-೧೩೨)

ನನೆಯ ಸರಳ್ಗಳಂತೆ ನೆಱೆದಿಂಗಳ ತಣ್ಗದಿರಂತೆ ಕಂತುರಾ
ಜನ ಕರವಾಳ ಮೆಯ್ವೊಳಪಿನಂತೆ ನವೋತ್ಪಲದಾಮದಂತೆ ಪೂ
ವಿನ ಮಱಿಯಂತೆ ತುಂಬಿಗಳ ಮಾಲೆ ತೆಱಂಬೊಳೆವಂತೆ ಲೋಲಲೋ
ಚನರುಚಿ ಸುತ್ತಿ ಮುತ್ತಿದುದಶೇಷನೃಪಾಲಸಭಾಂತರಾಳಮಂ ೬೭
(ಪಂಪರಾಮಾಯಣಂ ೫-೭೦)

ಮುಗುಳಂ ಪೇೞ್ದ ಕುಂದವಲ್ಲಿಗಮ[1]ರಲ್ತಂ[1]ದಾ ಕದಂಬೋದ್ಘಶಾ
ಖಿ[2]ಗಮ[2]ಚ್ಛಾಂಬುವನಂಬುದಂ ಕಱೆವ ಪಾಂಗಿಂ ಸಾತ್ವಿಕಸ್ವೇದಬಿಂ
ದುಗೆ ರೋಮೋದ್ಗತಿಗಿರ್ಕೆಯಾದ ಸುತೆಗಂ ಜಾಮಾತೃಗಂ ಪ್ರೀತಿ ಕೈ
ಮಿಗೆ ಕೈನೀರೆಱೆದಂ ಕನತ್ಕಳಶಹಸ್ತಂ ತಜ್ಜ[3]ಯ[3]ಶ್ರೀಪ್ರಿಯಂ ೬೮
(ಚಂದ್ರಪ್ರಭಪುರಾಣಂ ೬-೭೧)

ನೆಱೆ[4]ದತ್ತಿತ್ತಾ[4]ನುಮೀ ದಂಪತಿಯ ಬಯಕೆ ಸಂಪೂರ್ಣಮಾಯ್ತುತ್ಸವಂ ಕ
ಣ್ದೆಱೆದಂತಾಯ್ತೆನ್ನ ಸಾಮ್ರಾಜ್ಯದ ಫಲಮೆನುತಂ ರಾಗಮಂ ಬೀಱಲಾದ
ಟ್ಕಱ ಪೆಂಪಂ ತೋಱಲಾಗಳ್ ಕನಕಕಳಶಮಂ ತಾನೆ ಬಂದೆತ್ತಿ ಕೈನೀ
ರೆಱೆದಂ ಶ್ರೀವಜ್ರದಂತಕ್ಷಿತಿಪತಿ ಸತತೋತ್ಸಾಹಸಂದೋಹದಿಂದಂ ೬೯
(ಆದಿಪುರಾಣಂ ೪-೪೮)

ಅೞು[5]ವುಳ ಪುರೋಹಿತ[5]ರ್ಪೇೞೆ
ಳ್ದೞಯಿಸೆ ಸಿಂಹೋದರಂಗೆ ಮಣಿಕಳಶಮನ
ಟ್ಕಱೆಯೊಳೆತ್ತಿತಂದು ಕೈನೀ
ರೆಱೆದಿತ್ತಂ ರತ್ನಮಾಲೆಯಂ ಮೇಘರಥಂ ೭೦

---

1 ಕರ್ತಂ (ಖಬ) 2 ಗೆಸ್ವ (ಖಗಬ) 3 ನ (ಅ) 4 ದಂತೆ ತಾ (ಖಬ)
5 ಕೆವುಳ್ಳಪುರೋದ (ಖ)

ನಾರಿಯರಿಕ್ಕೆ ಸೇಸೆಗಳನಾದರದಿಂದಿರದೆಯ್ದೆ ಪಾಡೆ ಶೃಂ
ಗಾರಪಯೋಧಿ ಘೂರ್ಣಿಸುವವೋಲ್ ಕುಣಿದಾಡೆ[1] ಕುಲಪ್ರಧಾನೆಯರ್
ಚಾರು ಸುವರ್ಣಕುಂಭಭೃತಮಂಗಳವಾರಿಯನೆತ್ತಿಕೊಂಡು ಕೈ
ನೀಱಿರೆದಂ ವಧೂವರ[2]ರ್ಗುದಾ[2]ತ್ತಮನಂ ವಸುಧಾಧಿನಾಯಕಂ ೭೧

ಮಾಲೆಯ ಮೇಲೆ ತುಂಬಿಗಳ ಮಾಲೆ ತೆಱಂಬೊಳೆದಾಡೆ ಬೇಱೆ ಪೂ
ಮಾಲೆಯ ಲೀಲೆಯಂ ಕೆದಱೆ ಕೇಕರಮಾಲೆ ಶಿರೀಷಮಾಲೆಯಂ
ಸೋಲಿಸಿ ನೀಳ್ದ ಬಾಹುಲತೆ ತೋಳ ಮೊದಲ್ ಮದನಾನುರಾಗಮಂ
ಸಾಲಿಡೆ [3]ಸೀತೆ ಸಾರ್ದು[3] ರಘು[4]ವಂಶನಮೇರು[4]ಗೆ ಮಾಲೆಸೂಡಿದಳ್ ೭೨

(ಪಂಪರಾಮಾಯಣಂ ೫-೯೫)

ಲೋಲಕಟಾಕ್ಷಮಾಲೆ ವನಮಾಲೆಗೆ ಚಂದ್ರಿಕೆವೀಱೆ ಕಯ್ಯ ಪೂ
ಮಾಲೆಗೆ ಭೃಂಗಮಾಲೆ ಮೊಱೆದೆಯ್ದೆ ಶಿರೀಷದ ಮಾಲೆಯಂ ಪ್ರಭಾ
ಮಾಲೆಯಿನೇಳಿಸುತ್ತಿರೆ ಭುಜಂ ನಖಮಾಲೆ ಮಯೂಖಮಾಲೆಯಂ
ಸಾಲಿಡೆ ಬಂದು ಬಾಲೆ ವನಮಾಲಿಗೆ ಮಾಲೆಯನೊಲ್ದು ಸೂಡಿದಳ್ ೭೩

(ಜಗನ್ನಾಥವಿಜಯಂ ೧೦-೮೪)

ಮುಸು[5]ಕಿದುದು[5] ದುಂದುಭಿಧ್ವನಿ
ದೆಸೆಯಂ ಮಾಂಗಲ್ಯಗೀತರುತಿ ತುಂಬಿದುದಾ
ಗಸಮಂ ಶಂಖ[6]ಧ್ವನಿ[6]ಪೂ
ರಿಸಿದುದು ತಳ್ಪೊಯ್ದು [7]ರೋದಸೀ[7]ಮಂಡಳಮಂ ೭೪

(ಚಂದ್ರಪ್ರಭಪುರಾಣಂ ೬-೭೨)

ಪ್ರಿಯತರಲವಂಗಲವಲೀ
ದ್ವಯ[8]ಕ್ಕಮೇಕೈಕ[8]ಲಲಿತಶಾಖಾಯೋಗಂ
ನಯ[9]ದಿಂ ಸಮನಿಪವೋಲಾ[9]
ಪ್ರಿಯಂಗಮಾ ಪ್ರಿಯೆಗಮಾಯ್ತು ಪಾಣಿಗ್ರಹಣಂ ೭೫

(ಚಂದ್ರಪ್ರಭಪುರಾಣಂ ೬-೭೩)

ಮೃದುಗತಿವಿಲೋಲಹಾರರ್
ಪ್ರದಕ್ಷಿಣಂ ಬಂದು ದಕ್ಷಿಣಾವರ್ತಶಿಖಾ

---

[1] ಡಿ (ಕ) [2] ರ್ಗಮಾ (ಖಬ) [3] ಸಾರ್ದು ಸೀತೆ (ಅ) [4] ವೀರನ ಮೇಲುಗೆ (ಗ) [5] ಕಿರ್ದ (ಖಬ) [6] ಸ್ವನ (ಖಗಬ) [7] ತೊಡವಿಸಿದ (ಗ) [8] ಕ್ಕೆ ಮೆಯ್ಕ್ಕೈ (ಖಬ) [9] ದೆಸದುನಿಪಪೊಲಂತಾ (ಖ)

ಸ್ಪದನಂ ಹೋಮಾನಳನಂ
ಮದುವಕ್ಕಳ್ ಮಿಸುಪ ಲಾಜೆಯಿಂ ಪೂಜಿಸಿದರ್ ೭೬
(ಜಗನ್ನಾಥವಿಜಯಂ ೧೦-೧೩೩)

ವೇದೋಕ್ತಮಂತ್ರಪೂರಿತ
[1]ವಾ[1]ದುವನಾಚಾರ್ಯನಾಜ್ಞೆಯಿಂದನಲನೊಳಂ
ದಾ ದಂಪತಿಗಳ್ ಲಾಜೆಯ
ನಾದರದಿಂ [2]ತೀರ್ದ[2]ರರುಣಕರಕಿಸಲಯದಿಂ ೭೭

ಬಲದೊ[3]ಳ್ಸುಟ್ಟಿ[3]ದೋಲೆಯದೆ
ಕೆಲಕಡರದೆ ನೀಳ್ದು ಹೊಗೆಯದೆತ್ತಂ ಹೋಮಾ
ನಲನೆಸೆದುದು [4]ಛಟಛಟ್ಟೆಂ
ಬುಲಿ[4] ಪೊಣ್ಮಿರೆ ಪಾಡಿ ಪರಸುವಂದದಿನವರಂ ೭೮

ಕೆಂದಳಿರೇಱಿದ ಮಾವಂ
ಬಂ[5]ದ[5] ವಸಂತದೊಳನಂಗನಂಗನೆಸಹಿತೆ
ಟ್ಟಿಂದು ಬಲವಂದು ಮನ್ನಿಸು
ವಂದದೆ ಬಲಗೊಂಡರಗ್ನಿಯಂ ದಂಪತಿಗಳ್ ೭೯

ಕಡುಮೇಳವುಳ್ಳವರ್ ಕಾ
ಲ್ವಿಡಿವಿಡಿಯೆನೆ ಕುವರ[6]ನೋಪಳೆಸೆ[6]ವುಂಗುಟಮಂ
ಪಿಡಿದು ನಸುನಗುತವಾಕೆಯ
ಕಡುರಾಗದೆ ಸಪ್ತಪದಿಗಳಂ ಮೆಟ್ಟಿಸಿದಂ ೮೦

ಅಣಚಿತನವಂ ಕೈಕೊಳ್ ನಿನ್ನೋಲೆಭಾಗ್ಯದ ಭದ್ರಲ
ಕ್ಷಣದ ಪದದೊಳ್ ಸಂದೀ ಸೌಭಾಗ್ಯದಿಂ ಸ್ವಜನಂಗಳಂ
ತಣಿಸಿ ಪೃಥಿವೀರಾಜ್ಯಂಗೆಯ್ಯೆಂದು ತನ್ನೃಪಪುತ್ರಿಗಾ
ಕ್ಷಣದೊಳೊಸೆದಂದೆಲ್ಲರ್ ಸೇಸಿಕ್ಕಿದರ್ ನೆರೆದೆಯ್ದಿಯರ್ ೮೧

ಕೊಂಕಿ ಕವಲ್ತು ತನ್ನನೆ ಪಳಂಚುವ ಕೇಕರ[7]ಪಾತವೆಟ್ಟಿ[7] ರೋ
ಮಾಂಕುರಮುಣ್ಮೆ ಪೊಣ್ಮುವ ಭಯಂ ನಮಿತಾನನ ಪದ್ಮರಾಗದಿಂ

[1] ವೋ (ಕಗ) [2] ಸುರಿಪ (ಖಬ) [3] ಕುಳ್ಳಿ (ಕಗ) [4] ಛಟಛಟಛಟಲಾಲಿ (ಕಗ) [5] ದು (ಖಬ) [6] ನೊಪ್ಪೆಲೆ (ಖಬ) [7] ವಾರನೇಳ್ವ (ಕ)

ದಂ ಕ[1]ರೆ[1]ಗಣ್ಮಿ ಸೂಸುವ ಬೆಮರ್ ತಲೆದೋಱುವ ಲಜ್ಜೆ ನಾಡೆ ಚೆ
ಲ್ವಂ ಕುಡೆ ನೋಡುತಂಗನೆಯನೀಕ್ಷಿಸಿದಂ [2]ನೃಪರೂಪ[2]ಮನ್ಮಥಂ ೮೧

[3]ನಸೆಯ[3]ಳಿಪಿಂ ಪ್ರಿಯಾನನಮನೀಕ್ಷಿಸ[4]ಲುಜ್ಜಗೆ[4]ಯಾಗಿ ತಾನೆ ಲ
ಜ್ಜಿಸಿ ತಲೆವಾಗಿ ಕಂಡು ಮಣಿಕುಟ್ಟಿಮದೊಳ್ ನೆೞಲ ನೋಡಿ ಮತ್ತೆ ಮಾ
ನಸದೊಳಗಿ[5]ಟ್ಟು ತನ್ನ[5]ವಸುಖಾನುಭವಕ್ಕರೆಮುಚ್ಚಿ ಕಂಗಳಂ
ಪಸರಿ[6]ಪ[6] ಹೋಮಧೂಮಹತಿಗಂದು ಶಶಿಪ್ರಭೆ ದೂಱನೇಱಿಪಳ್ ೮೨
(ಚಂದ್ರಪ್ರಭಪುರಾಣಂ ೬-೭೬)

[7]ರತಿ[7]ಯೊಡನಿಂದ್ರನೆಂತು ನೆರೆದಂ [8]ಶಚಿಯೊಳ್[8] ಸ್ಮರನೆಂತು ನಾಡೆ ಸಂ
ಗತಿವಡೆದಂ ದಲೆಂದವಳ ರೂಪುಮನಾತನ ಲೀಲೆಯಂ ಮನ
ಕ್ಕತಿಶಯಮಾಗೆ ಮತ್ತವ[9]ಳ[9] ಲೀಲೆಯನಾತನ ರೂಪುಮಂ ಜನ
ಪ್ರತತಿ ಮರಲ್ದು ನೋಡಿದುದು ನಿಂದು ವಿವಾಹಗೃ[10]ಹಾಂತರಾಳದೊಳ್[10] ೮೩
(ಚಂದ್ರಪ್ರಭಪುರಾಣಂ ೬-೭೮)

ಇಂದು ಪಯೋಜಜಂಗೆ ಕೃತಕೃತ್ಯತೆ ಸಾರ್ದುದು ಪುಷ್ಪಸಾಯಕಂ
ಗಿಂದೊಳ[11]ಸಾ[11]ರ್ದುದೇಸುವೆಸನಿಂದು ಸನಾಭಿಜನಕ್ಕೊಡರ್ಚಿತಾ
ನಂದಪರಂಪರಾಜನನಮಿಂದು ಫಲಂ ಪೊಸಜವ್ವನಕ್ಕಮಾ
ಯ್ತಿಂದು [12]ಸು[12]ರೂಪವೃತ್ತಿ ದೊರೆವೆತ್ತುದು ನಾಡೆಯುಮೆಂದು ನೋಡಿದರ್ ೮೪
(ಚಂದ್ರಪ್ರಭಪುರಾಣಂ ೬-೭೯)

ಹಿತನುತ ಮಂತ್ರಿ ಮಂಡಳಿಕ ಮಿತ್ರ ಪುರೋಹಿತ ದಂಡನಾಯಕಾ
ನ್ವಿತ ನಗರಪ್ರಧಾನವನಿತಾನಿಕರಕ್ಕೆ ಸುವರ್ಣಭಾಜನ
ಪ್ರತತಿಗಳೊಳ್ ಕನನ್ಮಣಿಯ ಪೊಂಗಳ ಕೇಳಿಯ ಬಾಯಿನಂಗಳಂ
ಸುತೆಯ ವಿವಾಹದುತ್ಸವದೊಳಿತ್ತುದು ತನ್ನರಪಾಂಗನಾಜನಂ ೮೫

ವಿದಳಿತ ಪುಷ್ಪಮಾಲಿಕೆಗಳಿಂ ಮಲಯೋದ್ಭವದಿಂ ತೊಳಪ್ಪ ರ
ನ್ನದ ತೊಡವಿಂದಳಂಕರಿಸಿ ಕಾಂಚನ ಭಾಜನದಿಂ[13]ದೆ[13] ಪಂಚರ

---

[1] ಡೆ (ಖ) [2] ಮನುವಂಶ (ಕ,ಗ) [3] ಮಸುಪ (ಅ) [4] ಉದ್ಧೃತೆ (ಅ)
[5] ಟ್ಟೊಡಂನ (ಅ) [6] ಸಿ (ಕಖಗ) [7] ಸತಿ (ಖ) [8] ರತಿಯೊಳ್ (ಅ) [9] ನ (ಕಗ)
ರ (ಖ) [10] ಹೈಕದೇಶದೊಳ್ (ಅ) [11] ಸೋ (ಅ) [12] ಸ (ಗ) [13] ದ (ಖ)

ತ್ನದ ಘನಸಾರವಾರಿಯು ಮೃಗೋತ್ಥ[1]ಕುಳುತ್ಥದ[1] ಬಾಯಿನಂಗಳಂ
ಮುಪದೊದವಿಂಪಮಿತ್ತು ಮೆಱೆ[2]ದರ್ ನೆ[2]ಲೆವರ್ಚಿದುದಾತ್ತವೃತ್ತಿ[3]ಯಿಂ[3] ೮೬
(ಚಂದ್ರಪ್ರಭಪುರಾಣಂ ೬–೮೦)

ಆಗಳ್ ಪಾಂಚಾಲರಾಜಂ ಸುರಭಿ ತೊರೆವವೋಲ್ ಪಾರಿಜಾತದ್ರುಮಂ ಭೂ
ಭಾಗಕ್ಕೆಟ್ಟಿಂದವೋಲಕ್ಷಯನಿಧಿ ಕೆಲದೊಳ್ಪಿಂವವೋಲತ್ಯುದಾತ್ತಂ
ಚಾಗಕ್ಕಾಸಕ್ತರಾರಾರವರ್ಗಭಿಮತಮೇನೇನಳಂಕಾರಕನ್ಯಾ
ನಾಗಾ[4]ಶ್ಯಾಪ್ರರ್ಥಾಂ[4]ಬರವ್ರಾತದೊಳವನೆ ವೊಗಂ ನೋಡದೀಯುತ್ತಮಿರ್ದಂ ೮೭

ಹೃದಯದೊಳೆನ್ನವರ್ ಪೆಱ[5]ರ[5]ವರ್ ಧನಿಕರ್ ಬಡವರ್ ಸಮಂತು ಬೇ
ಡದವರಡುರ್ತು ಬೇಡಿದವರೆನ್ನದೆ ರತ್ನದ ಪೊನ್ನ ಚಿತ್ರವ
ಸ್ತ್ರದ ಪೊಸ[6]ವ[6]ಚ್ಚದೊಟ್ಟಲನೆ ಕೋಶಗೃಹಂ ಬಱಿದಾಗೆ ಕೊಟ್ಟು ಮಾ
ಣದೆ ಮಗುೞ್ದಾನೆಯಂ ಕುದುರೆಯಂ ಧರಣೀಪತಿ ಸಾಱ[7]ಬೀ[7]ಱಿದಂ ೮೮
(ಚಂದ್ರಪ್ರಭಪುರಾಣಂ ೬–೮೧)

ಆ ಪದದೊಳಿಂದುಕುಲಮಣಿ
ದೀಪನ ವಿತರಣದ ಶೌರ್ಯದಾಯತಿಯಧಿಕ ಕ
ಳಾಪಂಗಳ ನೆರೆದೋದಿದ
ರಾ ಪೂರ್ಣಮನೋರಥರ್ ನೆಗೞ್ತೆಯ ಸೂತರ್ ೮೯

ಪರಿವ ಕಟಾಕ್ಷಂಗಳನೋ
ಸರಿಸುತ್ತುಂ ನಿಮಿರ್ವ ಸುಯ್ಗಳಿಂ ಕುಸಿಯುತ್ತುಂ
[8]ಶ[8]ರಪಾಶಗಳ ನಡುವಣ
ಹರಿಣಿಯವೋಲ್ ಮನದೊಳಾಗಳಾ[9]ಕುಲೆ[9]ಯಾದಳ್ ೯೦
(ಆದಿಪುರಾಣಂ ೪–೫೦)

ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಟ್ದ ನಾಣ ಪೆಂ
ಪಿನೊಳೊಗೆತರ್ಪ ಘರ್ಮಜಲಬಿಂದುಗಳಂ ನಮಿತಾನನಾ[10]ಬ್ಜೆ[10] [11]ಬೆ
ಚ್ಚನೆ ಬಸಿಯುತ್ತಮಿಂದು[11]ಕರಸಂಕುಲವೊಯ್ಯನವುಂಕಿ ಸೋಂಕೆ ಸೋಂ
ಕಿನೊಳೊಱೆವಿಂದುಕಾಂತಮಣಿಪುತ್ರಿಕೆಯಂದದಿ[12]ನಾದವೊಪ್ಪಿದಳ್[12] ೯೧
(ಆದಿಪುರಾಣಂ ೪-೪೯)

---

[1] ಕುಲೋತ್ಥದ (ಕಗ) ಕುಲೋದ್ಧತ (ಖ) [2] ದಳ್ಬೆಲೆ (ಖ) [3] ಯುಂ (ಅ)
[4] ಶ್ವದಾಪ್ತಂ (ಖ) [5] ರಿ (ಅ) [6] ಪ್ರೋ (ಖ) [7] ತೋ (ಖ) [8] ಸ್ಮ (ಕಖ) [9] ಕನ್ನೆ (ಖ)
[10] ಬ್ಜ (ಅ) [11] ಬೆಚ್ಚನೆ ಬಸಿವಿಂದುಕಾಂತ (ಅ) [12] ನೊಪ್ಪಿ ತೋಱಿದಳ್ (ಅ)

ವರನಂ ಸೋಂಕಿದ ಲಜ್ಜಾ
ಭರದಿಂ ಮೊಗಮೆಱಗಿ ಬೆಮರೆ ಮೈ ಭಯದಿಂದು
ಬ್ಬರಿಸೆ ಪುಳಕಾಂಕುರಂ ಭಯ
ಪರುಷದಿನೊತ್ತರಿಸೆ ನೋಡಿದುವು ಕಡೆಗಣ್ಗಳ್ ೯೨

ಚಳಿಯಿಸುವಾಸನಂ ಕುಸಿದು ತುಳ್ಕುವವೋಲೊಳಪೊಕ್ಕು ಸೋಂಕಿನಿಂ
ಪೊಳೆವ ಬೆಮರ್ ನಿಜಾತ್ಮಪತಿ ನೀಡಿದ ಮಾಲೆಗೆ ಮೆಲ್ಲನಾಂತು ಸಂ
ಚಳಿಸುವ ಕೆಂದಳಂ ವರನಿನುತ್ಕರಮುಂ ಸಲಿಪಾಳಿಯರ್ಗೆ ಕ
ಣ್ಮಳಿಸಿನೊಳೀಟ್ಟಿಪೂರ್ವನೆಲೆನೆರ್ಚಿಸಲಾರ್ತುವು ನಾಣ ಗಾಡಿಯಂ ೯೩

ತನುವಂ ಪುಳಕಂ ಕಡೆಗಣ್
ಮನಮುಂ ಸಖಿಯರ್ಗೆ ದೂಱು[1]ದ[1]ಪ್ಪುವು ನಾಣಾ
ವನಿತೊಂದು ಶಕ್ತಿ[2]ಯೆನಿ[2]ತೆಂ
ದಿನಿಯನ ಸೋಂಕಿಂದಮಾಕೆಯಾಕುಲೆಯಾದಳ್ ೯೪

ಛೋಂಕನೆ ಕಂಡು ಕಾಮಿನಿ ಪುನಃಪ್ರಿಯನಂ ರತಿರಾಗವಾರ್ಧಿಯೊಳ್
ತೇಂಕಿದಳಪ್ಪಿಕೊಂಡು ಪುಳಕಾಂಕುರ ಸಂಕುಳದಿಂದೆ ನಲ್ಲನಂ
[3]ಕೂಂ[3]ಕಿದಳೆಯ್ದೆ ಘರ್ಮಜಲದಿಂದಭಿಷೇಕಮನಾಕೆ ಮಾಡಿದಳ್
ಪಂಕಜಲೋಚನಾಂಶುಗಳ ಮಾಲಿಗಳಿಂದಮೆ ಮಾಲೆಸೂಡಿದಳ್ ೯೫

ಮುಡಿಯಿಸಿದುದಕ್ಕೆ ಮೌನಂ
ಬಿಡೆ ಸೋಂಕಿದುದಕ್ಕೆ ಕಂಪನಂ [4]ಜೂಜಾಟ[4]
ಕ್ಕೊಡರಿಸಿದುದಕ್ಕೆ ಸಖಿಯರ
ಗಡಣಂ ಫಳಮಾಯ್ತು ಪತಿಗೆ ಮುಗ್ಧೇಕ್ಷಣೆಯೊಳ್ ೯೬

ಬೆರಲೊಳ್ ಮುದ್ರಿಕೆಯಂ ತೊಡರ್ಚಿಪ ಕಪೋಲಸ್ಥಾನದೊಳ್ ಪತ್ರವ
ಲ್ಲರಿಯಂ ಚಿತ್ರಿಪ ಹಾರಮಂ ಪಿಡಿಪ ನೋಟಪ್ಪಾಸ್ಯಾಂಬುಜಸ್ವೇದಮಂ
ಕರದಿಂದಂ ತೊಡೆ[5]ದೊ[5]ಯ್ಯನುಳ್ಳುಡಿಗೆಗೆ ಕಾಂಚೀದಾಮಮಂ ಸಾರ್ಚುವೊ
ಳ್ಗುರುಳಂ ನೇರ್ಪಡೆ ತಿರ್ದು[6]ತಿರ್ಪೆಡೆಗೆ[6] ಕೃಷ್ಣಂ ನಲ್ಲಳಂ ಪೊರ್ದಿದಂ ೯೭

(ಜಗನ್ನಾಥವಿಜಯಂ ೧೦–೧೩೯)

---

1 ತ್ರ (ಖ) 2 ಯಿಂ (ಖ) 3 ತೂಂ (ಕ) 4 ಜೂದಾಲ (ಖ) 5 ಪೊ (ಅ)
6 ವೀನೆವದ (ಅ)

ನುಡಿಯಿಸಿದೊಡೆ ಬಿಗಿದಿರದೊಡ
ನುಡಿ ಕರೆದೊಡೆ ಕಳಿಯ ತಡೆದಿರಿನಿಸಂ ಕುಡವೇ
ೞಿತ್ತೊಡೆ ವೀಳೆಯಮುಂ ತಡೆಯದೆ
ಕುಡೆಂದು ತದ್ವಧುಗೆ ಬುದ್ಧಿವೇ[1]ೞ್ವರ್ ಸಖಿ[1]ಯರ್ ೯೮

ಎಡೆಗುಡೆ ಸಾರ್ದು ಕೇಳಲೆಳಸುತ್ತಿರೆ ಮಾತೞ[3]ದಾಡಿ ಕೇಳಿಯೊಳ್
ತೊಡ[2]ರ್ದಿರೆ[2] ಸೋಂಕಿ ಮೆಯ್ಯನಿನಿ[3]ಸಪ್ಪೆನೆ[3] ಪಾಂಗೞಿದಪ್ಪಿ ತಾಂ ಮೊಗಂ
ಗುಡೆ ಪದವೆತ್ತು ಚುಂಬಿಸಿ ಭಯಂಗೆಯೆ ಬ[4]ಲ್ಸೆಣಸಂ[4] ಪೊದೞ್ಚಿ ನಾ
ಣ್ಗಿಡೆ ನೆರೆ[5]ದೂಢೆಯಂ[5] ಪ್ರಥಮಸಂಗಮದೊಳ್ [6]ಕುವರಂ ಮರುಳ್ಚಿದಂ[6] ೯೯

(ಚಂದ್ರಪ್ರಭಪುರಾಣಂ ೬-೮೨)

ಒಲವಿಂ ನೋಡುವ ನೋಟದಿಂ [7]ಪಡೆದು[7] ಸೋಂಕುತ್ತಿರ್ಪ ಸೋಂಕಿಂ ಮನಂ
ಗೆಲೆ ಮಾತಾಡುವ ಮಾತಿನಿಂ ಕಳೆದು ಲಜ್ಜಾಸಾಧ್ವಸೋದ್ರೇಕ[8]ಮಂ[8]
ಜಲಜಾತಾಕ್ಷನೊಳಾಕೆ [9]ಬಿಚ್ಚತಿಕೆಯಂ[9] ಮಾಡಲ್ ಬೞಿಕ್ಕಂ ಕಳಾ
ನಿಲಯಂ [10]ಕೂ[10]ಡಿದನೊಲ್ದು [11]ಚುಂಬನ[11]ಪರಿಷ್ವಂಗಪ್ರಪಂಚಂಗ[12]ಳಿಂ[12] ೧೦೦

(ಜಗನ್ನಾಥವಿಜಯಂ ೧೦-೧೪೦)

[13]ನ[13]ಸೆಪ ನಸುಲಜ್ಜೆಯಂ ಮಾ
ಣಿಸಿದುದು ಬಾಯ್ಗೊಟದಿಂಪು ಮಣಿತಮು[14]ಖಂ[14] ಮ
ೞ್ಗಿಸಿದುದು ಮೆಯ್ಸೋಂಕಿನ [15]ಪ[15]ರ
ವಶವೞಿವುವನ[16]ೞಱಿ[16] ತೊಳ್ದಿದುದು ಪೊಸ ಸು[17]ಸಿಲೊ[17]ಳ್ ೧೦೧

(ಚಂದ್ರಪ್ರಭಪುರಾಣಂ ೬-೮೩)

ಕರಕೃಷ್ಟಾಳಕಮುತ್ಪದಾರ್ಪಿತನಖಂ ನಿಷ್ಪೀಡಿತೋಷ್ಠಂ ಸಮು
ತ್ಸರಹಸ್ತಾಹತಿ ಹೂಂಕೃತಾನ್ವಿತ ಪದಾಘಾತಂ ಯದೃಚ್ಛಾವಚಃ
ಸ್ಫುರಣಂ ಸಭ್ರುಕುಟೀಕ್ಷಣಂ ದೃಢಪರಿಷ್ವಂಗಂ ವಿಮುಕ್ತಾಂಗಸಂ
ವರಣಂ ಕೈತವವೃತ್ತಮೇಂ ನೆಗೞ್ದುದೋ ಸಂಭೋಗಕೋಳಾಹಳಂ ೧೦೨

(ಜಗನ್ನಾಥವಿಜಯಂ ೧೧-೫೭)

ಸರಸೀಜಾಕ್ಷನೊಳಿತ್ತುದಾ ಸತಿಯ ಸಂಭೋಗಂ ಸನೃತ್ಯ[18]ತ್ಕು[18]ಚಂ
ಸ[19]ರ[19]ವತ್ಕಾಂಚಿ ಸಚುಂಬನಂ ಸಪರಿರಂಭಂ ಸಪ್ರಹಾರಂ ಸನಿ

---

[1] ೞ್ದರ್ಸತಿ (ಖ) [2] ದೊರ್ಱಡೆ (ಖ) [3] ತೊಪ್ಪಿಸೆ (ಅ) [4] ಲ್ತೆಣಸಂ (ಅ)
[5] ಡಾಡಿಯುಂ (ಖ) [6] ಸುಖಮಂ ಮಗುಳ್ಚಿದಳ್ (ಖ) [7] ಪಿಡಿದು (ಕಖಬ) [8] ದಿಂ (ಖ)
[9] ಪಚ್ಚಳಿಕೆಯಂ (ಖ) [10] ವಾ (ಅ) [11] ಕೂಡಿದ (ಖ) [12] ಳಂ (ಅ) [13] ಮ (ಅ)
[14] ಮಂ (ಅ) [15] ಹ (ಅ) [16] ದರೆ (ಅ) [17] ಯ್ಗ (ಖ) [18] ತ್ತ (ಖ) [19] ರು (ಅ)

ಭ್ರ್ರವಕ್ತ್ರಶ್ವಸಿತಂ ಸಲೀ[1]ನ[1]ಮತಿ ಸಸ್ನೇಹಂ ಸರೋಮೋದ್ಗಮಂ
ಸರಸಾಂಗಂ ಸನಿಮೀಲಿತಂ ಸಸಮುಪಾತಂ ಸೌಖ್ಯಸಂಪತ್ತಿ[2]ಯಂ[2] ೧೦೩

(ಜಗನ್ನಾಥವಿಜಯಂ ೧೧-೫೯)

ಚುಂಬನಮೊರ್ಮೆಗೊರ್ಮೆ [3]ಸವಿ[3]ವೆರ್ಚುವುದಪ್ಪಿರದೊರ್ಮೆಗೊರ್ಮೆ ಮು
ತ್ತಂ ಬಿ[4]ಗು[4]ವೇಱುತಿರ್ಪುದು ವಿಳಾಸದ [5]ಕೈತವಮೊ[5]ರ್ಮೆಗೊರ್ಮೆ [6]ಬೇ
ಗಂ[6] ಬಗೆಯಂ ಮರುಳ್ಚುವುದು [7]ನು[7]ಣ್ಣುಡಿಯಂ ಕಿವಿಗೊರ್ಮೆಗೊರ್ಮೆ ಸೋ
ಲಂಬಡೆಯುತ್ತಮಿರ್ಪುದವ[8]ರ್ಗಳ್ಗವ[8]ಕಾಶಮದುಂಟೆ ಬೇಟದೊಳ್ ೧೦೪

(ಚಂದ್ರಪ್ರಭಪುರಾಣಂ ೬-೮೪)

ಅವಲುಪ್ತಾಂಗವಿಲೇಪನಂ ಚ್ಯುತಲಲಾಮಂ [9]ಸ್ರಸ್ತ[9]ಮಾಲಾಳಿ ವ
ಕ್ರವತಂಸಂ ಶ್ಲಥಮೇಖಲಂ ತ್ರುಟಿತಹಾರಂ ಮುಕ್ತಮಂಜೀರಕಂ
ಪ್ರವಿಕೀರ್ಣಾಳಕವಸ್ತ್ರಬಂಧಕಬರೀ[10]ಶೃಂಗಾರ[10]ಮಾರಕ್ತನೇ
ತ್ರವಣಾಗಾಧರವಾಯ್ತು ಕಾಮಕಲಹಂ ಸತ್ರಾಜಿತಾದೇವಿಯಾ ೧೦೫

(ಜಗನ್ನಾಥವಿಜಯಂ ೧೧-೫೮)

ಅನವರತಂ ರತೋತ್ಸವದೊಳುಣ್ಮುವ ಘರ್ಮಜಲಂಗಳಿಂದೆ ಮ
ಜ್ಜನಮನತಿಪ್ರಿಯಾಧರಸುಧಾರಸಸೇವನೆಯಿಂದಮೂಟಮಂ
ಮನದೞಿಂ ಕಟಿಲ್ಚುವ ರತಾಂತಸುಖೋದಯದಿಂದೆ ನಿದ್ರೆಯಂ
ನೆನೆಯದೆ ಪೋದುವಂತವರ್ಗೆ ಚಿತ್ತಜಕೇಳಿಗಳಿಂದೆ ಪೊೞ್ತುಗಳ್ ೧೦

(ಚಂದ್ರಪ್ರಭಪುರಾಣಂ ೬-೮೫)

ಅನುದಿನಮಿಂತು ಕಾಮಸುಖದಿಂದನುರಾಗಮ[11]ನುಂಟುಮಾಡಿ ತ
ದ್ವ[11]ನಿತೆಗೆ ರಕ್ಷಣಕ್ಷಮತೆಯಿಂ[12]ದತಿಹರ್ಷಮನಿತ್ತು[12] ವಿಶ್ವಮೇ
ದಿನಿಗೆ ಮಹತ್ವದಿಂ ಜಸಮನಾಗಿಸಿ ಯಾದವಸಂಕುಳಕ್ಕೆ ಪೆಂ
ಪನು[13]ಪಮಮಾಗಿರಲ್[13]ಸುಖದಿನಿರ್ದನಚಿಂತ್ಯಬಲಂ [14]ಮುರಾಂತಕಂ[14] ೧೦೭

(ಜಗನ್ನಾಥವಿಜಯಂ ೧೦-೧೪೩)

ಪೊಡಮ[15]ಡುವ[15]ಪ್ಪಿಕೊಳ್ವ ನೆನೆಯುತ್ತಿರಿಮೆಂಬ ಸಮಸ್ತವಸ್ತುವಂ
ಕುಡುವ ಪಲರ್ಮೆಯಿಂ ಪರಸಿ ಸೇಸೆಯನಿಕ್ಕುವ ಬುದ್ಧಿವೇೞ್ವ ಕೈ

---

1 ಲ (ಅ) 2 ಯಿಂ (ಖ) 3 ತನಿ (ಅ) 4 ಸು (ಖ) 5 ಗೆಯ್ತುಮದೊ (ಅ
6 ಗಿಂಪಿಂ (ಅ) 7 ನಾ (ಕಖ) 8 ಚಕ್ಕವ (ಖಬ) 9 ವ್ಯಸ್ತ (ಕ) ತ್ರಸ್ತ (ಖ
10 ಚ್ಛನ್ನಾಂಗ (ಅ) ಶ್ವಾಸಾಂಗ್ತರ (ಖ) 11 ನಿತ್ತುರುಕ್ಮಿಣೀ (ಅ) 12 ಪತಿಹರ್ಷಮನುಂಟು
ಮಾಡಿ (ಅ) 13 ಗುಣಮಾಗಿರಲ್ (ಅ) 14 ಬಲಾನುಜಂ (ಅ) 15 ಡಲ (ಖಬ)

ಯೆಡೆ ನಿಮಗೆಂದೊಡಂಬಡಿ[1]ಪ[1] ನಲ್ಲರಗಲ್ಕೆಗೆ ಕಣ್ಣನೀರ್ಗಳಂ
[2]ಮಿ[2]ಡಿವ ಬಹುಪ್ರಕಾರಜನಸಂಕಟಮೊಪ್ಪಿದುದಾ ಪ್ರಯಾಣದೊಳ್ ೧೦೮

(ಆದಿಪುರಾಣಂ ೪-೫೭)

ಮನಮಱಿದಂಜಿ ಬೆರ್ಚಿ ಬೆಸಕೆಯ್ದ ನಿಜವಲ್ಲಭನೇನನೆಂದೊಡಂ
ಕಿನಿಸದಿರೊಂದಿದಗ್ರಮಹಿಷೀಪದದಲ್ಲಿ ಪದಸ್ಥೆಯಾಗು ನಂ
ದನರನಗಣ್ಯಪುಣ್ಯಧನರಂ ಪಡೆಯೆಂದಮರ್ದಪ್ಪಿಕೊಂಡು ತ
ತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ ೧೦೯

(ಆದಿಪುರಾಣಂ ೪-೫೬)

ಪದವಿನ್ಯಾಸದ ದೇಸೆ ಮಾರ್ಗದ ವಿಲಾಸಂ ರೂಢಿವೆತ್ತಂಗದಾ
ರದಲಂಕಾರದ ಬಂಧ ಭಾವದೆಸಕಂ ಮೆಲ್ಪಾಡಿನೊಳ್ಪಂತೆ ಕೂ
ಡಿದ ನಾನಾರಸಸಾರದಾನಮೆಸೆದತ್ತೆಂದೊಲ್ದು ಕೈಕೊಂಡು ಮೆ
ಚ್ಚಿದನಾ ಸೂಕ್ತಿಸುಧಾರ್ಣವಾಹ್ವಕೃತಿಪಾತ್ರಶ್ರೀಗೆ ಸೋಮೇಶ್ವರಂ ೧೧೦

ಓರಂತೆ ಮೆಚ್ಚಿದಂ ಕೃತಿ
ಸಾರಂ ವೈವಾಹವರ್ಣನಕ್ಕಂಗಜನಾ
ಕಾರಂ ಹೊಯ್ಸಳವಂಶೋ
ದಾರಂ ಸರ್ವಜ್ಞಚಕ್ರಿ ಸೋಮನೃಪಾಲಂ ೧೧೧

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ವಿವಾಹವರ್ಣನಂ ಷಷ್ಠಾಶ್ವಾಸಂ ಸಂಪೂರ್ಣಂ

---

[1] ಸಿ (ಕಖ)   [2] ಸಿ (ಕಖ)

# ಕುಮಾರೋದಯವರ್ಣನಂ

ತನುಭವಲಾಭ ದೌಹೃದನಿಮಿತ್ತದ ಸಂಗತಿ [1]ತಕ್ಕ[1] ನೋಂಪಿ ಮುಂ
ಗನಸು ಬಯಕ್ಕೆ [2]ಗೆಂಟುಗೆ[2] ದ್ವಗುತ್ಸವಕಾರಣಗರ್ಭಚಿಹ್ನಮೊ
ಳ್ಪಿನ ದಿವಸಂ ಶುಭೋದಯಮಿಳಾದಿಮನೋಹರಭೂತಲಕ್ಷಣಂ
ಜನನುತ ಜಾತಕರ್ಮಮೆನಿತುಂ ಸುತಶೋಭನವರ್ಣನಸ್ಥಳಂ ೧

ಪಡೆದರುದಗ್ರಮಪ್ಪ ಕುಲಮಂ ಪಡೆದಂತಿರೆ ರೂಪು ಮೂರ್ತಿಯುಂ
ಪಡೆದವರಂ ಸಮಂತು ಪಡೆದಂತು ಸಮಾನಮೆನಿಪ್ಪ ನಲ್ಮೆಯುಂ
ಪಡೆದ[3]ರಿ[3]ಳೇಶನಂ ಪಡೆವುದಿಂ ಪೆಱತಾವುದೊ ಮತ್ತೆ ಮಕ್ಕಳಂ
ಪಡೆದೊಡೆ ಸಾಲ್ಗುಮೆಂದವರೊಳಕ್ಕಱನಾಳ್ದುದು ಬಂಧುಸಂಕುಲಂ ೨

ಲಲನಾಮಂಜೀರನಾದಕ್ಕೆಳಸುವ ಕಳಹಂಸಂಗಳಂ ಕಂಡು ಜೆಂಬೆ
ನ್ನೊಳೆ ನೀಡುಂ ಪೋಪ [4]ಸುತ್ತಂ[4] ಭವನಹರಿಣಶಾಬಂಗಳೆಲ್ತಿಂಪು ಚಂದ್ರೋ
ಪಲಭಿತ್ತಿಪ್ರಾಂತದೊಳ್ ಮಾರ್ಪೊಳೆಯಲಿನಗಿಮಂ ತಂದು ನೀನೀವುದೆಂದಾ
ಗಳುಮಾದಂ ದಾದಿಗಾಯಾಸಮನೊ[5]ಡರಿ[5]ಪ ಮುಗ್ಧಾತ್ಮಜಂಗೆಂದು ತೋರ್ಕುಂ

(ಕಾದಂಬರಿ ಪೂ.ಭಾ ೩೫೮)

ಅರಿಸಿನಮಂಜೆಯುಂ ಪೂದಿಸಿ ಪೊಕ್ಕುಳನೆಣ್ಣೆಯ [6]ನೋಗಿಲೊಳ್[6] ಮರ
ಲ್ದಿರಿಸಿ ಲಲಾಟದೊಳ್ ತಿಲಕಮಂ ನೊಡರ್ಮಕ್ಕಿನೊಳಿಟ್ಟು ಮುದ್ದಿಸೀ
ವರಮೆರ[7]ಡುಣ್ಣೆ[7] ಕಣ್ಣೆಱೆಯಮರ್ಭಕನಂ ನಡೆ ನೋಡಿ ನೋಡಿ ಪಾ
ಲ್ತೊರೆದ ಕುಚಂಗಳಂ ಬಿಡದೆ ಸೂಸುವ [8]ಸ್ನೈಪೆ[8]ನಗೆಂದು ಸಾರ್ಗುಮೋ ೪

(ಮಲ್ಲಿನಾಥಪುರಾಣಂ ೩-೧೧೩)

ಬಾರೆಲೆ ತಂದೆ ಬಾರರಸ ಬಾ ಪೊರೆವಾಳ್ದನೆ ಬಾರೆನುತ್ತ ವಿ
ಸ್ತಾರಿತ ದೀರ್ಘಬಾಹುಯುಗಳಂ ಪರಮೋತ್ಸವದಿಂದಶೇಷಧಾ
ತ್ರೀರಮಣಂ ಮರಲ್ದು ಕರೆಯಲ್ ತನಯಂ ಮಣಿಭೂಷಣಾಂಶುವಿ
ಸ್ತಾರಿತನೇತ್ರನೆಂಪು ಸುಟಿಂ ದಪ್ಪನೊ ಮುಂದೆ ಸಭಾಂತರಾಳದೊಳ್ ೫

(ಕಾದಂಬರಿ ಪೂ.ಭಾ ೩೬೧)

---

1 ಕಕ್ಕೆ (ಖಬ) 2 ಗಾಂಟಗೆ (ಖಬ) 3 ವಿ (ಖಬ) 4 ಕಾಂತಾ (ಅ)
5 ದವಿ (ಕ) 6 ಸೋಂಕಿನೊಳ್ (ಖ) 7 ದೆಣ್ಣೆ (ಕ) 8 ಸುಯ್ಯೆ (ಕ)

ಪಸಿದೞುತಿರ್ಪ ಬಾಲಕನ ನಾದಮನಾಲಿಸಿ [1]ಗೇ[1]ಹಕೃತ್ಯಮಂ
ಬಿಸುಟತಿವೇಗದಿಂ ಪರಿದು ಸೋಗಿಲೊಳಡ್ಡಮಿಟ್ಟು ಚಿ
ಮ್ಮಿಸಿ ಮೊಲೆವಾಲ್ಗಳಂ ದೆಸೆಗೆ ನೋಡದೆ ವಕ್ತ್ರಮನೊಂದಿ [3]ಚೆಲ್ಲದಿಂ[3]
ಮಸಗದೆ ಸಾರ್ಚಿ ಸಾರ್ಚಿ ಮೊಲೆಯೂಡುವ ಸೈಪೆನಗೆಂದು ಸಾರ್ವುದೋ ೬

ಮದಲೇಖಾಮಂಡನಂ ಕಣ್ಗೊಳಿಸೆ ಕದಪಿನೊಳ್ ನೀಳ್ದ ಕಸ್ತೂರಿಕಾಪಂ
ಕದಿನಂಗುಲ್ಯಂಕುಶಾಕರ್ಷಣ[3]ವಿಧುರಶಿರಂ ರಾಗದಿಂದೆತ್ತಿ[3] ಕಯ್ಯಿಂ
ಕೆದಱುತ್ತುಂ ಧೂಳಿಯಂ ಪ್ರೀತಿಯನೊದವಿಪ [4]ರಾಗೋ[4]ಚ್ಚಲಡ್ಡಿಂಡಿಮಧ್ವಾ
ನದಿನೆಂದೋ ಮುಂದೆ ಮನ್ನಂದನನೆಸೆವ [5]ಗಜ[5]ಕ್ರೀಡೆ[6]ಯಿಂದಾಡುತಿರ್ಪಂ[6] ೭

(ಕಾದಂಬರಿ ಪೂ.ಭಾ ೩೫೯)

ಇನಬಿಂಬಂ ಕಣ್ಗಳುಂಬಂ ತೊಳಗಿ ಬೆಳಗೆ ಬಾಲಾತಪಂ ಸುತ್ತಲುಂ ಕಂ
ಪಿನ ಸೊಂಪಂ ಬೀಱಿ ಕಣ್ಗೆಟ್ಟಳವೆನಿಪ ನಭೋಲಕ್ಷ್ಮಿ[7]ಯಂತೆಂದು ಪುಟ್ಟ
ಲ್ಕಿನಿಯಳ್ಗ[7]. ನಂದನಂ ಕಣ್ಗೊಳಿಸುತಿರೆ ಹರಿದ್ರಾಂಬರಾಲಿಂಗಿತಾಂಗಂ
ತನಗೊಪ್ಪಲ್ಕೆಂದು ಮದ್ವಲ್ಲಭೆ ಮನಕೆ ಮಹೋತ್ಸಾಹಮಂ ಮಾಡಿದಪ್ಪಳ್ ೮

(ಕಾದಂಬರಿ ಪೂ.ಭಾ ೩೫೪)

[8]ಪನೆಗಳ್ ತಾಳ್ದಿದ[8] ಮಂದಹಾಸರುಚಿ ಮುದ್ದಂ ನಾಡೆಯುಂ ಬೀಱಿ ವ
ಕ್ಷನಯಂ ರಂಜಿತಮಾಲೆ ರಕ್ಕೆವಣಿಗಳ್ ಚೆಲ್ವಾಗೆ ವಿಸ್ತಾರಲೋ
ಚನಯುಗ್ಮಂ ಮಿಸುಗಲ್ ಮರಲ್ದೆಸೆಯೆ ತೂಗುಂದೊಟ್ಟಿಲೊಳ್ ಪಟ್ಟ ಪು
ತ್ರನ ವಕ್ತ್ರೇಂದುವನಂಜನಾಂಕಿತಮನಾನಿನ್ನೆಂದು ಪೇೞ್ ಕಾಣ್ಬೆನೋ ೯

ಮುದಮುರ್ವೀಶಂಗೆ ಹರ್ಷಂ ಸಕಲಪರಿಜನಕ್ಕುತ್ಸವಂ ಬಂಧುಗಳ್ಗ
ಭ್ಯುದಯಂ ವಂಶಕ್ಕೆ ಚಿಂತಾಭರವಖಿಳ ಸಪತ್ನೀಜನಕ್ಕುಮ್ಮಳಂ ದು
ರ್ಮದ ವೀರಾರಾತಿವರ್ಗಕ್ಕಭಿಲಷಿತಫಲಂ ವಿಶ್ವಧಾತ್ರೀಜನಕ್ಕಾ
ಡುದೆನಲ್ ಸತ್ಪುತ್ರನಂ [9]ತಾಂ[9] ಪಡೆಯದದು ವೃಥಾಯಾಸಮಾ [10]ಸ್ತ್ರೀ[10]ವಿಳಾಸಂ

(ಮಲ್ಲಿನಾಥಪುರಾಣಂ ೩.೧೦೮)

ಕುರುಳ ಮದಾಳಿಮಾಳಿಕೆಗದೇಕೊಳಗಾಗವು ಚಿನ್ನಪೂ ಮುಖಾಂ
ಬುರುಹದಿನೇಕೆ ಸೂಸದು ಲತಾಂಗಿ ವಚೋಮಕರಂದಮಂಗುಲಿ

---

1 ದೆ(ಖಬ) 2 ಚಿತ್ತದಿಂ (ಕ) 3 ಮಮರೆಶಿರಂದೂಗುತಂತೆತ್ತಿ (ಅ) 4 ಗಂಡೋ (ಅ) ಚಂಚ (ಕ) 5 ಜಗ (ಖಬ) 6 ಯೆಂಮಾಡಿದಪ್ಪಂ (ಕ) ಯೆಂದಾಡಿದಪ್ಪಂ (ಖಬ) 7 ಯೆಂಬಂತಿರುತ್ಸಂಗನಿಷಣ್ಣಂ (ಅ) 8 ನನೆಗಳ್ತಾರಿದ (ಕ) 9 ಪೊ (ಅ) 10 ಶ್ರೀ (ಅಕ)

ಸ್ಮರಶರವುಂಗುಲೀಯಮಣಿರಶ್ಮಿಗಳಿಂ ಗಱಗಟ್ಟವೇಕೆ ಪೀ
ವರಕುಚಕೋಕಮೇಕೆಳಸಲೊಲ್ಲವು [1]ಬಾಲ[1]ಮೃಣಾಳನಾಳಮಂ ೧೧

(ಅನಂತನಾಥಪುರಾಣಂ ೧೨-೫೮)

ಪದೆದಮರ್ದಪ್ಪಿಕೊಂಡು ಬಿಗಿಯಪ್ಪಿ ತನೂಜನ ಮೆಯ್ಯ ಧೂಳಿ ಪ
ತ್ತ್ರದ ನಳಿತೋಳ್ಗಳೇಕೆ ಮೊಲೆಯುಣ್ಬ ಕುಮಾರನ ಕಣ್ಣ ಕಜ್ಜಳಂ
ಪುದಿಯದುರೋಜಮೇಕೆ ಪರಿಚುಂಬಿಸೆ ಕಂದನ ಕೈ ತೊಡಂ[2]ಕಿ[2] ಸೂ
ಸದ ಕುರುಳೇಕೆ ಜೇಱ ಪೊಱಯೇಕಿವಱಂ ಕುಲವೆಣ್ಗೆ ಲೋಕದೊಳ್ ೧೨

(ಅನಂತನಾಥಪುರಾಣಂ ೧೨-೪೯)

ಮಗನಂ ತೊಟ್ಟಿಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ ಮೆ
ಲ್ಲನೆಗೆಯಿಂ ಮುದ್ದುಮೊಗಂ ತುಳುಂಕೆ ಪರಸುತ್ತುಂ ನೋಡಿ ಬಾ ದೇವ ಬಾ
ಜಗತೀವಲ್ಲಭ ಬಾರ ಮಾಣಿಕಮೆ ಬಾರೆನ್ನಾನೆಯೆಂದೆತ್ತಿ ಮೆ
ಯ್ದೆಗೆವನ್ನಂ ಮೊಲೆಯೂಡಿ ತೂಪಿಱವ ಸೈಪೇಂ ನೋನದಳ್ಗಕ್ಕುಮೇ ೧೩

(ಅನಂತನಾಥಪುರಾಣಂ ೧೨-೫೦)

ಅರಸನ ಕರತಳಲೀಲಾ
ಸರೋಜಮಂ ಬೇಡೆ ಕುಡದೊ[3]ಡೀಸಿ ಕುಡಲ್ಕಾ[3]
ತುರಿಸಿ ಪಿಡಿದೆನ್ನ ತೋಳಂ
ಬರೆತೆಗೆವ ಕುಮಾರನೆಂದು ತೊಡೆಯೇಱದಪಂ ೧೪

(ಅನಂತನಾಥಪುರಾಣಂ ೧೨-೫೧)

ಸಂಗಳಿಸಿದ ಕಿಱುಜಡೆಗಳ
ತೊಂಗಲ್ಗಳಿನೊಪ್ಪೆ [4]ಜಾನುಸಂ[4]ಕ್ರಮಣಂ ಹ
ರ್ಮ್ಯಾಂಗಣದೊಳೆಂದು ಸುೞಗುಮೊ
ಸಿಂಗದ ಮಱಯಂತಿ[5]ರೊಗೆ[5]ದು ತೋರ್ಪ ಕುಮಾರಂ ೧೫

(ಕಾದಂಬರಿ ಪೂ.ಭಾ ೩೫೭)

ತ[6]ಳ್[6]ರಡಿಯಿಡುತಂ ಕುಟ್ಟಿಮ
ತಳದೊಳ್ ಮಾರ್ಪೊಳೆಯುತಿರೆ ನಿಜಪ್ರತಿಬಿಂಬಂ
ಗಳನೀಕ್ಷಿ[7]ಸಿ ಕೌತುಕಸಂ[7]
ಚಳನಯನಂ ತನಯನೆಂದು ಬೞಸಂದಪನೋ ೧೬

(ಕಾದಂಬರಿ ಪೂ.ಭಾ ೩೬೦)

---

1 ಹಾರ (ಅ) 2 ಕೆ (ಅ) 3 ಡಿನಿಯಂಕುಡಲಾ (ಅ) ಡಿನಿಯಂಬಿಡದಾ (ಖಬ)
4 ಜಾನುಚಂ (ಅ) 5 ರೆಸೆ (ಅ) 6 ಳಿ (ಕಖಬ) 7 ಸುತಿರೆಕೌತುಕ (ಅ)

ಎಳವೆಱಿ ಬೆಳೆಯದ ಗಗನ
ಸ್ಥಳಿ ಸಸಿ ಬೆಳೆಯದ ಧರಿತ್ರಿ ಮೌಕ್ತಿಕರತ್ನಂ
ಬೆಳೆಯದ [1]ಶುಕ್ತಿಕೆ[1] ಗರ್ಭಂ
ಬೆಳೆಯದ ಬಾಲಕಿಯ [2]ಬಸಿಜನರ್ಥಕಮಲ್ತೇ[2] ೧೭
(ಮಲ್ಲಿನಾಥಪುರಾಣಂ ೩-೧೧೦)

ಪೊರೆದು ಪೊದಬ್ದಿ ಧೂಳಿವೆರಸಂಗಭವಂ ನಲಿದಾಡದಂಗಣಂ
ಪೊರಳದ ಸೋಗಿಲುಣ್ಣದ ಕುಚಂ ನಡೆ ನೋಡದ ವಕ್ತ್ರಮಬ್ಬಿಕೆಱಂ
ತೊರೆದೊಡನೆಚ್ಚು ಪಾಯ್ವ ಮೊಲೆವಾಲೊಳೆ ನಾನದ ಮೇಲುಪೆಂತುಮೊ
ಪ್ಪಿರದಿನಿತರ್ಕೆ ಮುನ್ನ ನೆಱೆ ನೋನದರೀಗಳಬಿಲ್ದಡಕ್ಕುಮೇ * ೧೮

ಮೊಗಮಂ ನೋಡುವ ಲಲ್ಲೆಗೆಯ್ವ ಮೊಲೆಯುಂಡಬ್ಬಬ್ಬ ಜಾಜೆಂಬ ಕೆ
ಮ್ಮಗೆ ಕಾಲ್ವತ್ತುವ ದೂರದಿಂ ಪರಿದು ಬಂದಪ್ಪಪ್ಪೆನುತ್ತಪ್ಪುವೊ
ಯ್ಯಗೆ ಚೆಯ್ಯಾಡುವ ಮೇಲುದಂ ಮುಸುಕಿಡುತ್ತಾಯೆಂಬ ದಾಯೆಂಬ ಮು
ದ್ದುಗಳಂ ತೋಱುವ ಚಿಣ್ಣನೊಳ್ ನಲಿವ ಪೆಣ್ಣೇಂ ನೋಂಪಿಯಂ ನೋಂತಳೋ *
(ಜಗನ್ನಾಥವಿಜಯಂ ೨-೬೭)

ಕಳಹಂಸಂ ಸುೞಿಯದ ಪೂ
ಗೊಳನಮೃತಮರೀಚಿ ಬೆಳಗದಂಬರಚಕ್ರಂ
ಕಳಭಂ ಸಂಚರಿಸದ ವನ
ವಳಯಂ ಸುತರಾಡದಂಗಣಂ ರಂಜಿಕುಮೇ * ೨೦

ಕರೆವ ಸರಮುಱಿದು ಕಣ್ಮಲ
ರರಳೆ ನಿರೀಕ್ಷಿಸುವ ಬಾಲನೆಂದಾದತ್ತೋ
ಅರಸಾರದೆಂಬ ಮುದ್ದಿಂ
ಮಱುಳಾಗದ [3]ಹೆಣ್ಣೆ[3] ಮಱುಳಿಳಾಮಂಡಲದೊಳ್ ೨೧

ಅರಸನುಮಾನುಂ ಕೈಗೊ
ಟ್ಟರೆ ದಟ್ಟಡಿಯಿಡುತೆ ಮತ್ತೆ ಮಣಿಕುಟ್ಟಿಮದೊಳ್
[4]ಬರೆ ಪಿಂದೆ ನಿಲಿಸಲೊಲ್ಲದೆ[4]
ಮುರಿದೆತ್ತಿಸಿಕೊಳ್ವ ಕಂದನೆಂದಾದಪನೋ ೨೨
(ಅನಂತನಾಥಪುರಾಣಂ ೧೨-೫೪)

---

[1] ಸೂಕ್ತಿಗೆ (ಖಬ) [2] ಬಸುಱು ವ್ಯರ್ಥಮದಲ್ತೆ (ಕಖಬ) [3] ಹೆಣ್ಣು (ಕ) [4] ಪರ
ಸದೆಸವೊಲ್ಲಿದೆನ್ನಿಂ (ಕ) ಪರಪಿದೆಸಲೊಲ್ಲದೆನ್ನಿಂ (ಖಬ) * ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ

ಉದಯಾದ್ರಿಶಿಖರದೊಳ್ ಬಾ
ಲದಿವಾಕರ[1]ನೆಂತು ಬರ್ಪನಂತಾ ಕರಿಕುಂ[1]
ಭದ ಮೇಲೆ ಬರ್ಪನಂ ಪರಿ
ದಿದಿರ್ಗೊಂಡಣುಗನನಸೆಂದು ನಿವಳಿಸಿದಪೆನೋ ೨೩
(ಅನಂತನಾಥಪುರಾಣಂ ೧೨-೫೩)

ಅಮರಿಯರಿಂದ್ರಲೋಕದ ರಸಾಯನವರ್ಗದೆ ಗರ್ಭಶೋಧನ
ಕ್ರಮಮನೊಡರ್ಚೆ ಕಾಂತಿ ಕುಸುಮಾಸ್ತ್ರನ ಸಾಯಕಲಕ್ಷ್ಮಿಯಂತೆ ಲೋ
ಕಮ[2]ನೆರ್ದೆ[2]ಗೊಳ್ವ ಚಂದ್ರಿಕೆಗೆ [3]ಕಣ್ಪಡಿ ತೋಱ್ ವೊಲ್[3] ಮೂಡಿದಂತೆ ಮ
ತ್ತಮೃತಜಲಂಗಳಿಂ ತೊಳೆದ ಮುತ್ತಿನ ಪುತ್ತಳಿಯಂತೆ ತೋಱಿದಳ್ ೨೪
(ಅನಂತನಾಥಪುರಾಣಂ ೪-೯೨)

ಪಾಯ್ವ ಕುಚಂಗಳಂ ಮಿಡಿದು ನೋಡಿ ಕಪೋಳಕಳನೆತ್ತಿ ಕಂಪನಾ
ರಯ್ವ[4]ದು[4]ಮೊತ್ತುತುಂ ಮೊಡವಿಯುಂ ಮೊಗಮಂ ಮೃಗನೇತ್ರ ದರ್ಪಣ
ಕ್ಕೊಯ್ವುದುಮಿಲ್ಲಮಂ ಕಳೆದು ಮಾಣಿಕಮಂ ಪೊಸಪೊಂಗಳಿಂದೆ ಕಯ್
ಗೆಯ್ವುದುಮಾಕೆ ಕೈಗೆ ಸೆಳೆಯಂ ಸಖಿ ಕೊಟ್ಟಳದೇಂ ಪ್ರಗಲ್ಭೆಯೋ ೨೫
(ಲೀಲಾವತಿ ೭-೫೦ ; ನೇಮಿನಾಥಪುರಾಣಂ ೨-೧೦)

ಸೊಗಯಿಸಿದತ್ತು ಕಾಮಿನಿಗೆ ಮಾಣಿಕ ಗೆಂಟಜಕೊಳುಟ್ಟ ಮೇಘವ
ಣ್ಣಿಗೆ ಪಿಡಿದಿರ್ದ ಸಣ್ಣ ಸೆಳೆ ವಾಸಿದ ಕುಂತಳಮಾಲೆ ಮೊಕ್ಕಳಂ
ಬಿಗಿದ ಘನಸ್ತನಂ ತಿಮಿರ್ದ ಕುಂಕುಮಮಿಕ್ಕಿದ ತೆಂಗಿನೋಲೆ ಕೆಂ
ಪೊಗೆದಲರ್ಗಣ್ಗಳಾಗುಳಿಪ ಮೂರಿ ತಗುಳ್ಚಿದ ಭೂರಿಕಂಕಣಂ ೨೬

ಕರೆದುದು ಕಣ್ಣ ಜೆಳ್ಪನಧರಂ ಕುರುಳೋಳಿಗೆ ಸುರ್ಕಿನೋಲಗಂ
ಪರೆದುದು ಜೆನ್ನಮೇಲೆ ಮುಡಿ ಬಿರ್ದಿನನಾದುದು ನೀಳ್ದ ಕಣ್ಗಳೊಳ್
ಪೊರೆದುದು ಸಾಂಧ್ಯರಾಗರುಚಿ ಕಾಮಿನಿ ಮಾವೆಡೆಯೊಳ್ ತೆರಳ್ದ ನಿ
ರ್ಭರವೆಡವಿತ್ತು ಬಾಸ್ಪಿರೆ ಕುಚಂ ವಳಿಯಿಂಬೆಡೆಯೊಳ್ ನಿರಂತರಂ ೨೭

ಎಳೆಮಿಂಚಿಂಗೊಪ್ಪವಿಟ್ಟಂತಮರ್ದಿನ ಕಳೆ ರೂಪಾಂತುದೆಂಬಂತೆ ಮುತ್ತಂ
ತೊಳೆದಿಟ್ಟಂತಂಗಜಾತಂ ಮಸೆದು ಪಿಡಿದ ಕೂರ್ವಾಳಿದೆಂಬಂತೆ ಥಾಳಂ
ಜೊಳೆಯುತ್ತುಂ ಸುತ್ತಲುಂ ನೋಟ್ಪಿರ ಬಗೆಗೆ ಭಯಂ ಪ್ರೋಕ್ಷ್ಯ ತಳ್ಪೊಯ್ಯಲಾ ಕೋ
ಮಳೆ [5]ಜೆಲ್ವಿಂದೊಪ್ಪಿ[5] ಬರ್ಪಂಗಜನ ಗಜ[6]ಮೆನಲ್ ಕಾಂತೆ[6] ಕಣ್ಗೆಡ್ಡಮಾದಳ್ ೨೮

1 ನಂತೆ ತೋಱ್ಪನಂಕದೊಳಿಭಕುಂ (ಅ) 2 ನೆಡೆ (ಕಖಬ) 3 ಸೋಱ್ಮುಡಿ ತೋಱ್ಪೊಲೆ (ಅ) 4 ತು (ಅ) 5 ಬಂದಪ್ಪಿ (ಕ) 6 ದವೊಲ್ ನಾಡೆ (ಖಬ)

ತನು ತನುವಾಗಿ ತೋಱುತಿರೆ ಮುತ್ತಿನ ಮೂಕುತಿ ಮುತ್ತಿನೋಲೆ ಮು
ತ್ತಿನ ತಿಸರಂ ತೆಱಂಬೊಳೆವ ಮುತ್ತಿನ ಲಂಬಳ ಪತ್ತುವೆತ್ತ ಮು
ತ್ತಿನ ನಿಗಳಂ ದುಕೂಲಮುಡೆ ಮಲ್ಲಿಗೆ ಚಂದನದಣ್ಪು ಸಿಂಹಪಾ
ಲನನೊಸೆದಾಳ್ದ ಬೆಳ್ವಸದನಂ ಬಗೆಗೊಂಡುದು ಚಂಡವೇಗೆಯಾ ೨೯

ಮಿಸುಪ ದುಕೂಲ[1]ದುಳ್ಳುಡುಗೆ ಚಂದನಕರ್ದಮ[1]ದಣ್ಪು ಮಲ್ಲಿಕಾ
ಕುಸುಮಮನಾಂತ ಕುಂತಳಭರಂ ಸುಲಿಪಲ್ಗಳ ಕಾಂತಿಯಿಂ ಬೆಳ
ರ್ತೆಸೆವಧರಂ ತಳತ್ತಳಿಪ ಮುತ್ತಿನ ಪಚ್ಚಮನಂಗಕೀರ್ತಿಯಂ
ಪಸರಿ[2]ಸೆ ಕೊಂಡ ಬೆಳ್ವಸದನಂ ಬಗೆಗೊಂಡುದು ಕೋಮಲಾಂಗಿಯಾ[2] ೩೦
(ಜಗನ್ನಾಥವಿಜಯಂ ೨-೩೧)

ಮಲಯಜದಣ್ಪು ಮಲ್ಲಿಗೆಯ ಸೋರ್ಮುಡಿ ನಿಪ್ಪ್ರಭಸತಪ್ಪ ಮೌಕ್ತಿಕಂ
[3]ಗಳ ತೊಡವುಟ್ಟ[3] ಪಟ್ಟಣಿಗೆ ದಂತಮರೀಚಿಗಳಿಂ ಬೆಳರ್ತ ಬಾಯ್
ಪಳಿಕಿನ ಪೆಣ್ಗೆ ಪಾಸಟಿಯೆನಿಪ್ಪ ವಿಲಾಸಮನೀಯೆ [4]ಬರ್ಪ[4] ಕೋ
ಮ[5]ಳೆ ವಧು ಕೊಂಡ ಬೆಳ್ವಸದನಂ ಬೆರಸೋಪನೊಳೋತು ಕೂಡಿದಳ್[5] ೩೧
(ಪಂಪರಾಮಾಯಣಂ ೩-೩೨)

ಧವಳಾಪಾಂಗಮರೀಚಿಗಳ್ ಪುದಿದುವೆಂಬನ್ನಂ ಕಪೋಲಂ ಬೆಳ
ರ್ತುವು ಭೃಂಗಾವಳಿ ಸುಯ್ಗೆ ಸಾರ್ದ ತೆಱದಿಂ ಸುಕ್ಕುಂಗುರುಳ್ಗಾಲೆ ನೀ
ಳ್ದುವು ತನ್ನೊಳ್ಗೆಲೆವೆರ್ದ ರಾಗರಸವಾಗಳ್ತೀವಿ ತಳ್ಕಂಕೆಗು
ಟ್ಟುವ ಪದ್ಮಾಕರದಂತೆ ಕಾಂತೆ ತಳೆದಳ್ ಗರ್ಭಸ್ಥಲಾವಣ್ಯಮಂ ೩೨
(ಮಲ್ಲಿನಾಥಪುರಾಣಂ ೪-೯೪)

ಕರುಮಾಡವಿಡಿದ ಕೆಲದೊಳ್
ವಿರಚಿತ ಮಣಿಕನಕಮುತ್ತನಾರಣಮಾಲಾ
ಪರಿಖಚಿತಮಪ್ಪ ಮಾಡದ
ಪಿರಿದೊಂದೆಱನೆಯ ನೆಲೆಯ ಬರದೋವರಿಯೊಳ್ ೩೩

ರತಮೆನಿತೊಳವನಿತುಂ ಗಳ
ರುತಿಯೆನಿತೊಳವನಿತುಮಿಚ್ಚೆಯೆನಿತೊಳವನಿತುಂ

[1] ಮಂ ತೆಗೆನುಡಲ್ ನವಚಂದನ (ಕ) ಚೆಲ್ಲಿಮುತೆ ಚಂದನಕರ್ದಮ (ಖ) [2] ಸಿಕೊಂಡ ಬೆಳ್ವಸದನಂ ಮತುಕಾಲದೊಳೊಂದಿ ನಲ್ಲನೊಳ್ (ಕ) [3] ತೊಳಗುವವುಟ್ಟ (ಖ) [4] ಬಾಪ್ಪ (ಖಬ) ಪುಪ್ಪ (ಅ) [5] ಳೆ ವಧುಕೊಂಡ ಬೆಳ್ವಸದನಂ ಬಗೆಗೊಂಡುದು ಕೋಮಲಾಂಗಿಯಾ (ಅ) ಳ ವಧುಗಾದ ಬೆಳ್ವಸದನಂ ಬೆರಸೋಪನೊಳೊತ್ತು ಕೂಡಿದಳ್ (ಖಬ)

ಮತಮೆನಿಸಿತೊಳವನಿತುಂ ನೀ
ತ್ಯತಮೆನಿಸಿತೊಳವನಿತುಮೊದನೆ ಕೂಡಿದರವರ್ಗಳ್ ೩೪

ಪುದಿ[1]ದುಪಧಾ[1]ನ ತಳ್ತ ರುಚಿ ಪಾಸಿನ ಬೆಳ್ಪುಗಳೊಳ್ ಪಳಂಚಿ ಪಂ
ಚದ ಕಡುಗಪ್ಪಿನೊಳ್ ಬೆರಸಿ ಮಿಂಚುವ ಸೊ[2]ಟ್ಟ[2]ದ ಸೆಜ್ಜೆಯೊಳ್ ವಿನೋ
ದದೆ ಗುಡಿಗಟ್ಟೆ ದೇವಿಯರಸೂನಜಿನಾಂಬಿಕೆ ಸೂಕ್ತಕಂ[3][ಡ][3]ಳ
ಭ್ಯುದಯಕರಂಗಳಪ್ಪ ಕನಸಂ ಪದಿನಾಱುಮನಂದು ಜ್ಯಗಿನೊಳ್ ೩೫

ಒಡೆದು ಕಟವೆರಡುಮೊಡನೊ
ಗ್ಗಡಿಸದೆ ಮದವುಣ್ಮೆ ಪೊಣ್ಮಿರಲ್ ಮಳೆ[4]ಗಳ್ ಗಂ
ಡ[4]ಡರೆ ಮುರಿದಿಂತು ಮೊಬಿಗು
ತ್ತಡಸಿರೆ ಗಜಗಮನೆ ವಿಜಯಗಜಮಂ ಕಂಡಳ್ ೩೬

ಹಣೆ[5]ವ[5]ರಡುತ್ತಮುದ್ಧರಿಸಿ ಬೆ[6]ದ್ದಣ[6]ಸುಂಗಳ ಪೊಂಗಿ ಕೋಟ್ಗಳಿಂ
ದಣೆ[7]ದಣೆಯಿಂ[7] ನೆಲಂ ಬಿರಿಪಿನಂ ಕೆಲದೀಡಿಱುಯುತ್ತಲತ್ತಲಿ
ತ್ತಣ ಬಸವಂಗಳೋಡೆ [8]ಪೊ[8]ಣರಲ್ ತೊಱೆಯಿಲ್ಲದೆ ಮತ್ತಮೆಲ್ಲಿಯುಂ
ಮಣಿಯದೆ ಮುಂದೆ ನಿಂದ ವೃಷಭೇಂದ್ರನನಿಂದುನಿಭಾಸ್ಯೆ ನೋಡಿದಳ್ ? ೩೭

ಭಂಗುರಕರಾಳದಂಷ್ಟ್ರಂ
ಪಿಂಗಳನಯನಂ ಮತಂಗಜಂಗಳ ಮಿದುಳಂ
ನುಂಗಿ ನಲಿಗೆದಱಿ ಶಿಖರಿಗೆ
ಲಂಘಿಸುತಿರೆ ಸಿಂಗಮಂ ಜಿನಾಂಬಿಕೆ ಕಂಡಳ್ ೩೮

ಸುರಚಾಪಂಗಳನಿಂದ್ರಂ
ಮುರಿದಿಟ್ಟಂತಭ್ರಪಥದೊಳಳಿಗಳ ಬಳಗಂ
ಬೆರಸೆಸೆವ ಬಣ್ಣವಾಸಿಗ
ವೆರಡಂ ಚಲದಮಲಕಮಳಲೋಚನೆ ಕಂಡಳ್ ೩೯

ಪಿಂಗೆ ತೆರಳ್ದು ತೂಳ್ದು ಕಡುಗಿತ್ತಲೆ ಪಾ[9]ಲ್ಗೊಬಿತ[9]ಯುಂತೆ ಮತ್ತೆ ಬೆ
ಳ್ದಿಂಗಳಲರ್ಚೆ [10]ಪೆರ್ಜೆ[10] ಮಕರಾಕರಮಾಲೆಯ ತಾರಕಾಳಿ ತೇ
ಜಂಗಿಡೆ ನೆಯ್ದಿಲೆಯ್ದೆ ಬಿರಿಯುತ್ತಿರೆ [11]ಮೂಡಿ[11] ಜಲಕ್ಕನಾದುದಂ
ತಿಂಗಳನೊಂದೆ ಪಾಂಗಿನೊಳೆ [12]ಬೆ[12]ಚ್ಚೆ ಬೆಡಂಗಿ ಕಡಂಗಿ ನೋಡಿದಳ್ ೪೦

---

1 ದಪದಾ (ಖಬ) 2 ಜ್ಜ (ಖಬ) 3 ಗ (ಖಬ) 4 ವಳಿಗಳ್ಗ (ಖಬ) 5 ಡೆ (ಖಬ) 6 ದ್ದೆನ (ಖಬ) 7 ದಿಶೆಯಂ (ಕ) 8 ಸೊ (ಕ) 9 ಳ್ಳನೆ (ಖಬ) 10 ಕೂಡೆ (ಖಬ) 11 ನೋಡೆ (ಖಬ) 12 ಮೆ (ಕ)

ಪೆಳಱಿ ತಮಮೞಿಯೆ ದನುಜರ್
ಮುಳಿಯೆ ಖಳರ್ ಮುೞುಗೆ ಮೀಂಗಳಲರೆ ಸರೋಜಂ
ಬೆಳಗೆ ಜಗಮೊಗೆದ ರವಿಯಂ
ಚಳದಳಿಕುಳಮಲಿನ ವಿಲುಳಿತಾಳಕಿ ಕಂಡಳ್ ೪೧

ಸೆಣಸಿ ಪಳಂಚಿ ಸಂಚಳಿಸಿ ಮುಂಚಿ ತೆಱಂಬೊಳೆದೊಂದನೊಂದ ಸಂ
ದಣಿಸಿ ಪಲರ್ಮೆಯಿಂ ಕರ್ದುಕಿ ಭೋಂಕನೆ ಸೋಂಕಿ [1]ಚ[1]ಲಂಕಿ ಬಿಂಕದಿಂ
ಮಣಿದು ಕಲಂಕಿ ತೇಂಕಿ ಪೊನಲೊಳ್ ಪರಿದಾಡುವ ತನ್ನ ನೀಳ್ದ ಕ
ಣ್ಬೊಣರ್ಗೆಣೆಯಪ್ಪ ಮೀಂಬೊಣರನಂಬುಜಲೋಚನೆ ಕೂರ್ತು ನೋಡಿದಳ್ ೪೨

ಏವೈಸಿ ತಳಿರೊಳಳಿಗಳ್
ಭಾವಿಸೆ [2]ಸೌ[2]ಸವದ ಕಂಪು ಪೊಂಪುೞಿವೋಗು
ತ್ರೋವದೆ ಮಿಕ್ಕಿರೆ ತೆಕ್ಕನೆ
ತೀವಿದ ಪೊಂಗೊಡಂಗಳಂ ಘ[3]ಟ[3]ಸ್ತನೆ ಕಂಡಳ್ ೪೩

ಕರಿಪತಿಗಳ್ ಕಲಂಕೆ ತೆರೆಗಳ್ ನೆಗೆದೊರ್ವೊದಲುಣ್ಮೆ ಪೊಣ್ಮೆ ತಾ
ವರೆಗಳ ನೈದಿಲಾವಲಲರ್ಗೊಯ್ಯನೆ ಪಾಯ್ದು ಪಲುಂಬಿ ತುಂಬಿಗಳ್
ಮೊರೆದು ಕಲಂಕಿ ತೇಂಕಿ ಪಲವುಂ ಕೊಳರ್ವಕ್ಕಿಗಳುರ್ಕಿ ಸೊರ್ಕಿ ಮಿ
ಕ್ಕಿರೆ ಸೊಗಯಿಪ್ಪದೊಂದು ಕೊಳನಂ ನಳಿನಾನನೆ ನಿಂದು ನೋಡಿದಳ್ ೪೪

ಕರಿಮಕರಂಗಳ ಮೀನ್ಗಳ
ತಿರಿವ ತಿಮಿಂಗಿಳಗಿಳಂ[4]ಗಳುಮನಜೞಿದು[4] ತೆರ
ಳ್ದರಮೆ ಸುೞಿದರಮೆ ಭೋರ್ಗರೆ
ದರ[5]ಮೆ[5]ಗಮಂಬುಧಿಯನಂಬುಜಾ[6]ನ[6]ನೆ ಕಂಡಳ್ ೪೫

ಸಾಸಿರವಾಟಿಕ್ಕಯಿಂ ಬಳಸಿ ಪತ್ತಿದ ಮುತ್ತಿನ ಮುತ್ತೆ ಸುತ್ತಲುಂ
ಬಾಸಿಗದಂದದಂತಿರೆ ತಗುಳ್ಚಿದ ಮಾಣಿಕವೊಂದನೊಂದು ಗೆ
ಲ್ವಾಸೆಯಿನಗ್ಗಳಂ ಬೆಳಗೆ ಸಿಂಗದ [7]ಪಿಂಡು[7] ಮಡಂಗಿ ಪೊ[8]ತ್ತ[8] ಸಿಂ
ಹಾಸನಮಂ ಜಿತಾಮರ ಶರಾಸನಮಂ ತನುಮಧ್ಯೆ ನೋಡಿದಳ್ ೪೬

ಜಳನಿಧಿಯಿಂ ನಿಯಾಮನಿಧಿ ತಾಂ ಹರಿಪೀಠದಿನೀಶ್ವರಂ ಮನು
ನ್ನಿಳಯದಿನಿಂದ್ರವಂದ್ಯನುರಗಾಲಯದಿಂ ಸುತಭೋಗಭೋಗಿ ನಿ

---

1 ಬಿ (ಖ) 2 ಸಾ (ಕ) 3 ನ (ಕ) 4 ಗಿಳಂ ನಳ್ಕಿೞ್ದು (ಖಬ) 5 ಮೊ (ಕ)
6 ಸ (ಖ) 7 ಪಿಂಡ (ಖ) 8 ಕ್ಕ (ಖಬ)

ಮ್ರ್ಗಳತರ ರತ್ನದಿಂ ಶುಭದನಗ್ನಿಯನುಜ್ವಲಜೋಧನೆಂಬಿನಂ
ನಳಿನದಳಾಯತಾಕ್ಷಿ ತಡವಿಲ್ಲದೆ ನೀಂ ಪಡೆದಪ್ಪೆ ಬೊಪ್ಪನಂ ೪೭

ಬೆಳರಿ ಮುಖಾಬ್ಜವಾ[1]ಯ್ತು[1]ಡಸಿದೊ[2]ಳ್ಳಿ[2]ಳಿಯಂತೆ ಪಯೋಧರದ್ವಯಂ
ಗಳ ತುದಿ [3]ಕರ್ಗಿ[3] ತೋಱಿತ್ತು [4]ತರುಣೇಂ[4]ದುವ ಲಾಂಛನಬಿಂಬದಂತೆ ನೀ
ರೊಳಗಣ ರೇಖೆಯಂತೆ [5]ಕಿಡೆ[5] ಚಾರುವಳಿತ್ರಯಮಾ ಶಿರೀಷಕೋ
ಮಳೆ ನವಮೇಘದಂತೆ ಗುರುಗರ್ಭಭರಾನ್ವಿತೆಯಾ[6]ದವೊ[6]ಪ್ಪಿದಳ್ ೪೮
(ಶೂದ್ರಕಂ-ಕಾವ್ಯಸಾರಂ ೩೬೦)

ಅಲ[7]ಸಿಕೆ[7] ಮೆಯ್ಯಾದುದು ಕ
ಣ್ಮಲರ್ ಮರಲ್ದೆಸೆದುವೊದವಿತಾ[8]ಗುಳಿ ಸತತಂ
ಪಲವುಂ ವಸ್ತುಗ[9]ಳೊಳ್ ತನ
ಗೊಲವರ[9] [10]ಮಾದತ್ತು[10] ಕಾಂತೆಗಂದೆಳವಸಿಱುಳ್ ೪೯
(ಕಾದಂಬರಿ ಪೂ. ಭಾ ೩೮೧)

ಅತಿವೃತ್ತೋನ್ನತಿಯಿಂ ವಿರಾಜಿ[11]ಪುವು[11] ಮುನ್ನಂ ಗರ್ಭದೊಳ್ [12]ಕೊರ್ವಿ[12] ಬಾ
ಹುತಟಕ್ಕೆಯ್ದಿದುವೀಗಳೆಂದು ಪದಪಿಂ ತತ್ಕಾಮಿನೀ ಪುಣ್ಯದೇ
ವತೆ ಕಣ್ಣೆಂಜಲ ದೋಷಮಂ [13]ಹರಿಸ[13]ಲೆಂದಿಟ್ಟೊಂದು ರ[14]ಕ್ಷಾಂ[14]ಜನಾ
ಕೃತಿಯಿಂ ಪೀನಪಯೋಧರಾನನಮಿ[15]ದೇಂ[15]ಕರ್ಪಿಂಗಡರ್ಪಾದುದೋ ೫೦
(ಮಲ್ಲಿನಾಥಪುರಾಣಂ ೪-೯೮)

ಸೆಳೆನಡುವನುಡಿವ ಭರದಿಂ
ಬಳೆವಂತಿರೆ ಬಳೆಯೆ ಮೊಲೆಗಳವರ್ಗಳ ಛಲದಿಂ
ಬಳೆವಂತೆ ಬಳೆಯೆ ನಡುವುಂ
ಮುಳಿಸಿದವೋಲ್ ಕರ್ಗಿಕೊಂಡವವಱ ಮೊಗಂಗಳ್ * ೫೧

ಒದವಿದ ಕರ್ಪನೆಯ್ದೆ ಪರಿವೃತ್ತ ಪಯೋಧರ ಚೂಚುಕಕ್ಕೆ ಮಾ
ಡದೆ ವಳಿಭಂಗಮಂ [16]ಕಳಿಕೆದೋರ್ಪ ಲತಾವಳಿವೋಲ್ ಮೊಗಕ್ಕೆ[16] ಮಾ

---

[1] ಯ್ದ (ಖ) [2] ಳ್ಳೊ (ಖ) [3] ಕರ್ಪಿಕೆ (ಕ) [4] ವರುಣೇಂ(ಕ) [5] ಕಳಿ (ಕಖಬ) [6] ಗಿಯೊ (ಕಖಬ) [7] ಸುಗೆ (ಖ) [8] ರುಂ ಬೆಳ್ಪಿಸೆದು ವೊಗೆದಾಗಳಿ (ಖಬ)
[9] ಳೊಳ್ ತಸಗೆಲವಶ (ಕ) ಳೆಳೆಸುವ ಗ್ಲೆಲವಸ (ಖಬ) [10] ಮಾಯ್ತೆಯ್ದೆ (ಅ) [11] ಸುಗ್ಗ (ಕಖಬ) [12] ತೋಱಿತ್ತು (ಖಬ) [13] ಪುರಿಪ (ಅ) [14] ಕ್ಷಾ (ಅ) ಕ್ಷಾಂ (ಖಬ) [15] ವೇಂ (ಅ) [16] ಕಳಿಯೆ ತೋರ್ಪುದನಂತೆ ತನೂದರಕ್ಕೆ (ಅ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಡದೆ ಕಡುವೆಳ್ಪುಮಂ ನಿಮಿರ್ದ ಸುಯ್ಯುಮನಾನನ ಪಂಕಜಕ್ಕೆ ಮಾ
ಡದೆ ಬಳೆದೊಂದು ಗರ್ಭಮೆ ಮನಂ[1]ಗೊಳ[1]ಲಾರ್ತುದು ಮಂದಯಾನೆಯಾ ೫೨
(ಆದಿಪುರಾಣಂ ೮-೪೭)

ತನು ತನುವಾದ ಗರ್ಭಿಣಿಗೆ ತತ್ಸಮಯೋಚಿತಮಂಗಳಪ್ರಸಾ
ಧನಮೆಸೆದತ್ತು ಕಪ್ಪುರದ ಕರ್ಣಿಕೆ ಬಣ್ಣದ ಸಣ್ಣಮಾಲೆ ತೆಂ
ಗಿನ ತಿರುಳೋಲೆ ತಾವರೆಯ ನೂಲುಡೆ ನೂಲ್ ಸಿರಿಖಂಡದಣ್ಪು ಮು
ತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪಿಂಡುಗಂಕಣಂ ೫೩
(ಪಂಪರಾಮಾಯಣಂ ೩-೧೦೬ ; ಮಲ್ಲಿನಾಥಪುರಾಣಂ ೪-೧೦೮)

ಸುದತಿಯ ಗರ್ಭಚಿಹ್ನಮನದೇವೊಗಟ್ದಪ್ಪುದೊ ಬಾಸೆ ಕಪ್ಪನಾ
ಳ್ದುದು ನಡು ಕೂಡೆ ಪೊಂಗಿದುದು ಬೀಗಿದುದುರ್ಬಿ ಕುಚಂ ಮೊಗಂ ಬೆಳ
ರ್ತುದು ವಳಿ ಪಿಂಗಿ ಪೋಯ್ತು ನಯವೇಱುದುದಂಗಶಲಾಕೆ ಗುಜ್ಜುಗೊಂ
ಡುದು ನಡೆ ಮೆಲ್ಪುಗೊಂಡುದು ಸರಂ ಕುಡಿಗೊಂಡುದು ಕುಂತಳೋತ್ಕರಂ ೫೪
(ಜಗನ್ನಾಥವಿಜಯಂ ೨-೯೫)

ಕಣ್ಣಂ ಕವಿಯಳ್ ಚಿತ್ರದ
ಪೆಣ್ಣಂತಿರೆ ನುಡಿಯಳಣಮೆ ಕುಡಿಯಳ್ ಪಸಿವಿಂ
ಗುಣ್ಣಳೆಳಗಱುವಿನಂತಿಗೆ
ಮಣ್ಣಂ ತಿನುತಿರ್ಪಳಬಲೆಯಿರುಳುಂ ಪಗಲುಂ ೫೫

ದೊರೆವಡೆದಾ ಕುಮಾರಕನ ಗರ್ಭದಿನೀ ಮೃಗಲೋಲನೇತ್ರೆ ಭಾ
ಸುರತರ ಚಂದ್ರಬಿಂಬಮುಖಿಯೆಂಬ ಪೊಗೞ್ತೆಗೆ ರೂಢಿವೆತ್ತ ಸಿಂ
ಧುರಮೃಗಯಾನೆಯೆಂಬ ಮತಿಗುನ್ನತಿವೆತ್ತತಿವೃತ್ತಪೀನಪೀ
ವರಕುಚೆಯೆಂಬ ವರ್ಣನಕೆ ತಾನೆ ದಲಾಶ್ರಯಮಾದುದೊಪ್ಪದೇ ೫೬

[2]ಜ್ಞಾ[2]ನಮಯಂ ತೇಜೋನಿಧಿ
ತಾ[3]ನಿ[3]ರ್ದುಂ ತಾಯಗರ್ಭದೊಳ್ ಪೀಡೆಯನಂ
ತೇನಂ ಮಾಡಿದನಿಲ್ಲ ಕೃ
ಶಾನುವ ನೆಲಿಲಳುರದಂತೆವೊಲ್ ಕನ್ನಡಿಯಂ ೫೭
(ಆದಿಪುರಾಣಂ ೭-೩೨)

ಅರಸಿ ಕುಮಾರನಂ ಪಡೆದ ಭಂಗಿಯುನೇವೆಸರ್ಗೊಳ್ವೆನೆಲ್ಲಮೆ
ಲ್ಲರ ತೆಱನಲ್ತು ಮಿಟ್ಟೆಯೊಳೆ ತಾಂ ಪಡೆದಂತೆ ಸುಖಪ್ರಸೂತಿಯೊ

---

[1] ದರ (ಅ) [2] ದಾ (ಖಬ) [3] ನಾಗಿ (ಕ)

ಪ್ಪಿರೆ ಪಡೆದಳ್ ಭಯಂ ಗಡ ನಯಂ ಗಡ ಜೇನೆಯ ಸೂೞ್ ಗಡೆಂದು ತ
ತ್ಪುರದ ಪುರಂಧ್ರಿಯರ್ ಸತಿಗೆ ತೂಪಿಱಿದರ್ ಸ್ವಗೃಹಾಂತರಂಗದೊಳ್ ೫೮

ದೆಸೆಯಂ ತೆಕ್ಕನೆ ತೀವಿದತ್ತು ಘನಭೇರೀನಿಸ್ವನಂ ಭೋಂಕನಾ
ಗಸದೊಳ್ ಸಾಲ್ವಡೆದತ್ತು ವೀಧಿಗತನಾರೀಮುಷ್ಟಿಪಿಷ್ಟಾತಕ
ಪ್ರಸರಂ ತೋರಣಮೊಪ್ಪಿದತ್ತು ತರದಿಂ ದ್ವಾರಪ್ರದೇಶಂಗಳಂ
ಪೊಸತಂ ನ[1]ರ್ತಿ[1]ಸಿದತ್ತು ಮಾಲೆ ಗುಡಿ ಸೌಧೋತ್ಸಂಗರಂಗಂಗಳೊಳ್ ೫೯

ಎಳನಭದಂತೆವೋಲ್ ಸಸಿಯನಪ್ಪಿದುದಪ್ಪುವನೀ[2]ಷ್ಯೆ[2]ಯಂತೆವೋಲ್
ತುಱುಂದುದು ಧೂಮವಹ್ನಿ ಬಲವಂದುದು ದೈವತಭಕ್ತನಂತೆವೋ
ಲೆಳಸಿದುದಿಚ್ಚೆ ಬೆಚ್ಚಮರಿ [3]ಪಣ್ಣನೆಲರ್ ಸುಖ[3]ದಂತೆವೋಲ್ ಕರಂ
ಬೆಳಗಿದುದಂತರಿಕ್ಷವಳಯಂ ವಿಳಸ[4]ನ್ಮ[4]ಕರಂದದಂತೆವೋಲ್ ? ೬೦

ವಿಲಸನ್ನಿತ್ಯೋದಯಾಲಂಕೃತನಸಸುಹಯಪ್ರೌಢನಕ್ಷುಣ್ಣಲಕ್ಷ್ಮೀ
ನಿಲಯಂ ಸನ್ಮಂಡಲಾಗ್ರಸ್ಫುರಿತಕರಹತೋದ್ವೃತ್ತರಾಜಂ ಮಹೀಭೃ
ತ್ಕುಲಮಸ್ತನ್ಯಸ್ತಪಾದಂ ಸಮುದಿತವಿನತಾನಂದನಂ ವೃತ್ತವೀತಾ
ಖಿಲದೋಷಂ ದ್ಯೋತಿತಾಶಾಂಬರಮುಖನೊಗೆದಂ ಭವ್ಯಲೋಕೈಕಮಿತ್ರಂ* ೬೧

ತೊಟ್ಟಿಲ ತೂಕದೊಳ್ ಕಂಕಣ ಝುಂಕೃತಿ ದಿಟ್ಟೆ ಸೊರ್ಕೆಯಂ
ನಿಟ್ಟಿಸೆ ಜಿಹ್ವೆ ಕಾವಳನ ಕಾಕುಪಟುಧ್ವನಿರಾಗದಿಂ ಪದಂ
ಬಟ್ಟಿರೆ ದೇವಿಯರ್ ಕೆಲದೊಳಿರ್ದ ಕುಮಾರನ ಮುದ್ದು ಹರ್ಷಮಂ
ಪುಟ್ಟಿಸೆ ಕೂಡೆ ಪಾಡಿದುದು ಜೋಗುಳಮಂ ಪುರಕಾಮಿನೀಜನಂ ೬೨

ಅೞದಿರು ಕೃಷ್ಣ ಕೃಷ್ಣ ಮೊಲೆಯಂ ಕೊ[5]ಡು ಬಂದು ಯಶೋದೆ ಬಾಲನ[5]
ತ್ತಿೞಿಪಿಡು ಬಂದಳಕ್ಕನಿದೆ ಜೋಗುಳಮಂ ಶ್ರುತಿದೇವಿ ಕೂಡೆ ಪಾ
ಡೆೞಲೆ ತಗ್ಗುಳ್ಚಿ ಕಟ್ಟು ಕುಲದೇವತೆ ರನ್ನದ ಜೆಂಡನೆಂದು ಮು
ದ್ದುೞುಗಿಸೆ ಗೋಪಿಯರ್ ಪಿಡಿದು ತೊಟ್ಟಿಲೊಳೊಯ್ಯನೆ ತೂಗಿ ಪಾಡಿದರ್ ೬೩

ಕಂದ ಜೋ ವಸುಪೂಜ್ಯವರ್ಧನ ಜೋ ಪುರಂದರನಾಥ ಜೋ
ಕುಂದಕುಟ್ಮಳದಂತ ಜೋ ಕಮಲಾಕ್ಷ ಜೋ ಪರಮಾತ್ಮ ಜೋ
ಮಂದರಾಗ್ರಮಹಾಭಿಷೇಕವಿಭೂತಿಸಂಗತಸತ್ವ ಜೋ
ಯೆಂದು ಪಾಡಿದರಟ್ಕಿಱಿಂ ನೆರೆದಿಂದುವಕ್ತ್ರೆಯರೀಶನಂ ೬೪

---

[1] ಚಿರ್ (ಕ) [2] ಷೆ (ಖಬ) [3] ಪೊಣ್ಣನೆಲರ್ ಶುಕ (ಖಬ) [4] ನ್ಮ (ಖಬ)
[5] ಕೊಡಬಂದಳೆಶೋದೆ ಬಾಲನಂ (ಖಬ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಒದೆದು ಪಾಸಿಕೆಯಂ ಕೆಡಂಗಿ ಪುರುಳ್ದುವಳ್ಳಿಱಿಂದಾಡುವಂ
ವದನಮಂ ನೆಱೆ ನೋಡಿ ದಾಯೆನೆ ನೋಡುವಂ ದನಿಮೋಱುವಂ
ಪದುಳವೆತ್ತಿದೊಡಕ್ಕೆ ತೊಟ್ಟನೆ ಪಿಂಗೆ ಮೆಲ್ಲಗೆ ಬೀಱುವಂ
ಸುದತಿಯರ್ಕಳನಿಂತು ಮೆಚ್ಚಿಸಿದಂ ಯಶೋದೆಯ ನಂದನಂ ೬೫

ಕವಡಿಕೆ ಭಾಳದಂಡದೊಳೊಡಂಬಡೆ ದಾದಿಯರಿಕ್ಕೆಲಂಗಳೊಳ್
ಸವಡಿಸಿ ಸಾರ್ಚೆ ದಟ್ಟಡಿಯೊಳಿಟ್ಟಿರುತಿರ್ದನನಾರ ಜೊಪ್ಪನೀ
ಕವಡೆಯ ಜೊಪ್ಪನೆಂದು ನಡೆನೋಡಿದರಚ್ಚಱಿಯೊಳಪ್ಪುಕೆಯ್ವಿನಂ
ಕವಡೆಯ ಜೊಪ್ಪನೆಂಬ ಪೆಸರಗ್ಗಳವೊಪ್ಪಿದುದಾ ಕುಮಾರನೊಳ್ ೬೬

ಮಾಣದೆ ಧೂಳಿಮಾಳಿಗೆಗಡಂಗುವ ಸಾರ್ಚಿದ ತಾಯ ಜಂಘೆ ನಿ
ಶ್ರೇಣಿವೊಲಾಗೆ ಮೆಟ್ಟಿ ತೊಡೆಯೇಱುವ ಚಿತ್ರದ ಪಣ್ಣಲಂಗಳಂ
ಕಾಣಿಸೆ ದಾದಿಯಂ ಬಿಡದೆ ಬೇಡುವ ಕಂಡರ ಹಸ್ತವಾದ್ಯಕ
ಲ್ಯಾಣರವಕ್ಕೆ ನರ್ತಿಸುವ ಮುದ್ದುಗಳೊಪ್ಪಿದುದಾ ಕುಮಾರನೊಳ್ ೬೭

ಅಪ್ಪಪ್ಪೆಂದೊಡೆ ಬಂದಮ
ರ್ದಪ್ಪುವ ಚುಂಬಿಸಿದಡೊಡನೆ ಚುಂಬಿಸುವಂ ತೊದ
ಳಪ್ಪ ನುಡಿಯಡಸೆ ಮಾಣದೆ
ತುಪ್ಪದ ಕಡುಮುದ್ದು ಪೆಱರ್ಗೆ ಪಡೆದುದು ಮುದಮಂ ೬೮

ಮನ್ನಣೆವೆತ್ತ ದಾದಿಯರ ಕೈಗೆ ನೃಪಾಲನ ಕೈಗೆ ಸನ್ನೆಯಿಂ
ಸನ್ನೆಯ ಮಾಡೆ ನೀಱೆಯರ ಕೈಗೆ ತದಂತರದಿಂದ ಬರ್ಪನಂ
ಮುನ್ನಮೆನಿಪ್ಪ ಮುದ್ದುತನದಿಂ ಜಯದೇವಿಯ ಸೂನು ಕಂದುಕಂ
ಕನ್ನಡಿ ಹೊನ್ನ ವೀಣೆ ಪಿಡಿವಾಡುವ ತಾವರೆಯೆಂಬ ಮಾಟಿಕ್ಕೆಯಿಂ ೬೯

ಪರಮಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ ಸರೋರುಹೋ
ದರನನಿದಾರ ಮಾಣಿಕನಿದಾರ ನಿಧಾನನಿದಾರ ಮುದ್ದಿದಾ
ರರಸನಿದಾರ ಬಲ್ಲಹನಿದಾರ ಕರೀಂದ್ರನಿದಾರ ಸಿಂಹನೆಂ
ದಿರದಮರ್ದ[1]ಪ್ಪಿದಳ್ ಪದಪಿನಿಂ ಮೊಲೆವಾಲ್ ತೊರೆದೆಚ್ಚು ಪಾಯ್ವಿನಂ ೭೦

(ಜಗನ್ನಾಥವಿಜಯಂ ೩-೩೯)

ಉದರಮೆ ತೊಟ್ಟಿಲಾಗೆ ಭುವನತ್ರಯಮಂ ನೆಱೆ ತಾಳ್ದಿ ದೇಹವ
ರ್ಗದ ಕೃತಪಾಪಪುಣ್ಯಫಲಮಂ ಸಲೆ ತೂಗುವ ಕರ್ಮಸಾಕ್ಷಿಯುಂ

---

[1] ಪ್ಪಿತಪ್ಪ (ಖಬ)

ಪದುಳದಿ ತೊಟ್ಟಿಲೊಳ್ [1]ಪಡಿಸಿ[1] ತೂಗಿದರಚ್ಯುತ ಜೋ ಮಹಾತ್ಮ ಜೋ
ಸದಮಲಬೋಧ ಜೋ ಪರಮ ಜೋ ಹರಿ ಜೋ ಎನುತುಂ ಲತಾಂಗಿಯರ್ ೭೧

(ಜಗನ್ನಾಥವಿಜಯಂ ೩-೨೮)

ಶಕಟವಿಮರ್ದ[2]ನಾ[2] ಮುಸಲಿ ಬಾರದ [3]ಮುನ್ನಮೆ[3] ನಮ್ಮ ಹೇಮ ಘಂ
ಟಿಕೆ ಘಣಿಳಿಂಬ ನಂದಿಸಿಯ ಪಾ[4]ಲಸಿದಂ[4] ಕುಡಿಯಲ್ಕೆ ನಿನ್ನ ಚಂ
ಡಿಕೆ ಬೆಳೆದಪ್ಪುದೆಂ[5]ದೆನುತೆ[5] ನಂಬಿಸೆ ಪಾಲ್ಗುಡಿ[6]ದಬ್ಬೆಯೆನ್ನ[6] ಚಂ
ಡಿಕೆಯೆನಿತುದ್ದಮಾದುದೆನುತುಂ ಬೆಸಗೊಳ್ಪ ಮುಕುಂದನೊಪ್ಪಿದಂ ೭೨

(ಜಗನ್ನಾಥವಿಜಯಂ ೩-೫೨)

ಘನಕುಚೆ ಗೋಪಿ ಪಾಲ್ಗಡೆಯುತುಂ ಮನೆವಾಚಿತ್ತಿಗೆ ಪೋಗೆ ಗೆಜ್ಜೆಯಿಂ
ದನಿ ನಸುಪೊಣ್ಮದಂತು ಪರಿತಂದೆಡಗೆಯ್ಯೊಳೆ ತೋಡಿ ಬೆಣ್ಣೆಯಂ
ತಿನುತಿರೆ ಗೋಪಿ ಕಂಡೆಲಲೆ ಕಳ್ಳತನಂಗಳನಣ್ಣ ಕಂಡೆವಾ
ವೆನೆ ಕಡೆವಾಯ ಬೆಣ್ಣೆವೆರಸೊಯ್ಯನೆ ಪಿಂಗುವ ಕೃಷ್ಣನೊಪ್ಪಿದಂ ೭೩

(ಜಗನ್ನಾಥವಿಜಯಂ ೩-೫೧)

ಬಿಂಬಫಲೋಪಮಾನ ರದನಚ್ಛದಮಂ ನಸುಗಚ್ಚಿ ದಾದಿ ಮ
ಣ್ದಿಂಬನನಟ್ಟಿಜುಂದೊಗೆಯೆ ಹೂಂಕೃತ ತರ್ಜನಿಯಂ ನೊಸಲ್ಗಿದಂ
ದಿಂ ಬಡಿದಪ್ಪೆನೆಂದೊಡಗಿದಪ್ಪಿ ಮುಗುಳ್ನಗೆ ನಕ್ಕು ಗೋಪಿಯಂ
ನಂಬಿಸಿ ಸಾರ್ಚಿ ಚುಂಬಿಸುವ ಕೃಷ್ಣನ ಮುದ್ದು ಕರಂ ಮನೋಹರಂ ೭೪

ಅ[7]ಳರಿಲೆ[7]ಯತ್ತಿಕಾಯ್ ಪುಲಿಯುಗುರ್ ಸಿಗಳಂ ಕಿಱುಗೆಜ್ಜೆ ಬಂದಿ ಕಂ
ಗೊಳಿಸುವ ರಕ್ಕೆ ಸಂಕೊಲೆ ಘಣಿಲ್ಗರೆ[8]ದೊ[8]ಪ್ಪುವ ಗಂಟೆ ನೇಪುರಂ
ಪೊಳೆಪಳಪಟ್ಟೆ ತೋರ್ಪ ಕುಱುಯುಣ್ಣೆಯ ಪೆಂ[9]ಡೆ[9]ರಮೆಂಬಿವೊಂದಿ [10]ಗೊಂ[10]
ದಳಿಸಿರೆ ಬಾಲವಂದದ ತೆರಳ್ಕೆಯಿನಚ್ಯುತನಾದಮೊಪ್ಪಿದಂ ೭೫

ಎಡೆಗಿಱಿದಿರೆ ಪೊಂಗವಡಿಕೆ
*ಯುಡೆವಣಿ ಕಿಱುಗೆಜ್ಜೆ ಮಿಱುಗೆ ದಶನಾಂಶುವನು
[11]ಳ್ಳಿಡೆಯರಳಲ್ ನಡೆಗೊಂಡೊ[11]
ಳ್ನುಡಿಯ* ಬೆಡಂಗಸುರವೈರಿಗಡಿಗಡಿಗೆಸೆಗುಂ ೭೬

(ಜಗನ್ನಾಥವಿಜಯಂ ೩-೪೫)

---

1 ಸರಿಸಿ (ಖಬ) 2 ನಂ (ಕ) ನೀ (ಖಬ) 3 ಮುಂಕುಡಿ (ಖಬ) 4 ಲಿದ ನೀಂ (ಅ) 5 ದಬಲೆ (ಅ) ದೆಶೋದೆ (ಕ) 6 ದೀಗಳಬ್ಬೆ (ಅ) 7 ಅಳಕಡ್ಡಿ (ಕ) ಅರಳೆಲೆ (ಖಬ) 8 ನೊ (ಕ) 9 ಚ (ಕಖಬ) 10 ನಾಂ (ಕ) 11 ಳ್ವಿಡೆಯೆತಳರ್ನೆಡೆಗೊಂಡೊ (ಕ) *ಬಿಡೆ ಘಲ್ಲೆನೆ ಗೆಜ್ಜೆ ಮಿಱುಗೆ ದಶನಾಂಶು ಕುರುಳ್ ಜಡಿಯೆ ತೊದಲ್ನುಡಿಯ ತಳರ್ ನಡೆಯೆ (ಅ)

ಕನಕ[1]ಮಣಿ[1] ಕಿಂಕಿಣೀಪ್ರ್ವದು
ನಿನದಂ ಕಟಿತಟದೊಳೆಸೆಯೆ ದಾದಿಯರೊಡವಂ
ದಿನಿಸಂ ನಡೆಯಿಸೆ ಲಲಿತೇಂ
ದ್ರನೀಲಮಣಿಭೂಮಿಯೊಳ್ ತಳರ್ನಡೆ [2]ನಡೆ[2]ದಂ ೭೭

(ಆದಿಪುರಾಣಂ ೮-೨)

ಶ್ರೀಪತಿ ಸುರದಾರಕರೊಡ
[3]ನೇ[3]ಪೋಬ್ಬಿತ್ತಂ ನೆಱೆದು ರತ್ನಧೂಳೀಪಟಲ
ವ್ಯಾಪಿತ ತನು ಮೃದುಮುಗ್ಧಾ
ಳಾಪಂ ಬಳೆದಂ ಸರಸ್ವತೀಮಣಿಹಾರಂ ೭೮

(ಆದಿಪುರಾಣಂ ೮-೧)

ಓರಂತೆ ಮೆಚ್ಚಿದಂ ಕೃತಿ
ಸಾರಂ ಸುತವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೭೯

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ಕುಮಾರೋದಯವರ್ಣನಂ ಸಪ್ತಮಾಶ್ವಾಸಂ ಸಂಪೂರ್ಣಂ

1 ಕಟಿ (ಕಖಬ) 2 ತಂ (ಕಖಬ) 3 ನಾ (ಆಖಬ)

# ಚಂದ್ರೋದಯವರ್ಣನಂ

ಮೊದಲೊಳ್ ನೇಸಱ ಪಕ್ಕೆ ಕೋಕವಿರಹಂ ಸಂಕೋಚಪದ್ಮಂ ತನುಂ
ಪುದಿದಾ ಸಂಜೆಯ ತೂರ್ಯಮಾ ಕುಲಟೆಯರ್ ತಾರಾಳಿ ದೀಪಂ ಬೞಿ
ಕ್ಕುದಯಂ ಕೆಂಪೆಳೆಗರ್ಪು ಚಂದ್ರಿಕೆ ಚಕೋರಂ ನೈದಿಲಿಂದೂಪಲಂ
ಮದಿರಾಂದೋಳವಿಹಾರಲೀಲೆಯಿನಿತುಂ ಚಂದ್ರೋದಯಕ್ಕಾಸ್ಪದಂ ೧

ದಿವಸಕ[1]ರಾಪ[1]ಸಾರಣದೊಳೆಯ್ದಿಸಿ ಬೆನ್ನನೆ ಬರ್ಪ ಪೆರ್ಬಲ
ಕ್ಕವತಮಸಪ್ರಚಂಡಚರ[2]ರಿ[2]ಕ್ಕಿದ ಸೊಪ್ಪೆನೆ ಬೆಂ[3]ದುಱಿಂ[3]ಬಿನೊಳ್
ಕವಿ[4]ವ[4] ಬಿಸಿಲ್ಗಳೇಂ ಮಱಸಲಾರ್ತುದೊ ತೀವ್ರ ಕರಾಭಿಘಾತದಿಂ
ದವನಿಯ ಬೆಂದ ಪುಣ್ಣ ಕಲೆಗಳ್ ಮಿಗೆ [5]ಕೆಂಗಲೆಗಟ್ಟಿದಂದದಿಂ[5] ೨

(ಅನಂತನಾಥಪುರಾಣಂ ೭–೩೦)

ಒದವಿ ಪೊದಟ್ಟು ಪಜ್ಜಳಿಪ ತೇಜದ ಸುಯ್ನೞಿಂ ಕಾಯ್ಪೆಯೋಡಿ ಪ
ಣ್ತುದು ಬಿಸಿಲೆಂಬಿನಂ ಬಿಸಿಲೊಳಾದುದು ಕೆಂಪು ಬೞಿಕ್ಕ ಪಾಱಿ ಪೋ
ದುದು ಬಿಸಿಲೊಪ್ಪಿದೊಂದರಿಸಿನಕ್ಕಣೆಯಾಯ್ತು ಬಿಸಿಲ್ ಬಿಸಿಲ್ಗೊಡೆ
ರ್ಚಿದ ವಿಹಗಾಳಿವೊಲ್ ಬೞಿಯವೊರ್ಬುಳಿಗೊಂಡುವು ಸೂರ್ಯರಶ್ಮಿಗಳ್ ೩

ನವ ನಳಿನೀವನಂಗಳ ಪರಾಗರಜಂಗಳನುಂಡು ಮುನ್ನ[6]ವಾಂ[6]
ತವ[7]ಗೆ[7] ವಿಯತ್ತಳಭ್ರಮಣವಿಹ್ವಲನಾಗಿ ಬೞಲ್ದು [8]ಕಾಱುವಂ
ತೆವೊಲಿರೆ[8] ಕೆಂಪು ತತ್ಕಮಳಕಾನನಕಂಟಕಲಗ್ನಪಾದ[9]ನಾ[9]
ದವೊಲುಡುಗುತ್ತಮಾತ್ಮಕರನುಂ ರವಿ ಪೊರ್ದಿದನಸ್ತಶೈಲಮಂ ೪

(ಪಂಪಭಾರತಂ ೪-೪೬)

ಇಳೆಯಿಂದಂ ಪೊಂಬಿಸಲ್ ಮೆಯ್ದೆಗೆದು ನಗನಿಕಾಯಾಗ್ರದೊಳ್ ಸಾಂದ್ರಧಾತು
ಸ್ಥ[10]ಳಿ[10]ಹರ್ಮ್ಯಾಗ್ರದೊಳ್ ಮಾಣಿಕದ ಶಿಖರಮುದ್ಯಾನ[11]ಶಾಖಾಗ್ರ[11]ದೊಳ್
[ಕೆಂ

---

[1] ರಪ್ರ (ಖ ಬ) [2] ಗಿ (ಖಬ) [3] ದಿಱ್ಱಿಂ (ಖಬ) [4] ಲ (ಅ)
[5] ಕಂಗೆಲೆ ಕಟ್ಟಿತೆಂಬಿನಂ (ಖಬ) [6] ಮಂ (ಅ) [7] ನ (ಅ) [8] ಕಾಂಸದಂದದೊಳಿರೆ (ಕ) ಕಾಂಸವಂಡವೊಲಿರೆ (ಖಬ) [9] ವಾ (ಕಖಬ) [10] ಳ (ಕ) [11] ನಾಳಾ (ಅ)

ದಳಿರೆಂಬಾಶಂಕೆಯಂ ಮಾೞ್ಪಿನಮರುಣತೆ[1]ಯಂ ಪೆತ್ತು[1] ಚೆಲ್ವಾದುದಸ್ತಾ
ಚಳತುಂಗವ್ಯಾಘ್ರಜೃಂ[2]ಭಾವೃತವದನಮೆನಿಪ್ಪಂ[2]ದದಿಂ ಭಾನುಬಿಂಬಂ ೫
(ಜಗನ್ನಾಥವಿಜಯಂ ೧೬-೯೩)

ದಿನಲಕ್ಷ್ಮೀಕಾಂತೆ ಮೈವಿಟ್ಟಿೞಿ[3]ದು[3] ಗಗನರಂಗಾಗ್ರದಿಂ ವಾರುಣೀಸೇ
ವನೆಗೆಯ್ತರ್ಪಲ್ಲಿ ಕಾಲಿಂ ನವಮಣಿ[4]ಘನ[4]ಮಂಜೀರಕಂ ನು[5]ಣ್ಪುಮಂ[5] ತೀ
ವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿಶಿರೋಭಾಗದೊಳ್ ಬಿೞ್ದೆಂಬಂ
ತಿನಬಿಂಬಂ ರಂಜಿಸಿತ್ತಸ್ತಮಯ ಸಮಯದೊಳ್ ಮುಕ್ತಪಾದಾವಲಂಬಂ ೬
(ಕಾದಂಬರಿ ಪೂ.ಭಾ ೫೦೭)

ವನಿತಾಪಾನಕದೊಂದು ಪೊೞ್ತು ಸುವಿಟರ್ ಕಯ್ಗೆಯ್ದು ಲೀಲಾವಿನೋ
ದನದಿಂ ಕೇರಿಗೆ ಬರ್ಪ ಪೊೞ್ತು ಗಣಿಕಾಸಂದೋಹಮೊಂದಾಗಿ ಮೆ
ಲ್ಲನೆ ಬಂದೊತ್ತೆಗೆ ನಿಲ್ವ ಪೊೞ್ತು ಬಗೆ ಬಂದೀ ಪೊೞ್ತು ತಂಪೊೞ್ತು ಪೂ
ವಿನ ಪೊೞ್ತಿಂಬಿನಮಾಯ್ತು [6]ಧಾರಿ[6]ಣಿಗೆ ಭಾಸ್ವನ್ಮಂಡಲಂ ಕುಂಡಲಂ ೭

ಅಸುರರ ನೆತ್ತರೊಳ್ ಪೊರೆದ ಕೈದುಗಳಂ ತೊಳೆಯಲ್ ತಗುಳ್ದು ಘೂ
ಪಿಸಿದ ಹಯಂಗಳಂ ಜಲದೊಳಿಕ್ಕಲಿಳಾತಳಮಂ ನಿರಂತರಂ
ಬಿಸಿಗದಿರಿಂದೆ ನೋಯಿಸಿದ ಪಾಪಮನಿಲ್ಲಿಯೆ ನೀಗಲೆಂದು ಬಂ
ದೊಸೆದಪರಾರ್ಣವಕ್ಕೆ ಪರಿವಂತಿನನೆಯ್ದಿದನಸ್ತಶೈಲಮಂ ೮

ನಳಿದೀಸಂ ಪತ್ತೆ ಸೂತಂ ಪಱಿಗುಡುಗೆ ಹಯಂ ಜಾಱಿ ತೋಳ್ ಪಾಱಿ ತೇರ್ ವ್ಯಾ
ಕುಳ ಚಕ್ರಂ ಸಿಲ್ಕೆ ಶೃಂಗಾಗ್ರದಿನಿೞಿವೆಡೆಯೊಳ್ ಪದ್ಮಿನೀದೇಶಕೋಶಾ
ವಳಿಯಂ ಕೈಕೊಂಡು ಬೆಂಬತ್ತಿಸೆ ತಿಮಿರಬಲಂ ಕಂಡು ತಾಂ ಸೂರ್ಯನಸ್ತಾ
ಚಳದೊಳ್ ಕೆಂಬಟ್ಟೆಯೊಂದಡ್ಡಣದೊಳೆ ಮಗುೞ್ದಂತೆಡ್ಡಮಾಯ್ತರ್ಕಬಿಂಬಂ ೯

ಕಡುಬಿಸುಪಾಱಿ ಬೆಳ್ಪಣಮೆ ಪಾಱಿ ಕರಂ ಕರಮೆಲ್ಲಪಕ್ಕದಿಂ
ದುಡುಗೆ ನಿಜಾಂಗತುಂಗಧವಳಾಕೃತಿ ಕಾಸಿದ ಬಟ್ಟೆನಂತೆ ಕೆಂ
ಪಡರ್ದಿರೆ ತನ್ನ ಮುನ್ನೊಗೆದ ತತ್ತಿಯ ರೂಪನೆ ಪೋಲ್ತು ಜಾಜಿನೊಳ್
ತೊಡರ್ದವೊಲೊಪ್ಪಿದಂ ಗಗನವೃಕ್ಷದ ಪಣ್ಗೆಣೆಯಾಗಿ ಭಾಸ್ಕರಂ ೧೦

ಕುವಲಯ ಪೀಡೆಯಂ ಪಡೆದು ಪುಷ್ಪಿತಪದ್ಮಿನಿಗೋತು ಕಾಯ್ಪು ಸಂ
ಭವಿಸಿರೆ ಮಂಡಲಾಗ್ರಕರಮಂ ಕುಲಗೋತ್ರಶಿರಕ್ಕೆ ನೀಡುತಿ

---

[1] ವೆತ್ತಿರ್ದು (ಅ) [2] ಬಧ್ವನಿತವಿವರಮೆಂಬಂ (ಖಬ) [3] ಯೆ (ಖಬ) [4] ಮಯ (ಅ) [5] ಣ್ಣುತಂ (ಅ) [6] ವಾರು (ಖಬ)

ರ್ಪವಗುಣದಿಂದಮೆಯ್ದಿದುವಧೋಗತಿಯೆಂದು ವಿರಕ್ತನಾದವೋಲ್
ದಿವಕರನಂಬರಂದೊಱಱಿದು ಪಶ್ಚಿಮವಾರ್ಧಿಗೆ ಮೆಯ್ಯನಿಕ್ಕಿದಂ* ೧೧
(ಜಗನ್ನಾಥವಿಜಯಂ ೧೬-೯೪)

ಇನಿಸುಂ ಪೊಂಗಾಱು ಮೇಲುಚ್ಚಳಿಸೆ ಹಯಿಚಯಸ್ಕಂಧವುಂ ತೇರಕೋಳಾ
ರ್ವಿನೆಗಂ ಮಾರ್ಕೊಂಡು ನೇಣಂ ಮಲರೆ ತೆಗೆವಿನಂ ಸೂತನಶ್ವವ್ರಜಂ ತೊ
ಟ್ಟಿನೆ ಕೀಱಿಂ ಕರ್ಚಿ ಘೋರೆಂದುರುಳೆ ಪರಿವಿನಂ ಸಾರ್ದನಸ್ತಾದ್ರಿಯಂ ಕಾಂ
ಚನರಾಜಿಷ್ಣುಪ್ರಭಾಪಿಂಜರಿತಕಬಳಿತವ್ಯೋಮರಂಗಂ ಪತಂಗಂ ೧೨

ಪೂಡುವ ಕುದುರೆ ಬೆಸಂಗೊಂ
ಡೋಡುವ ತೇರ್ಗೊಂದೆಗಾಲಿ [1]ಪೊಡೆವಂ[1] ಪೆಱಿವಂ
ಕೇಡಿಂಗಲಸಿದೊಡಕ್ಕುಮೆ
ನೋಡಿರೆ ರವಿ ಕೆಡೆದನಸ್ತಗಿರಿ ಮಸ್ತಕದೊಳ್ ೧೩
(ಲೀಲಾವತಿ ೧೦-೧೭ ನೇಮಿನಾಥಪುರಾಣಂ ೫-೧೪)

---

* ಈ ಪದ್ಯವಾದಮೇಲೆ (ಖಬ) ಪ್ರತಿಗಳಲ್ಲಿ ಮುಂದಿನ ನಾಲ್ಕು ಪದ್ಯಗಳು ಹೆಚ್ಚಾಗಿವೆ :

ಘುಲಘುಲನೆಂದು ಸಂಜೆವಱಿ ಸಾಱಿ ಧರಾತಳದುಷ್ಣವಾಱಿ ಮಾ
ರ್ಮಲೆವಪರಾಬ್ಧಿ ಕೆಂಪು ನಸುದೋಱಿ ಸರೋಜದ ಲಕ್ಷ್ಮಿ ಜಾಱಿ ನೈ
ದಿಲಬಳಗಂ ಪೊಡಱ್ದು ನಯನೇಱಿ ರಥಾಂಗವಗಲ್ದು ಪಾಱಿ ಕ
ತ್ತಲೆಯ ಸೆಱಂಗುದೋಱಿ ದಿನನಾಯಕನೇಱಿದನಸ್ತಶೈಲಮಂ ೧
ಖಗತತಿ ಗೂಡ ಸಾರೆ ಬಿಗಿದಿರ್ದ ರಥಾಂಗಕೆ ಬಾಧೆ ಸಾರೆ ಕೇಳ್
ಗಗನಕೆ ತಾರೆ ಸಾರೆ ಯುವತೀಕುಚಮಧ್ಯಕೆ ಕಂತು ಸಾರೆ ಮೆ
ಲ್ಲನೆಗೆ ಕುಮುದಕ್ಕೆ ಸಾರೆ ಧರೆಗೆಯ್ದೆ ತಮಂ ನೆಱೆ ಸಾರೆ ಸಾಗರ
ಕ್ಕೊಗುವಿಗೆ ಪೆರ್ಚು ಸಾರಲಪರಾಬ್ಧಿಯನೆಯ್ದಿದನಾ ದಿವಾಕರಂ ೨
ಖಗತತಿಗೂಡನೆಯ್ದೆ ಪೊಣರ್ವಕ್ಕಿಗಳಿರ್ಕೆಯನೆಯ್ದೆಯಂಬುಜಂ
ದುಗುಡಮನೆಯ್ದೆಯುತ್ಪಲಿನಿ ಹಾಸ್ಯಮನೆಯ್ದೆಯೊಱಲ್ದು ಪಾಂಥರೊ
ಯ್ಯಗೆ ನಿಜಸೂಚಿಕಾಗೃಹಮನೆಯ್ದೆ ವಿಯೋಗಿಗಳಂಗಜಾಸ್ತ್ರದ
ಗ್ನಿಗೆ ಗುಱಿಯಾಗಲೆಯ್ದೆ ದಿನನಾಯಕನೆಯ್ದಿದನಸ್ತಶೈಲಮಂ ೩
ಸುಳಿವಳಿ ಪೊತ ಗೊಂಚಲೊಳಡಂಗೆ ಸುರುಳ್ದು ಮರಾಳಮಂಬುಜಂ
ಗಳ ಮಱಿಯೊಳ್ ಸುಯಿಲ್ಗಱಿಯೆ ಬಗ್ಗಿಸುವಗ್ಗದ ಕೋಕಿಳಾಳಿ ಕೆಂ
ದಳಿರೊಳೆ ದೂರಿಸುತ್ತಿರೆ ಶುಕಾವಳಿ ಪಣ್ಗಳನೊತ್ತುಗೊಂಡು ಕಂ
ಗಳನರೆ ಮುಚ್ಚಿ ತೂಂಕಡಿಸೆ ಸಾರ್ದನಹಸ್ಪತಿ ಪಶ್ಚಿಮಾದ್ರಿಯಂ ೪

[1] ಸೂತಂ (ಅ) ಎಸೆವಂ (ತ)

ಉರವಣೆಯಿಂ ಕಾಲಗಜಂ
ಮರವಾಯ್ದುದು[1]ವಸ್ತ್ರ[1]ವೆಂಬ ಚೆಂದೆಂಗಿಂದಂ
ಸರಸಿರುಹಮಿತ್ರಮಂಡಲ
ಪರಿಗತಫಲವೋಡಿ ಬಿರ್ದುದಪರಾಂಬುಧಿಯೊಳ್ ೧೪

ಮುನಿಹಸ್ತಾಂಬುಜದಿಂದಮರ್ಘ್ಯಜಲಜಾಲಂ ಬೀೞೆ ನೀ[2]ಲಾಬ್ಜಕಾ[2]
ನನದೊಳ್ ಪಾಯ್ದಳಿ ಬೀೞೆ ಜಾರರೆದೆಯೊಳ್ ರತ್ಯುತ್ಸವಂ ಬೀೞೆ ಪ
ದ್ಮಿನಿ ಬೆಂಬೀೞೆ ಒೞಲ್ದು ಬೀೞ್ವ ಹತಕೋಕಾನೀಕದಿಂದುರ್ಬಿ ಕ
ಣ್ಬನಿಗಳ್ ಭೋರೆನೆ ಬೀೞೆ ಬಿರ್ದನಪರಾಂಭೋರಾಶಿಯೊಳ್ ಭಾಸ್ಕರಂ ೧೫

[3]ಕೞಿ[3]ವದನಾದ ಭಾಸುರವಿಸಿಲ್ ತೆರೆಯಂತಿರೆ ಬಟ್ಟಲಿಟ್ಟು ತಂ
ದಿೞಿಪಿದ ಲೋವೆಯಂತಿರಪರಾಚಲಕೋಟೆ ನಿಶಾತಮಿ[4]ಸ್ರದೊಳ್
ತೊಳ[4]ಗುವ ಧೂಳಿಸಂಜೆಯೆನೆ [5]ಸಾ[5]ರ್ದಿರೆ [6]ಪಿಂಬಗಲೆಂಬ[6] ಲಗ್ನಿಗಂ
[7]ಸುೞಿಸಿದ[7] ಬಟ್ಟಲಂತೆ ಮುೞುಗಿತ್ತಪರಾಬ್ಧಿಯೊಳರ್ಕಮಂಡಲಂ ೧೬

(ಅನಂತನಾಥಪುರಾಣಂ ೭-೬೪)

ಎನಗಂ ಭೂಪತಿಗಂ ಸಮಾನಮೆ ಕರವ್ಯಾಪ್ತಾಖಿಲಾಶತ್ವಮ
ತ್ಯನುರಕ್ತಪ್ರಕೃತಿತ್ವಮಭ್ಯುದಯವತ್ವಂ ಚಕ್ರಭೃತ್ವಂ ದಲೆಂ
ದಿನನುದ್ಯಾನಪಯೋವಿನೋದಸದೃಶತ್ವಕ್ಕಂ ಮನಂದಂದವೋಲ್
ವನಮಾಲಾಕುಲತೀರಮಪ್ಪಪರಪಾರಾವಾರಮಂ ಪೊರ್ದಿದಂ ೧೭

(ಚಂದ್ರಪ್ರಭಪುರಾಣಂ ೮-೨)

ಪ್ರತ್ಯಗ್ಭೂಧರವಾತ್ಮಾ
ಧಿತ್ಯಕದೊಳ್ ತಳೆದುದಸ್ತಗತಿಯಿಂ ಬೀೞ್ವಾ
ದಿತ್ಯನನೆಂದುಮದಾ[8]ರ್ಗಂ[8]
ನಿತ್ಯಪರಾರ್ಥ್ಯೈಕವೃತ್ತನಕ್ಕುಂ ಗ್ರಾ[9]ಹ್ಯಂ[9] ೧೮

(ಚಂದ್ರಪ್ರಭಪುರಾಣಂ ೮-೩)

ಅಚ್ಚದಿರೆ ಕೞಲೆ ಕೀಲ್ ನಡು
ವುರ್ಚೆ ನೊಗಂ ಮುಱಿಯೆ ಸುರುಳೆ ಸೂತಂ ನಸು ಕಣ್
ಮುಚ್ಚೆ ಫಣಿ ಕುದುರೆ ಬೞಲಲ್
ಪಶ್ಚಿಮಮಿನಿಸಿನಿಸು ಜಾಱೆ ದಿನಕರನಿೞಿದಂ ೧೯

---

1 ವಸ್ತ್ರ (ಖಬ) 2 ಲಾಂಬುಜಾ (ಕ) 3 ತಳಿ (ಖಬ) 4 ಪ್ರಯೋಗೞು (ಅ)
5 ಪೊ (ಅ) 6 ಪಿಂಗಲಿಯೆಂಬ (ಖಬ) 7 ಘೞಿಗೆಯ (ಅ) 8 ರ್ಗಮ (ಖಬ)
9 ಹ್ಯಂ (ಖಬ)

ಕವಿದುವು ಧೇನು ಮುಂಚೆ ತುಱುಗಳ್ ಪೊಲದತ್ತಣಿನೂರ್ಗೆ ಬಾ[1]ನ[1]ಲಾ
ದುವು ಪಡುವಣ್ಗೆ ಪಾಱಿದುವು ಗೂಡಿನ ಸಾರ್ಕೆಗೆ ಪಕ್ಕಿ ಕೊಂಬುಗೊಂ
ಡುವು ಮೃಗವೂರ ಪೊರ್ದುಗೆಯ ಬಟ್ಟೆಗೆ ಮೇಪಿನ ಕಾಪಿನಿಂ ಪುರ
ಳ್ದುವು ದಿನನಾಯಕಂ ವರುಣ ದಿಙ್ನಗಮಂ ಮಱೆಗೊಳ್ವ ಕಾಲದೊಳ್ ೨೦

ಅಪರಾಶಾದ್ರಿಯ ಮೇಲೆ ಗೈರಿಕಶಿಲಾಶಲ್ಕಂಗಳಂ ನುರ್ಗುತುಂ
ತಪನಸ್ಯಂದನ ಚಕ್ರಮಾಕ್ರಮಿಸಿ ಪೋದಂತಾ ರಜಂ ವಾಜಿರಾ
ಜಿಪದಾಘಾತದಿನುರ್ಬಿ ಪರ್ಬಿದುದು ತದ್ದಿಕ್ಚಕ್ರಮಂ ಬೇಱೆ ಕೆಂ
ಪು ಪೊದ[2]ಟ್ಟಿಂ[2]ತು ನಿಮಿತ್ತಮೇನೆನಿಸಿ ಸಂಧ್ಯಾರಾಗಮಾ ವೇ[3]ಳೆ[3]ಯೊಳ್ ೨೧

ಪರಿಣತದಿನಶಿರದಂ[4]ದದ[4]
ಖರಕಿರಣಂ ಕಾಲಚಕ್ರಹತಿಯಿಂ ಕೆಡೆಯಲ್
ಸುರಿದು ಪರೆದರುಣಜಲದಂ
ತಿರೆ ಪಸರಿಸುತಿರ್ದುದಪರಸಂಧ್ಯಾರಾಗಂ ೨೨

(ಲೀಲಾವತಿ ೧೦-೧೯)

ಅಂಬರಮಣಿ [5]ಮುಳುಗಿದನಿಂ
ತಂಬುವಿನಂ[5] ಹಿಮಕರಾಂಶುಗಳ್ ಪತ್ತು[6]ಗುಮೆಂ[6]
ದಂಬರ ಹರಿ [7]ಪೊದೆದಾ[7] ಪೀ
ತಾಂಬರ[8]ಮೆನಿಸಿರ್ದುದಪರ[8]ಸಂಧ್ಯಾರಾಗಂ ೨೩

(ಲೀಲಾವತಿ ೧೦-೨೦)

ಅಂಬರವಧು ಮಿತ್ರವಿಯೋ
ಗಂ ಬೇಗದೊಳಾ[9]ಗೆ ಮನದೊಳುಮ್ಮಳದಿಂ ಕಾ
ಶಾಂ[9]ಬರಮಂ ಪೊದೆದುದು ತಾ
ನೆಂಬಿನೆಗಂ ಸಂಜೆಗೆಂಪಿನಿಂ ರಂಜಿಸುಗುಂ ೨೪

(ಕುಸುಮಾವಳಿ ೪-೨೭)

ಬಳಸಿದುದರ್ಕವಾಜಿ ಖುರಘಟ್ಟಿತಮಾದಪರಾದ್ರಿಯಿಂದಮು
ಚಳಿಸಿದ ಧಾತುರೇಣುವೆನೆ ಚಕ್ರಯುಗಂಗಳಗಲ್ಕೆಗಿಚ್ಚು ಪಾಂ

---

[1] ವ (ಕಖಬ) (ಕವಿಚರಿತ್ರೆ—I ೩೩೬) [2] ಳ್ದಂ (ಖಬ) [3] ಗ (ಕ)
[4] ತಿರೆ (ಅ) [5] ಮಲಗಿದನಿಕರಂಬುವಿನಂ (ಕ) ಮುಳುಗಿದನಿಂಶುಂಬುವಿನ (ಅ)
[6] ವುವೆಂ (ಅಕ) [7] ಪೊಡೆಯಲ್ (ಅಕ) [8] ತೆಗೆದನೆನಿಸೆ (ಅ) [9] ಗಲುಬ್ಬೆಗ
ದೊಳಂ ಕಾಷಾಯಾಂ (ಅ)

ಸುಳಿಯರ ರಾಗದೇೞ್ಗೆ ದೆಸೆವೆಣ್ಗಳ ರತ್ನವಿಭೂಷಣಾಂಶುವು
ತ್ಪಳಿನಿಯ ಕುಂಕುಮೋದಕದ ಸಿಂಪಿಣಿ ಸಂಜೆಯ ಕೆಂಪು ಲೋಕಮಂ ೨೫

(ಚಂದ್ರಪ್ರಭಪುರಾಣಂ ೮-೪)

ಒಂದದ ಪಗಲಿರುಳೆರಡಱ
ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ
ಸಂದಿಸಿ ಪೊಲಿದವೊಲೆಸೆದುದು
ಮಂದೈಸಿದ ಸಂಜೆಗೆಂಪು ಪಡುವಣ ದೆಸೆಯೊಳ್* ೨೬

(ಜಗನ್ನಾಥವಿಜಯಂ ೧೬-೯೫)

ಜಲರುಹಮಿತ್ರನೊಳ್ ನೆರೆವ ಸಂಜೆಯ ನಿರ್ಭರಾಕಂಠನಾದಮು
ನಲವಿನೊಳೆಯ್ದೆ ಕಲ್ತು ಪರಿಮಿಕ್ಕಿರೆ ಪಕ್ಕೆಗೆ ಸಾರ್ವ ಪಕ್ಕಿಗಳ್
ಚಿಲಿವಿಲಿವಿಚ್ಚುವಿಚ್ಚುಚಿಲಿಚಿಲ್ಪಿಲಿ ಕರ್ಕುಕಹುರ್ಕು ಬಾರ್ಕುಳಿ
ಘುಲಘುಲಲೆಂದದೇನುಲಿಯುತಿರ್ದುವೊ ನೀಳ್ದ ಮಹೀರುಹಂಗಳೊಳ್ ೨೭

---

* ಈ ಪದ್ಯವಾದಮೇಲೆ (ಖಬ) ಪ್ರತಿಗಳಲ್ಲಿ ಮುಂದಿನ ೫ ಪದ್ಯಗಳು ಹೆಚ್ಚಾಗಿವೆ :

ದಿನಪಂ ತನ್ನನಗಲ್ದು ಪೋಗೆ ಹರಿದಿಕ್ಕಾಂತಾನನಂ ಕಂದಿದ
ತ್ತೆನೆ ಪವ್ರ್ವದಿದುದಾತನೊಳ್ ನೆರೆಯೆ ರಾಗಂ ಪಶ್ಚಿಮಾಶಾವಿಳಾ
ಸಿನಿಗಾದತ್ತೆನೆ ಸಂಜೆ ರಂಜಿಸಿದುದೇನಾಶ್ಚರ್ಯಮಂ ತಾಳ್ದರಾ
ತಿನಿಯೇಂ ತನ್ನನಗಲ್ದೊಡಂ ನೆರೆದೊಡಂ ನೀರಾಗಮುಂ ರಾಗಮುಂ ೧

ತಡೆಯದೆ ದಿನಪತಿ ದಿಕ್ಸತಿ
ಯೊಡಗೂಡಲ್ ಪೋದ ತೆಱನನಱದರುಣಂ ಕೆಂ
ಪಿಡಿದಿರ್ದ ಕಾಂಡಪಟಮಂ
ಪಿಡಿದಿರ್ದವೊಲಪರದಿಶೆಯ ಸಂಧ್ಯಾರಾಗಂ ೨

ಪವಳದ ಬಳ್ಳಿಯ ತುಱುಗಲ್
ಪವಣಿಲ್ಲದೆ ತಳ್ತು ಬೆಳದು ಕುಡಿಯಿಟ್ಟಪರಾ
ರ್ಣವದೊಳೆ ಬೆಳೆದಪವೆಂದೆಂ
ಬವೊಲೆಸೆದತ್ತಪರದೆಸೆಯ ಸಂಧ್ಯಾರಾಗಂ ೩

ಇನನಪರಾಂಗನೆಯಂ ಪಿಡಿ
ದನುಭವಿಸಲ್ ಪೋದ ತೆಱದಿನಡಗಿದನಾ ಕಾ
ಮಿನಿಯನುರಾಗಂ ಪರ್ವಿ
ತ್ತೆನಲೆಸೆದತ್ತಪರದೆಸೆಯ ಸಂಧ್ಯಾರಾಗಂ ೪

ಇನನಸ್ತಮಿಸಲ್ ದಿವಸಾಂ
ಗನೆ ಸಹಗಮನವನೊಡರ್ಚಲೊಟ್ಟಿದ ಪೆರ್ಗಿ
ಚ್ಚಿನ ಪರ್ವಿದರುಣರುಚಿಯೆಂ
ಬಿನಮೆಸೆದತ್ತಪರದೆಸೆಯ ಸಂಧ್ಯಾರಾಗಂ

ತವಕದಿನಪ್ಪಿ ತಲ್ಲಣದೆ ಚುಂಬಿಸಿ ಸಿಲ್ಲದೆ ಕೂಡಿ ತೋಡಗ
ಲ್ವುವ ದಿವಸಾವಸಾನಸಮಯಕ್ಕೆ ಕನಲ್ದು ರಿದೇಬ್ವ ಸಂಜೆಯೊ
ತ್ತುವ ತಮವತ್ತಮಿತ್ತಲಳುರ್ದತ್ತಲೆ ಪೊರ್ದಿದ [1]ಹೊಳ್ಳಲೊಳ್[1] ಮಿಡುಂ
ಕುವ [2]ಬೆದೆವಾವಿ[2]ನಂತಗಲಲಾಱದೆಬಿಲ್ದವು ಜಕ್ಕವಕ್ಕಿಗಳ್ ೨೮
(ಅನಂತನಾಥಪುರಾಣಂ ೭-೭೦)

ಸುಯ್ದ[3]ೞ[3]ಲೆ ರಥಾಂಗಂ ಕ
ನ್ನೈಯ್ದಿಲನಲಗೆಂದು ಪಾಯಲೊಡರಿಸಿದುದು ಚೆ
ನ್ನೈಯ್ದಿಲು[4]ರಿ[4]ಯೆಂದು ಪುಗಲನು
ಗೆಯ್ದುದು ಪೆಣ್ಬಕ್ಕಿ ವಿಪುಳ ವಿರಹವ್ಯಥೆಯಿಂ ೨೯

ಬಿಸುಸುಯ್ದತ್ತೋಪನೊಳ್ ಪೋದಡೆ ಕಳವಳದಿಂ ಕಂಜಕಿಂಜಲ್ಕದೊಳ್ ಭಾ
ವಿಸಿ ಪೊಕ್ಕುಂ ಪ[5]ಜ್ಜೆ[5]ಯಂ ತಾವರೆಯೆಲೆವಱಯೊಳ್ ನೋಡಿ ಶೈವಾಳದೊಳ್ ಸೋ
[6]ದಿ[6]ಸಿ ನೀಲಾಂಭೋಜದೊಳ್ ನಿಟ್ಟಿಸಿ ತೆರೆಪೊರೆಯೊಳ್ ಪೊಕ್ಕು ಸುತ್ತುಂ ತೊೞಲ್ದಾ
[7]ಲಿ[7]ಸಿ ನೀರ್ವೊ[8]ಯ್ಲಿಂ[8] ಬೞಲ್ದತ್ತಸಮಶರಸಮುತ್ಕೀಲಿತಾಂಗಂ ರಥಾಂಗಂ ೩೦

ಒಱದುಗುವ ಬಾಷ್ಪವಾರಿ[9]ಯೊ
ಳೆ[9]ಱಂಕೆಗಳ್ ನಾಂದು ಮಗುೞ ವಿರಹಾನಳನಿಂ
ನೆಱ[3] ಬಱ[10]ವಾಗಿರೆ[10] ಪಡುನೇ
ಸಱೊ[11]ಳಳುರ್ದು[11]ವಗಲ್ದ ಚಕ್ರವಾಕದ್ವಂದ್ವಂ ೩೧
(ಚಂದ್ರಪ್ರಭಪುರಾಣಂ ೮-೬)

ಅರಮೆ ಮಱ[3] ಪತಂಗಂಗಾಗೆ ತಚ್ಚೈಲಶೃಂಗಂ
ವಿರಹಪರವಶಾಂಗಂ ತ್ಯಕ್ತಜಾಯಾನುಷಂಗಂ
ಸ್ಮರವಿಶಿಖನಿಷಂಗಂ ಸಾಶ್ರುಪಾತಾಂತರಂಗಂ
ದರವಿಚಳದಪಾಂಗಂ ಮ್ಲಾನಮಾಯ್ತಾರಥಾಂಗಂ ೩೨
(ಚಂದ್ರಪ್ರಭಪುರಾಣಂ ೮-೫)

ತೆರೆ[12]ಯ ಸೆಳೆ[12]ಮಂಚದೊಳ್ ಬಿ
ತ್ತರಿಸಿದ ಗಳಿತಾಬ್ಜದಳದ ನುಣ್ಬಸೆಯೊಳ್ ಬೆ

---

1 ಪೊೞಲೊಳ್ (ಅ) 2 ಬೆಳುಗಾವಿ (ಅ) 3 ಗ (ಕ) 4 ಲಿ (ಕ) 5 ಜ್ಜೈ (ಕ)
6 ವಿ (ಕಖಬ) 7 ರಿ (ಕ) 8 ಯ್ದುಂ (ಕ) 9 ಯಿನೆ (ಅ) 10 ವರಾಗೆ (ಖಬ) 11 ಳಿದುರ್ಗ (ಅ) 12 ಸೆಳೆಯೆ (ಕ)

ಳ್ನೊರೆಯ ತೆರೆಸುತ್ತಿನೊಳ್ ಪ್ರಿಯೆ
[1]ನೆರೆದೊಳ್ಪಂ[1] ಬಯಸಿ ಕೋಕನಾಯ್ತು ಸಶೋಕಂ ೩೩

(ಚಂದ್ರಪ್ರಭಪುರಾಣಂ ೮-೮)

ಜಲಜದಳಪೀಠದೊಳ್ ನ
ಲ್ಲಳ ನುಣ್ಗಳ ಸೋಂಕೆ ಸೋಂಕಿ ಕುಳ್ಳಿರ್ದಳಿನೀ
ಕಳಗಿತರವಮನಾಲಿಪ
ವಿಳಾಸಮಂ ನೆನೆದೊನಲ್ದುದೊಂದು ರಥಾಂಗಂ ೩೪

(ಚಂದ್ರಪ್ರಭಪುರಾಣಂ ೮-೭)

ಇನಿಯಳ್ ಪೊಣರಟೞ್ದೊಡದಂ
ನೆನೆನೆನೆದುಂ ಸುಯ್ದುಸುಯ್ದುಬಿಲ್ದಟ್ಟಿಟ್ಟಿ
ಬ್ಜಿನಿಯಬ್ಜಿನಿದಪ್ಪದೆ ನೋ
ಡಿ ನೋಡಿ ಜಾನಿಸಿದುದತುಳಶೋಕಂ ಕೋಕಂ ೩೫

(ಜಗನ್ನಾಥವಿಜಯಂ ೧೬-೯೭)

ಇದು ಮತ್ಪ್ರಾಣೇ[2]ಶೆಯೆ[2]ನ್ನೊಳ್ ನೆರೆದ ಪುಳಿನಮಾಯಿರ್ದುದಾ
ಕಾಂತೆ ಮೆ[3]ಲ್ಲೊ[3]
ಲ್ಲದ ಮಾರ್ಣಾಳಾ[4]ರ್ಧಮಿಾ[4] ತೋರ್ಪುದೆ ಪುಸಿಮುಳಿಸಿಂ ಕಾಡಲೆಂದಾಕೆ ಪೊಕ್ಕಿ
[5]ರ್ದುದಿದಾ[5]ನೀರೇಜಪರ್ಣೋತ್ಕರಮೆನುತೆ ಮೊದಲ್ಗೊಂಡುದಂಭೋಜ[6]ಸದ್ಮಾಂ[6]
ತದೊಳುದ್ಯತ್ಕಂತು[7]ಚೇತಂ[7] ತೊೞಲಲವಿರತಂ ಚಕ್ರವಾಕಂ ವರಾಕಂ ೩೬

(ಚಂದ್ರಪ್ರಭಪುರಾಣಂ ೮-೧೦)

ನಲ್ಲರಗಲ್ಕೆಯಿಲ್ಲದೆಡೆಯಸ್ತಮಯಕ್ಕೆ ದಿನಾಧಿನಾಯಕಂ
ಸಲ್ಲದ ತಾಣಮುಂಗಜಶರಾಹತಿ ಪೊರ್ದದ ದೇಶಮುಳ್ಳೊಡಂ
ತಲ್ಲಿಯೆ ಮಾೞ್ಕೆ ಮಜ್ಜನನಮಂ ಬಿದಿಯೆಂದು ರಥಾಂಗಕಾಂತೆ ಹೃ
ದ್ವಲ್ಲಭವಿಪ್ರಯುಕ್ತೆ ಬಗೆಗೆಟ್ಟು ನೆೞಲ್ದುದು ಪದ್ಮಪತ್ರದೊಳ್ ೩೭

(ಚಂದ್ರಪ್ರಭಪುರಾಣಂ ೮-೭)

ಚಂಡಮರೀಚಿಗಸ್ತಮಯಮಿಲ್ಲದುದೊಂದೆಡೆ [8]ನಿಮ್ಮ[8] ಕೇಳ್ದುದುಂ
ಕಂಡುದುಮುಳ್ಳೊಡಿಂ ಬೆಸಸಿಮಾಮಿರದಲ್ಲಿಗೆ ಪೋಪೆವೆಂದು ಮೆ
ಯ್ಗೊಂಡೊಲವಿಂದಗಲ್ಕೆಗಣಮಾೞದೆ ಪಕ್ಕಿಗಳೆಲ್ಲ[9]ಮೇಂ[9] ಮರು
ಳ್ಗೊಂಡವೊಲೂಳ್ದು ಕೂಡೆ ಬೆಸಗೊಂಡು ಬೞಲ್ದುವು ಜಕ್ಕವಕ್ಕಿಗಳ್ ೩೮

(ಪಂಪಭಾರತಂ ೪-೪೮)

---

1 ಗಿರಿದೊಳ್ನೆ (ಅ) 2 ಶನೆ (ಅ) 3 ಲ್ಲೊ (ಅ) 4 [illegible]

ನೋಡಿ ಕನಲ್ದೊನಲ್ದು ಪಡುನೇಸಱುಣ್ಮುವ ಕಣ್ಣನೀ[1]ರೋಳೋ
ಲಾ[1]ಡುವ ಜಕ್ಕವಕ್ಕಿ ಬಗೆಗೆಟ್ಟು ವಿಯೋಗವಿಷಾದ[2]ವೇಗದಿಂ[2]
ಪಾಡಱಿದೆಂತೊ ಪಾಱದಪುವಾನಱಿದೆಂ ನಿಡುಸುಯ್ಯ ಗಾಳಿ ಕೊಂ
ಡೋಡಿದುವೊಂದನೊಂದೆಸೆಗದಲ್ಲದೊ[3]ಡೇಂ ಗಡ[3] ಪಾಱಲಾರ್ಪುವೇ ೩೯
(ಮಲ್ಲಿನಾಥಪುರಾಣಂ ೭-೫)

ಕೂಡಿದೆವಿಲ್ಲಿ ಕೂಡಿ ನಲಿದೋಕುಳಿಯಾಡಿದೆವಿಲ್ಲಿ ಸಂಗಡಂ
ಪಾಡಿದೆವಿಲ್ಲಿ ಪಂಕಜದ ಕೋಮಳಕೋಶದ ಬೀಜರಾಜಿಯಂ
ತೋಡಿದೆವಿಲ್ಲಿ ನೀಡಿ ಕುಟುಕಂ ಮನದಟ್ಕಿಱುೞೀಗಳಿಕ್ಕಿ ಬಾ
ಯ್ಗೂಡಿದೆವೆಂದು ತಮ್ಮನಿಯರಂ ನೆನೆದೞ್ತುವು ಜಕ್ಕವಕ್ಕಿಗಳ್ ೪೦

ಅಱಿಸಿ ಸುೞಿಸುೞಿದು ನಲ್ಲಳ
ನೆಱಂಕೆಗೊಟ್ಟೊಱಲಿಯೊಱಲಿ ದನಿಗೆಟ್ಟೞುತುಂ
ತೊಱೞತರ್ಪ ಕಣ್ಣನೀರ್ವರ
ಲೊಱಗಿದುದೞಿತ್ತೊಂದು ಮೂರ್ಛೆವೋಗಿ ರಥಾಂಗಂ ೪೧

ಎರಲಲೆಪಿಂದೆಸೆಱ್ ಮಿಸುಪ ನೆಯ್ದಿಲನೋಪಳೆಗೆತ್ತು ಗೆಂಟಱುೞ್
ಕರೆದುದು ಬಾರಳಾಂ ಕರೆದೊಡಂ ಪ್ರಿಯೆಯೆಂದು ಕನಲ್ದು ಚಂಚುವಂ
ಮುರಿದುದು [4]ಬಂದ[4]ಡಂಗಿದಳೆ ಗೆತ್ತು ಬಿದಿರ್ಚಿ ದಳಂಗಳಂ ತೆಱಂ
ದಿರಿದುದು ಜಕ್ಕವಕ್ಕಿ ಮಿಗೆ ಮೂರ್ಛೆಗೆ ಸಂದುದು ಕಾಣದೋಪಳಂ ೪೨
(ಅನಂತನಾಥಪುರಾಣಂ ೭_೭೧)

ಕಡುಬಿಸುಪನಹಿಮಕರನಿವ
ಱುೞಡಲೊಳ್ [5]ಪುಡಗಿಟ್ಟು[5] ಪೋದನೆನೆ ಮಱುಕಂ ನೂ
ರ್ಮಡಿಸಿದುದಗಲ್ಕೆಗಾಱದೆ
ಮಿಡುಮಿಡುಮಿಡುಕಿದುವು ಜಕ್ಕವಕ್ಕಿಯ ಪೊಣರ್ಗಳ್ ೪೩

ಪುಳಿನತಳಂಗಳೊಳ್ [6]ಸುೞಿದು[6] ನುಣ್ಮಳಲಂ ಜಲಶೀಕರಂಗಳಂ
ತಳಿದು ಕೞಲ್ದ ಪದ್ಮದಳಸಂಕುಳದಿಂದೆಸೞ್ಪಸನೊತ್ತಿ ಪೂ
ಗೊಳದೊಳಗಲ್ದ ಕೋಕವನಿತಾವ್ಯಥೆಗಂ ಶಿಶಿರೋಪಚಾರದೊಳ್
ಕೆಳದಿಯರಾದು[7]ವೋ[7] ತಳರ್ವ ತಣ್ಣೆಲರಿಂ ತರಳೋರ್ಮಿಮಾಲೆಗಳ್ ೪೪
(ಅನಂಥನಾಥಪುರಾಣಂ ೭_೬೧)

ಇನನಸ್ತಮಯನಾತನೊಳ್ ತವದ ಪೆರ್ಚಂ ನಿಚ್ಚಮಿಚ್ಛೈಪ ಕೋ
ಕನಿಕಾಯಕ್ಕಿನಿತಾಯ್ತು ಶೋಕಮವನಸ್ತಪ್ರಾಪ್ತಿಯಂ ಸಾರ್ವು[1]ದ
ಕ್ಕೆ[1]ನಿತಾಯ್ತುತ್ಸವಮುತ್ಪಲಕ್ಕೆನುತವಂ ನೋಡಲ್ಕೆ ತಾನಾಜಿದ
ಬ್ಜಿನಿ ಕಣ್ಮುಚ್ಚುವ ಮಾಟಿಕ್ಕಯಿಂ ಮುಗಿ[2]ದುವೆ[2]ತ್ತಂ ಪದ್ಮಪತ್ರೋತ್ಕರಂ ೪೫

(ಚಂದ್ರಪ್ರಭಪುರಾಣಂ ೮–೧೧)

ಇದು ಕೋಕಶೋಕಮಂ ನೋ
ಡದ ಕೃಪೆಯಿಂ ಪದ್ಮನಯನಮಂ ಪದ್ಮಿನಿ ಮು
ಚ್ಚಿದಳೆನೆ ಭಾವಕದಿಂದ
ಲ್ಲದೆ ಭಾವಕಿ ತೊಱೆದಳಿನನಗಲ್ಕೆಯ ನೋವಂ ೪೬

(ಜಗನ್ನಾಥವಿಜಯಂ ೧೬-೯೪)

ಅಸಮುಸಮವೃತ್ತಿಯಂ ಭಾ
ವಿಸುವಂದಲ್ಪತೆಯೆ ನಾಡೆ ಲೇಸೆಂಬವೊಲು
ಲ್ಲಸಿತೋತ್ಪಲಂಗಳೊಳ್ ಮುಗಿ
ದು ಸರೋಜಂ ನೆನೆಯಿಸಿತ್ತು ಚತು[3]ರಾಶ್ರ[3]ಮುಮಂ ೪೭

(ಚಂದ್ರಪ್ರಭಪುರಾಣಂ ೮-೧೨)

ಪೊರೆಯದು ಜಾಡ್ಯದೊಳೆನಸುಂ
ಪಿರಿ[4]ದು[4]ಗುಣಂ ಸಿರಿಯುಮುಂಟು ತನಗೆನಿಪಾತಾ
ವರೆ[5]ಗಂ ಪೋದುದು[5] ನಲವೆನೆ
ಧರೆಯೊಳ್ ಕಾಲಮನದಾರೊ ಕಳೆಯಲ್ ಬಲ್ಲರ್ ೪೮

(ಚಂದ್ರಪ್ರಭಪುರಾಣಂ ೮–೧೩)

ಪಿರಿದುಂ ಬಿದಿ ನಿಜ ಜ[6]ನ್ಮಾ
ಕ[6]ರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ
ದೊರೆಕೊಳಿಸಿದನೆನೆ ಮತ್ತಿತ
ರಗೊಳಾತಂ ಮಾಟ್ಪ ಕೃಪೆ ಖಪುಷ್ಪಮದಲ್ತೇ ೪೯

(ಚಂದ್ರಪ್ರಭಪುರಾಣಂ ೮-೧೪)

ಇನನಸ್ತಂಗತನಾ[7]ಗೆಯು[7]ತ್ಪಲಿನಿ ಪೇಟ್ಗಿಂ ಲಕ್ಷ್ಮಿಯುಂಟೆಂಬುದ
ರ್ಕನ[8]ಗಿನ್ನಪ್ಪುದು[8] ರಾಜಬಾಧೆ ಬಟಿಂಕಂ ಲೇಸಲ್ತು ತಾನೆನ್ನ ಜೀ

1 ದುಂ ಇ (ಅ) 2 ದುದೆ (ಅ) 3 ರಕ್ರ (ಅ) 4 ಯ (ಖ ಬ) 5 ಗಮರೆ ಯಾಯ್ತು (ಅ) ಗದರೆವೋಯ್ತು (ಕ) 6 ನ್ಮಾಂತ (ಕಖಬ) 7 ದನು (ಖಬ) 8 ಗಂತ ಪ್ಪದು (ಅ)

ವನಕೆಂದುಟ್ಟೆಗದಿಂದೆ ಸಂಜುರುೞಯುಂ [1]ಪೊೞ[1] ಸುಂಗಿದಳ್ [2]ಪಿಂಗದ[2]
ಬ್ಜಿನಿಯೆಂಬಂತೆವೊಲಾಯ್ತು ಕುಟ್ಮಳಿತಕಂಜಾತೋದರೇಂದಿಂದಿರಂ ೫೦
(ಚಂದ್ರಪ್ರಭಪುರಾಣಂ ೮-೧೫)

ಎನಗಾರಿರ್ದಪ[3]ರೋ[3] ರಥಾಂಗಮಿಥುನಕ್ಕೆಂತೊಲ್ಲ[4]ದೀ[4] ನೀಲಪ
ದ್ಮಿನಿಯೆನ್ನಂ ನಗುವಂತು ಮಾಡಿದೆ ಧರಿತ್ರೀನೇತ್ರ [5]ನೊಂದೆನ್ನ[5] ಕೇ
ಡನದೇ[6]ನೆಂ[6]ದಪೆಯೆಂದು ಸಂಕುಚಿತವಕ್ತ್ರಾಸಕ್ತಭೃಂಗೀಕಲ
ಸ್ವನದಿಂ ಕೂಗಿಡುವಂತಿರಾಯ್ತು ದಿನಪಂಗಂಭೋಜಿನೀಕುಟ್ಮಲಂ ೫೧
(ಅನಂತನಾಥಪುರಾಣಂ ೭-೬೮)

ಬಿಸರುಹಮಿತ್ರನೆಂದೆನಿಸಿದೆಮ್ಮನ[7]ನೋವದೆ[7] ರಾಜಬಾಧೆಗೊ
ಪ್ಪಿಸಿ ಪೆಱಸಾರ್ದನೋಲಗಿಪ ಭೃಂಗ[8]ಕುಲಾ[8]ವಳಿ ಬಿಟ್ಟುಪೋಯ್ತು ತ
ಳ್ತಿಸೆವ ವಿಕಾಸಲಕ್ಷ್ಮಿ ಪಗೆಯಂ ನೆಱೆ ಪೊರ್ದಿ[9]ದಳೇ[9]ವೆನೆಂತು ಜೀ
ವಿಸು[10]ವೆನೆ[10]ನುತ್ತೆ ಮೂರ್ಛಿಸುವವೋಲ್ ಮುಗಿದತ್ತರವಿಂದಸಂಕುಳಂ ೫೨
(ಕುಸುಮಾವಳಿ ೪-೧೯)

ಆ ಸರಸೀಜಬಾಂಧವನ ಪಿಂಬಡಿನೊಳ್ ಕಡುವಿನ್ನನಾದವಿಂ
ತೀ ಸರಸೀರುಹಂಗಳವನೀ ಪದದೊಳ್ ಬಿಸುಟೆಂತು ಪೋಪೆವೆಂ
ಬೀ ಸಮಕಟ್ಟಿನೊಳ್ ನೆಲಸಿದಂ[11]ದದಿನಿರ್ದುವು[11] ಷಟ್ಪದಂಗಳು
ತ್ಕೇಸರಕೋಟಿಸಂಕಟಕುಶೇಶಯಕೋಶಕುಟೀರಕಂಗಳೊಳ್ ೫೩
(ಪಂಪಭಾರತಂ ೪-೪೭)

ರಸ[12]ಗೀತಾ[12]ತೋದ್ಯನೃತ್ತ್ಯಾನುಗದೊಳೆ ಕಹಳಾಶಂಖಭೇರೀಮೃದಂಗ
ಪ್ರಸರಂ ಮೇಳಾಪ[13]ದೊಳ್[13] ಘೂರ್ಣಿ[14]ಪ[14] ಮಣಿಶಿಖರಾಗಾರಪಾರಾವತಂಗ
ಳ್ಗಸಿತೋದ್ಯದ್ಧೂ[15]ಪ[15]ಧೂಮಚ್ಛವಿಗ[16]ಳೆ[16]ರವಸುಂ ವಲ್ಲಭಾ[17]ಲೋಭ[17]ದಿಂ ಪು
ಟ್ಟಿಸೆ[18]ದೇವೋತ್ಸಾ[18]ಲಯಂಗಳ್ಗೆಸೆದುದಸದಳಂ ಧೂ[19]ಪ[19]ವೇಳಾವಿಳಾಸಂ ೫೪
(ಅನಂತನಾಥಪುರಾಣಂ ೭-೬೫)

ಗಱಿಯಿಸುವ ತಮಂ ಮೂಡಲ್
ಪೊಱಿಗ[20]ಟ್ಟಿದ[20] ಸಂಜೆಗೆಂಪು ಪಡುವಲ್ ಕೈಕೊಂ

---

[1] ಪೊಂ (ಕಖಬ) [2] ಪೇಱದ (ಅ) [3] ರಿ (ಅಖಬ) [4] ದಲ್ (ಅ)
[5] ನೋಡೆನ್ನ (ಅ) ನೆಂ ದನ್ನ (ಖಬ) [6] ವೋ (ಅಖಬ) [7] ನೀಗಳೆ (ಅ)
[8] ಭಟಾ (ಅ) [9] ದಾಡೇ (ಅ) [10] ವುದೆ (ಅ) [11] ದಂತೆಱಗಿರ್ದವು (ಅ)
[12] ಗಿತಾ (ಕ) [13] ಕಂ (ಅ) [14] ಸೆ (ಅ) ಸಿ (ಕ) [15] ತ (ಕಖಬ) [16] ಳ
(ಖಬ) [17] ರೋಚ (ಅ) [18] ಜೈನೇಂದ್ರಾ (ಅ) [19] ಮ (ಅ) [20] ಟ್ಟುವ (ಅ)

ಡೆಱಲೆ ಧರೆಗರ್ಧನಾರಿಯ
ತಲೆಕವಿಡಿದಂತಾಯ್ತು ಗಗನಮಂಡಲಮಿನಿಸಂ ೫೫

(ಅನಂತನಾಥಪುರಾಣಂ ೭–೭೨)

ಅಂಗಂಗಳ್ ನಸು[1]ದೋಱಿ[1] ದಿ
ಗಂಗನೆಯರ ಮೇಲೆ ಕವಿದ [2]ಕಾ[2]ೞ್ಗತ್ತಲೆ ಚೆ
ಲ್ವಿಂಗುಟ್ಟ ಕರಿಯ ಕಾಗಿನ
ಭಂಗಿಯನನುಕರಿಸುತಿರ್ದುವಂತಾ ಕ್ಷಣದೊಳ್ ೫೬

(ಲೀಲಾವತಿ ೧೦–೨೬)

ದಿನನಾಥಂ ಪೆಱಪಿಂಗೆ ಪೆತ್ತು ತೆಱಪಂ ಮೆಯ್ವೆರ್ಚೆ ರಾಗಂ ನಿಶಾಂ
ಗನೆಯಿಂ ಮು[3]ನ್ನ[3] ಮೃಗಾಂಕನೊಳ್ ನೆರೆಯಲೆಂದಾಶಾವಧೂ[4]ದೂತಿ[4]ವ
ರ್ತನದಿಂದಂ ಗಗನಸ್ಥಳೀಕುಲಟೆ ಕೊಂಡಳ್ ನೀಲಚೇಲಾವಕುಂ
ಠನಮಂ ತಾನೆನೆ ದಟ್ಟಮಾಗಿರೆ ತಮಂ [5]ಪರ್ಬಿತ್ತು[5] ದಿ[6]ಕ್ಪ್ರಾಂ[6]ತಮಂ ೫೭

(ಅನಂತನಾಥಪುರಾಣಂ ೭-೭೪)

ಇನನುೞಿದಪರದಿಶಾಕಾ
ಮಿನಿಯೊಳ್ ಕೂಡಿದೊಡೆ ನೋಡಲಾಱದೆ ಪೂರ್ವಾಂ
ಗನೆ ಮುಚ್ಚಿದಕ್ಷಿಪಕ್ಷ್ಮದ
ತನಿಗರ್ಪೆನಿಸಿದುದು ಕೊನರ್ವ ಕತ್ತಲೆ ನಭದೊಳ್ ೫೮

(ಅನಂತನಾಥಪುರಾಣಂ ೩-೬೭)

ಪ್ರಾಚೀಮುಖಮೃ[7]ಗ[7]ಮದಮ
ರ್ವೀಚಳದಳಕಂ ನಭಸ್ಥಳೀ[8]ನೀಳ[8]ವಿಭೂ
ಷೋಚಿತ ಮರೀಚಿ [9]ಪಸರಿಸೆ[9]
ಸೂಚೀನಿರ್ಭೇದ್ಯಮಾದುದಂದಿನ ತಿಮಿರಂ ೫೯

(ಲೀಲಾವತಿ ೬-೧೦೮)

ದಿವಿಜೇಂದ್ರೇಭ[10]ಪ್ರಧಾನಂ[10] ಬಹಳದಹನಧೂಮಂ ಯಮೋಚ್ಚೈರ್ಲುಲಾಯ
ಚ್ಛವಿಕಂ ಕ್ರವ್ಯಾದಕಾಯದ್ಯುತಿ ವರುಣಗೃಹಸ್ಥಾ[11]ಸ್ನು[11]ಕೃಷ್ಣಪ್ರಕಾಶಂ
[12]ಪ[12]ವನೋದ್ವೃತ್ತಕೃಷ್ಣಸಾರಪ್ರಭೆ ಧನದಪುರೀನೀಲ[13]ಶಾ[13]ಲಾಂಶುಜಾಲಂ
ಭವಕಂಠಚ್ಛಾಯೆ ಪರ್ಬಿತ್ತೆನೆ [14]ದಶದಿಶೆ[14]ಯಂ ಮರ್ಬು ಪರ್ಬಿತ್ತುಗುರ್ಬಿಂ ೬೦

(ಲೀಲಾವತಿ ೧೦-೨೭)

---

1 ದೆಱೆಯೆ (ಅ) 2 ತೆ (ಅ) 3 ನ್ನೆ (ಅ) 4 ದೌತ್ಯ (ಅ) 5 ತಳ್ತತ್ತು (ಅ) 6 ಗ್ಪ್ರಾ (ಕ) 7 ದು (ಖಬ) 8 ನಿಳಯ (ಅ) 9 ಬರೆವರೆ (ಅ) 10 ಪ್ರಭೇದಂ (ಅ) 11 ಶ್ಮ (ಖಬ) 12 ಸ (ಕ) 13 ತ್ರೈ (ಕ) 14 ದೆಸೆದೆಸೆ (ಅ)

ಮೆಟ್ಟಿದನಿತ್ತೆ ಧಾರಿಣಿ ಚರಾಚರಭೇದ ಸುವಸ್ತು ರೂಪುಗಳ್
ಮುಟ್ಟಿದನಿತ್ತೆ ಬಕ್ಕಬಯಲಾಗಸವೆಂಬರ ಮಾತು ನಿಶ್ಚಯಂ
ಗೆಟ್ಟುದು ತಾನುಮುಂ ತನಗೆ ಸಂಶಯಮೆಂಬಿನಿತೊಂದು ಮೋಹನಂ
ಪುಟ್ಟಿ ಜನಕ್ಕೆ ಗಾಢತರಮಾದುದು ಘೋರತಮಂ ತಮಸ್ತಮಂ ೬೧

ಜಗುನೆಯ ಕರ್ಮಡು ನೆಲನಂ
ದಿಗಿಭದ ಮದವಟ್ಟೆ ದೆಸೆಗಳಂ ರಾಹುಶಿರಂ
ಗಗನಮನೆಡೆಗೊಂಡತ್ತೆನೆ
ಜಗಮಂ ಪರ್ಬಿದುದು ಬಹಳ ತಮಸಂ ತಮಸಂ ೬೨

(ಮಲ್ಲಿನಾಥಪುರಾಣಂ ೭–೨೧)

ದೆಸೆಯಿದು ಭೂವಳಯಮಿದಾ
ಗಸಮಿದು ತಾನೆಂಬ ಭೇದಮಿಲ್ಲೆನೆ ತಮ ಮ
ರ್ಬಿಸಿದುದು ಜಗಮಂ ಕೃ[1]ಷ್ಣಂ[1]
ಬಸಿಱೊಳಗಿಟ್ಟಂತೆ ರಜನಿ[2]ಚರ[2]ಭಯದಿಂದಂ ೬೩

(ಲೀಲಾವತಿ ೧೦-೨೯)

ಮಸಿಯಿಂದಂ ಜಗಮೆಲ್ಲಮಂ ದಿತಿಸುತಂ [3]ಮೇಣ್[3] [4]ಪೂಚ್ಚಿನೋ[4] ಕಾಳಮೇ
ಘಸಮೂಹಂ ದೆಸೆಯೆಲ್ಲಮಂ [5]ಮುಸುಕಿತೋ[5] ಗಂಡೇಭಚರ್ಮಂಗಳಂ
ಪ್ರಸರಂಗೆಯ್ದನೊ ಶಂಭುವೆಂಬ ಬಗೆಯಿಂ [6]ತಳ್ಪೊಯ್ದು ಕಟ್ಟಿರ್ದು[6] [7]ಸೂ
ಚಿಸಲಾರ್ಗಂ ವಶಮಾಗದಂತು ಕವಿಯಿತ್ತು[7]ದ್ದಾಮ ಭೀಮಂ ತಮಂ ೬೪

(ಪಂಪಭಾರತಂ ೪-೪೯)

ಕರಿದತ್ತಾ ತುಂಬಿಗಂ ಕಾರ್ಮುಗಿಲ ಬಳಗಮಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆ ತಾಂ ನೋಟಿಱ್ಪಡೆ ಕಡುಕರಿದಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆಗಂ ಕಜ್ಜಳರುಚಿ ಕರಿದಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆಗಂ ಕಜ್ಜಳರುಚಿಗಮಿದೇಂ ಕಜ್ಜಿನಾಯ್ತೋ ತಮಂಧಂ ೬೫

ಅಮಮ ಮಧುಕರ ಕದಂಬಕ
ಮಮಮಮತಿಸ್ನಿಗ್ಧರಂಜಿತಾಂಜನಪುಂಜೋ

---

[1] ಷ್ಣನ (ಕ) [2] ಜರಿ (ಕ) [3] ಮುಂ (ಅ) [4] ಪೂಣ್ದನೊ (ಕ) [5] ಕವಿದುದೊ (ಅ) [6] ತಳ್ಪೊಯ್ಕೆ ತಳ್ಪೊಯ್ದು (ಕ ಖ ಬ) [7] ಪುಂಜಿಸಲಕ್ಕುಂ ಮಜ್ಜಿಮಾನಿ ತುಳ್ಕಿ ಕವಿದತ್ತು (ಕ) ಪುಂಜಿಸಲಕ್ಕಸ್ಪಟಮಾಗದಂತು ಕವಿಯಿತ್ತು (ಖ ಬ)

ಪಮಮಮಮಸತಿ ಸಮೂಹಾ
ಶ್ರಮಮಮದೇವೊಗೆಟ್ಟಿನುರ್ಬಿ ಪರ್ಬಿದ ತಮಮಂ ೬೬

ಬಿದಿ ಹರಿನೀಲ[1]ದೊಳ್[1] ಕಡೆದಜಾಂಡಮನಂಜನದೊಳ್ ಪೊರೆಟ್ಟಿದಂ
ತೊಡವಿರೆ ಮರ್ಬು ಸಂದೆ[2]ಯ[2]ದೆ ತಮ್ಮೊಡಲಂ [3]ಬಿಡದಂದು[3] ನೋಟ್ಟಿರೆಂ
ಬುದಸೆನೆ ನೋಡಿ ನಿಟ್ಟಿಸುವರಾರಿದು ಪರ್ವತಮೆಂಬಿದುರ್ವಿಯೆಂ
ಬಿದು ದೆಸೆಯೆಂಬಿದಭ್ರಪಥಮೆಂಬ ಚರಾಚರವಸ್ತುಭೇದಮಂ ೬೭
(ಮಲ್ಲಿನಾಥಪುರಾಣಂ ೭-೩೩)

ಈ ಮಂದಮಪ್ಪ ಕಟ್ಟಲೆ
ಕಾಮಾಂಧಕ ಜನದ ಮನದ ಕಟ್ಟಲೆಯಿಂದಂ
ಭೀಮಮೆನೆ ಕವಿದು ಕೂಡೆ ತ
ಮೋಮಯಮೆನಿಸಿದುದು ಸಕಲ ಭುವನಾಂತರಮಂ ೬೮

ಜಾರರ ಸಿರಿ ಚೋರರ ಸಿರಿ
ಕ್ರೂರಸರಂದೋಱುತಿರ್ಪ ಗೂಗೆಯ ಸಿರಿ ಮ
ತ್ತಾರ ಸಿರಿ ತಮದ ಸಿರಿ ದೃ
ಕ್ಸಾರತೆಗದು ನಾಡೆ ಗೆಂಟು ಕಷ್ಟನ ಸಿರಿವೋಲ್ ೬೯

ಘೋರಾಂಧಕಾರಮತಿದು
ರ್ವಾರಂ ನೆಲೆವೆರ್ಚೆ ಬಯಲೊಳಂ ಜಾ[4]ರರ[4] ಸಂ
ಚಾರಕ್ಕೆಡೆಗೊಟ್ಟತ್ತಪ
ಕಾರಿಯ ಸಿರಿ ಖಳರನಲ್ಲದೇಂ ತಣಿಪುಗುಮೇ ೭೦
(ಮಲ್ಲಿನಾಥಪುರಾಣಂ ೭-೩೪)

ಪದತಳಮಂ ತಳರ್ಚಲಿನಿಸಿಲ್ಲೆನೆ ಧಾರಿಣಿ ಮಾಯಮಾದುದೋ
ವದನಮನುದ್ದವೆತ್ತಲಿನಿಸಿಲ್ಲೆನೆ ವಾರಿದವೀಧಿ ಮೇಲೆ ಬಿ
ಟ್ಟುದೊ ತನುವಿಂಗೆ ಸಾರಲಿನಿಸಿಲ್ಲೆನೆ ನಾಲ್ದೆಸೆ [5]ತಾ[5]ಪಿಸಿತ್ತೊ ಪೇ
ೞಿಂದು ವಿಪರೀತಮೆಂದು ಸುೞಿವರ್ ನೆಲೆ ಕಟ್ಟಲೆ ಪೆತ್ತುದೇೞ್ಗೆಯಂ ೭೧

ಕರಿದು ಪಿಕಂ ಪಿಕಕ್ಕೆ ಕರಿದಾ ಭ್ರಮರಂ ಪಿಕದಿಂದೆ ತುಂಬಿಯಿಂ
ಕರಿದೆಸೆವಂಜನಂ ಪರಭೃತಕ್ಕಳಿಗಂಜನಕಿಂದ್ರನೀಲಮುಂ

---

[1] ಡಿಂ (ಕ) [2] ಗ (ಅ) [3] ತಡವೃತ್ತ (ಕ ಖ ಬ) [4] ರಾ (ಅ)
[5] ವ್ಯಾ (ಕ)

ಕರಿದು ಪಿಕಾಳಿಯಿಂದಳಿಯಿನಂಜನದಿಂ ನೆಗಟ್ಟಿಂದ್ರನೀಲದಿಂ
ಕರಿದೆನಲುರ್ಬಿ ಪರ್ಬಿದುದಗುರ್ಬಿಸಿ ಸರ್ವದಿಗಂತಮಂ ತಮಂ ೭೨

ಹರಬರ್ಹಿಗಣಗಳಜ್ಞೋ
ದರಶಮನಶರೀರವನ್ನಭ್ಯತಪಟ್ಟರಣೋ
ತ್ಕರದ ದೊರೆಯುಪ್ಪ ಕರ್ಪಿಂ
ಕರಮುಬ್ಬರಮಾಯ್ತು ಬಹಳ ತಮಸಂ ತಮಸಂ ೭೩

ಇದು ತಿಮಿರಾಪಹಾಂಜನಮುಲೂಕಕುಲಕ್ಕಿದು ಪುಂಶ್ಚಲೀರತ
[1]ಕ್ಕುದಿತ ತಮಾಲ[1]ಮಂಟಪಮಿದುತ್ಪಲಲಕ್ಷ್ಮಿಯ ಮುಂಡನಕ್ಕೆ ಸು
ತ್ತಿದ ನವನೀಲಕಾಂಡಪಟಮಿಂತಿದು ಚಕ್ರಯುಗ[2]ಕ್ಕಗಲ್ಚಲಿ[2]
ಕ್ಕಿದ ಕಿಸು[3]ರ್ವೇರ[3] ಕರ್ಜೋಗೆಯೆನಿ[4]ಪ್ಪುವೊಲಾ[4]ಯ್ತು ಮಹತ್ತಮಂ ತಮಂ ೭೪
(ಚಂದ್ರಪ್ರಭಪುರಾಣಂ ೮-೧೯)

ಇದು ಚೋರರದೃಶ್ಯಾಂಜನ
ಮಿದು ವೃದ್ಧಾಂಗನೆಯರೆಸೆವ ಪಲಿತೌಷಧಮಿಂ
ತಿದು ಕಾಮನ [5]ಕೂ[5]ರಲಗೆನಿ
ಸಿದುದಪ[6]ಕ್ವತ್ವಾ[6]ರಮಂಧಕಾರಮಪಾರಂ ೭೫
(ಚಂದ್ರಪ್ರಭಪುರಾಣಂ ೮-೨೦)

ಸರಳಂ ವಕ್ರಂ ತರಳಂ
ಸ್ಥಿರಮುಚ್ಚಂ ನೀಚಮೀಕ್ಷಣಕ್ಕೊಂದವೆ ತಮಂ
ಸರಿಯಾದುದಂತೆ ವಿಗತಾಂ
ತರವೆನಿಪನ [7]ಮೆಚ್ಚು[7] ಬಲ್ಲರಂ ಮೆಚ್ಚಿಕುಮೇ ೭೬
(ಚಂದ್ರಪ್ರಭಪುರಾಣಂ ೮-೨೧)

ಮುಟ್ಟಿದುದಲ್ಲದಿಲ್ಲುಱಿದ ಭೂತಳಮೆಣ್ಟೆಸೆಗಳ್ ನಭಸ್ಥಳಂ
ತೊಟ್ಟನೆ ಮಾಯವಾಯ್ತು ತನುವಿರ್ದಪುವಿಲ್ಲೆನುತಂ ಕರಾಗ್ರದಿಂ
ಮುಟ್ಟಿದರಿರ್ದ ತಾಣದೊಳೆ ಸುಮ್ಮನೆ ವಿಸ್ಮಯದಿಂ ಜನೋತ್ಕರಂ
ನಟ್ಟವೊಲಿರ್ಪಿನಂ ನಿಮಿರ್ದು ಪರ್ಬಿದುದುರ್ಬಿ ಮಹತ್ತಮಂ ತಮಂ ೭೭

ಇನದೀಪಂ ನಂದಿರೆ [8]ಬಂ
ದು[8] ನಿಶಾರಾಕ್ಷಸಿ ಚರಾಚರೌಘಗ್ರಸನಾ

---

[1] ಕ್ಕೊದವಿದ ಕಾಳ (ಪ ಬ) [2] ಕ್ಕಗಲ್ಚಿ ಗಿ (ಪ) [3] ರ್ವಕ್ಕೆ (ಅ) [4] ಪ್ಪಿನಮಾ (ಅ)
[5] ಕಾ (ಅ ಪ) [6] ದೃಕ್ಕಾ (ಅ) [7] ಪೆರ್ಚು (ಕ) [8] ಜೇಗ (ಕ)

ರ್ಥಿನಿ ಭುವನಭವನಮಂ ಘೋಂ
ಕನೆ [1]ಪಿಡಿಗೆತ್ತೆಂದುಮಾದುದಂದು[1] ತಮಂಧಂ ೭೮

(ಜಗನ್ನಾಥವಿಜಯಂ ೧೬-೧೦೧)

ಉದಯವಿಶಾಲಶೈಲದ ತಮಾಲವನಂ ನವನೀಲರತ್ನಚೂ
ಳದ ರುಚಿ ನೀರಜಾಗರದ ನೀರರುಹಂ ಮುಗಿದಿರ್ದುದಿಂದ್ರದಿ
ಙ್ಮದಗಜದಾನಸೌರಭಕೆ ಬಂದೆಜಗಿರ್ದ ಮದಾಳಿಮಾಲಿಕ್ಕೆಯೆಂ
ಬುದು ಬಗೆಗುಣ್ಮೆ ಪರ್ವಿದುದು ಪೂರ್ವದಿಗಂತಮನಾವಗಂ ತಮಂ* ೭೯

ಇದು ಮಧುಕರನಿದು ಮಲ್ಲಿಗೆ
ಯಿದು ಕೋಕಿಲನಿದು ಮರಾಳನಿದು ಮದಗಜಮಿಂ
ತಿದು ಕಂಠೀರವನಿದು ಕರಿ
ದಿದು ಬಿಳಿದೆಂದಱಿಯಬಾರದುರ್ವಿದ ತಮದೊಳ್ ೮೦

(ಗಿರಿಜಾಕಲ್ಯಾಣಂ ೪–೭೭)

ನಸುಗಟ್ಟಲೆಯರೆಗಟ್ಟಲೆ
ಮುಸುಕುಂಗಟ್ಟಲೆ ಪೊದಟ್ಟಿ ಪೆರ್ಗಟ್ಟಲೆ ನಾ
ಲ್ದೆಸೆಗಟ್ಟಲೆ ರಸಗಟ್ಟಲೆ
ಪೊಸಗಟ್ಟಲೆಯೆನಿಸಿ ಕೂಡೆ ತೀವಿತು ತಿಮಿರಂ ೮೧

(ಗಿರಿಜಾಕಲ್ಯಾಣಂ ೪–೭೩)

ಗಿರಿಗಳ್ ನೀಲಾದ್ರಿಯೆಂಬಂತಿರೆ ನಿಖಿಳನದೀರಾಜಿ ಕಾಳಿಂದಿಯೆಂಬಂ
ತಿರೆ ವೃಕ್ಷಂಗಳ್ ತಮಾಲಾಕೃತಿಯಿನಿರೆ ಮೃಗಶ್ರೇಣಿ ಋಕ್ಷಂಗಳೆಂಬಂ
ತಿರೆ ನಾನಾ ಪಕ್ಷಿಗಳ್ ಕೋಗಿಲೆವೊಲಿರೆ ನಭಂ ಕಾರ್ಮುಗಿಲ್ ಮುಚ್ಚಿದಂತಾ
ಗಿರೆ ಭೂನೀಳಸ್ಥ[2]ಳಂ ಕು[2]ಟ್ಟಿಮವೆನೆ ನೆಗಟ್ಟಿತ್ತಂದು ಘೋರಾಂಧಕಾರಂ ೮೨

ಪರಸಿದರಿದಿರ್ಗೊಂಡರಲಂ
ಕರಿಸಿದರಾದರಿಸಿದರ್ ಕರಂ ನುತಿಗೆಯ್ದರ್
ಬೆರಸಿದರಪ್ಪಿದರೆಳಸಿದ
ರೆರೆದರ್ ನಲಿನಲಿದು ಜಾರೆಯರ್ ಕಟ್ಟಲೆಯಂ ೮೩

(ಗಿರಿಜಾಕಲ್ಯಾಣಂ ೪–೭೨)

ವಾರಿಜಮಿತ್ರನಿಂ ಮಗುಟಿದಿರ್ಕೆ ತಮಂ ತವದೆಂದುಮಿರ್ಕೆ ನೀ
ರೇರುಹವೈರಿಯಂ ಸೆಱೆಯಲಿಕ್ಕೆಗೆ ರಾಹು ಮನೋಜಿವಲ್ಲಭಂ

---

[1] ಪ್ರೋಕ್ಷಂತಾಗಳಾಯ್ತು ಬಹಳ (ಕ) [2] ಳತ್ಕ (ಬ) * ಇಲ್ಲಿಂದ ಮುಂದಕ್ಕಿರುವ ನಾಲ್ಕು ಪದ್ಯಗಳು (ಕ) ಪ್ರತಿಯಲ್ಲಿಲ್ಲ

ಜಾರರಭೀಷ್ಟಮಂ ಕೊಡುಗೆ ಲಡ್ಡುಗೆಯಂ ಬೆನಕಂಗೆ ಹೆಂಡಮಂ
ಮಾರಿಗೆ ಬೊಮ್ಮಯಂಗೆ ಚರುವಂ ಪದೆದೆತ್ತುವೆನೆತ್ತಿ ಬೀಱುವೆಂ ೭೪

ಎಱಗುವ ಕಣ್ಣಸನ್ನೆ ಬಗೆದೋಱುವ ಪುರ್ಬಿನ ಜರ್ಬು ಜಾರರಂ
ಸೆಱೆಯಿಡುವಾನನಂ ಪದಿರನಾಡುವ ಸೂಳ್ನುಡಿ ದುಷ್ಟಚೇಷ್ಟೆಯಂ
ಮೆಱೆಯಿಪ ತಮ್ಮ ಭಂಗಿ ಮಱೆವಾಟಿ ಮನೋಜಸುಖಕ್ಕೆ ಸಂತತಂ
ಮಱುಗುವ ಚಿತ್ತದಿಂ ರಜನಿ ರಂಜನಮಾದುದು ಬಂಧಕೀಜನಂ ೭೫

ಪುರುಷರ ಸಮಕ್ಷದೊಳ್ ಕುಚ
ಭರಮಂ ನೀವುವೊಡೆ ವಾಮಕರದಿಂ ಮುಡಿಯಂ
ಹರಿಣಾಕ್ಷಿ ಬಿಟ್ಟು ಮುಡಿವೊಡೆ
ನಿರಂತರಂ ಪಾಣ್ಬೆಯೆಂದು ಬಗೆಗಾ ವಧುವಂ ೭೬

(ಮದನತಿಲಕಂ ೭-೩೯)

ಉಡೆಯಂ ಸಡಿಲಿಸಿಯುಡುವಡೆ
ನಡೆ ನೋಟ್ಪೊಡೆ ತನ್ನ ತಲೆಯುಮಂ ಕಿವಿಯುಮನಂ
ತಡಿಗಡಿಗೆ ತುಱಿಸಿಕೊಳ್ವಡೆ
ಸಡಿಮಾತೇಂ ನಿರ್ವಿಚಾರದಱಿ ಪುಂಶ್ಚಲಿಯಂ ೭೭

(ಮದನತಿಲಕಂ ೭-೪೦)

ಬಾಲಾಲಿಂಗನ ಚುಂಬನ
ವಾಲೋಕಂ ಹಾಸ್ಯ ತಕ್ಕೆ ಸನ್ನೆ ಪದಿರ್ ಬ
ರ್ಪಾಳಾಪಂ ಪುಟ್ಟುಗುಮಱಿ
ಲೋಲೇಕ್ಷಣೆ ಪಾಣ್ಬನಿದಿರೊಳಸತಿಗವೋಘಂ ೭೮

(ಮದನತಿಲಕಂ ೭-೪೧)

ನೋಡದ ಮಾಟಿಕ್ಕೆಯಿಂದಡರೆ ನೋಡುವ ಪುರ್ವಿನ ಜರ್ವಿನಿಂದೆ ಮಾ
ತಾಡುವ ಕೂಸನೆತ್ತಿ ಪರಿಚುಂಬಿಸಿ ತನ್ನ ರತೋಪಚಾರದೊಳ್
ಮಾಡುವಳುರ್ಕೆ[1]ಗಳ್ ನೆಱೆಯೆ[1] ತೋಱುವ ಸಂದಣಿಯಾಗೆ ಪೊರ್ದಿ ಬಾ
ಯ್ಗೂಡುವ ಜಾರೆ ಜಾರನ [2]ನೆಗಟ್ಟಿತ್ತಯ[3] ಕಾಮನ ಬಯ್ಕೆಯಲ್ಲಳೇ ೭೯
ಪ್ರತಿಮೆಯ ಪೂಜೆ ದೇವತೆಯ ಕೆಯ್ದುವವೋಲ್ ನೆವದಿಂ ಪೆಱರ್ಗೆ ಮಾ
ಟ್ಟಿತಿಶಯ ಚಾಟು[3]ವುಂ[3] ಮುನಿಸುಮುಪ್ಪುಗೆಯುಂ [4]ಮನದಾಸೆಯೊಳ್ಪು[4] ಸಂ

---

[1] ಕೈಗಟ್ಟಿಯೆ (ಖ ಬ) [2] ಗಲೆತ್ತಿದ (ಕ) [3] ವಂ (ಕ ಖ) [4] ಮನದಾಣ್ಮನೊಳ್ಸು (ಕ)

ಗತರತದಲ್ಲಿ ಸಂತಸಮನೀವವೊಲ್ ಗೋಷ್ಠಿಗೆ ಜಾತಿಜಾರೆಯರ್
ಚತುರೆಯರುಂ ಜಿಡಂಗಿಯರ ಭಂಗಿಗಳಂಗಜಗೂಢಹೇತುಗಳ್ ೯೦

ಕೂಡಲ್ಪಡೆಯದೊಡಂ ಮಾ
ತಾಡಿ ಮೊಗಂನೋಡಿಯವರ ಗುಣವರ್ಣನಮಂ
ಪಾಡಿಸಿ ಮತ್ತಂ ದಣಿಯದ
ನಾಡಾಡಿಯ ಪಾಣ್ಬೆಗೊಳವು ಕುಟಿಲಮನೇಕಂ

(ಮದನತಿಲಕಂ ೮–೫೧)

ವಿವಿಧಾನ್ನ ಪಾನ[1]ಖಾ[1]ನಾ
ದಿ ವಸ್ತ್ರಲೇಪನ ಸುಗಂಧಕುಸುಮಾದಿಗಳಂ
ನೆವಮಿಟ್ಟು ಪೆಱರ್ಗೆ ಕೊಟ್ಟ
ಟ್ಟುವ ಪಾಂಗಿನ ಪಾಣ್ಬೆಯಿರವನಾರ್ ಭಾವಿಸುವರ್ ೯೨

(ಮದನತಿಲಕಂ ೮–೪೨)

ಕುಱುಪಂ ಪುರ್ವಿನ ಜರ್ವು ತೋಱಿ ಬಗೆಯಂ ಕಣ್ಸನ್ನೆಗಳ್ ಪೇೞೆ ತ
ನ್ನೈಱಕಂ ತನ್ನ ಮನಕ್ಕೆ ಕೂಡೆ ಕೆಲಕಂ ಗಂಡಂಗಮೊಳ್ಪಂ ಕರಂ
ಮೆಱೆವಾ ಪ್ರೌಢೆಯೆ ಜೋ[2]ಡೆಯಕ್ಕುಮೆಡೆಯೊಳ್ ದೂತಟ್ಟೆ ದೂಱಂಗೆ[2] ಪೆ
ರ್ಚಱೆಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪಾಕೆಯೇಂ ಜಾರೆಯೇ ೯೩

(ಪಂಪಭಾರತಂ ೪–೮೨)

ನೆವದಿಂದಂ ಮನೆಯಾಣ್ಮನಂ ಮನೆಯುಮಂ ಗೆಲ್ದೈದಿ ಸಂಕೇತಗೇ
ಹವನೊಲ್ದಂತಿರೆ ನಾಟಕಂ ನಲಿದು ಜಾರಂಗಿಂಬುಗೆಯ್ದಂಗಭಂ
ಗವ[3]ನೆಂದುಂ[3] ಪೊರೆದಾಱುಗೊಂಡಱಸಿ ಬೆನ್ನೊಳ್ ಬಂದರಂ[4]ಬಂ[4]ದು ಸಾ
ಧುವಿನಂತಿರ್ಪಳೆ ಜಾತಿಜಾರೆ ಸುಡು ದೂಱಂ ಪೇೞುವಳ್ ಜಾರೆಯೇ ೯೪

ಮನೆವಾರ್ತೆಯ [5]ಕೋಟಲೆಯೊಳ್[5]
ಜನಪದಗಮನಂಗಳೆಡೆಯೊಳಂಗಜರಾಗಂ
ಜನಿಯಿಕ್ಕುಮೆಂದು ಕೆಲರ್ ಸ
ಜ್ಜನದಿಂ ಮನೆವಾರ್ತೆಗೈಸಲೊಲ್ಲರ್ ಚದುರರ್ ೯೫

(ಮದನತಿಲಕಂ ೮–೧೪)

---

[1] ನಾ (ಬ) [2] ಡೆಯಕ್ಕು ಮೆಡೆಯೊಳ್ ದೂಟಂದ ದೂಟಂಗೆ (ಅ) ಕೆಯಕು ಮೆಡೆಯೊಳ್ ದೂಱಟ್ಟೆದೂಱಂಗೆ (ಕ) ಡೆಕೂರ್ಪೆಡೆಯೊಳಂ ದೂತಟ್ಟೆ ದೂಱಂಗೆ (ಖಬ) [3] ನೇನಾಂ (ಕ) [4] ಬಿಂ (ಕ) [5] ಕೋಟೆಯೊಳಂ (ಖ ಬ)

ಗುರುಗಳ ನಂಟರ ಕೆಳೆಯರ
ಪೊರೆವಾ[1]ಳ್ದನ[1] ಮೆಚ್ಚದವರ ಸವತಿಯ ಕೆಲದೊಳ್
ಪರಿಭವಿಸಲ್ ನೆಜನೆತ್ತಲ್
ಕರಮುಟಲಿಸಲಾಗದಾತ್ಮಸತಿಯಂ [2]ಚದುರಂ[2] ೯೬

(ಮದನತಿಲಕಂ ೮_೧೫)

ಸುದತಿಯರಾರುಂ ಸಂಸ
ರ್ಗದ ಕತದಿಂ ದೋಷಮಂ ಗುಣಂಗಳುಮಂ ಮಾ
ಣದೆ ಕೈಕೊಳ್ವ[3]ದಱಿಂದಂ[3]
ಸುದತಿಗೆ ಯೋಜಿಸುಗೆ ನೀತಿಯಂ ಧರ್ಮಮುಮಂ ೯೭

(ಮದನತಿಲಕಂ ೮-೧೬)

ಲತೆ ಮೊದಲಾಗಿ ಸಮೀಪ
ಸ್ಥಿತವೃಕ್ಷಮ[4]ನೆಂ[4]ತುಟಾದೊಡಂ ಪರ್ಬುಗುಮಾ
ಸ್ಥಿತಿಯಿಂ ಸತಿ ಸಂಗತ್ಯದ
ಕತದಿಂ ಕೆಟ್ಟಾರೊಳಾದೊಡಂ ಪುದುವಾ[5]ಟ್ಟಿಗಂ[5] ೯೮

(ಮದನತಿಲಕಂ ೮-೧೭)

ಪತಿಭಕ್ತಿಯ ಧರ್ಮಜ್ಞೆಯ
ಮತಿವಂತೆಯ ಸಂದ ಶೌಚವಂತೆಯ ಸತ್ಯಾ
ನ್ವಿತವಚನೆಯ ಕತೆಯನೆ ಪೇ
ಟ್ಗಿತಿಶಯದಿಂ ತನ್ನ ಸತಿಗೆ ಪಂಡಿತನಪ್ಪಂ * ೯೯

(ಮದನತಿಲಕಂ ೮-೧೮)

ಗುಣಮುಂ ಸುಂದರರೂಪಮುಂ ವಿಭವಮುಂ [6]ಸೌಭಾಗ್ಯಮುಂ[6] ಭಾಗ್ಯಲ
ಕ್ಷಣಮುಂ ಚಾರುಚರಿತ್ರಮುಂ ಕುಲಮುಮೊಳ್ಪಂ ಸತ್ಯಮುಂ ಧರ್ಮಭೂ
ಷಣಮುಂ ಸಂದ ಪತಿವ್ರತಾಮಹಿಮೆಯುಂ ದಾನತ್ವಮುಂ ಬಂಧುಲ
ಕ್ಷಣಮುಂ ಪೆಂಡಿರೊಳಕ್ಕುಮೆಯ್ದೆ ಪುರು[7]ಷರ್[7] ಯೋಜಿಪ್ಪುದೊಂದೋಜೆಯಂ

(ಮದನತಿಲಕಂ ೮-೧೯)

ತನ್ನ ರೂಪನೆ ಪೋಲೆ ವಂಚಿಸಿ ದಾಸಿಯಂ [8]ಪಡ[8]ವೇಟ್ಟು ತಾಂ
ಚೆನ್ನ[9]ರ[9]ಲ್ಲಿಗೆ ದಾಸಿಯುಂದದೆ ಪೋಗಿ ರಾತ್ರಿಯೊಳೊಂದುವರ್

---

[1] ಳ್ವರ (ಖ ಬ) [2] ಪುರುಷಂ (ಕ) [3] ರುಮಾದಱಿಂ (ಖ ಬ) [4] ದೆಂ (ಕ) [5] ಟ್ಟಿರ್ (ಖ ಬ) [6] ಬಿನ್ನಾಣಮುಂ (ಖ) [7] ಷಂ (ಖ ಬ) [8] ನಿಲ (ಖ ಬ) [9] ನ (ಖ ಬ) *ಈ ಪದ್ಯ (ಖ ಬ) ಪ್ರತಿಗಳಲ್ಲಿಲ್ಲ.

[1]ಭಿ[1]ನ್ನಪಂಕಜವಕ್ತ್ರೆ ಕೇಳ್ ವಧುವರ್ಕಳಾರುಮನಾವನುಂ
ಬಿನ್ನಣಂ ಪೆಜತುಂಟೆ ನಂಬವೆ ನಂಬಿದೆಂತೆಸೆವಂ [2]ಬುಧಂ[2] ೧೦೧

(ಮದನತಿಲಕಂ ೮-೨೪)

ನಂ[3]ಬದ[3]ರೆನ್ನರಪ್ಪರುಮನೇತೆಜದಿಂ ಸಲೆ ನಂಬಿ ಪಾಸ್ಪೆಯರ್
ನಂಬಿಪರಿಂತನೇಕವಿಧದಿಂದೆ ವಿಚಾರಿಸಿ ನೋಡಿ ಪೆಂಡಿರಂ
ನಂಬಲೆಯಾಗ ನಂಬದಿರಲಾಗವರಿಲ್ಲದೆ ಬಾಟಿಲಾಗದೆ
ನೆಂಬುದಿದಕ್ಕೆ ತಕ್ಕುದೆನೆ ಬಲ್ಲರನುಳ್ಳೊಡೆ ದೇವನಲ್ಲವೇ ೧೦೨

ಮನುಮತಮುಂ ವೇದಾಂತಾ
ದ್ಯನೇಕ ಧರ್ಮಾಗಮಂಗಳಂ ಕಲಿತಿರ್ದಾ
ಮುನಿಪರುಮಳುಪವರೆಂದೊಡೆ
ವನಿತೆಯರಳುಪುವುದದೊಂದು ಚೋದ್ಯ[3]ಮೆ ಜಗದೊಳ್[3] ೧೦೩

(ಮದನತಿಲಕಂ ೮-೨೫)

ಗೊರತಿಯ ಕಂತಿಯ ಕುಂಟಣಿ
ಯರ ಮುಂಡೆಯ ಮಾಲೆಗಾರ್ತಿಯಗಸಿತಿ ಯೋಗೀ
ಶ್ವರಿಯರ [4]ಕುಲಗೇಡಿಯನಾ
ವ ರೀತಿಯೊಳ್[4] ನುಡಿಯಲೀಯಲಾಗದು ವಧುವಂ ೧೦೪

(ಮದನತಿಲಕಂ ೮-೨೬)

ಗೊರವರ ಸವಣರ ಕಷ್ಟರ
ತಿರಿವರ ತೆಲ್ಲಿಗ[5]ರ ವಾದದವರ್ಗಳ ದೈವ[5]
ಜ್ಞರ [6]ಜೂಜುಗಾಜಿರೆಂಬರ[6]
ನೆರವಿಗಳಂ ಪೊರ್ದಲೀಯಲಾಗದು ವಧುವಂ ೧೦೫

(ಮದನತಿಲಕಂ ೮-೨೭)

ಬಳರಿಯ ನೋಂಪಿಗೆ ಬೀದಿಗೆ
ಮುಳಿವರ ಮನೆಗಳ್ಗೆ ಮದ್ದಪೀಗಳೆಡೆಗೆ ಕೋ
ಮಳೆಯಂ ಪೋಗ[7]ಲ್ಕಿತ್ತೊಡೆ[7]
ಬಳ್[8]ಟ[8]ಗೆ ಪುಯ್ಯಲ್ಚ[9]ಬಂ[9]ದ ಕುಜಿಯಂತಕ್ಕುಂ ೧೦೬

(ಮದನತಿಲಕಂ ೮-೨೮)

---

[1] ಚೆ (ಅ) [2] ವಿಟಂ (ಖಬ) [3] ಮದಲ್ತೇ (ಖಬ) [4] ಕಿಡಿಕಿಡಿಯನಾವಿದಿ ತಿರಿಯುದೊಳಂ (ಖಬ) [5] ದ ಪಾರದವರ್ಗಳ ವೈದ್ಯ (ಕ) [6] ಖಳರ ಜೂಜುಗಾಜಿರ (ಕ) [7] ಲ್ವೇಟಬಿತ್ತೊಡೆ (ಕ) [8] ವಿ (ಖಬ) [9] ವೋ (ಕ)

ಗೊರವಿತಿ ತೊತ್ತು ರಂಡೆ ರಜಕಾಂಗನೆ ನೀರೆಱತವಾಕೆ ಚಿತ್ರಮಂ
ಬರೆವವಳೊತ್ತೆಗೊಳ್ವಳಿಲೆಮಾಱುವ ಜತ್ತಕಿ ಸೂಲಗಿತ್ತಿ ಗೋ
ವರವಧು ಮಾಲೆಗಾರ್ತಿ ಮುದಿಗುಂಟಣಿ [1]ವೇರಡ[1]ಗಿತ್ತಿಯೆಂಬ ಪೆಂ
ಡಿರ ನೆರೆಗೊಂಡೊಡಂದಱಿಂಗೆ ಸಜ್ಜನವೆಂಡಿತಿ ಕೆಟ್ಟಳೆಂಬುದಂ ೧೦೭

ಲಲನೆಯರ್ಗೆ ರೂಪ ಹೀನಂ
ಕುಲಹೀನಂ ವೃದ್ಧನೆಯ್ದೆ ಪಱಿಯಂ ಶುಚಿ ಮೆ
ಯ್ಗಲಿ ದಕ್ಷನೆನಿಸುವವನಂ
ನಿಲಿಸುಗೆ ಕಾಪಿಂಗೆ ಬುದ್ಧಿವಂತನನೆಂದುಂ ೧೦೮
(ಮದನತಿಲಕಂ ೮–೩೩)

ರತಿಹೀನ ಪೆೞವ [2]ಕುಬ್ಜಂ[2]
ಮತಿವಂತಂ [3]ನಾಡೆ ವೃದ್ಧ ಕೃಶ [ಗರ್ಹಿ]ತನುಂ[3]
ಸತಿಯಂ ಕಾಯಲ್ಕಕ್ಕುಂ
ರತಿರಾಗಿಗಳುೞಿದ ಕಾಪಿನಿಂ ನಿಂದಪರೇ ೧೦೯
(ಮದನತಿಲಕಂ ೮–೩೪)

ಚೆನ್ನಿಗನಂ ಜವ್ವನಿಗನ
ನನ್ನಿಗನಂ ಪಾಣ್ಬನಂ ಕರಂ ಸೊಬಗನುಮಂ
ತನ್ನ ಸತಿಯ[4]ರ್ಗೆ ಕಾಪಿಡೆ
ನಿರ್ಣಯದಿಂ[4] ತನ್ನ ಮನೆಯೊಳಿಟ್ಟಂ ಕಿಚ್ಚಂ ೧೧೦
(ಮದನತಿಲಕಂ ೮–೩೬)

ಚಚ್ಚನೆ ಗುಜುಗುಜು ಲೋಗರೊ
ಳಚ್ಚೊತ್ತಿದ ತೆಱದಿನೆರವು ತೊೞ್ತಿರೊಳಾಗಲ್
ಪಚ್ಚುವ ಕಾಮಿನಿ ತಪ್ಪಲೊ
ಡರ್ಚುವಳಟ್ಟೆಟ್ಟೆ ಪೆಱರೊಳಾದೊಡೆ ನಿರತಂ ೧೧೧
(ಮದನತಿಲಕಂ ೮-೩೭)

ನಗೆಯಿಂ ನೋಟದಿನೊಳ್ಪಿನಿಂ ವಿಭವದಿಂ ಸೌಂದರ್ಯದಿಂ ಧೈರ್ಯದಿಂ
ಬಗೆಯಿಂ ಬಲ್ಪಿನಿನಿಂಬುಕೆಯ್ವ ರತಿಯಿಂ ಚಾತುರ್ಯದಿಂ ಶೌರ್ಯದಿಂ

---

[1] ವೇಡರ (ಬ) [2] ಗುಜ್ಜಂ (ಕ) [3] ವೃದ್ಧನಾಡೆ ಕುಷ್ಠನು ಹಿತನುಂ (ಕ) ಗೃಂಹಿತನುಂ (ಖಬ) [4] ಳ್ಗೆ ಕಾಪಿಟ್ಟಂ ನಲ್ಲಳ್ (ಖಬ)

ಮಿಗಿಲೀತಂ ಪೆಱರ್ಗೆಂದು ತನ್ನ ವಧುವಂ ನಚ್ಚಿಪ್ಪಿನಂ ಮಾಱಿಕ್ಕಿ ಭಾ
ಷೆಗಳಿಂ ಪ್ರೇರಕದಿಂ ಕುಲಾಂಗನೆಗೆ ಹೃತ್ಸಂತೋಷಮಂ ಸದ್ಬುಧಂ ೧೧೨

(ಮದನತಿಲಕಂ ೮_೫೨)

ಅನುಪಮ ಗುಣಗಣಯುಕ್ತೆಯ
ನನುಕೂಲೆಯನಧಿಕ ಪುಣ್ಯಲಕ್ಷಣೆಯಂ
ಮಾನಿನಿಯಂ ಸುರೂಪವತಿಯಂ
ಜನಪಂ ಮಾಱ್ಕಿಂ ಕುಲಾಂಗನೆಯ ನಿಶ್ಚಯದಿಂ ೧೧೩

(ಮದನತಿಲಕಂ ೮_೫೫)

ನಿರುಪಮ ಲಕ್ಷಣಯುತೆಯರ್
ಸುರೂಪೆಯರ್ ನೃತ್ಯಗೀತವಾದ್ಯಾದಿಕಳಾ
ಪರಿಣತೆಯರನೂನಾಂಗಿಯ
ರರಸಿಯರತಿಮುಗ್ಧೆಯರ್ಕಳಾಗಲೆವೇೞ್ಕುಂ ೧೧೪

(ಮದನತಿಲಕಂ ೮_೫೬)

ಅನುಪಮ[1]ಮವರ್ಗಳ್[1] ಕಾಮಂ
ಮನಕ್ಕೆ ಸುಖಮಿಲ್ಲ ನೆರೆಯೊಳಿಪ್ಪುದಱಿಂದಾ
ವನಿತೆಯರಿನಪಾಯಂಗ[2]ಳ
ನಿನಿತುಮನಱ[2]ದಾತ್ಮವಂತನಪ್ಪುದು ಭೂಪಂ* ೧೧೫

(ಮದನತಿಲಕಂ ೮-೫೪)

ಮಜ್ಜನದಡಪದ ಕರಗದ
ಸೆಜ್ಜೆಯ ಬಾಣಸಿನ ಬೆಸನುಮಂ ಕೋಶಮುಮಂ
ಬೆಜ್ಜತನದೆಡೆಯುಮಂ [3]ಸೆಱ[3]
ತುಜ್ಜುಗಮಂ ಕೂರ್ತು ವಧುಗೆ ಕೊಟ್ಟಂ ಕೆಟ್ಟಂ † ೧೧೬

(ಮದನತಿಲಕಂ ೮_೫೯)

---

[1] ವಧುಗಳ (ಖ ಬ) [2] ಳ್ ಜನಿಯಿಯುಕ್ಕುವಱ (ಖ ಬ) [3] ತ್ರಿಱ (ಖ ಬ)

*ಈ ಪದ್ಯ (ಕ) ಪ್ರತಿಯಲ್ಲಿಲ್ಲ. † ಈ ಪದ್ಯವಾದ ಮೇಲೆ (ಕ) ಪ್ರತಿಯಲ್ಲಿ ಮಾತ್ರ ಮುಂದಿನ ಪದ್ಯ ಹೆಚ್ಚಾಗಿದೆ:—

ಅಸಗವನೆ ಕೆಯ್ಗೆ ತೋಟ
ಕ್ಕೆ ಸಮ್ಮಗಾಱಗೃಹಕ್ಕೆ ಪೊಲವನೆಗಳ್ಗಾಂ
ಬೆಸವೋದೆನೆಂದು ಪುಂಶ್ಚಲಿ
ಸುಸಿಲ್ಗೆ ವೋಗುತ್ತ ಮೀರ್ಕುಮದನಱಿಯಬಲೇ

(ಮದನತಿಲಕಂ ೮_೪೯)

ಒಲವೆಂದುಂ ನಿಲಲಱಿಯದು
ಕೆಲವುದಿನಂ ನಡೆಗುಮದಱಿನೊಲ್ದಾಗಳ್ ತಾಂ
ಲಲನೆಗೆ ಪು[1]ರ[1]ವೃದ್ಧಿಯುಮಂ
ಪಲವುಂ [2]ಹಾ[2]ಯಮುಮನಿತ್ತೊಡದು ಪಗೆಯಲ್ತೇ ೧೧೭
(ಮದನತಿಲಕಂ ೮-೬೧)

ಕಡುಗೂರ್ತೊರ್ಮೆಯೆ [3]ವೊಕ್ಕಳಂ ಕ[3]ನಕಮಂ ತಾನೀಯಲಾಗಲ್ ಕರಂ
ಕೊಡುಗತ್ಯುತ್ತಮ ವಸ್ತ್ರಮಂ ಘುಸೃಣಮಂ ಕಸ್ತೂರಿಯಂ ಪುಷ್ಪಮಂ
ಮುಡಿಯಂ ಚಂದನಮಂ ಫಲಾವಳಿಗಳಂ ಕರ್ಪೂರಮಂ ನಿಚ್ಚಲುಂ
ಪಡಿಮಾತೇಂ ಪರಿರಕ್ಷನಾಗಿ ವನಿತಾಸಂಘಕ್ಕೆ ಭೂಪಾಲಕಂ ೧೧೮
(ಮದನತಿಲಕಂ ೮-೬೨)

ಪಲತೆಱದ ತೊಡಿಗೆ ಬಿಡುದಂ
ಬುಲವೊಳ್ಪುಣಿಸುಗಳನೆಯ್ದೆ [4]ಸಲಿ[4]ಸುಗೆ ಕೂರ್ತಂ
ತಲಸದೆ ಸಂಭೋಗದೊಳಂ
ಪಲವುಂ ಬಿನದದೊಳವರ್ಗೆ ಕಳೆವುದು ಪ್ರೊಟ್ತುಂ ೧೧೯
(ಮದನತಿಲಕಂ ೮-೬೩)

ಅವರ್ಗೆ ಬಹುವ್ಯಾಪಾರಮು
ಮವರ್ಗೆ [5]ಪರಿಸ್ಪಂದ[5]ಮೆಂಬುದಂ [6]ಮಾಡಲ್[6] ಬೇ
ಡವರಂ ಸಂಕುಚಿತದೆ ಸಂ
ತವಿಡಿಸಿ ಸಂತುಷ್ಟರಾಗೆ ಮಾಳ್ಪುದು ಚದುರಂ ೧೨೦
ಮದನತಿಲಕಂ ೮-೬೫)

ನಸುಸೋಂಕಿಯು[7]ಮೊಲ್ದುಂ[7] ಬಂ
ದೆಸಗುವೊಡಂ ನೋಂಪಿ ಋತುಮಹೋತ್ಸಾಹದೊಳಂ
[8]ಬಸನದೊಳೋತೊಡ[8]ಗೂಡುವು
ದಸಿಯಳ ಸೂಟಿಲ್ಲದೆನ್ನದೆಂದುಂ ಚದುರಂ ೧೨೧
(ಮದನತಿಲಕಂ ೮-೬೬)

---

[1] ರು (ಖ ಬ) [2] ಪ್ರಿ (ಕ) [3] ಪೊತ್ತಳತ್ತ (ಕ) [4] ಸೂ (ಖ ಬ)
[5] ಮುಂಬುಧಂ (ಖ ಬ) [6] ಪರಿಸ್ಪಂಥಮುಂ ಪರಿಗ್ರಹಮುಂ (ಮ. ತಿ. ಓಲೆಯ ಪುಸ್ತಕ)
[7] ಮೆಲ್ಪುಂ (ಖ ಬ) [8] ಪಸದನದೊಮ್ಮೊಡ (ಅ) ಬೆಸನದೊಳೊಮ್ಮೊಡ (ಖ ಬ)

ಹರಿಣಾಕ್ಷಿಗೆ [1]ಪದಪಂ ರಾ
ಗರತೋತ್ಸವಮುಮೆಯ್ದೆ[1] ಪಡೆದಿಂಬೞಿಕಾ
ತುರನಾಗದೆ ಕೂಡಿರ್ದಾ
ದರಿಪುದು ಚದುರಂಗೆ ಬೇೞ್ಕ ಕೋಡೆರಡೊಳವೇ ೧೨೨

(ಮದನತಿಲಕಂ ೯–೯)

ತವಕದಲವರೆಡೆಗಳ್ ಕಾ
ಣವು ಮುಂದಂ ಭೀತಿ ಬೞಿಕೆ ಪಲ್ಲವಿಸುತ್ತಿ
ರ್ಪುವು ಬೇಟದ ಕೂಟದ ಕೋ
ಟಿವಿಧದ ಕೋಟಲೆಗೆ ರೂಪು ಹಾದರಮಲ್ತೇ ೧೨೩

ಸಱಿಕನೆ ಸೀತಡೆ ಪೆಱರಂ
ಜಱಿದಡೆ ಕೆಮ್ಮಿದಡೆ ಕಯ್ಯ ವೀಳೆಯದೆಲೆಯಂ
ಹೞಿದಡೆ ಬಾಗಿಲ ದಿಕ್ಕಂ
ಮುೞಿದಡೆ ಕುಱುಪಿಂಗೆ ಪಾಣ್ಬರೆಸೆವರ್ ತಮ್ಮೊಳ್ ೧೨೪

ನೆರೆಯಲೆಡೆ ಪೊಟ್ಟಿ ದೂತರ್
ದೊರೆಕೊಳ್ಳದೊಡಂಗನಾಜನಂ ಶುಚಿಯಲ್ಲದೆ
ನೆರೆಯಲೆಡೆ ಪೊಟ್ಟಿ ದೂತರ್
ದೊರೆಕೊಂಡಡೆ ಶುಚಿಗಳುಂಟೆ ಪೆಂಡಿರ್ ಜಗದೊಳ್ ೧೨೫

ಎಸೆವ ಬಸಂತಮಾಸಮಿದಿರೇಱುವ ಜವ್ವನಮೂರಮಿಂಡರು
ಬ್ಬಸದ ವಿಳಾಸಿಗಳ್ ಮನೆಯ ಗಂಡನವಂ ಪ[2]ಗೆ[2]ಗಂಡನೆತ್ತಲುಂ
ಪೊಸಬನವಿಂಬು ಕುಪ್ಪಿಗೆಯ ಕಳ್ ಮನೆಯೊಳ್ ಪಿರಿದುಂಟು ತೋಂಟಕ
[3]ಣ್ಕಿ[3]ಸುರರ ಮಾತು ನೀತಿ ಗಡ ಹಾದರವಾಡದೆ ಸಾವಳೇ ಮಗಳ್ ೧೨೬

ಒಡೆಯರ ಕಾಪು ಕಟ್ಟಣಕಮೆಂದೊಡೆ ಬಂಧುಗಳಾಪ್ತರಾಗದೆಂ
ದೊಡೆ [4]ಮನ[4]ಮಿತ್ತಲೀಯಳವಳೆಂದೊಡಸಾಧ್ಯಮದೆಂದೊಡೊಲ್ಲಳೆಂ
ದೊಡೆ ಮೊಱೆಯಾಗದೆಂದೊಡೆ ಪರಾಂಗನೆಯೆಂದೊಡೆ ಸಾಮ್ಯವಲ್ಲವೆಂ
ದೊಡೆ ತಲೆಪೋಗೆಯುಂ ಬಸಿದು ಬೀೞದೆ ಸ್ವೈರಿಸರಲ್ತೆ ಕಾಮುಕರ್ ೧೨೭

(ಅನಂತನಾಥಪುರಾಣಂ ೧೧-೩೩)

---

[1] ಪರಪುರುಷಂಗೆ ರತೋತ್ಸಾಹಮನೆಯ್ದಿ (ಖ ಬ) [2] ೞಿತ (ಖ ಬ) [3] ಣ್ಕೆ (ಕ) [4] ಯನಿ (ಖ ಬ)

ವಧಮುಂ ಬಂಧನಮುಂ ಪರಾಭವಮುಮಂಗಚ್ಛೇದಮುಂ ಪೊರ್ದುಗುಂ
ನಿಧುವಿಖ್ಯಾತಿ [1]ಕಿ[1]ಲುಂಬುಗೊಳ್ಗುಮಪವಾದಾತೋದ್ಯನಾದಂ ದಿಶಾ
ವಧಿಯಂ ದಾಂಟುಗುಮನ್ಯಜನ್ಮದೊಳಮಕ್ಕುಂ ದುರ್ಗತಿಕ್ಲೇಶಮೆಂ
ದಧಿರಾಜರ್ ಕೆಲರಾಲಿಸಲ್ ಮಱೆದುಮನ್ಯಪ್ರೇಯಸೀವಾರ್ತೆಯಂ ೧೨೮
(ಪಂಪರಾಮಾಯಣ ೧೨–೫೯)

ರಾವಣನುಂ ಗಡ ಸೀತಾ
ದೇವಿಗೆ ಸೋಲ್ತುದಱ ಫಲಮನೈದಿದ[2]ನುೞಿದರ್[2]
ರಾವಣನಿಂದಧಿಕ[3]ರೆ[3] ಪೇ
[4]ೞೀ[4]ವುದೊ ಶುಚಿಯಿಲ್ಲದವನ ಗಂಡುಂ ತೊಂಡುಂ ೧೨೯
(ಪಂಪಭಾರತಂ ೮–೮೨)

ಶತ[5]ಧೃತಿ[5]ಪೌತ್ರನುಂ ಜಿತಜಗತ್ತ್ರಯವೀರನುಮಾಗಿ [6]ನೀಂ[6] ಮಹಾ
ಸತಿಗವನೀಜೆಗನ್ಯವಧುಗಾಟಿಸೆ ವಾಸವ ವಹ್ನಿ ಧರ್ಮ ನೈ
ರುತಿ ವರುಣಾನಿಲಾರ್ಥಪ ಹರರ್ ನಗುವರ್ ಮುಳಿಗುಂ ಮುರಾರಿ ವಾ
ಕ್ಪತಿ ಪೞಿಗುಂ ಮನೋಜರಿಪು ಪೇಸುಗುಮುಗ್ಗದ ಕೀರ್ತಿ ಮಾಸುಗುಂ ೧೩೦

ನುಡಿಯಲಕ್ಕುಮೆ ಪಾೞಿಗೆಟ್ಟು ಪೞಿಗಂ ಪಾಪಕ್ಕಮುಳ್ಳಕ್ಕದೀ
ನುಡಿಯಂ ಚೀಃ ಪರದಾರವನ್ಯಶಯನಸ್ಥಾನಂ ಪೆಱರ್ ಮಿಂದ ನೀರ್
ಮುಡಿದುತ್ಪಲ್ಲ ಕದಂಬಕಂ ತೊಡೆದ ಕಾಶ್ಮೀರಾಂಗರಾಗಾದಿಕಂ
ಮಡಗೂೞಿರ್ ಬೀೞಡೆ ಬಾಯ ತಂಬುಲಮಿದೇನಸ್ಪೃಶ್ಯಮೇನಲ್ಲವೇ ೧೩೧
(ಪಂಪರಾಮಾಯಣಂ ೯-೧೮೧)

ಹಣವಿಲ್ಲದೆ ಪೆಱರೆಳಸುವ
ಗುಣಮಿಲ್ಲದೆ ಗೂಢಮಪ್ಪ ಠಾವಿಲ್ಲದೆ ಕುಂ
ಟಣಿಯಿಲ್ಲದಂತೆ ಪೆಂಡಿರ್
ಗುಣವಂತೆಯರಲ್ಲದುಂಟೆ ವಸುಧಾತಳದೊಳ್ * ೧೩೨

ನೋಡಿಸಿ ನೋಡವೇೞ್ಪ ಭರಮಪ್ಪುದು ಗೆಂಟಱ ಕೋಣೆಗೇರಿಯೊಳ್
ಕೇಡಱಸಲ್ಕೆ ಪೋಪ ಭರಮಪ್ಪುದು ದೇವಿಗೆ ರಾತ್ರಿಯಾತ್ರೆಯಂ
ಮಾಡುವ ನೋಂಪಿಯೊಂದು ಭರಮಪ್ಪುದು ಜಾಱೆಯರಾತ್ಮ ಜಾರರೊಳ್
ಕೂಡುವ ಚಿತ್ತದಿಂ ತೆಱಪನಾಗಿಸಿಕೊಳ್ವರನೇಕ ಭಂಗಿಯಿಂ ೧೩೩

---

[1] ಕ (ಅ) [2] ನಿವನಾ (ಅ) [3] ನೆ (ಅ) [4] ೞಿ (ಕ ಖ ಬ) [5] ನುತ (ಕ) ಯುತ (ಖ ಬ) [6] ಯುಂ (ಖ ಬ) * ಈ ಪದ್ಯ (ಖ ಬ) ಪ್ರತಿಗಳಲ್ಲಿಲ್ಲ

ಕಱು ತಡೆದತ್ತು ಕಂಚನುಣಲೂಮನೆಯೂಕೆಗಳುಯ್ದರಕ್ಕ ಮಿಂ
ದೆಱತಯುಪನಾ[1]ಱಿ[1]ದಪ್ಪನಸಗಂ ಮ[2]ಡಿ[2]ದಾರನೆ ಕೂಸನೇತಕೆಂ
ದೞಿಯೆನದೊಂದು ಸೋಂಕಿದುದು ಪಾಡುವರಲ್ಲಿ ಬೆದಂಡೆ [3]ತೊ[3]ತ್ತನೆ
ತ್ತಱಿಸುವೆನೆಂದು ಪೋಪ ನೆವಮಂ ಸಮಕಟ್ಟುವರಲ್ಲಿ ಪಾಣ್ಬೆಯರ್* ೧೩೪

ಗಿಡುವಂ ಪಿತ್ತಿಲನೋಣಿಗೇರಿಡುಕುಱಿಂ ಪ್ರಾಕಾರಮಂ ನುರ್ಗಿದಂ
ಗಡಿಯಂ ಬೇಲಿಯನಿಕ್ಕಿಸಿರ್ದ ತಳಿಯಂ ನೀರ್ದಾಣಮಂ [4]ತೋಟಮಂ[4]
ಮಡಲಿಟ್ಟಾರವೆಯಂ ಬಟಿಲ್ದ ಮದಿಲಂ ಮಣ್ಗೊಂಡ ತುತ್ತಲ್ಗಳಿ
ಟ್ಟಿಡೆಯಂ [5]ಬಿಟ್ಟ[5]ಟಿದೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಕಳುಂ ೧೩೫

ದಾರಿಯೊಳಿಡುಕುಱಿತೂಳೋಣಿಯೊ
ಳಾರವೆಗಳ ತಳದೊಳಂಗಡಿ[6]ಯ ಮನೆಗಳೊಳಂ[6]
ಕೇರಿಯೊಳಾ[7]ವಿ[7]ಗೆಗಳೊಳಂ
ಬೇರೂಱಿತು ಜಾರರನುಭವಂ ಕಟ್ಟಿಲೆಯೊಳ್ ೧೩೬

(ಗಿರಿಜಾಕಲ್ಯಾಣಂ ೪-೮೩)

ಒದವಿದ ಕಟ್ಟಿಲೆಯೊಳ್ ಸ
ನ್ಮದದಿಂ ಪೊಱಮಟ್ಟ ಜಾರಮಿಥುನಾಳಿಗೆ ಕಂ
ಡುದೆ ಭರವೆಳಸಿತೆ ಮನವಿ
ರ್ದುದೆ ಮನೆ ಪಟ್ಟದುದೆ ಪಾಸು ಮುಟ್ಟಿತೆ ಮರ್ಮಂ ೧೩೭

(ಗಿರಿಜಾಕಲ್ಯಾಣಂ ೪-೮೪)

ಆಗಳುಮಾ ತಳೋದರಿಗೆ ಮೇಖಲೆಯಾಗಿ ನಿತಂಬದೊಳ್ ಕುಚಾ
ಭಾಗದೊಳೆಯ್ದೆ ಹಾರಲತೆಯಾಗಿ ರದಚ್ಛದಪಲ್ಲವಂಗಳೊಳ್
ರಾಗವಿಶೇಷಮಾಗಿ ಪೊಳೆವೊಳ್ದೊಡೆಯೊಳ್ ನಿಱಿ ಸೋಂಕಿ ಸಂ
ಭೋಗಿಪ ಭಾಗ್ಯಮಿಲ್ಲೆನ[8]ಗೆಯಾದೊಡೆ ಸಲ್ಲದೆ[8] ಗಂಡನಿರ್ದೊಡಂ ೧೩೮

(ಅನಂತನಾಥಪುರಾಣಂ ೧೧-೨೨)

ಬಿಡಬೇಡಣ್ಣಲೆ ಬೀಡುಗೊಳ್ವೊಡೆನಸುಂ ಕಣ್ಗಾಣಳೆನ್ನತ್ತೆ ನೋ
ಟ್ಪಿಡೆ ಮಾವಂ ಶತವೃದ್ಧನೆನ್ನ ಪತಿಯುಂ ಬೇರೂರ್ಗೆ ಪೋಗಿರ್ದನಾಂ

---

1 ಡಿ (ಕ) ಲಿ (ಖ ಬ) 2 ಟ (ಕ) 3 ನೊ (ಕ) 4 ತೊಟ್ಟಿದುಂ (ಖ ಬ) 5 ಬಟ್ಟ (ಕ) 6 ಗಳೊಳ್ ಮನೆಯೊಳ್ (ಅ ಕ) 7 ಡಿ (ಖ ಬ) 8 ಗಮಾಡದೆ ಸಾಲದೆ (ಖ ಬ) * ಈ ಪದ್ಯದ ಮೊದಲನೆಯ ಪಾದವನ್ನು ಶಬ್ದಮಣಿದರ್ಪಣದ ೧೬೯ನೆಯ ಸೂತ್ರಕ್ಕೆ ಉದಾಹರಣೆಯಾಗಿ ಕೊಟ್ಟಿದೆ.

ಪಡುವೆಂ ಮೂಡಣ ಕೋಣೆಯಲ್ಲಿ ಸುಟೞ್ವರ್ ಮತ್ತೊಬ್ಬರಿಲ್ಲೇಕೆ ನೀಂ
ಬಿಡಬೇಡೆಂದತಿಜಾತಿ ಜಾರೆ ನುಡಿದಳ್ ಜಾರಂಗೆ ವಕ್ರೋಕ್ತಿಯಿಂ ೧೫೯

ಪಡುವಳ್ ಕೀೞಲೊಳಿಮ್ಮ ತೊೞ್ತು ಪಡುವಳ್ ಮುತ್ತಬ್ಬೆಯಾ ಕೋಣೆಯೊಳ್
ಪಡುವಂ ಶಕ್ತಿವಿಹೀನನಂಧಬಧಿರಂ ಕೇ[1]ಳ್ ಮಾವನಾ[1] ಬಾಗಿಲೊಳ್
ಪಡುವೆಂ ಬಾಲೆಯೆನೊರ್ವಳಿಲ್ಲಿ ಮನೆಯಾಣ್ಮಂ ಪೋದನಿಂದೂರ್ಗೆ ನೀಂ
ಪಡ[2]ಲೇನೆಂದೆ[2]ಡೆವೇಡುವಯ್ ಪಥಿಕ ಮತ್ತೀ ಪೊ[3]ೞ್ತಿನೊ[3]ಳ್ ಗಾಂಪನೇ ೧೬೦
(ಕಾವ್ಯಾವಲೋಕನಂ ೬೧೬)

ಉಗುರಂ ತೋಱದ ಕಯ್ಗಳಂ ಮುಗಿದ ಬಾಹಾಸ್ಪರ್ಶನಂಗೆಯ್ದು ಸ
ನ್ನೆಗಳಂ ಚಿತ್ತದೊಳಾಳ್ದು ಕೇತಕವನಾನೀಕಕ್ಕೆ [4]ದೇವಾಲಯಾ[4]
ಳಿಗೆ ನಾನಾ ಲತಿಕಾಲಯಕ್ಕೆ ಕೆಲಬರ್ ದೂತಟ್ಟಿದರ್ ಪೋದರಾ
ಬಗೆಗಳ್[5]ದೂದವ[5]ರಾಗೆ ಕೈತವಕಲಾವಿಸ್ತಾರೆಯರ್ ಜಾರೆಯರ್ ೧೬೧

ಕಳಚಿ ಪಳಂಚಿ[6]ನುಂ[6]ಗುರವನುಟ್ಟಳವಟ್ಟರೆ ಮಲ್ಲಗಂಟೆನೊ
ಳ್ಪೊಳವಡೆ ಕಟ್ಟಿ ಜೊಲ್ಲೆಯಮನನ್ನಿಗೆಯಂ ಸಮಕಟ್ಟಿ ತೊಟ್ಟು ಕೆಂ
ದಳದೊಳಮರ್ಚಿ ಬಾರಿಸುತೆ ಜೊಂದುಗೆಯಂ ಕುಱುಪಿಂಗೆ ಪೋದಳ
ನ್ವಳಿಸುತಮಾಗಳೊರ್ವಳಭಿಸಾರಿಕೆ ವೀರವಿಡಂಬಯಾನದಿಂ ೧೬೨

[7]ನಱು[7]ಸುಯ್ಗಂ ತನುಸೌರಭ[8]ಕ್ಕಮು[8]ಳಿವೃಂದಂ ಡಂಗುರಂಬೊಯ್ದು ಮುಂ
[9]ದಱ[9]ವಂ ತಪ್ಪವು ಕಾಳವೆಂಬ ಕಡಲೊಳ್ ಕಣ್ಣೆಂಬ ಮೀರ್ಗಳ್ ದುಡು
[10]ಮ್ಮಿಱಿಯು[10]ತ್ತಿರ್ದಪವೆಂತು ನಲ್ಲನೆಡೆಗೊಯ್ವೆಂ ನಿನ್ನನಾವಂದದಿಂ
ದಱಿಯಿಪ್ಪೆಂ ಹಱಿಗುಟ್ಟೆ ಹಾದರಮನಾಡಲ್ ಪೋಪರೇ ಜಾರೆಯರ್ ೧೬೩

ದೆಸೆಯಂ ನೋಡದಿರಕ್ಕ ನಿನ್ನ ಧವಳಾಪಾಂಗಂ ಪೊದಳ್ದಿಪ್ಪುದಿ
ನ್ನುಸುರಲ್ವೇಡೆಲೆ ಮುಗ್ಧೆ ನಿನ್ನ ದಶನೇಂದುಜ್ಯೋತ್ಸ್ನೆ ನೀಳ್ದಪ್ಪುದೆಂ
ದಸಮಾಲಂಬಿಕೆ ಮೌನಮಾಡಿ ಸಖಿಯಂ ಸಂಕೇತಸದ್ಮಕ್ಕೆ ಪ
ಲ್ಲಿಸರಂದೋಱುತೆ ಮುಂದೆ ಮುಂದೆ ನಡೆ[11]ದೊಯ್ದಳ್ ದೂ[11]ತಿ ಚಾತುರ್ಯದಿಂ ೧೬೪

ಕ[12]ಳೆದು[12] ಪಳಂಚಿನುಂಗುರುಮನೇಱಿಸಿ ಮುಸುಂಕಿ ಮರಳ್ಚಿ ಸೆಕ್ಕಿ ಮೇ
ಖಳೆಯೊಳಡಂಗುವಂತೆ ನಿಱಿಯಂ ಸೆಱಗಿಂ[13]ಪೊದೆದುಟ್ಟು[13] ದೂತಿ ಕೈ

---

[1] ಳಜ್ಜನೀ (ಅ) [2] ಲೆಂದೆಂತೆ (ಅ) [3] ೞ್ತಿಱಿತೊ (ಅ) [4] ದೈವಾಗೃಹಾ (ಖ ಬ) [5] ಭೂದವ (ಖ ಬ) [6] ಪುಂ (ಕ) [7] ನೆಱಿ (ಕ) [8] ಕ್ಕೆಯ (ಖ ಬ) [9] ಗುರು (ಖ ಬ) [10] ಮಿರಿವು (ಖ ಬ) [11] ದಳ್ ತದ್ದೂ (ಕ) [12] ಳಚಿ (ಕ) [13] ಪೊಱಮಟ್ಟು (ಕ) ಮಿಗೆ ಪೊರ್ದು (ಖ ಬ)

ಕೊಳಿಸಿದ [1]ಬುದ್ಧಿ[1]ಯಿಂದೆಡಪಿ ನೊಂದೊಡ[2]ಮಾ[2]ಯೆನಲಮ್ಮದಂಘ್ರಿಯಂ
ತಳದೊಳವುಂಕುತಂ ನಡೆದು ಕಾಹಿನಗೇಹಮನೊರ್ವಳೆಯ್ದಿದಳ್ ೧೪೫

ಎಳಸಿ ಕಳೆವಳಸಿ ತಿಳಿಪುವ
ದು[3]ಳಿವೆಡೆ[3]ಗೆಡೆಯಿಲ್ಲದಡರೆ [4]ಕೆಲ್ಲೈ[4]ಸಿ ಕವ
ಲ್ದೊಳಗೊಳಗೆ ಬಳೆದಲಂಪೊಡ
ನಳುರೆ ಪದಂ ಪದದೊಳೊದವೆ ಜಿರಸು[5]ತ ನಡೆದರ್[5] ೧೪೬

ಮುನಿಸಾಗಳೆ ತಿಳಿವಾಗಳೆ
ಮನದಾಸಱನುಸುರ್ವ[6]ವೇಗ[6]ಮಾಗಳೆ ತರದಿಂ
ನನೆಕೊನೆ[7]ವೋಪು[7]ದುಮಾಗಳೆ
ಮನಸಿಜನ ಮಹೇಂದ್ರಜಾಲವದು ಜಾರೆಯರೊಳ್ ೧೪೭

ಕರುಮಾಡಂ ಬಕ್ಕಬಯಲ್
ಸಿರಿ[8]ಮಂಚಂ[8] ಬೀದಿಯೆಂದು ಬಗೆಬಂದೆಡೆಯೊಳ್
ನೆರೆಯಲ್ ಜಾರರ್ ಬಯಸುವ
ವರಮುಂ ಸ್ಮರನಿತ್ತನೆನಿಪ ಪೆರ್ಗತ್ತಲೆಯೊಳ್ ೧೪೮

ಗಳರುತಿ ತಾಲತತ್ಕೃತಿ ಸಚುಂಬನಸೀತ್ಕೃತಿ ಹಸ್ತತಾಡನಂ
ಗಳವಿಲುಠತ್ಥಟತ್ಕೃತಿ ಲಯಂಗಳೊಳೊಂದಿ ರತೋತ್ಸವಂಗಳಂ
ಬಳೆಯಿಸಿ ಕಾದಲರ್ಗೆ ಮೆಱೆದರ್ ಬಹುವಾದಿತ ಭೋಗದೇವತಾ
ನಿಳಯದ ಪಕ್ಕದೊಳ್ ಚದುರೊಡಂಬಡೆ ಕೂಡುವ ಜಾತಿಜಾರೆಯರ್ ೧೪೯

ಎನಸುಂ ಜಾರರ್ಗದೇಂ ಪ್ರೀತಿಯನೊಡರಿಸಿತೋ ಸ್ವೈರಿಣೀಸ್ವಲ್ಪಕಂಠ
ಧ್ವನಿ ಕಿಂಚಿಚ್ಚುಂಬನಂ ಸೀತ್ಕೃತಿವದನರವಂ ಮಂದನಿಶ್ವಾಸನಂ ಗೂ
ಢನಖೋಲ್ಲೇಖಾಂಕಮೀಷದ್ವಚನರಚನವಾಕ್ಪ್ರೌಢಿ ಶೀಘ್ರಾಕುಳಾಲಿಂ
ಗನಮಾಷತ್ತಾಡನಂ ಸಂಕುಚಿತರತಿ ಚಳಾಪಾಂಗಮುತ್ಕಂಪಿತಾಂಗಂ ೧೫೦

ಜನಿತಾಹ್ಲಾದಾಕು[9]ಳಾ[9]ಲೋಕನಮುಪಚಿತಸಂಪರ್ಕತಾಂಬೂಲದಾನಂ
ಮುನಿಸಂ ಕೈಕೊಳ್ವ ಕಿಂಚಿತ್ಪ್ರಣಯಕಲಹ[10]ಮು[10]ತ್ಪ್ರುತ್ಸುಕವ್ಯಾವೃತಾಲಿಂ

---

[1] ಬಟ್ಟೆ (ಖಬ) [2] ಮಃ (ಖಬ) [3] ಳುವಡಿ (ಕ) [4] ಕೇಡೈ (ಕ) [5] ವಪ ದದೊಳ್ (ಕ) [6] ಮಾತು (ಖತ) [7] ಯಪ್ಪು (ಖಬ) [8] ಮಾಡಂ (ಕ) [9] ಳಂ (ಖಬ) [10] ರ (ಖಬ)

ಗಗನಮುಪ್ಪ[1]ಷ್ಪೋಲ್ಲಸ[1]ಚ್ಚುಂಬನಮಸದೃಶವಾಗಲ್ಪ[2]ಮವ್ಯ[2]ಕ್ತಕಂಠ
ಸ್ತನಸಹಿತಾಪತ್ತಾಡನಂ [3]ಬಿತ್ತ[3]ರಿಪೆ ನೆರೆದುದೋರಂದದಿಂ ಜಾರವೃಂದಂ ೧೫೧

(ಕುಸುಮಾವಳಿ ೪-೩೬)

ಪರೆವೆ ಬರ್ಪ ಪೂವವಿಯರಂ ತವಕಂ ತ[4]ವೆ[4] ಮಿಕ್ಕು ನೀವಿ[5]ಯಂ[5]
ಚಾರುಕಲಾಪ[6]ದೊಳ್[6] ನಿಲಿಸುತುಂ ದೆಸೆಯಂ ನಸು ನೋಡುತುಂ ಪ್ರೌಢ
ಬ್ರೂದ್ದಮು[7]ತಟಂ[7]ಗಳಿಂದಿಱುವ ಸಾಣ್ಬದಸಂ ನಿಱಯಿಂದವೊತ್ತುತುಂ
ಜಾರೆಯರೆಯ್ದಿದರ್ದರುಪಕಾಂತರ[8]ನಾ ಬಹಳಾಂ[8]ಧಕಾರದೊಳ್ ೧೫೨

(ಕುಸುಮಾವಳಿ ೪-೩೫)

ಎಡಗಯ್ಯಿಂ ನೀವಿಯಂ ಸಾರ್ಚುತಮುರಸಿಜದೊತ್ತಂಬದಿಂ ಬಳ್ಕುತುಂ ಸೋ
ರ್ಮುಡಿಯಂ ಸೈತೊತ್ತುತುಂ ನೂಪುರಮನೆ ಪದದಿಂದುರ್ಚಿ ಕೈಗಿಕ್ಕುತುಂ ಕ
ಣ್ಗಿಡಿಪಿಂಗಂಜಿ ಚೀನಾಂಶುಕದ ಸೆಱಗನಳ್ಳಾಸುತುಂ ನಾಡೆಯುಂ ಮೆ
ಲ್ಲಡಿಗೆಂಪಿಂ ರಾತ್ರಿಯಂ ಚಿತ್ರಿಸುತಮಸತಿಯರ್ ಪೋದರಂತತ್ತಮಿತ್ತಂ ೧೫೩

(ಕುಸುಮಾವಳಿ ೪-೩೪)

ಪೊಡರಿದ ಲಜ್ಜೆ ಪಲ್ಲಟಿಸದಾಸನಮುಳ್ಕದ ಬೈಗುಳುಣ್ಮಿ ಪೊ
ಣ್ಮದ ನಱುಸುಯ್ಗಳುಚ್ಚಳಿಸಿ ಪತ್ತದ ಬಾಯ್ ಪಿಡಿದಾಗಳಾರ್ಪು ನಾಂ
ಟದ ನಖರೇಖೆ ಪಲ್ಲ ಕೊನೆದಾಗದ ಚುಂಬನವೆಂಬಿವಿಚ್ಛೆಯೊಳ್
ಪುದಿದಿರೆ ಮೆಚ್ಚಿದರ್ ನೆರೆದು ಪೋಪವಳೋಪನ ಜಾಣಕೇಣಮಂ* ೧೫೪

ಪೊಲೆಬೆಣ್ಪಿಂ ಬಳ್ಕುತುಂ ಮೆಲ್ಲನೆ ಪದವಿಡುತುಂ ನೀಳ್ದಪಾಂಗಂಗಳಿಂದಿ
ರ್ಕೆಲನಂ ನೋಡುತ್ತುಮೆತ್ತಂ ಸುಱುವ ನೆಟಿಲಸಾರಯ್ಯುತುಂ ದೂರದಿಂ ಬ
ರ್ಪುಲಿಪಂ ಕರ್ಣಾವತಂಸಕ್ಕೆಱಗುವಳಿಗಳಂ ಸೋವಿ ನಿಂದಾಲಿಸುತ್ತುಂ
ಚಳವೇಣೀಭಾರದಿಂದೋಸರಿಸುವ ಮುಸುಕಂ ಸಾರ್ಚುತುಂ ಪಾಣ್ಬೆ ಪೋದಳ್ ೧೫೫

(ಲೀಲಾವತಿ ೩-೧೩)

ತಿಂಗಳ ಕಾಂತಿಯಂ ಪಱುಗುಮೀ ಸೊಗಯಿಪ್ಪಲರ್ಗಣ್ಣ ಕಾಂತಿಯಿಂ
ದಂಗನೆ ತನ್ನ ಹಸ್ತಯುಗದಿಂದವನೊಯ್ಯನೆ ಮುಚ್ಚಿಕೊಂಡು ಕಾ
ಲುಂಗುರಮಂ ಪಳಂಚಲೆಯಲೀಯದೆ ದಾಗದೊಳೆತ್ತಿ ಕಟ್ಟಿ ಜಾ
ರಾಂಗನೆ ಜಾರನಿರ್ದೆಡೆಗೆ ದೂತಿಸಿ ಪೋಪವಳೊರ್ವಳೊಪ್ಪಿದಳ್* ೧೫೬

[1] ಷ್ಪಾಲಸಾ (ಖ ಬ) [2] ಪಭ್ಯ (ಖ ಬ) [3] ಭೀಕ (ಖ ಬ) [4] ರೆ (ಕ) [5] ಯೊಳ್ (ಕ) [6] ಮುಂ (ಅ) [7] ಯುಗಂ (ಅ) [8] ನಂದು ಮುಪಾಂ (ಅ) * ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ಕಲ್ಲೆನ್ನದೆ ಮುಳ್ಳೆನ್ನದೆ
ಸಲ್ಲಲಿತಸ್ಥಾನಮೆನ್ನದಿರ್ದಿರ್ದೆಡೆಯೊಳ್
ಪಲ್ಲವಿಸಿಯೆ ಪೂತುದು ಫಲ
ವಲ್ಲರಿಯಂ ತಳೆದುದಮಮ ಜಾರರ ಸುರತಂ ೧೫೭

(ಗಿರಿಜಾಕಲ್ಯಾಣಂ ೪_೮೭)

ಆಱಿದ ಬೆಮರಬಿೞದ ಕುರುಳ್
ಜಾಱಿದ ಮುಡಿ ಬಾಡಿದಧರ ನಖದೊಡವಿಂ ಕೆಂ
ಪೇಱಿದ ಕಣ್ ಬಿಬ್ಬಿ ಮನಂ
ಮಾಱುತ್ತರವೆರಸಿವೆರಸಿ ಜಾರೆ ಜಗುಬ್ಬಿಳ್ ೧೫೮

ಜಾರಂ ಸಂಕೇತಗೇಹಾಂತರದೊಳಡಗಿದು ತನ್ನೋಪವಳ್ ಬರ್ಪ ಸೈಪಂ
ಪಾರುತ್ತಿರ್ಪನ್ನಮೊರ್ವಳ್ ತ್ವರಿತದೆ ಪರಿತಂದಾತ್ಮಚಿತ್ತೇಶನೆಂದಾ
ಜಾರಂ ತನ್ನಾಕೆಯೆಂದಂತೊಡವೆರಸಿ ಬೞಿಕ್ಕೆಂಬ್ದಿ[1]ಕಾ[1]ಮಗ್ರಹಂ ತೀ
ರ್ದಾರಯ್ದೋರೊರ್ವರಂ [2]ಕಂಡ[2]ಹಹ ಎನುತವರ್ ನಕ್ಕು ಕೈವೊಯ್ದು ಪೋದರ್ ೧೫೯

ಪಡೆದಮರ್ದಪ್ಪಿಯಾತುರಿಸಿ ನೋಡಿದ ಕೂಡಿದ ಕೂಡೆ ಮಾತನಾ
ಡಿದ ಪಡೆದಿತ್ತ ತಂಬುಲದ ಚುಂಬನದಿಂಬುಗಳಿಂದ್ರಜಾಲವ
ಲ್ಲದು ಕನಸಲ್ಲವಲ್ಲ [3]ನೆ[3]ನಪೆಂಬ ವಿಕಲ್ಪಮನಿಟ್ಟು ಚಿತ್ತದೊಳ್
ಕುದಿಪಮಡಂಗದೆಟ್ಟು ಸರಿದರ್ ತ್ವರಿತಂ ಸಲೆ ಸಂದ ಜಾರೆಯರ್ ೧೬೦

ಪೊದೆದ ನವೀನ ನೀಲಪಟವಿಕ್ಕಿದ ಕತ್ತುರಿಯಣ್ಪು ತೊಟ್ಟ ನೀ
ಲದ ತೊಡವೊಪ್ಪೆ ಜಂಗಮತಮಃಕಳೆಯಂತೆ ತಮಸ್ತಮಾಲವೃ
ಕ್ಷದ ಚಳಶಾಖೆಯಂತೆ ತಮದೊಡ್ಡಿನ ಲೋಲಪತಾಕೆಯಂತೆ ಪ
ರ್ಬಿದ ತಮ[4]ದೊಡ್ಡಿ[4]ನೊಳ್ ಸುೞಿದರಸ್ಫುಟಚಾರಿಯರಂದು ಜಾರೆಯರ್ ೧೬೧

(ಜಗನ್ನಾಥವಿಜಯಂ ೧೩_೧೦೨)

ಪದುಳಿಸದಂಗಮೆಚ್ಚಱಿದ ಕಣ್ಮಲರಾಱದ ಸೇದೆ ಮುಗ್ಗುಲಿ
ಕ್ಕದ ಪುಳಕಂಗಳಿಂಗದ ಬೆಮರ್ ವಿಡುಕೋಡದ ಪುರ್ವು [5]ಕೆತ್ತುಗುಂ
ದದ ಕುಚ ಬೀಗಿ ಬೀಯದಧರಂ[5] ನಡುಕಂಗಿಡದೂರು ಗಂಪೆಯೇ
ಱದ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ ೧೬೨

(ಲೀಲಾವತಿ ೩_೧೫)

---

[1] ನಾ (ಬ) [2] ಪಂತ (ಅ ಕ) [3] ನ (ಕ ಖ) [4] ಪರ್ಪಿ (ಕ) [5] ಬೀಗಿ ಬೀಯುದ ಕುಟಿಕೆತ್ತುಗುಂದದೆ ಕುಚಂ (ಅ)

ಇಂಮುಪನಲ್ಲಭಂ ಮುಳಿಿಸಿ ದೂದವಿಗಾದುದಜೀರ್ತಿ ಬದ್ದಿನರ್
ಬಂದರಬಿತ್ತ್ರನಿರ್ವಪುಸು ಕೂಸಿನಿಸಂ ತೊಲಗಂ ಗೃಹಾಧಿಪಂ
ಬೆಂದುದು ಸೂಚಿಶಾಲೆ ಪ್ರಸತಾಯ್ತು ತಳಾಜಂಕೆಯಿಂದು ಮೂಡಿದಂ
ಬಂದಡಸಿರ್ದೊಡೇಬಡಸಿಕೆಂಬುದು ತಪ್ಪುಗುಮೇ ತಳೋದರೀ* ೧೬೩

ಎತ್ತುತ್ತುಂ ಕಟಿಸೂತ್ರಮುಂ ನಸು ಬಟಿಲ್ದಿದುರ್ಬಟ್ಟದಂ ಕೇಶದಿಂ
ದೊತ್ತುತ್ತುಂ ಪ್ರಿಯಚುಂಬಿತೋಷ್ಠಮಣಿಯಂ ವ್ಯಾಲಂಬದಿಂ ಮೆಲ್ಲನೊ
ಳ್ಗೊತ್ತುತ್ತುಂ ಪರೆದಿರ್ದ ಕುತ್ತುನವಿರಂ ದಿಗ್ಭಿತ್ತಿಯಂ ಜಿರ್ಜಿ ನೋ
ಡುತ್ತುತ್ತುಂಗ ಫಿತಂಬೆ ಬಂದಳಿರುಳೊಳ್ ಜಾರೋಪಭೋಗಾಂತದೊಳ್ ೧೬೪

ನುದಸಾಂಬುಪ್ಲವದುರ್ಕು ಮಬ್ಗದೆ ಲಸತ್ ಪೀನಸ್ತನಂ ಕೆತ್ತುಗುಂ
ದದೆ ಸುಯ್ ನಿಲ್ಲದೆ ಕಣ್ಗಳೆಚ್ಚಱದೆ ಘರ್ಮಾಂಭಃಕಣಾಸೀಕಮುಂ
ಗಡೆ ರಂಭೋರುವ ಕಂಪಮುಗ್ಗದೆ ನಿಜೋಷ್ಠಸ್ಪಂದನಸ್ಫೂರ್ತಿ ಮಾ
ಣದೆ ಮೆಯ್ ಸೇದೆಯುದಾಜದಿಂತು ಸುಸಿಲಿಂದಾ ಪಾಣ್ಬೆಯರ್ ಪಿಂಗಿದರ್ ೧೬೫

(ಕುಸುಮಾವಳಿ ೪-೩೭)

ಒಂದೆರಡೊಳ್ನುಡಿ ತವಕದೊ
ಳೊಂದೆರಡಾಲಿಂಗನಂ ಮುಗುಳ್ನಗೆ ನೋಟಂ
ಸಂದಣಿಸುವ ಮುಂಬದನೊಳ
ಗಿಂದೀವರನಯನೆ ಪಾಣ್ಬನಂ ಬೀಟಿಳ್ಕೊಂಡಳ್ ೧೬೬

ನಿಡುಸುಯ್ಲುಂ ತನ್ನನೊತ್ತಂಬರಿಸೆ ನಿಲುಪುತುಂ ನೀಳ್ದ ನಳ್ಕೇಶದಿಂದಂ
ತೊಡೆಯುತ್ತುಂ ತೊಂಡೆವಾಯಂ ಶ್ರಮಜಲಕಣಮುಂ ಮೇಲುದಿಂ ವಾರಿಸುತ್ತುಂ
ನುಡಿಯುತ್ತುಂ ಪಾಣ್ಬನೊಳ್ ಕೂಡಿದ ರತಿವಿಷಯಖ್ಯಾತಿಯಂ ತನ್ನೊಳಾಗಳ್
ನಡೆಯುತ್ತುಂ ಪಾಣ್ಬೆಯೊರ್ವಳ್ ನಿಜಮಣಿಭವನದ್ವಾರದೊಳ್ ಬಂದು ನಿಂದಳ್* ೧೬೭

ವನರುಹಕಾಂ[1]ತ[1]ಕುಟ್ಮಳಕಮಂಡಲುರಾಜಿನಿ ಹಂಸಮಾಲಿಕಾ
ತನುಸಿತವಲ್ಕಭಾಜಿನಿ ಮೃಣಾಳಲತಾಲ[2]ತಿಕೋ[2]ಪವೀತರಂ
ಜಿನಿ [3]ಕಲಿ[3]ತದ್ವಿರೇಫ ನಿವಹಾಕ್ಷಸಮಾಜಿನಿ ಶೋಕದಿಂ ಸರೋ
ಜಿನಿ ದಿನಕೃದ್ವಿಯೋಗದೆ ತಪಸ್ವಿನಿ[4]ಯಾದ[4]ವೊಲಾದಮೊಪ್ಪಿದಳ್ ೧೬೮

(ಕಾದಂಬರಿ ಪೂ.ಭಾ. ೨೭೮)

---

[1] ತ್ತೆ (ಖ ಬ) [2] ಲಿತೋಃ (ಅ) [3] ನಳಿ (ಅ) [4] ಯಂತೆ (ಅ) * ಈ ಪದ್ಯ
ಗಳು (ಕ) ಪ್ರತಿಯಲ್ಲಿಲ್ಲ

ಮುಳಿದ ತಿಮಿರೇಭಕುಂಭ
ಸ್ಥಳಮಂ ಶಶಿಸಿಂಹಮೊತ್ತಿ ಸೀಳಲ್ ಮುಕ್ತಾ
ಫಲಮುದಿರ್ದವೊ ನಭದೊಳಗೆನೆ
ಬೆಳಗಿದುವತಿ ಬಹಳ ತರಳ ತಾರಾನಿಕರಂ ೧೬೯

ತಾರಗೆಯ ಬೆಳ್ಪು ನವಸಂ
ಧ್ಯಾರುಣ ರುಚಿಯೊಳ್ ಪ[1]ಳಚ್ಚನೆಸೆಯೆ[1] ಮಹೋದ್ಯ
ದ್ದ್ವಾ[2]ರದೆ[2] ನಿಮಿರ್ಚಿ ಪರ್ಬಿದ
ಸಾರಂಗದ ತೊವಲವೊಲ್ ವಿರಾಜಿಸಿ ತೋರ್ಕುಂ ೧೭೦

ಲೀಲೆವಡೆದೆಸೆವ ತಾರಾ
ಮಾಲೆಯ ಜಲಜಲಿಸಿ ಪೊಳೆವ [3]ಪೊಳೆಪು[3]ಗಳಿಂದಂ
ಸೋಲಿಸೆ ಪೂವಲಿಗೆದಱದ
ನೀಲದ ರಂಗದವೊಲೆಸೆದುದಾಕಾಶತಳಂ ೧೭೧

ಅಂಬರತಳದಿಂದಿನನಪ
ರಾಂಬುಧಿಯೊಳ್ ಬೀೞಿ ನೆಗೆದ [4]ಸೀರ್ಪ[4]ನಿಗಳೊ ಪೇ
ೞಿಂಬಿನೆಗಂ ತಾರಾನಿಕು
ರುಂಬಂ [5]ಸೊಗಯಿಸಿದುವೆಯ್ದೆ[5] ಗಗನಾಂತರದೊಳ್ ೧೭೨
(ಕಾದಂಬರಿ ಪೂ.ಭಾ ೨೭೯)

ತರತರದಿಂದೆಂಟುಂ ದಿ
ಕ್ಕರಿಗಳ್ [6]ನೆರೆದೊಟ್ಟೆ[6]ಕೊಳ್ವ ಕರಪುಷ್ಕರ ಶೀ
ಕರಮೊಗೆದು ತೋರ್ಪುವೆನಲಂ
ಬರತಳದೊಳ್ ತುಱುಗಿ ಮಿಱುಗಿದುವು ತಾರಗೆಗಳ್ ೧೭೩
(ಕಾದಂಬರಿ ಉ.ಭಾ. ೧೪೩)

ಇಳೆಗೆ ಪಟಿಗಾಲದಂಬರ
ವೊಳ್[7]ಜೋಲ್ಗುಂ[7] ಬೀೞ್ಗುಮೆಂದುಂ ಧಾತ್ರುಂ ಬಲ್ಪಿಂ
ದಳವಡೆ ಬೆಟ್ಟಿದ ಬೆಳ್ಳಿಯ
ವೊಳಿಗೆ[8]ಳಿವೆನೆ[8] ತೊಳಗಿ ಬೆಳಗಿದುವು ತಾರಗೆಗಳ್ ೧೭೪
(ಜಗನ್ನಾಥವಿಜಯಂ ೧೬—೯೯)

1 ಛಂಚಲೆಯಿ (ಪಿ ಬ) 2 ರಥಿ (ಕ) 3 ಕಪಪ್ರ (ಪಿ ಬ) 4 ನೀರ್ವ (ಪಿ ಬ)
5 ಪಸರಿಸಿದುವೆಯ್ದೆ (ಪಿ ಬ) 6 ನಿಳ್ಕೆತ್ತಿ (ಪಿ ಬ) 7 ಸಾರ್ಗುಂ (ಅ) 8 ಳಿಸಲ್ (ಅ)

ಇರಮುದಯಗಿರಿಯ ದರಿಯೊಳ್
ಸುರಕರಿ [1]ಮಜ್ಜನ[1]ಕೆ ಸಾರ್ದು ಸುಯ್ಯಲೊಡಂ ಪು
ಷ್ಕರದಿನೊಗೆವತಿ [2]ವಿಶದ[2]ಶೀ
ಕರಮೆನಿಸಿದುವುದಯಿಸವುಳ ತಾರಾನಿಕರಂ ೧೭೫

(ಚಂದ್ರಪ್ರಭಪುರಾಣಂ ೮–೨೨)

ಗಗನಂ ಮಿತ್ರವಿಯೋಗದಿ
ನೊಗೆದಂತಶ್ಶೂನ್ಯಭಾವ[3]ದಿಂದೊಳ್[3] ಮೆಯ್ಯೊಳ್
ಮಿಗೆ ಪನಿತ [4]ಕಣ್ಬನಿಯಿದೆನೆ[4]
ಸೊಗಯಿಸಿದುವು ತರದಿನೊಗೆದು ತಾರಗೆ ಪಲವುಂ ೧೭೬

(ಚಂದ್ರಪ್ರಭಪುರಾಣಂ ೮-೨೩)

ಜವದಿಂ ಪೋದಿನನ ವರೂ
ಥವಾಜಿಗಳ ಮೊಗದೊಳೊಗೆದ ಫೇನಂಗಳ್ ವಾ
ಯುವಶದೆ ಪಱಿವಱಿಯಾಗಿ
ರ್ದುವು ಗಗನಾಂಗಣದೊಳೆನಿಸಿದುವು ಭಗಣಂಗಳ್ ೧೭೭

(ಚಂದ್ರಪ್ರಭಪುರಾಣಂ ೮–೨೪)

ನೆಟ್ಟನೆ ಬಂದಪನೆನ್ನಯ
ನಿಟ್ಟೆಯ ನಿಧಿ ಚಂದ್ರನೆಂದು ರಾತ್ರೀವಧು ತಾಂ
ಕಟ್ಟಿದ ಬಹುರತ್ನದ ಮೇ
ಲ್ಕಟ್ಟೆನಿಸಿದುದಂಬರಂ ಸುತಾರಾಗಣದಿಂ ೧೭೮

(ಗಿರಿಜಾಕಲ್ಯಾಣಂ ೪-೯೩)

ಸಂಕಳಿತ ಬಹಳ ತಾರಾ
ಸಂಕುಳದಿಂ ಪೋಲ್ತುದಭ್ರವಾವೃತತಿಮಿರಂ
ತೇಂಕುವ ಮಲ್ಲಿಗೆ ಮುಕುಳದ
ಸಂಕುಳಮಂ ತಳೆದು ನಿಂದ ಜಗುನೆಯ ಮಡುವಂ ೧೭೯

ಓಸರಿಸೆ ಸಂಜೆ ಜವನಿಕೆ
ಯೋಸರಿಸಿದ ತೆಜದೆ ರಾತ್ರಿನರ್ತಕಿ ಪುಗುತಂ
ಸೂಸಿದ ಪುಷ್ಪಾಂಜಲಿಯೆನೆ
ಭಾಸಿಸಿದುವು ಗಗನರಂಗದೊಳ್ ತಾರಕಿಗಳ್ ೧೮೦

(ಲೀಲಾವತಿ ೧೦-೨೪)

---

[1] ಸೆಜ್ಜರ (ಅ) [2] ವಿತತಿ (ಖ ಗ ಬ) [3] ದಿನಜಿತ (ಅ) [4] ವ್ರ ಕಣನಿಯೆನೆ (ಖ ಬ)

ಸ್ಥಿರರಾಜ್ಯಂ ಗೆಯ್ ಕತ್ತಲೆ
ಚಿರಕಾಲಮಿರೆಂದು ಜಾರೆಯರ್ ಪದಪಿಂದಂ
ಪರಸಿಡುವ ಸೇಸೆಯಂದದೆ
ಕರಮೆಸೆದುವು ಗಗನರಂಗದೊಳ್ ತಾರಕಿಗಳ್ ೧೮೧

ಶಶಿ ಬಂದನೆಂದು ವಾರಿಧಿ
ಯೆಸೆದೊಲವಿಂ ನರರ ದಿಟ್ಟಿ ನಟ್ಟಪವೆಂದಾ
ಸಸಿಗೆ ನಿವಾಳಿಸಿ ಚೆಲ್ಲಿದ
ಪೊಸ ಮುತ್ತಿನ ಸೇಸೆಯಂತೆ ತಾರಗೆಯೆಸೆಗುಂ ೧೮೨

ಗಗನಂ ಪೂತುದೊ ತಮಮುಂ
ಮಿಗೆ ನೋಡುವ ಭರದೊಳಂಬರಂ ನೆಱೆ ತಾನ
ಕ್ಷಿಗಳಂ ಪಡೆದುದೊ ಪೇೞೆನೆ
ಸೊಗಯಿಸಿದುವು ತೊಳಗಿ ಬೆಳಗಿ ತಾರಗೆ ನಭದೊಳ್ ೧೮೩
(ಗಿರಿಜಾಕಲ್ಯಾಣಂ ೪. ೯೦)

ಅಂಬುಜನಿಜಸಖನಸ್ತಮ
ಯಂಬರವಂಬರದ ನಡುವೆ ಬಹುತರದಿಂ ನೆ
ಯ್ದಂಬರದೊಳ್ ಕಯ್ಗೊಳಿಸಿದ
ಚುಂಬಿತ ರತ್ನಂಗಳಂತೆ ತಾರಗೆಯೆಸೆಗುಂ ೧೮೪
(ಗಿರಿಜಾಕಲ್ಯಾಣಂ ೪-೯೩)

ತಮನೆಂಬ ರಾಹುಭಯದಿಂ
ದ್ಯುಮಣಿ ಸ್ಥೂಲತೆಯನುೞಿದು ಕಿಱುಮೂರ್ತಿಗಳಂ
ಸಮುಚಿತದಿ ತಾಳ್ದನೆನೆ ಗೃಹ
ಸಮುಚಿತದೊಳ್ ತೊಳಗಿ ಬೆಳಗಿದುವು ದೀಪ್ತಿಕೆಗಳ್ ೧೮೫

ನೆಲಸಿ ನೆಲೆಗೊಂಡ ಪೆರ್ಗ
ತ್ತಲೆಯೊಳ್ ತೊಳತೊಳಗಿ ಬೆಳಗಿ ಮಿನಿಮಿನಿಸುತ್ತಂ
ಪಲವುಂ ದೀವಿಗೆಗಳ್ ಕ
ತ್ತಲೆ ಪೂತಂತೊಪ್ಪುತಿರ್ದುವಾ ಮನೆಮನೆಯೊಳ್ ೧೮೬
(ಗಿರಿಜಾಕಲ್ಯಾಣಂ ೪_೮೦)

ಆವರಿಸುತಿರ್ಪ ತಮಕೆ ತ
ಮೋವೈರಿ ಧರಿತ್ರಿಗಿೞಿದುಳಿಯಾ[1]ಳ[ದ]ನೆ[1] ದೀ
ಪಾವಳಿಗಳೆಸೆದವಖಿಳ ಗೃ
ಹಾವಳಿಯೊಳ್ ಬರ್ಪ ಶಶಿಗೆ ನೀರಾಜಿಪವೋಲ್ ೧೮೭

---

[1] ಳಿನೆ (ಖ ಬ)

ಮಡದಿಯರೆಲ್ಲಂ ಪೊತ್ತಿಸಿ
ತಡೆಯದೆ ಕೈಮುಗಿದು ನೆನೆದು ಮನೆದೇವತೆಯಂ
ಕುಡಿವೆರಳೊಳಂಟುವಕ್ಕಿಂ
ದಿಡುವರ್ ಬಾಳರ್ಗೆಯಾ ಸೊಡರ್ಗುಡಿ ಕಪ್ಪಂ ೧೮೮

ಸೊಡರ್ಗುಡಿಗೆತ್ತಿ ಕೈಮುಗಿದು ಜೇಟಿಯರಂ ಬೆಸಗೊಂಡು ಸನ್ನೆಯಿಂ
ನಡೆದು ಗೃಹಾಂಗಣಕ್ಕಿಳಿಸಿ ತಾರಗೆಯಂ ನಡೆನೋಡಿ ಪಾಟಿಯಿಂ
ಕುಡಿವೆರಳಿಂದಮೊಟ್ಟೈಸಿ ಕಾಂತೆಯರೊಯ್ಯನೆ ಸಂಜೆವೋನಮಂ
ಬಿಡುವಿನಮುಬ್ಬಸಂಬಡುತುಮಿರ್ದುದು ಪ್ರೊರ್ದಿದ ಕಾಮುಕವ್ರಜಂ ೧೮೯

ಜಗುನೆಯ ಪೂರಮೊತ್ತರಿಸ ಗಂಗೆಯಿನೊಡ್ಡಱಿವಂತೆ ಮರ್ಬಿನ
ಬುರ್ಗಿಬಗಿಯಾಗೆ ಬೆಳ್ಪು ನೆಗೆತಂದುದಯಾದ್ರಿಯ ಸೆಜ್ಜೆರಕ್ಕೆ ಪ
ಕ್ಕೆಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್
ಬಗೆಗೊಳಿಸಿತ್ತು ಚಂದನರಸಂಬೊರೆದಂತಿರೆ ಪೂರ್ವದಿಙ್ಮುಖಂ ೧೯೦

(ಜಗನ್ನಾಥವಿಜಯಂ ೧೬-೧೦೩)

ಉಡುಪತಿ[1][ಯಾ][1] ಪಿಂತನೆ ಬಂ
ದಡಸಿ ಮುಸುಂಕಿರ್ದ ತಿಮಿರನೀಲಾಂಬರಮಂ
ಪಿಡಿಯೆ ಭಯಮುತ್ತವೋಲ್ ಬೆ
ಳ್ಪಡ[2]ರ್ದುದು[2] [3]ವದನಕ್ಕೆ ಪೂರ್ವದಿಗ್ಬಂಧಕಿಯಾ ೧೯೧

ಆರಯ್ಯದೆ ಖರಕರನೊಳ್
ವಾರುಣಿ ವಸುವಿಭವಹೀನನೊಳ್ ನೆರೆಯೆ ದರ
ಸ್ಮೇರಾನನೆಯಾದೈಂದ್ರೀ
ನಾರಿಯ ನಗೆಯಂತೆ ನೆಗೆದುವಿಂದುಕರಂಗಳ್ ೧೯೨

(ಲೀಲಾವತಿ ೬-೧೦೯)

ಉದಯಂಗೆಯ್ದುತ್ಪಲಾಧೀಶ್ವರನನಮರಕಾಂತಾಳಿನೀರಾಜನಂ ಮಾ
ಡಿದ ಮಾಣಿಕ್ಯಪ್ರದೀಪಾವಳಿಯ ಬೆಳಗು ತದ್ವಾಮನಾಮೇತರಾಶಾ
ಸುದತೀಪಿಷ್ಟಾತಕಾಕೀರಣಕಪಿಶರಜಃಪುಂಜಮೆಂಬಂದದಿಂ ಪ್ರೊ
ರ್ದಿದುದೋ ಕಂದರ್ಪಯಾತ್ರಾಬಳ ಘನಪರಾಗಂ ತಮಸ್ಸ್ಯೋತರಾಗಂ ೧೯೩

(ಅನಂತನಾಥಪುರಾಣಂ ೭-೭೫)

---

1 ಪತಿ (ಖ ಬ) ಯಂ (ಗ) 2 ದಂದು (ಖ ಬ) 3 ವೇ (ಕ)

ಇದು ಘುಸೃಣಾರುಣಂ ಸುರಹರಿದ್ವನಿತಾನಿಟಿಲಂ ದಿಟಕ್ಕೆ ತಾ
ನಿದು ಬರೆದಿರ್ದ ಸಿಂಧುರದ ಕೆಂಪಡ[1]ರ್ದಿಂದ್ರ[1] [2]ಗಜೇಂದ್ರ[2] ಕುಂಭಮ
ಲ್ತಿದು ಜನಿತೇಷ್ಟೆಯಿಂ ಮುಳಿಸಿ ತಾರಗೆ ಪಾಟಲಮಾದ ಯಾಮಿನೀ
ಮುದನಮೆನಿಪ್ಪಿನಂ ದಿಟದಿನುಣ್ಮಿದುದಿಂದುವ ರಕ್ತಮಂಡಲಂ ೧೯೪
(ಚಂದ್ರಪ್ರಭಪುರಾಣಂ ೮-೨೬)

ವಿತತಪ್ರಾಚ್ಯಾದ್ರಿಪೀಠಾಗ್ರಸುದರುಣಶಿಲಾವಿದ್ಧಲಿಂಗಂಬೊಲಿಂಬಾ
ಯ್ತು ತರಂಗೊಂಡೇಟಿಸ್ಸಿಯಿಂ ರಾಗದಿನುಪಚಿತಜೇತಶ್ಚಕೋರೀಕದಂಬಂ
ದ್ಯುತವಲ್ಲೀಸ್ತಂಭಮುಜ್ಜೃಂಭಿತಕುಮುದಕುಟುಂಬಂ ತಮುಶ್ಶೈಲಶಂಬಂ
ರತಿಪಾಟೋಪಾವಲಂಬಂ ಜನಿತನಿಟವಿಡಂಬಂ ಸುಧಾಸೂತಿಬಿಂಬಂ ೧೯೫
(ಜಗನ್ನಾಥವಿಜಯಂ ೧೬-೧೦೪)

ಇದು ಸಂಕ್ರಂದನದಿಗ್ವಧೂನಿಟಿಲಸಿಂಧೂರಾಂಶುವೋ ನೋಡನೋ
ಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತಮೋ ಪೇಟಿಂದಿಂ
ತಿದು ವಿಸ್ತಾರಿತ ಕಾಮಹೋಮಹುತಭುಕ್ಪ್ರಜ್ವಾಲೆಯೋ ಎಂಬ ಸಂ
ಪದಮಂ ಬೀಱಿದುದಿಂದ್ರದಿಗ್ವಳಯದೊಳ್ ಚಂದ್ರದ್ಯುತಿಪ್ರೋದ್ಭವಂ ೧೯೬
(ಗಿರಿಜಾಕಲ್ಯಾಣಂ ೪-೯೫)

ವಿರಹಿಗಳಂ ಮನೋಜನಲರಂಬುಗಳಂ ತಿಗೆದೂಱಿಕೊಂಡು ಕೊ
ಕ್ಕರಿಸದೆ ಹೃತ್ಕವಾಟಪುಟಮಂ ಬಿರಿಯೆಚ್ಚೊಡೆ ತದ್ಗುಹೌಘದಿಂ
ಸುರಿವರುಣಾಂಬುವಂ ಕುಡಿಮ ನರ್ತಿಸುತಿರ್ಪ ವಸಂತಡಾಕಿನೀ
ಕರದ ಕಪಾಲಮಿಂತಿದೆನೆ ಕಣ್ಗೆಸೆದಿರ್ದುದು ಚಂದ್ರಮಂಡಳಂ ೧೯೭

ಕಳಶದ ಬಾಯ ಕೆಂದಳಿರನಂಗಜವಿಪ್ರನ ಹೋಮಕುಂಡದೊಳ್
ಬಳೆದುರಿಯಂ ನಿಶಾಂಗನೆಯ ಬಟ್ಟಲ ಕುಂಕುಮಮಂ ಮನೋಜನ
ಗ್ಗಳಿಕೆಯ ಗಂಧಸಿಂಧುರದ ನೆತ್ತಿಯ ಸಿಂಧುರಮಂ ಪೊದಬ್ಬಿ ಪೋ
ಲ್ತಳವಿಗಳುಂಬಮಾದುದು ಸುಧಾಕರಬಿಂಬದ ರಾಗಮೇಟಿಸ್ಸಿಯಿಂ ೧೯೮
(ಲೀಲಾವತಿ ೨-೭)

ದಿಕ್ಕಾಂತಾಧರಪಲ್ಲವಕ್ಕೆ ಬಟಿಂಕಾ ದಿಕ್ಕಾಮಿನೀಭಾಳಪ
ಟ್ಟಕ್ಕಂ ತಾಂ ಬಟಿಂಕಾ ದಿಶಾಂಗನೆಯ ಕಾಶ್ಮೀರಾಂಗರಾಗೋಜ್ವಲಾ
ಸ್ಯಕ್ಕಾರಯ್ಯೆ ಸಮಾನಮಾಗಿ ನಯನಕ್ಕಿಂಬಾಗಿ ಪೂರ್ವಾದ್ರಿಕೂ
ಟಕ್ಕೆಟ್ಟಿಂದನೊಡರ್ಚುತುಂ ಕುವಲಯಕ್ಕಾನಂದಮಂ ಚಂದ್ರಮಂ ೧೯೯
(ಪಾರ್ಶ್ವನಾಥಪುರಾಣಂ ೧೦-೨೦)

---

[1] ದಿರ್ದ(ಖಬ) [2] ಕರೀಂದ್ರ (ಅ)

ಸ್ಮರಶಿಖಿಯಂ ವಿಯೋಗಿಹೃದಯಕ್ಕನುರಾಗಮನಾಗಳಾಗಳುಂ
ನೆರೆದೆಸೆದಿರ್ಪ ಕಾಮುಕಜನಾಶ್ರಯಕೊರ್ಮೋದಲೀಯಲೆಂದು ಬಿ
ತ್ತರಿಸಿರೆ ತಾಳ್ದದೆಂದುದಯಶೋಣತೆ ಶೋಭೆಯನೀಯೆ ಪೂರ್ವದಿ
ಕ್ತರುಣಿಯ ಪದ್ಮರಾಗಮಣಿವರ್ಪಣದಂತೆಸೆದಂ ಸುಧಾಕರಂ ೨೦೦

(ಪಾರ್ಶ್ವನಾಥಪುರಾಣಂ ೧೦ ೨೧)

ನನೆಯಿಂ ನೆಯ್ದಿ[1]ಲಿಸಾಲಿ[1]ನೀರ್ದಳಿಪದಿಂ ಕಾಮಾಗ್ನಿಯಂ [2]ನಂದಿಸಲ್[2]
ಮನಮಂ ತಂದ ವಿಯೋಗಿಜಾಲದೆರ್ದೆಯಂ ನಟ್ಟುರ್ಚಿಯೊಳ್ [3]ಜಾ[3]ಜ[3] ಬೆ
ಚ್ಚನೆ ಪಾಯ್ತೆಂದು ಪ್ರೊವಟ್ಟಿ ರಕ್ತಜಲದಿಂದಂ ತೊಯ್ದ ಕಂದರ್ಪದೇ
ವನ ಚಕ್ರಕ್ಕೆಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೨೦೧

(ಲೀಲಾವತಿ ೨_೫)

ನೆರೆವೈ ಸಂಜೆಯೊಳೆಂದು ಕಾಯ್ದೊ[4]ದೆದೊಡೇನಾತ್ಮಾಂ[4]ಗದೊಳ್ ರೋಹಿಣೀ
ಚರಣಾಲಕ್ತಕರಾಗಮಚ್ಚೞಿದುದೋ ಮೇಣ್ ಕಾಮಿಗಳ್ಗೀವ ಕಾ
ಮರಸಂ ಪೊಣ್ಮಿದುದೋ ತಮೋಗಜದ ಕೋಡೇಱಿಂದೆ [5]ಮೇಣ್[5] ನೊಂದುದೋ
ಹರಿಣಂ ತಾನೆನಿಸಿತ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೨೦೨

(ಆದಿಪುರಾಣಂ ೧೨-೬)

ಪುರುಡಿಂ ಕಾಯ್ದೊದೆಯಲ್ಕೆ ರೋಹಿಣಿಯ ಪಾದಾಲಕ್ತಕಂ ಮೆಯ್ಯನಾ
ವರಿಸಿತ್ತೋ ನಿಕಟಾಬ್ಧಿ ವಿದ್ರುಮ ಮಯೂಖಂ ತಳ್ತುದೋ ಪೂರ್ವಭೂ
ಧರಸಿಂಹಂ ಪೊಯೆ ನೊಂದುದೋ ಹರಿಣನೆಂಬಂತಾಗಳತ್ಯಕ್ತ ಸೌಂ
ದರಮಾಗಿರ್ದುದು ಕಣ್ಗೆ ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೨೦೩

ಶೋಣತೆವೆತ್ತು ಮರೀಚಿ
ಶ್ರೇಣಿಯ ಕೆಂವಳಿರನಗ್ರದೊಳ್ ತಳೆದುದಯ
ಕ್ಷೋಣೀಧ್ರಮೆಂಬ ಕಳಶದ
ಮಾಣಿಕಗನ್ನಡಿವೊಲಾಯ್ತು ಹಿಮಕರಬಿಂಬಂ ೨೦೪

(ಜಗನ್ನಾಥವಿಜಯಂ ೧೬–೧೦೫)

ಅಲೆದಮೃತದೊಡನೆ ತಾರಾ
ಲಲನೆಯುರಡಿದಳಿರನೂಡಲೆಂದು ಪದಂಗೆ
ಯ್ದಲತಗೆಯ ಪಡಲದಂತೆವೊ
ಲಸೆದುದು ಪರಿಪಕ್ವ[6]ರಾಗದಿಂ[6] ವಿಧುಬಿಂಬಂ ೨೦೫

(ಲೀಲಾವತಿ ೨_೮)

1 ಲೆ ನಾರಿ (ಕ ಖ ಬ) 2 ಮುಗ್ಗಿಸಲ್ (ಅ) 3 ಗಾ (ಅ) 4 ದೆಯಲಾತನ್ನಂ (ಖ ಬ)
5 ಮೇಂ (ಅ) 6 ಬಿಂಬಮುಂ (ಅ)

ಪುದಿದಿರೆ ಪ[1]ಣ್ತೇವಿದ[1] ಬಿಂ
ಬದಾಲದಿಂ ಪಣ್ಗಳುದಿರ್ದುವೆನೆ ಸೊಗಯಿಸಿದ
ತ್ತುದಯದೊಳೊದವಿದ ಕೆಂಪಿಂ
ಪುದಿದೊಪ್ಪುವ ತಾರಕೋತ್ಕರಂ ಕೆಲಗೆಲಪೊಳ್ ೨೦೬
(ಚಂದ್ರಪ್ರಭಪುರಾಣಂ ೮-೨೮)

ಅದು ಪೊಸಪವಳದ ಬಂಧೂ
ಕದ ಕೆಂದಾವರೆಯ ದಾಸಳದ ಪೂವಿನ ಬ
ಣ್ಣದ ಸಂಪದಮಂ ಮುದದಿಂ
ಪದೆದಂದೊಪ್ಪಿತ್ತು ಚಂದ್ರಬಿಂಬವಿಡಂಬಂ ೨೦೭
(ಗಿರಿಜಾಕಲ್ಯಾಣಂ ೪-೯೯)

ಇದು ವಿರಹ ವಾರ್ಧಿಮಧ್ಯ
ಪ್ರದೇಶದಿಂದೊಗೆದ ರಾಗವಡಬಾನಳಪಿಂ
ಡದವೋಲ್ವಿರಹಿಗೆ ತೋಱಿ
ತ್ತುದಯಾದ್ರಿಯ ಮೇಲೆ ಮೆಱೆವ ಹಿಮಕರಬಿಂಬಂ ೨೦೮
(ಗಿರಿಜಾಕಲ್ಯಾಣಂ ೪-೧೦೦)

ಇದು ಮಾಹೇಂದ್ರೀಲತಾಕೋರಕಮಮರಹರಿದ್ವಲ್ಲರೀಪಲ್ಲವಂ ಪೂ
ರ್ವದಿಶಾವಲ್ಲೀಫಲಂ ತಾನೆನೆ ತರತರದಿಂದೇಱಿ ಕಣ್ಗೆಡ್ಡಮಪ್ಪಂ
ತುದಯಂಗೆಯ್ದತ್ತು ಸಂಧ್ಯಾರುಣರುಚಿರುಚಿರಂ ಕಾಮಸಾಮ್ರಾಜ್ಯಲಕ್ಷ್ಮೀ
ಮದಲೀಲಾಲಂಬಮುಜ್ಜೃಂಭಿತ ಕುಮುದಕದಂಬಂ ಸುಧಾಸೂತಿಬಿಂಬಂ ೨೦೯
(ಮಲ್ಲಿನಾಥಪುರಾಣಂ ೭-೨೮)

ಉದಯೋರ್ವೀಧರಕುಂಕುಮೋದ್ಗಮರಜಂ ಪಾಯ್ವಂತೆ ಕೆಂಪೇಱಿ ಪೂ
ರ್ವದಿಶಾಕನ್ಯೆಯ ತೋಳೊಳಿರ್ದರಿಸಿನಂ ತಳ್ತಂತೆ ಪೊಂಬಣ್ಣವೇ
ಱಿ ದಿವೌಕಃಪ್ಲವದೊಳ್ ಮುಳುಂಗಿ ತೊಳೆದೇಳ್ವಂತೆಯ್ದೆ ಬೆಳ್ಪೇಱಿ ತ
ತ್ತ್ವದೃಢಾಭ್ಯಾಸಿಯ ಚಿತ್ತದಂತೆ ತಿಳಿದಂ ತಾರಾಮನೋವಲ್ಲಭಂ ೨೧೦
(ಅನಂತನಾಥಪುರಾಣಂ ೭-೮೩)

ತೊರೆದುದು ಚಂದ್ರಕಾಂತಮಣಿವಕ್ಕಿಗಳಪ್ಪ ಸಡಿಲ್ದುವಿಂಗಡಲ್
ತೆರೆ ಮಸಗಿತ್ತುಮಿರ್ದುವೊಗೆತಂದುದು ಚಂದ್ರಿಕೆ ಕೂಡೆ ಮೀನ್ಗಳಂ
ಕುಱಿಸಿದುವುತ್ಪಲಂ ನಗುತುಮಿರ್ದುವು ಕಣ್ಮುಗಿದಬ್ಜಮುಂ ತಮಂ
ಪರಿದುದು ಮನ್ಮಥಂ ನಲಿದು ನರ್ತಿಸಿದಂ ಶಶಿ ಬರ್ಪ ಪೊೞ್ತಿನೊಳ್ ೨೧೧

1 ಣ್ತೆಂದುವ (ಅ)

ಒಸಜಲ್ಕಿರ್ದುದು ಚಂದ್ರಕಾಂತಮರಲಲ್ಕಿರ್ದತ್ತು ಮುಗ್ಧೋತ್ಪಲ
ಪ್ರಸರಂ ಜಾದಿನ ಬಣ್ಣವಪ್ಪ ಬೆಳಗಂ ಕೈಕೊಳ್ಳೆ ಪೂರ್ವಾಸೆಯು
ದ್ವೆಸೆಯಂ ಕುಡದಿರ್ದಾದರದಿರ್ದುವು ಚಕೋರಂ ಪಾಲ್ಗಡಲ್ಮೇರೆಯಂ
ಮಿಸುಗಲ್ಕಿರ್ದುದು ಮೂಡಲಿರ್ದ ಪದದೊಳ್ ತಾರಾಮನೋವಲ್ಲಭಂ ೨೧೨

ಸಂಗಡಿಸೆ ತನ್ನೊಳರುಣಪಿ
ಶಂಗಸಿತದ್ಯುತಿಗಳೆಂಬನುಕ್ರಮದುಚಿ ಶ
ಕ್ರಂಗೆತ್ತಿದ ಮಾಣಿಕಗೊಡೆ
ಪ್ರಂಗೊಡೆ ಬೆಳ್ಗೊಡೆಗಳೆನಿಸಿದುದು ವಿಧುಬಿಂಬಂ ೨೧೩

(ಜಗನ್ನಾಥವಿಜಯಂ ೧೬_೧೦೬)

ಶಿರದೊಳ್ ತಾರಾ[1]ಕಪೋಲಂ[1] ಪೊಳೆಯೆ ಕರಜಟಾಜೂಟವಿಂಬಾಗೆ ಜೊನ್ನಂ
ಸುರಸಿಂಧುಸ್ರೋತಮಂ ಪೋಲ್ತಿರೆ ತೊಲಗೆ ತಮೋರಾಕ್ಷಸಂ ಚರ್ಮಚಿತ್ರಾಂ
ಬರ[2]ಬಂಧಂ[2] ಕೂಪೆ ಕಾಮಂ ಕರಮುರಿವಿನೆಗಂ ನುಂಡಲಂಗೊಂಡು ಪರ್ವು
ತ್ತಿರೆ ಸಂಧ್ಯಾರಾಗನೇತ್ರಾನಲನುದಯಿಸಿದಂ ಚಂದ್ರಚಂದ್ರಾರ್ಧ[3]ಜೂಟಂ[3] ೨೧೪

(ಲೀಲಾವತಿ ೧೦_೩೨)

ಕುವಲಯದೀರ್ಘನೇತ್ರಮಲರುತ್ತಿರೆ ಮೂಡುವ ಮೀನ್ಗಳಾಕೆಯೊ
ಪ್ಪುವ ಮುಖಪದ್ಮದೊಳ್ ಮೊಡವಿ ಮೂಡಿದವೋಲಿರೆ ಕಾಲನೆಂಬ ಶಂ
ಭುವಿನ ಶರೀರದೊಳ್ ಪುದಿದ ಗೌರಿಗೆ ರಾಗಮನೊಡ್ಡಿಕೊಂಡು ಮೂ
ಡುವ ಪೊಲೆಯಂತೆ ಮೂಡಿದುದು ಮೂಡಣದಿಕ್ಕಿನೊಳಿಂದುಮಂಡಲಂ ೨೧೫

(ಲೀಲಾವತಿ ೨_೩)

ಸೋಂಕಲೊಡಂ ನಿಶಾತರುಣಿಯಂ ಶಶಿ [4]ಪೋದುದು[4] ಸಂಜೆ ಸೀರೆವೋಲ್
ಪಂಕಜಲೋಚನಂ ಮುಗಿದುವೆಟ್ಟುವು ಬಳ್ಪಿಮರಂತೆ ತಾರಕಾ
ಸಂಕುಳಮಿಂದುಕಾಂತಪಿತತಾಚಳ ತುಂಗ ನಿತಂಬ ಬಿಂಬದಿಂ
ದಂ ಕೊಳನಾಗಿ ಸೂಸಿದುವು ತೆಳ್ಪದದಂತೆ ನವದ್ರವಾಂಬುಗಳ್ ೨೧೬

(ಲೀಲಾವತಿ ೨_೪)

ನನೆಯಂಬಂ ಮದವೇಱೆ ಕೈರವಕುಳಂ ನೀರೇಱೆ ಕಾಮಾರ್ಥಿಯ
ಪ್ಪನ ಜೀವಂ ನಡುನೆತ್ತಿಗೇಱೆ ಖರದಂಡಶ್ರೀಗೆ ಕರ್ಪೇಱೆ ಕಾ
ಮಿನಿಯರ್ ಸಂತಸದುಯ್ಯಲೇಱೆ ನೆಲೆಯಿಂದಂಭೋಧಿ ಮಿಕ್ಕೇಱೆ ಭೋಂ
ಕನೆ ಬಂದೇಱಿದನಸ್ತೆ ವಾಸವದಿಶಾಶೈಲೇಂದ್ರಮಂ ಚಂದ್ರಮಂ ೨೧೭

---

1 ಕಳಾಪಂ (ಅ) ಕಪಾಲಂ (ಬ)  2 ಖಾಶಂ (ಖ ಗ ಬ)  3 ಚೂಡಂ (ಅ)

4 ಸೋರ್ದುದು(ಅ)

ವಿದಳತ್ಕೈರವರಾಜಿ ರಾಜಬಲದಿಂ ಸಂತೋಷಮಂ ಮುಟ್ಟೆ ಸ
ನ್ಮದಮಂ ತಾವರೆಯೆತ್ತಿ ಕಟ್ಟೆ ತಮಮಂ ಶೀತಾಂಶುವೆಟ್ಟಿಟ್ಟೆ ಪೆ
ರ್ಚಿದಗುರ್ವಿಂ ವಿರಹಾಳಿಯುಂ ಕುಸುಮಬಾಣಂ ಕಾಯ್ದು ಬೆನ್ನಟ್ಟೆ ಮೆ
ಟ್ಟಿದನಿಂದ್ರಾಚಲಚೂಡಮಂ ಕಿರಣವೀಥೀಸಾಂದ್ರಮಂ ಚಂದ್ರಮಂ ೨೧೮

(ಗಿರಿಜಾಕಲ್ಯಾಣಂ ೪_೯೮)

ತಿಮಿರಾತ್ಮದ್ಯುತಿ ಕರ್ಪುದೋರ್ಪ ತಿಲಕಂ ತಾರಾಗಣಂ ಬಂದು ನೋ
ಡುವ ಯೂಥಂ ಮಧು ತೆತ್ತಿಗಂ ವಿರಹಿ ಮಾಜಂಕಂ ನೃಪಂ ಚಿತ್ತಸಂ
ಭವನಾಗಲ್ಕಡುಕೆಯ್ದು ಕಾಯ್ದು ಕಳನಂ ಬಂದೇಱುವಂತೇಱಿದಂ
ನವಸಂಧ್ಯಾಸುವಿಭಾಸಿ ವಾಸವದಿಶಾಶೈಲೇಂದ್ರಮಂ ಚಂದ್ರಮಂ ೨೧೯

ನಿನದತ್ಸಂಧ್ಯಾನಕಂ ನಿಗ್ಗವಣೆಯ ಪಱಿ ಪೂರ್ವಾಚಲಂ ತುಂಗ ರಂಗಂ
ತನಗಾದತ್ತೆಂಬಿನಂ ನೀಲಿಯ ಜವನಿಕೆವೋಲ್ ಪಿಂಗೆ ಸಂಧ್ಯಾತಮಂ ಮೆ
ಲ್ಲನೆ ತಾರಾನೀಕಪುಷ್ಪಾಂಜಳಿಯನೆಸೆವಿನಂ ಸೂಸಿ ತತ್ಪೂರ್ವ ರಂಗ
ಕ್ಕನುಗ್ಗೈವುದ್ಯನ್ನಿಶಾನರ್ತಕಿಯ ವದನದಂತಿಂದು ಕಣ್ಗೆಡ್ಡಮಾದಂ ೨೨೦

(ಚಂದ್ರಪ್ರಭಪುರಾಣಂ ೮-೩೦)

ಮುದದಿಂ ತಂದಿಕ್ಕೆ ಪೂರ್ವಾಂಗನೆ ಗಿರಿಶಿರದೊಳ್ ಪೀಠಮಂ ಸತ್ಪ್ರಭಾಸಂ
ಪದಮಂ ಕೈಗೊಟ್ಟು ಚೈತ್ರಂ ನಡೆತರೆ ಮದನಂ ಪುಷ್ಪಬಾಣಂಗಳಂ ಪೂ
ಡಿದ ಬಿಲ್ಲಂ ಪೊತ್ತು ಪಿಂತಂ ಬರೆ ನವ ಕುಮುದಾಮೋದ ಮಾಧುರ್ಯದಿಂ ಷ
ಟ್ಪದಗಾನಂ ಪೊಣ್ಮಿಸುತ್ತುಂ ಶಶಿಯುದಯದೊಳೊಪ್ಪಿತ್ತು ರಾಜೋಪಚಾರಂ ೨೨೧

(ಗಿರಿಜಾಕಲ್ಯಾಣಂ ೪_೯೭)

ಗಗನಮಹಾಂಬುರಾಶಿಯೊಳಗೊಯ್ಯನೆ ಕೊರ್ಬಿದ ಮುತ್ತು ಸುತ್ತಲುಂ
ಸೊಗಯಿಪ ಕೌಮುದೀಲತೆಯ ಬಿತ್ತು ವಿಧುಂತುದನುಂಬ ತುತ್ತು ಕಾ
ಮಿಗಳನನಂಗನಾಜ್ಞೆಯೊಳೆ ಪೋಣಿಸಿದೋಲೆಯ ಸುತ್ತು ನೋೞ್ಪೊಡಂ
ಬಗೆಗೊಳಿಸಿತ್ತು ವಾಸವದಿಶಾನನಕುಂಡಲಮಿಂದುಮಂಡಲಂ ೨೨೨

ಕರಮೆಸೆಯಿತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ
ತ್ಕರದ ವಿಪತ್ತು ತಾರೆಗಳ ತುತ್ತು ಸುಧಾಂಬುಧಿಯೊತ್ತು ಜಾರ ಸೌಂ
ದರಿಯರ ಮಿತ್ತುವಂಬರ ಪುಳಿಂದಿಯ ಮೂಗಿನ ಮುತ್ತು ನೋಡಲ
ಚ್ಚರಿಯೆನಿಸಿತ್ತು ಮೂಡದೆಸೆಯಿಂದೆಸೆಯಿತ್ತು ಹಿಮಾಂಶುಮಂಡಲಂ ೨೨೩

(ಗಿರಿಜಾಕಲ್ಯಾಣಂ ೪_೯೬)

ಮದನನ ನಚ್ಚು ವಾರಿಧಿಯ ಪೆರ್ಚು ವಿಯೋಗಿಯ ಕಿಚ್ಚು ಕೈರವಾ
ಭ್ಯುದಯದರಲ್ಚು ನೀರಜದ ಮುಚ್ಚು ರಥಾಂಗದಗಲ್ಚು ಜಾರೆಯ
ರ್ಗೊದವಿದ ಬೆಚ್ಚು ಕತ್ತಲೆ ಕಬಿಲ್ಚು ಜಗತ್ತಿನ ಪುಣ್ಯದಚ್ಚು ಬಂ
ದುದಯಗಿರೀಂದ್ರಮಸ್ತಕದೊಳಿರ್ದುದು ಪೂರ್ಣಶಶಾಂಕಮಂಡಲಂ ೨೨೪

ನೆರೆದೆತ್ತಂ ಭಗಣಂ ನಿರೀಕ್ಷಿಸೆ ಬೆಸಂಬೆತ್ತೀ[1]ಜಱ[1] ಚಿತ್ತೋದ್ಭವಂ
ಬರೆ ಲಕ್ಷ್ಮಚ್ಛಲದಿಂದಮಬ್ದಪಥವೀಥೀಭಾಗದೊಳ್ ಬೇಗವೊ
ತ್ತರಿಸುತ್ತುಂ ಪರಿಕಾಜನಂ ತಿಮಿರ[2]ನಂ[2] ಬೆನ್ನಟ್ಟಿ ಪಾದಂಗಳಿಂ
ದೊರಸಿತ್ತೀನತಿ[3]ರೌದ್ರ[3]ವೋ ವಿಧುಮದೋನ್ಮತ್ತೇಭವಿಕ್ರೀಡಿತಂ ೨೨೫

(ಚಂದ್ರಪ್ರಭಪುರಾಣಂ ೮–೩೩)

ರಜನೀಕಾಂತಾಪಯೋಭೃತ್ತಟಮಲಯಜಪತ್ರಂ ಮನೋಜಾಂಗನಾಶು
ಕ್ತಿಜಚಂಚತ್ಕರ್ಣಪತ್ರಂ ಸ್ಮರನೃಪವರಶುಭ್ರಾತಪತ್ರಂ ವಿ[4]ಯನ್ನೀ[4]
ರಜಿನೀಮಧ್ಯೋಲ್ಲಸತ್ಪಾಂಡುರತರಶತಪತ್ರಂ ಬೆಡಂಗಾಯ್ತು ಯುಕ್ತ
ವ್ರಜಗರ್ವೋರ್ವೀಧ್ರಶಂಬಂ ನಯನಸುಖಲತಾಸ್ತಂಭಮಾತ್ರೇಯಬಿಂಬಂ ೨೨೬

(ಚಂದ್ರಪ್ರಭಪುರಾಣಂ ೮-೩೪)

ದಿವಿಜಾಶಾಗಿರಿಕೂಟಕೇಸರಿ ವಿಯನ್ಮಂದಾಕಿನೀಹಂಸೆ ಮಾ
ನವತೀಲೋಚನಬಾಣಚಂದ್ರಿಕೆ ಚಕೋರೀಪಾನಲೀಲಾಮೃತಾ
ಪ್ಲವಕಾಸಾರಮನಂಗಮಂಗಲವಧೂಟೀದರ್ಪಣಂ ತಾನಿದೆಂ
ಬ ವಿಲಾಸಕ್ಕೆ ನಿವಾಸಮಾಯ್ತುದಯದೊಳ್ ಪೀಯೂಷರುಙ್ಮಂಡಲಂ ೨೨೭

(ಅನಂತನಾಥಪುರಾಣಂ ೭-೮೨)

ಕಾಡೆ ಮನೋಭವಂ ವಿರಹಿಯಂ ಸಕಲೋರ್ವಿ ಸುಧಾಂಶುವಿಂದೆ ತೇಂ
ಕಾಡೆ ಚಕೋರಮುಂ ಯುವತಿಲೋಚನ ಕೈರವಮುಂ ಪ್ರಮೋದಮಂ
ಮಾಡೆ ಶಶಾಂಕಕಾಂತಮಣಿಭಿತ್ತಿಗಳಂತೆ ದಿಶಾರಭಿತ್ತಿಗಳ್
ಕೂಡೆ ವಿಚಾರಿಸುತ್ತೆ ನೆಱೆ ಕಣ್ಗೆಸೆದಿತ್ತಮೃತಾಂಶುಮಂಡಲಂ ೨೨೮

(ಪಾರ್ಶ್ವನಾಥಪುರಾಣಂ ೧೦-೩೧)

ಕುಮುದವಿಲಾಸಹಾಸಪರಿಹಾಸಕನಬ್ಧಿಜಲಪ್ರವರ್ಧನೋ
ದ್ಯಮಿ ನಳಿನೀಪ್ರಮೋದಪರಿಹಾರವಿಶಾರದನುತ್ಕಕೋಕದು
ರ್ದಮವಿರಹಕ್ರಿಯಾವ್ಯಸನಿ ಚಾರುಚಕೋರವಿದೂರಪಾರಣ
ಕ್ಷಮನನವಲ್ಲಭಂ ಬೆಳಗಿದಂ ಪುರಮೊಂದೆನೆ ಲೋಕಮೆಲ್ಲಮಂ ೨೨೯

(ಚಂದ್ರಪ್ರಭಪುರಾಣಂ ೮-೩೫)

---

[1] ಜಿಱ (ಅ) [2] ನುಂ (ಅ) [3] ಜೋದ್ಯ (ಅ) [4] ಯೋಗೀ (ಖಬ)

ಜಗದಾಲೋಕನದರ್ಪಣಂ ಪ್ರಥಮದಿಕ್ಕಾಂತಾನನಂ ಕಂತುರಾ
ಜಗಜೋದ್ದೀಪನಪಿಂಡಮಂಬರಸರಸ್ಸ್ಫೂರ್ತಂಸ[1]ಹಂಸಂ[1] ವಿಯೋ
ಗಿಗಣಾಕೂತಕುರಂಗಪ್ರೋತಭಯಭೃತ್ಕಂಠೀರವಂ ಚೆಲ್ವುವೆ
ತ್ತೊಗೆದತ್ತರ್ಣವವೀಚಿನರ್ತನನಟಂ ಬಿಂಬಂ ಸುಧಾಸೂತಿಯಾ ೨೩೦

(ಅಜಿತನಾಥಪುರಾಣಂ ೬.೪೨)

ಮನಸಿಜನಿಟ್ಟ ಚಂದನದ ಬೊಟ್ಟು ರತೀಶನ ಜೀವಸಂಚಿ ತಾ
ಮನ ಧವಳಾತಪತ್ರವಸವಾಸ್ತ್ರನ ಭಾಸುರಚಕ್ರವಿಕ್ಷಣಾ
ಪನ ಶಶಿಕಾಂತದರ್ಪಣವನಂಗನ ಮುತ್ತಿನ ಚೆಂಡು ಪುಷ್ಪಧ
ನ್ವನ ಕೃತಪುಣ್ಯಪುಂಜವೆನೆ ಕಣ್ಗೆಸೆದಿರ್ದುದು ಚಂದ್ರಮಂಡಲಂ ೨೩೧

ಕರಿಯಿಂದಂ ಕಾಮನಿಂದಂ ಕಮಲಭವನೆಯಿಂದಂ ಖರಕ್ರೂರನಿಂದಂ
ಗಿರಿಯಿಂದಂ ಗೋತ್ರನಿಂದಂ ಗಿರಿಸುತೆವರನಿಂದಂ ಪರಿವ್ರಾಜನಿಂದಂ
ಶರದಿಂದಂ ಶಕ್ರನಿಂದಂ ಶಬರನಿಕರದಿಂದಂ ಮರುಚ್ಛಾಪದಿಂದಂ
ಸುರರಿಂದಂ ಪ್ರಸ್ಫುರಂತಂಬರವಳಯದೊಳೊಪ್ಪಿರ್ದುದಾ ಚಂದ್ರಬಿಂಬಂ ? ೨೩೨

[2]ಸಮುದಂ ಸದ್ಗೃಹ[2] ಷಡ್ಜಷಟ್ಕರಣ ಮಂದ್ರನ್ಯಾಸಮುತ್ಕೀರಮ
ಧ್ಯಮತಾರಂ ಮೃದುತಾಡಿತೌಡವನವೋದ್ಭಿನ್ನಪ್ರಸೂನಂ ಸಸಂ
ಚಮ[3]ಚಂ[3]ಚತ್ಕಳಕಂಠಕಂಪಿತಯುತಂ ತಾನೆಂಬ ಹಿಂದೋಳ ರಾ
ಗಮೆ ತಾನಾದ ವಸಂತಮೇನೆಸೆದುದೋ ಸಂಪೂರ್ಣ [4]ಸೋಮೋ[4]ದಯಂ ೨೩೩

(ಲೀಲಾವತಿ ೨.೩೨)

ಇನನಸ್ತಂಗತನಾಗೆ ಪಾಣ್ಬರಿಪು ಪುಷ್ಪಾಕಾರದಿಂ ರಾಗದಿಂ
ವನಜಾತಂಗಳ ಮೇಲೆ ಕಯ್ಯನಿಡೆ ಶೀತಂ ಪೊಣ್ಮೆ ಸಂಕೋಚಿತಾ
ನನವಾಗಿರ್ದೊಡೆ ನೆಯ್ದಿಲೆಯ್ದೆ ನಗುತಂ ಕೇಳ್ ಭಾವ ನೀನೇಕೆ ಪ
ದ್ಮಿನಿಯೇಕೆಂದೊಡೆ ಬೆಳ್ಪನಾ[5][ಯ್ತು][5]ಮೊಗಮೆಂಬಂತಿರ್ದನಾ ಚಂದ್ರಮಂ ೨೩೪

ಕರುಣಂ ಚಕ್ರಕ್ಕೆ ಹಾಸ್ಯಂ ಕುವಲಯಕೆ ಭಯಂ ಜಾರೆಯರ್ಗದ್ಭುತಂ ಸಾ
ಗರಕಂ ಬೀಭತ್ಸ ನಕ್ತಂಚರವರತರುಣೀರಕ್ತಪಾನಕ್ಕೆ ವೀರಂ
ಸ್ಮರಭೂಪಾಲಂಗೆ ರೌದ್ರಂ ವಿರಹಿತತಿಗೆ ಶಾಂತಂ ಚಕೋರಕ್ಕೆ ಶೃಂಗಾ
ರರಸಂ ಕಾಂತಾಜನಕ್ಕಾಗಿರೆ ನವರಸಮಂ ಬೀಱುತಿರ್ದಂ ಶಶಾಂಕಂ ೨೩೫

ದೆಸೆಯಂ ಬಾಸಣಿಸುತ್ತೆ ಬೆಳ್ಗದಿರಿನಿಂ ಪಣ್ಯಾಂಗನಾಪೀಠಿಯೊಳ್
ಕುಸುಮಾಸ್ತ್ರಾಸನಮಂ ಕೆದರ್ದು ಮದನಂ [6]ವೀ[6]ಯೋಗಿಬೃಂದಂಗ[7]ಳೀಂ[7]

---

[1] ಹಸ್ರಂ (ಬ) [2] ಸಮುದಂಚದ್ಗೃಹ (ಅ) [3] ಸಿಂ (ಖ ಬ) [4] ಚಂದ್ರೋ (ಖ ಬ)
[5] ಯ್ದು (ಖ ಬ) [6] ವಿ (ಖ ಬ) [7] ಳಂ (ಬ)

ದೆಸೆಗೆಟ್ಟೋಡುವ ಮಾಟ್ಕಿಯಿಂದೆಸೆಯುತುಂ ತಾರಾಳಿದೀಪಂಗಳಿಂ
ಹಸನಾಯಿತ್ತು ಪುರಂ ಗೃಹಾಂಗನೆಯರಿಂ ಚಂದ್ರೋದಯಾನಂದದೊಳ್ ೨೩೬

ಪರೆದಿರೆ ತಿಮಿರಕಚಂ ನೆರೆ
ದಿರೆ ಭಗಣಸ್ವೇದಜಲಕಣೌಘಂ ರಾಗಂ
ಬೊರೆದಿರೆ ಚಕೋರನಯನಂ
ಕರಮೆಸೆದಳ್ ನೆರೆದು ರಜನಿ ರಜನೀಪತಿಯೊಳ್ ೨೩೭

(ಚಂದ್ರಪ್ರಭಪುರಾಣಂ ೮-೩೨)

ತಾರಕಿಗಳೆರಸನಮೃತದ
ಸಾರೋದಯನಲರ ನೀಜನಿರುಳಿನ ನಲ್ಲಂ
ಜಾರೆಯರ ಮಿತ್ತು ಚೋರರ
ನಾರ್ಬೈವ ತಳಾಱಚಂದ್ರನುದಯಂಗೆಯ್ದಂ ೨೩೮

ಇರುಳ ಸಿರಿ ಸಿರಿಯ ಮೆಯ್ಸಿರಿ
ವಿರಹಿಗಳುರಿ ಕಮಲವರಿ ಮನೋಜನ ಕರಿ ಪಾ
ಣ್ಬರ ದಳ್ಪುರಿ ತಣ್ಗದಿರ್ಗಳ
ಹರವರಿ ತಾರಾಧಿನಾಥನುದಯಂಗೆಯ್ದಂ ೨೩೯

ನೆಯ್ದಿಲ್ ವಿಕಾಸಲಕ್ಷ್ಮಿಯ
ನೆಯ್ದಲ್ ತಳಿರ್ಗೆಂಪನಾಂತು ಮೂಡಣ ದೆಸೆ ಚೆ
ನ್ನೆಯ್ದಲ್ ವಿರಹಿಯಸಂಗಜ
ನೆಯ್ದಲ್ ನೆಯ್ದಿಲಸಹಾಯನುದಯಂಗೆಯ್ದಂ ೨೪೦

ಶೃಂಗಾರದುರುಳಿ ಜನಧೃತಿ
ರಂಗಂ ಪಂಕಜದ ವೈರಿ ನೆಯ್ದಿಲ್ಗೆಳೆಯಂ
ಗಂಗಾಧರನ ಜಟಾಗ್ರದ
ಭೃಂಗಂ ಸಂಪೂರ್ಣ ಚಂದ್ರನುದಯಂಗೆಯ್ದಂ ೨೪೧

ಕಡಲಂ ಸುರಾಸುರರ್ ಕಡೆ
ವೆಡೆಯೊಳ್[1]ಪಾಲ್ದೆ[1]ರೆಗಳೊಳಗೆ ಪುಟ್ಟಿದ ಚೆಲ್ವಿಂ
ಗೆಡೆಗೊಂಡು ನಿಱುಮುಗಿಲ್ಗಳ
ನಡುವೆ ಕರಂ ಮಿಱುಗಿದತ್ತು ಹಿಮಕರಬಿಂಬಂ ೨೪೨

(ಜಗನ್ನಾಥವಿಜಯಂ ೪-೭೩)

---

1 ತೆರೆತೆ (ಅ)

ಚಂದ್ರಿಕೆ ಸುರವರಕರಿಯೆನೆ
ಚಂದ್ರಂ ತತ್ಕರಿಯ ಕುಂಭಮೆನೆ ತಾರಗೆಗಳ್
[1]ಸಾಂ[1]ದ್ರನಯನಂಗಳೆನೆ ವಿಯ
ದಿಂದ್ರನದೇಂ ಭುವನಜನ[2]ದ ಕಣ್ಗೊಪ್ಪಿ[2]ದನೋ ೨೪೩
(ಲೀಲಾವತಿ ೨-೧೪)

ಉದಯಂಗೆಯ್ದೊಡೆ ಕಂಡು ಕಾಮನಿದಿರೆದ್ದಾಲಿಂಗನಂ ಮಾಡಿದಂ
ದದೆ ಚೈತ್ರಂ ತನಗಿತ್ತ ನೀಲಮಣಿಹಾರಂ ಪೇರುರಕ್ಕೇಱಿದಂ
ದದೆ ರಾತ್ರಿಪ್ರಿಯೆ ಸೂಱೆಗೊಂಡು ಪದಪಿಂ ಪರ್ಯಂಕದೊಳ್ ನೆಮ್ಮಿದಂ
ದದೆ ಕಣ್ಗೆನ್ನಮೃತಾಂಜನಂ ಮೆಱೆದುದೋ ಲಕ್ಷ್ಮಂ ಮೃಗೀಲಕ್ಷ್ಮನೊಳ್ ೨೪೪
(ಅನಂತನಾಥಪುರಾಣಂ ೭-೪೪)

ಮೃಗಲಕ್ಷ್ಮಂ ಸಂಜೆಗೆಂಪಂ [3]ಪೊರೆ[3]ದುದಯಿಸಿ ಸರ್ವೋರ್ವಿಗಾನಂದಮಂ ವಾ
ರ್ಧಿಗೆ ಪೆರ್ಚಂ ಮಾಡಿ ಮುನ್ನಂ ಬೞಿಕೆ[4]ರ್ದೆ[4]ಗಱಿಯಂ ತೋಱಲುಂ ಕಂ[5]ಡರೆ[5]ಲ್ಲಂ
ಬಗೆಗೊಂಡಾಲಂ ಮೊಲಂ ಪುತ್ತೆರಳೆಯೆನುತದಂ ಕೂರ್ತು ಕೈಗೆಯ್ಯೆನಿನ್ನುಂ
ಪೊಗೞ್ದಿಪ್ಪರ್ ಭಾಪು ಲೋಕಕ್ಕುಪಕರಿಸುವನೊಳ್ ದೋಷಮುಂ ಸ್ತುತ್ಯಮಲ್ತೇ ೨೪೫
(ಲೀಲಾವತಿ ೨-೧೦)

ತಿಳಿಗೊಳನಲ್ಲಿ ತೋಱುವಸಿತೋತ್ಪಲಮಂ ಫಣಿರಾಜತಲ್ಪದೊಳ್
ತೊಳಗುವ ಕೃಷ್ಣಕಾಂತವಪುವಂ ರತಿದೇವಿಯ ಕೇಳಿಗಿಟ್ಟ ಸು
ಣ್ಣಳುಕಿನ ಬಟ್ಟವಂಜರದ ಕೋಗಿಲೆಯಂ ಗೆಲೆವಂದುದಿಂದುಮಂ
ಡಳದ ಕಳಂಕ[6]ಲೇಖನಮುದಿಂದ್ರ[6]ವಧೂಮುಖಪ[7]ಕ್ಷ್ಮ[7]ವಿಭ್ರಮಂ ೨೪೬
(ಲೀಲಾವತಿ ೨-೧೧)

ಇದು ಹರಿಣಂ ದಿಟಂ ಹರಿಣನಲ್ತು ಮೊಲಂ ಮೊಲನಲ್ತದಾಲವಾ
ಲದ ಮರನಲ್ತು ಪುತ್ತುಗಳೆ ಪುತ್ತುಮಿದಲ್ತೆನುತಿರ್ಪ ಮೂಢಲೋ
ಕದ ಪಡೆಮಾತದಿರ್ಕೆ ನೆವಮಿಟ್ಟು ಕೊಲಲ್ ಮದನಂ ವಿಯೋಗಿಗೊ
ಡ್ಡಿದ ಘಟಸರ್ಪನೆಂದು ಬಗೆಯಿಂ ಹಿಮದೀಧಿತಿಹೃತ್ಕಳಂಕಮಂ ೨೪೭

ಮುನಿದೀಶಂ ಸಲೆ ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ
ನಿನಗೆಂದಾ[8]ರತಿ[8]ಪಾಪಮುಂ ಪಡಣಮುಂ ಪೋಕೆಂದು ಕಾಮಂಗೆ ಮ
ಜ್ಜನಕೆಂದೆತ್ತಿದ ಚಂದ್ರಕಾಂತಘಟ[9]ದಿಂ[9] ತಂದ[10]ಬ್ಬಿಕೆಱಂ[10]ಪುಷ್ಪವಾ
ಸನೆಗೆಂದಿಕ್ಕಿದ ನೀಲ ನೀರರುಹಮಂ ಪೋಲ್ದತ್ತು ಕರ್ಪಿಂದುವಾ ೨೪೮
(ಪಂಪಭಾರತಂ) ೫೪-೧

---

1 ರುಂ (ಅ) 2 ಕೆ ಕಣ್ಗೊಳಿಸಿ (ಅ) 3 ಪುದಿ (ಅ) 4 ಳೆ (ಓ ಬ) 5 ಮ ಲೋಕಂ (ಅ) 6 ರೇಖೆಯುಮರೇಂಪ್ರ (ಅ) 7 ಕ್ಷ್ರ (ಅ) 8 ಪತಿ (ಅ) 9 ದೊಳ್ (ಅ) 10 ಬ್ರಿತಿಯೊಳ್ (ಅ)

ತಿಂಗಳ ಬಿತ್ತೆನಿಸುವ ಬೆ
ಳ್ದಿಂಗಳ್ ಪಾಲ್ಗಡಲನಿಱಿಪೆ ಮಂಗಲಶೇಷೋ
ತ್ತುಂಗಶಯನೀಯದಾ ಕೃ
ಷ್ಣಾಂಗಕರದ್ಯುತಿವೊಲೆಸೆದುದಿಂದುಕಳಂಕಂ ೨೪೯

ಕಾಮನ ದೀಹದ ಹರಿಣಂ
ಕಾಮೋರಗನಿರ್ಪ ಪುತ್ತು ಪೊಱಗಟ್ಟಿಲೆಯಂ
ಕಾಮಿಗೆ ಪುಟ್ಟಿಸುವ ಪೊಲಂ
ಕಾಮಗ್ರಹದಾಲಮೆನಿಸಿತಿಂದುಕಳಂಕಂ ೨೫೦

(ಮಲ್ಲಿನಾಥಪುರಾಣಂ ೭-೩೬)

ಹುತ್ತಿನೊಳಿರ್ದ ನಾಗರ ಫಣಾಮಣಿರಶ್ಮಿಯೊ ರಾಹುದಂತಮೋ
ಪತ್ತಿತೊ ಕೊಂಬಿನಿಂ ಹರಿಣನೊತ್ತಿತೊ ಸಾನುಪುಳಿಂದನಿಂಪಲೇಱಿರ್
ಪತ್ತಿತೊ ಮೇಣ್ ಶಶಂ ವಟನುಹೀಜಮೆ ಪಣ್ತುದೊ ಪೇಱಿನಲ್ಕೆ ಮೆ
ಯ್ವೆತ್ತ ಕಳಂಕನೀಲರುಚಿಯಿಂದೆಸೆದಿರ್ದುದು ಚಂದ್ರಮಂಡಲಂ ೨೫೧

ಮುಂದೆ ತಮಂಧವಿಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ
ಮುಂದುಗೊಳ್ಳುತ್ತಮೆನ್ನಸಿದು ಮಾಡುವ ಮೊಱಿಕ್ಕೆಯನಿಂದು ನೋಱಿಪ್ಪನಾ
ನೆಂದು ತದೀಯ ರೂಪನುಱೆ ಮುಂಗೆ ತನುಚ್ಛವಿಯಿಂದೆ ತೋಱುತಂ
ಬಂದಮೊಳೊಪ್ಪುತಿರ್ದುದು ನಿಶಾಕರಮಂಡಲದಲ್ಲಿ ಲಾಂಛನಂ ೨೫೨

ಪಸಿದ ಚಕೋರಿಗಳ್ ದ್ವಿಜಶರೀರಗಳೆಂದೆಱೆಯಲ್ಕೆ ಸಂಜೆ ಭಾ
ವಿಸೆ ಪೊಸ ಜೊನ್ನಮಂ ಶಶಿಯ ಕಪ್ಪಿನಿತಿಲ್ಲದ ಮಾಱಿಕ್ಕೆಯಿಂದೆ ಶೋ
ಧಿಸಲದು ಶುದ್ಧವಾಗೆ ಬೞಿಯಂ ಸದಕಿಕ್ಕಿದ ಧಾರೆವಟ್ಟಲಂ
ಪಸುಗಿರಿಸಿಟ್ಟವೋಲ್ ಮೃದುಕಳಂಕದಿನೊಪ್ಪಿದುದಿಂದುಮಂಡಲಂ ೨೫೩

ಮದನನ ರತ್ನದರ್ಪಣದ ಮಾರ್ಪೊಳೆಪಂಗಜಕಾಮಿನೀಕಪೋ
ಲದ ಮೃಗನಾಭಿಲೇಖೆ ತೊಡೆಯೇಱಿದ ಯಾಮಿನಿಯಂಗಕಾಂತಿಯು
ಪ್ಪಿದೊಡೆ ಸಡಿಲ್ದ ರೋಹಿಣಿಯ ಸೋರ್ಮುಡಿ ಮೈ ಮುರಿದೇೞ್ವ ಪೂರ್ವದಿ
ಕ್ಸುದತಿಯ ಪೀವರಸ್ತನದ ಚೂಚುಕಮೊಪ್ಪಿದುದಿಂದುಲಾಂಛನಂ ೨೫೪

ಕರುಣಿಸದೆ ಬೇಟಕಾಱರ
ಶಿರಮಂ ಕೊಳ್ಕೆಂದು ಕಂತು ಮಧುಪಿಂಗಟ್ಟಲ್
ಪರೆದೆಲೆಗೊತ್ತಿರ್ದುಂಡಿಗೆ
ಯರಗನೆ ಪೋಲ್ದತ್ತು ಶೀತಕರನ ಕಳಂಕಂ ೨೫೫

ಒತ್ತಂಬದೆ ವಿರಹಿಗಳಂ
ಚಿತ್ತಭವಂ ಬಂದಿವಿಡಿದು ಗಂಟಲ ಬಳೆಯಂ
ಪತ್ತಿಸಿದ ಚಂದ್ರಕಾಂತದ
ಕತ್ತರಿಯೆನೆ ತೊಳಗಿ ಬೆಳಗಿತೆಳವೆಱೆ ನಭದೊಳ್ ೨೫೬

ಸಿರಿ ಬಂದಾಶ್ರೈಸಿದಳ್ ಮಾಧವನುದರದೊಳೊತ್ತಿಟ್ಟುಕೊಂಡು ದಿನೇಶಂ
ಪಿರಿದುಂ ಕೂರ್ಪಂ ಸುಧಾಸೂತಿಯೆ ಮುನಿವವನೆಮ್ಮನ್ವಯಕ್ಕೆಂದು ನೀರೇ
ಜರುಹಂ ಕಾಯ್ಪಿಂ ನಿಜಾಗ್ರಾಯುಧವನಿಡೆ ಸಿಡಿಲ್ದೊಂದುಭಾಗಂ ನಭೋಭ್ಯಂ
ತರದೊಳ್ ಸೂಸಿತ್ತೆನಲ್ಕೇನೆಸೆದುದೊ ಭಗಣಾನೀಕದಿಂದರ್ಧಚಂದ್ರಂ ೨೫೭

ಕೞಲೆ ಮನವೞಲೆ ಪಾಣ್ಬರ್
ಬೞಲೆ ಖಳಲ್ ತೊೞಲೆ ದನುಜರುಡುಗಿ ಕರಂ ತ
ಲ್ಲಟಿಸೆ ವಿಯೋಗಿಗಳಿಂಬಂ
ಘಟಿಯಿಸಲಂದೊಗೆದುವೊಂದಿ ಹಿಮಕರಕಿರಣಂ ೨೫೮

ಪಸಿದು ದಿನೇಶನೆಂಬ ಪಿಶಿತಾರುಣಖಂಡಮನೊರ್ಮೆ ನುಂಗಿ ರಾ
ಗಿಸಿ ಕಿಸುಸಂಜೆಯೆಂಬ ನವಲೋಹಿತದೊಳ್ ಪೊರೆದೊಂದು ಬಾಯುಗು
ರ್ಬಿಸಿ ತಮಮೆಂಬ ತನ್ನ ಮುಸುಕಂ ಕಳೆದಿರ್ದಿರುಳೆಂಬ ಕಾಳರ
ಕ್ಕಸಿ ನಗಲೆಂದು ಪಲ್ದೆಱೆದ ಮಾೞ್ಕೆವೊಲಿರ್ದುವು ಚಂದ್ರರಶ್ಮಿಗಳ್ ೨೫೯

ತಾರೇಶ ತಾರ್ಕ್ಷ್ಯನಂಶುವಿ
ಸಾರಿತಪಕ್ಷಂ ಬರಲ್ ನಭಶ್ಚಂದನಧಾ
ತ್ರೀರುಹಮಂ ಸುತ್ತಿದ ಕಾ
ಳೋರಗನೋಡುವವೊಲೋಡಿ ಪೋದುದು ತಿಮಿರಂ ೨೬೦

(ಜಗನ್ನಾಥವಿಜಯಂ ೧೬-೧೦೭)

ಘನಸಂಧ್ಯಾರುಚಿರಜ್ಜುವಿಂದುದಯಶೈಲಸ್ತಂಭದೊಳ್ ಕಟ್ಟೆ ತೊ
ಟ್ಟನೆ ಕೈಕೊಳ್ವ ಕಳಂಕವತ್ಸನನಲಂಪಿಂದೂಡಿ ತಾರಾನಿಬಂ
ಧನದಿಂದಂ ತಳೆಯಿಕ್ಕಿ ರಾತ್ರಿ ಕಱೆದಳ್ ಬ್ರಹ್ಮಾಂಡಭಾಂಡಂ ಪಳ
ಚ್ಚನೆ ತೀವುತ್ತಿರೆ ಚಂದ್ರಮಸ್ಸುರಭಿಯಿಂ ಜ್ಯೋತ್ಸ್ನಾಪಯಃಪೂರಮಂ ೨೬೧

ಹಿಮರೋಚಿರ್ಮಂಡಲಂ ಕುಂಡಲಿತ ಕುಸುಮಕೋದಂಡಮಂ ಪೋಲೆ ಶೃಂಗಾ
ರಮಯಂ ಭೂಲೋಕಮಪ್ಪಂತಿರೆ ವಿರಹಿಗೆ ಶಬ್ದಧನುರ್ವೇದವಿದ್ಯಾ
ಶ್ರಮಮುಂ ತೋಱಲ್ ಕಳಂಕಸ್ಮರನಿಸೆ ತುಱುಗಲ್ಗೊಂಡು ಪಾಯ್ವಂತೆವೋಲ್ ಕೌ
ಸುಮಬಾಣಾಸಾರದಂತೇಂ ಸುರಿದುದೊ ನವನೀಹಾರಕಾಂತಿಪ್ರವಾಹಂ ೨೬೨

(ಲೀಲಾವತಿ ೨-೧೪)

ಎಲೆ ಶೃಂಗಾರಾರ್ಣವಂ ಸಗ್ಗದಿನಿೞಿದುದತಿಶ್ವೇತಮೆಂಬನ್ನೆಗಂ ಕ
ಟ್ಟಿಲೆಯುಂ ಬೆಂಕೊಳ್ವವೋಲೆಣ್ದೆಸೆಯನನಿತುಮಂ ಬೆೞಿವೇೞಿಲ್ಲ ತಾರಾ
ವಲಿಯಂ ತಟಿಕ್ಕೃಸುವಂತಾಗಸಮನನಿತುಮಂ ಪರ್ವಿದತ್ತೊರ್ಮೊದಲ್ ನೆ
ಯ್ದಿಲನೆಲ್ಲಂ ಚುಂಬಿಪಂತುರ್ವರೆಯನನಿತುಮಂ ಚಂದ್ರಪಾದಪ್ರವಾಹಂ ೨೬೩

(ಲೀಲಾವತಿ ೨-೧೪)

ಬಳವ್ವೈರಿಯೆಂಬ ಸಾಧಕ
ನಿಳೆಯಂ ಪೊಸಮೂಷೆಮಾಡಿ ಸಸಿಮಂಡಲಮಂ
ಗುಳಿಗೆಯಿಡೆ ತಿಮಿರಕಾಳಿಕೆ
ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ ೨೬೪

(ಅನಂತನಾಥಪುರಾಣಂ ೬-೮೫)

ಅವನೀವಲ್ಲಭೆ ಕೊಂಡ ಬೆಳ್ವಸದನಂ ನೀರೇಜಗರ್ಭಂ ವಿಯ
ದ್ಧವಳಾಗಾರದೊಳಿಟ್ಟ ಪಾಲ್ಸೊದೆ ಕರಂ ಮಿಂಚಲ್ ದಿಗಂತಂ ಮುೞಿಂ
ಗುವಿನಂ ಸೂಸಿದ ಶಂಖವೊಲ್ದುೞಿದರಂ ಪಾರ್ದಾರ್ದೆಸಲ್ ಸಾರ್ದ ಕಂ
ತುವಸಂ[1]ತರ್ ತೆರೆವೇಂಟೆಗಿಟ್ಟ[1] ದುಗುಲಂ ಪರ್ವಿತ್ತು ಚಂದ್ರಾತಪಂ ೨೬೫

(ಅನಂತನಾಥಪುರಾಣಂ ೬-೫೬)

ಇನನಸ್ತಾದ್ರಿಯನೆಯ್ದಲಾರುಣತೆಯಂ ಕೈಕೊಂಡು ಪೂರ್ವಾದ್ರಿಯೊಳ್
ಘನರಾಗಂ ಬೆರಸೆಯ್ದಿ ಪದ್ಮಿನಿಗೆ ಕಯ್ಯಂ ನೀಡೆ ತಚ್ಛೈತ್ಯದಿಂ
ದಿನಿಯಂ ತಾನಿನನಲ್ಲವೆಂದು ಮುಗಿಯಲ್ ಮೂಡಿರ್ದ ಕೌಮೋದಿ ಕಂ
ಡೆನಸುಂ ನಕ್ಕೊಡೆ ನಾಣ್ಚಿದಂತೆ ನಭದೊಳ್ ಬೆಳ್ಪೇಱಿದಂ ಚಂದ್ರಮಂ ೨೬೬

ತವಕದಿನಪ್ಪಲುತ್ಪಲಿನಿಯಂ ಕರಮಾದುವು ಕೊ[ಲ್ವ]ಕ್ಷ [2]ಭೀಷು[2]ವಾ
ದುವು ಪೊಣರ್ವಕ್ಕಿಗಿಕ್ಕಿ ವನಜಾವಳಿಯಂ ತುೞಿಯಲ್ಕೆ ಪಾದಮಾ
ದುವು ಸಲೆ ಕೇತುವಾದುವು ವಿಯೋಗಿಗೆ ಲೋಕದ ಕಣ್ಗೆ ಧಾಮಮಾ
ದುವು [3]ಸುಧೆ[3]ಯಾದುವೀಂಟುವ ಚಕೋರಿಗೆ ಚಂದ್ರನ ಚಾರುಕಾಂತಿಗಳ್ ೨೬೭

(ಲೀಲಾವತಿ ೨-೧೬)

ವನಜಂ ಬಂದುದು ಮುನ್ನವೆನ್ನ ಬಸಿಱಿಂದಂ ಕೋಟಿಕೂಸಿಂಗೆ ಗೋ
ಮಿನಿಗೆಂದುಂ ನೆಲೆಯಾಗಿ ನಿಂದುದಳಿಯಿಂ ಸೀರೇಜನಾಭಂಗೆ ಲೋ
ಚನಮಾಗಿರ್ದುದದರ್ಕೆ ಮುಳಿಯಲ್ವೇಡೆಂದು ದುಗ್ಧಾಬ್ಧಿ ನಂ
ದನನಂ ಪ್ರಾರ್ಥಿಸಲೆಂದು ಬಂದ ತೆಱದಿಂ ಪರ್ಬಿತ್ತು ಚಂದ್ರಾತಪಂ ೨೬೮

1 ತಂ ತೆರೆಮೊಟ್ಟೆಸುಟ್ಟ (ಖ)   2 ಭೀಕ್ಷು (ಅ)   3 ರುಚಿ (ಖ ಬ)

ಇಂದು ಜಲನಿಧಿಯ ಬಸಿಱಿಂದೊಳ್
ಬಂದುದು ಪುಸಿ ಪೂರ್ಣಚಂದ್ರಮನ ಬಸಿಱಿಂದೊಳ್ ತಾಂ
ಬಂದುದು ಬೆಳೆದಿಂಗಡಲೆಂ
ಬಂದದಿನೇಂ ಪಸರಿಸಿತ್ತೊ ಪೊಸವೆಳ್ದಿಂಗಳ್ ೨೬೯

(ಲೀಲಾವತಿ ೨-೨೪)

ಪುಗಿಸಿದುವಟ್ಟಿ ಪರ್ವತಗೃಹಾಂತರಮುಂ ಕೆಲವಂ ಗವಾಕ್ಷದಿಂ
ದುಗಿದುವು ದೇವಪದ್ಮದೊಳೆಡಂಗಿದುವಂ ಬಯಲಿಂಗೆ ಬಿಟ್ಟುದುವಂ
ತಗುಳ್ದಱಿಯಟ್ಟಿ ನುಂಗಿದುವು ಪೆರ್ಮರದೊಳ್ ಸೆಱಿಗೆಯ್ದು ಪರ್ಣಸಂ
ಧಿಗಳೆಡೆಯಿಂದಲಿಟ್ಟೊಱಿಸಿ ಕೊಂದವು ಕತ್ತಲೆಯಂ ಹಿಮಾಂಶುಗಳ್ ೨೭೦

(ಮಲ್ಲಿನಾಥಪುರಾಣಂ ೭-೩೯)

ಪಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ಪೊಳೆಪೋದುದಿಂದುಕಾಂ
ತಂಗಳ ಬೆಳ್ಪು ಮೋದಿದುದು ನೆಯ್ದಿಲ ಬೆಳ್ಪು ಮಡಲ್ತುದಚ್ಚವೆ
ಳ್ದಿಂಗಳ ಬೆಳ್ಪು ಬಳ್ಳಿವರಿದತ್ತೆಳವೆಂಡಿರ ಕಣ್ಣ ಬೆಳ್ಪು ಸೌ
ಧಂಗಳ ಬೆಳ್ಪು ಪರ್ಬಿದುದು ಬೆಳ್ಪಿನ ಬಲ್ಸರಿ[1][ಯಿಂ][1] ಸುಧಾಂಶುವಾ ೨೭೧

ಇಂಗಡಲೆ ಕಡಲ್ಗಳ್ ಸೌ
ಧಂಗಳೆ ಸದನಂಗಳಿಂದುಕಾಂತವೆ ಕಲ್ಗಳ್
ಗಂಗೆಯೆ ತೊಱಿಗಳೆನಲ್ ಬೆ
ಳ್ಪಂಗೆಡೆದುದು ಕುಮುದವನದ ಸಿರಿ ಬೆಳ್ದಿಂಗಳ್ ೨೭೨

(ಮಲ್ಲಿನಾಥಪುರಾಣಂ ೭-೪೨)

ಲವಣಾಂಭೋನಿಧಿ ದುಗ್ಧವಾರ್ಧಿಜಯದಂತಿರ್ದತ್ತು ಕಾಳಿಂದಿ ಜಾ
ಹ್ನವಿಯಂತಿರ್ದುದು ನೀಲಪರ್ವತಮೆ ಕೈಲಾಸಾದ್ರಿಯಂತಿರ್ದುದೀ
ಭುವನಂ ಕಪ್ಪುರದಿಂದೆ ಕಂಡರಿಸಿದಂತಿರ್ದತ್ತು ಕೃಷ್ಣಂ ಸದಾ
ಶಿವನಂತಿರ್ದನೆನಲ್ಕದೇವೊಗಟಿಪ್ಪೆನೋ ಪೇಟಿಚ್ಚವೆಳ್ದಿಂಗಳಂ ೨೭೩

ನಳಿನೀಸಂಮೋಹನಾಸ್ತ್ರಂ ಕುಮುದನಯನಕರ್ಪೂರಕಾಂಡಂ ಚಕೋರೀ
ತಿಳಕಂ ಶೃಂಗಾರಸಿಂಧುಪ್ಲವಬಿಸಲತೆ ತಾರಾಪುರಂಧ್ರೀಕಪೋಲ
ಸ್ಥಳಪತ್ರಂ ಚಂದ್ರಕಾಂತೋಪಳ[2]ಪರಿಸಲಿಲಾಮೋದ[2]ಶಸ್ತ್ರಂ ಮನೋಜಾ
ನಳಜಿಹ್ವಾಕ್ಷೀರಧಾರಾಹುತಿ ಪಸರಿಸೆ ಪರ್ವಿತ್ತು ಚಂದ್ರಾಂಶುಜಾಲಂ ೨೭೪

(ಮಲ್ಲಿನಾಥಪುರಾಣಂ ೭-೪೦)

---

[1] ಯಿಂ (ಖಬ) [2] ಸಲಿಲಸಿರಾಮೋಕ್ಷ (ಅ)

ಪಗಲಂತಿರ್ದಚ್ಚವೆಳ್ದಿಂಗಳೊಳಿನಕಿರಣಭ್ರಾಂತಿಗೆತ್ತಾಗಳಾಗಳ್
ಮುಗಿದಿರ್ದಂಭೋಜವೋರೊಂದಲರ್ದುವು ಬಿಸುಸುಯ್ವುತ್ತಗಲ್ದಿರ್ದ ನೀರ್ವ
ಕ್ಕಿಗಳೆಲ್ಲಂ ಕೂಡಿ ತೋಡಾಡುವು ಕುವಲಯಷಂಡಂಗಳಾಶಂಕೆಯಿಂದಂ
ಮುಗಿಯಲ್ಕೆಂದಿರ್ದವೇನುಜ್ವಲಿಸಿದುದೊ ಜಗಚ್ಚಕ್ರವಂ ಚಂದ್ರಬಿಂಬಂ ೨೭೫
(ಆದಿಪುರಾಣಂ ೧೨-೯)

ಇದು ಮತ್ತೇನೆಂಬೆ ಬೆಳ್ದಿಂಗಳ ಬೆಳತಿಗೆಯಂ ಹಂಸೆ ಪಾಲ್ಗೆತ್ತು ಸಾರ್ದ
ಪ್ಪುದು ಮಲ್ಲೀಮಾಲೆಗೆತ್ತೆಯ್ದೆಱಗಿದುಪುವು ಭೃಂಗಂ ಬಿಸಭ್ರಾಂತಿಯಿಂದಂ
ಕ[1][ದುಬು][1]ತ್ತುಂ ಕರ್ಯೊತ್ತೆಳಾರ್ಕೈದಪುವಿಭಕಳಭಂ ಸಾಂದ್ರಚಂದ್ರಾಂಶುವಂ ಜಾ
ಱತ್ತ ದುಕೂಲಂ ಲೀಲೆಯಿಂದಂ ತೆಗೆದಪುದು ಕುಚಾಗ್ರಕ್ಕೆ ಕಾಂತಾಕದಂಬಂ ೨೭೬

ತರತರದಿಂದ ನಾರುಗಿದು ತೋಳ್ವಳೆ ಮಾಡುವ ಕೊಯ್ದು ತಂದು ಪಾ
ದರಿಯೊಡಗಟ್ಟಿ ಸೂಡುವಲರ್ಗಂಗಳೊಳೊತ್ತುವ ಕೀಸಿ ಮೇಲ್ವ ನೀ
ಳ್ದಿರೆ ಪೊರೆಯೆತ್ತಿಕೊಂಡರರೆ ಪೊಂಗೊಡದೊಳ್ ಮಡಗಿಟ್ಟು ಪೊತ್ತಿಱಂ
ಗಿರಿಸುವಲಂಪಿನಿಂ ಬಯಸಿದರ್ ಘನಚಂದ್ರಿಕೆಯಂ ಲತಾಂಗಿಯರ್ ೨೭೭

ಸುರತಾಂತಶ್ರಾಂತಿಯಿಂ ನೀರಡಿಸಿದಬಲೆಯರ್ಗೀಂಟುತೌತ್ಸುಕ್ಯದಿಂ ನ
ಲ್ಲರೊಳೊಂದಲ್ ಪೋಪ ನಾರೀಜನಕೆ ಪಱುಗಲಿಟ್ಟೀಟಿಲುದ್ಯಾನಮಾಲಾಂ
ತರದೊಳ್ [2][ಪೊಚ್ಚಂಗ][2]ಳಂ ತಿರ್ದಿಸಲವಿರಳಘರ್ಮಾರ್ದ್ರಕಾಂತಾಜನಕ್ಕಾ
ದರದಿಂ ನೀರಾಟವಾಡಲ್ ನೆಱತದುದೆನಿಸಿ ಪರ್ವಿತ್ತು ಚಂದ್ರಾಂಶುಜಾಲಂ ೨೭೮

[3]ಬೆಲಗಸೆ[3] ತೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬ
ಚ್ಚಲನೆಲೆದೋಟದೊಳ್ ಪರಿಯಿಸಲ್ ಪಱುಗೋಲ್ಗಳನಿಕ್ಕಿ ಪಾಯಿಸಲ್
ನೆಲೆಯಿನಿತೆಂದು ನೋಡಲೊಳಪೊಕ್ಕು ದುಡುಮ್ಮಿಱಂದಾಡಲೀಸಲ
ಗ್ಗಲಿ[4]ಸುವಲಂಪಿನಿಂದೆಳಸಿದರ್ ಘನಚಂದ್ರಿಕೆಯಂ ಲತಾಂಗಿಯರ್[4] ೨೭೯
(ಅಜಿತನಾಥಪುರಾಣಂ ೬-೪೫ ; ಕಾವ್ಯಾವಲೋಕನಂ ೮-೫೫)

ಪಾರದದಿಂದೆ ಲೇಪಿಸಿದುದೋ ದೆಸೆ ನೀರದಮಾರ್ಗಮೆಯ್ದೆ ಕ
ರ್ಪೂರ ಪರಾಗದಿಂದಿಡಿಯೆ ತುಂಬಿದುದೋ ಸ್ಫಟಿಕೋಪಲಂಗಳಿಂ
ಧಾರಿಣಿ ಕೂಡೆ ಹಪ್ಪಳಿ[5]ಗೆಯೊ[5]ತ್ತಿದುದೋ ಸಲಿಲಾಶಯಂ ಪಯಃ
ಪೂರಮನಾಂತುದೋ ದಿಟಕೆ ತಾನೆನಿಸಿತ್ತಮೃತಾಂಶುರಶ್ಮಿಯಿಂ ೨೮೦
(ಚಂದ್ರಪ್ರಭಪುರಾಣಂ ೮-೩೯)

---

1 ದರ್ಕು (ಕಖಬ) 2 ಪಚ್ಚಂಗ (ಕಖಬ) 3 ಬೆಳಸಿಗೆ (ಖಬ) 4 ಸಿದಲಂಪಿನಿಂ ಬಗೆದುದುಂಡು ಜನಂ ಘನಚಂದ್ರಿಕಾಂಬುವಂ (ಅ) 5 ಕೆಪ (ಖಬ)

ಇದು ವಿರಹಕ್ಕಲ್ಲದೆ ಕಾ
ಯದ ಬಿಸಿಲಿದು ದಿಟ್ಟಿಗಲ್ಲದಿ[1]ನಿತೀಂಟಲ್[1] ಬಾ
ರದ ಸುಧೆಯಿದು ತಾಂ ಮನಕ
ಲ್ಲ[2]ದುಡ[2]ಲ್ ಸಸುನಿಸದ ಮುಗುಲ[3]ಮೊಳ[3]ವೆಳ್ದಿಂಗಳ್ ೨೮೧

(ಚಂದ್ರಪ್ರಭಪುರಾಣಂ ೮-೪೦)

ದ್ಯುನದೀಸಂಮೋಹದಿಂದಂ ಜಡೆಗೆದಱಲುಮಾವಲ್ಲಭಂ ನಾಡೆಯುಂ ಪಾ
ರ್ವಿನೆಗಂ ಪೀಯೂಷವಾರ್ಧಿಪ್ಲವಪರಿಣತಿಯಿಂ ಸೆಜ್ಜೆಗಬ್ಜೋದರಂ ಸಾ
ರ್ವಿನೆಗಂ ಹಂಸಂ ಮೆಲಲ್ಕೆಂದೆಳಸಿ ಬಿಸಲತಾಶಂಕೆಯಿಂ ಚಂಚು[4]ವಿಂ[4] ನೇ
ರ್ವಿನೆಗಂ ಪ್ರೋನ್ಮುದ್ರಿತಂ ಮುದ್ರಿಸಿದುದು ಜಗಮಂ ಚಾರುಚಂದ್ರಾಂಶುಜಾಲಂ ೨೮೨

(ಚಂದ್ರಪ್ರಭಪುರಾಣಂ ೮-೪೧)

ಕೆಂಪಿಲ್ಲದ ಬಿಸಿಲುಣ್ಮುವ
ಕಂಪಿಲ್ಲದ ಸಾಂದ್ರಚಂದನಕ್ಷೋದಂ ಮ
ತ್ತಿಂಪಿಲ್ಲದ ಪಾಲ್ಗಡಲೆಂ
ಬೆಂ ಪೊಸವೆಳ್ದಿಂಗಳಂ ಬಟಿಕ್ಕೇನೆಂಬೆಂ ೨೮೩

(ಚಂದ್ರಪ್ರಭಪುರಾಣಂ ೮-೪೩)

[5]ಎ[5]ಡೆನಾಣ್ಮುಚ್ಚದ ನಾಗವಟ್ಟಣಿಗೆ ಹೊಕ್ಕೀಸಾಡೆ ವ್ಯೆ ನಾನದಿಂ
ಗಡಲಾಸ್ವಾದಿಸೆ ಹೊಟ್ಟೆ ತೀವದಮೃತಂ ವೈಸಾರ್ಚಲುಷ್ಣತ್ವಮಂ
ಕುಡದರ್ಕಪ್ರಭೆ ನೋಡೆ ತೋಱಿ ಮುಗುಳ್ಚಂತಲ್ಲಾಡದೊಳ್ಕಿಂಚೆನಲ್
ಕಡು ಚೆಲ್ವಾದುದು ಕಣ್ಗೆ ಸಾಂದ್ರರುಚಿಯಿಂ ಚಂದ್ರಾತಪಾಡಂಬರಂ ೨೮೪

ಉರುಳಿಸಿ ವೆಜ್ಜಮಂ ಕಳೆದು ಕೋದೊಡೆ ಮುತ್ತಿನ ಹಾರಮಪ್ಪ ಸೀ
ಳ್ದಿರೆ ಪೊರೆಯೆತ್ತಿ ಪಟ್ಟಣಿಗೆಯಪ್ಪುಗುರಿಂದೆ ಕಟಿಲ್ಚೆ ತೋರಗ
ಪ್ಪುರವಳುಕಪ್ಪ ಬಕ್ಕಬಯಲಂ ಕಡೆಯಲ್ ಧವಳಾರಮಪ್ಪ ಬಂ
ಧುರ ವರ ಸಾಂದ್ರಮಕ್ಕೆ ನೆಲೆಯಾದುದು ಚಂದ್ರಿಕೆಯೇಂ ವಿಚಿತ್ರಮೋ ೨೮೫

ಕರಗಿಸೆ ಬೆಳ್ಳಿಯಪ್ಪುದಿದು ತೆಳ್ಪೊರೆಯೆತ್ತೆ ದುಕೂಲಮಪ್ಪ ಕಂ
ಡರಿಸೆ ಮರಾಳಮಪ್ಪುರುಳಿಮಾಡಿ [6]ಸ[6]ರಂಗೊಳೆ ತಾರಹಾರಮ
ಪ್ಪರೆದೊಡೆ ಸೌಧಸಂತತಿಗೆ ಪಾಲ್ಸೊದೆಯ[7]ಪ್ಪುಗುರಿಂ ಕಟಿಲ್ಚೆ[7] ಕ
ಪ್ಪುರವಳುಕಪ್ಪುಗುರ್ವನೊಳಕೊಂಡುದು ಚಂದ್ರಿಕೆ ಸಾಂದ್ರಭಾವದಿಂ ೨೮೬

(ಜಗನ್ನಾಥವಿಜಯಂ ೧೬-೧೦೯)

---

[1] ದೀಂಟಲ್ಕಂ (ಅ) [2] ಡೆದ (ಖ ಬ) [3] ಮಾ (ಖ ಬ) [4] ವಳ್ (ಖ ಬ) [5] ಉ (ಕ ಬ) [6] ತ (ಖ ಬ) [7] ಪ್ಪತಟಿಲ್ಚಿಕೊಡೆ (ಅ)

ಎಳಮಿಂಚಂ ಸಂತನಿಟ್ಟಂತೆಸೆದುದು ಬೆಳಗಿಂ ಬಣ್ಣಮುತ್ತಣ್ಣವಾರಿಂ
ತೋಇದಂತಾದತ್ತು ಬೆಳ್ಪಿಂ ಪಳುಕಿನ ಬೆಳಗಂ ಬಿರ್ಚಿದಂತಾಯ್ತು ತೆಳ್ಪಿಂ
ಚಳವೀಚೀಕ್ಷುಬ್ಧದುಗ್ಧಾಂಬುಧಿಯನೆ ತೆಗೆದಂತಾಯ್ತು ಮೆಯ್ವೆತ್ತ ಪೆರ್ಚಿಂ
ಬಳವತ್ಪುಷ್ಪಾಸ್ತ್ರಕೀರ್ತಿಪ್ರಸವಸಹಚರಂ ಚಂದ್ರಿಕಾಶ್ರೀವಿಲಾಸಂ ೨೮೭

ಕುಸುಮಂ ಗಂಧಾನುಮೇಯಂ ಗಮನಕಮನ ಹಂಸಾಳಿ ಶಬ್ದಾನುಮೇಯಂ
ರಸನಾಸ್ವಾದಾನುಮೇಯಂ ಮಧುಮಲಯರುಹಕ್ಷ್ಮಾಮಕರ್ಪೂರಮುಕ್ತಾ
ವಿಸರಂ ಸ್ಪರ್ಶಾನುಮೇಯಂ ದಿಟಮೆನೆ ಘಟಿಕಂಬೆತ್ತ ಬೆಳ್ದಿಂಗಳಂ ಭಾ
ವಿಸೆ ಲೋಕಂ ಚಂದ್ರಕಾಂತೋಪಳದ[1]ಮಯಣ[1] ದೊಳ್‌ಮಾಡಿದಂತಿರ್ದುದಾಗಳ್ ೨೮೮

(ಅನಂತನಾಥಪುರಾಣಂ ೭-೮೨)

ನವರತ್ನಾನೀಕಮೆಲ್ಲಂ ಸುರುಚಿರನವಮುಕ್ತಾಮಯಂ ಪುಷ್ಪಮೆಲ್ಲಂ
ಪ್ರವಿಭಾಸ್ವನ್ಮಲ್ಲಿಕೋಜ್ಜೃಂಭಿತ ಕುಸುಮಮಯಂ ಭೂಧರಶ್ರೇಣಿಯೆಲ್ಲಂ
ಸವಿಶೇಷೋತ್ಪ್ರೀತದಾಹೋತ್ಕರ ರಜತಮಯಂ ಭೂರಜೋಜಾಲಮೆಲ್ಲಂ
ಪ್ರವ[ಹತ್]ತಃಪ್ರಾಲೇಯಧೂಳೀಮಯಮೆನಿಸಿದುದಾ ಚಂದ್ರಿಕಾಶ್ರೀವಿಲಾಸಂ ೨೮೯

ಸುರರಾಜದ್ವಿಪದೇಹಕಾಂತಿ ಮದಲೇಖಾಕಾರ್ಷ್ಣ್ಯಸಂಯುಕ್ತಮಾ
ಹರಹಾಸಪ್ರಭೆ ಕಾಳಿಕೋಪಚಿತಮಾ ಶೇಷಾಹಿದೇಹಾಂಶುವು
ದ್ಗರಳವ್ಯಾವೃತಮಾ ಸುಧಾಬ್ಧಿರುಚಿ ಕೃಷ್ಣೋಪೇತಮೆಂದಿಂತು ಮಾಂ
ಕರಿಸುತ್ತಿರ್ಪುದು ನಿರ್ಮಳಪ್ರಕೃತಿಯಿಂ ಚಂದ್ರಾತಪಾಡಂಬರಂ ೨೯೦

ಭುವನಮನಾವಗಂ ಪುದಿದು ತೀವಿದ ತಣ್ಗದಿರ್ಗಳ್ ಪೊದಟ್ದಿ ಕೈ
ರವವನಮಾದುವೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ
ದುವು ಸುರಸಿಂಧುವಾದುವು ಸುಧಾರ್ಣವಮಾದುವು ಚಂದ್ರಕಾಂತಮಾ
ದುವು ಹಿಮವಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯವಾದುದೇ ೨೯೧

(ಲೀಲಾವತಿ ೩-೭)

ಇದು ವಿಧುಬಿಂಬಮಪ್ಪುದಿನಮಂಡಲಮಲ್ತಿದರಲ್ಲ ನೆಯ್ದಿಲ
ಪ್ಪುದು ಸರಸೀಜಮಲ್ತಿದು ಶಶಿಪ್ರಭೆಯಪ್ಪುದು ಭಾನುದೀಪ್ತಿಯ
ಲ್ತಿದು ಹಗಲಲ್ಲದಿಲ್ಲದಿರುಳಪ್ಪುದಿದಪ್ಪುದು ತಪ್ಪದೆಂದು ನೋ
ಡಿದರಭಿಶಂಕೆಯಂ ತಳೆಯೆ ಪಜ್ಜಳಿಸಿತ್ತು ಸುಧಾಂಶುಮಂಡಲಂ ೨೯೨

ಎಲೆ ನೋಡಲ್ ಸುರಗಂಗೆ ಕೋಟಿಮುಖದಿಂದೆಲ್ತಿಂದಳಲ್ಲಲ್ತು ನಿ
ರ್ಮಲ ದುಗ್ಧಾಬ್ಧಿಯೆ ಮೇರೆದಪ್ಪಿ ಕವಿಯಿತ್ತಲ್ಲಲ್ತು ಗೌರೀಶನು

---

1 ನಯನ (೩ ಬ)

ಜ್ಜ್ವಲ ಸತ್ಪಂಚಮಮೂರ್ತಿ ಧಾರಿಣಿಯನಿಂದಪ್ಪಿರ್ದುದಲ್ತಲ್ತೆ ಕೇ
ಳಿಕೊಂಯೊಳ್ ಕೌತುಕಮಪ್ಪಿನಂ ಪಸರಿಸಿತ್ತಾನಂದಚಂದ್ರಾತಪಂ ೨೯೩

ಇಂದು ಪ್ರಾಲೇಯಶೈಲದ್ಯುನದಿ ಶಶಿಶರನ್ಮೇಘಮುಕ್ತಾಂಬುಧಾರಾ
ವೃಂದಂ ಜ್ಯೋತ್ಸ್ನಾಪ್ರವಾಹಂ ಕವಿದುದು ವಿಧುಶಕ್ರೇಕ್ಷಿತಂ ಶೀತರೋಚಿಃ
ಕುಂದೋದ್ಯನ್ಮಂಜರೀನಿರ್ಗತನಿಬಿಡರಜಂ ಚಂದ್ರರುದ್ರಾಟ್ಟಹಾಸ
ಸ್ಪಂದಂ ಪ್ರೋದ್ಭಿನ್ನ ಸೋಮಾಮರಕರಟಿಶಿರೋಜಾಂತಮುಕ್ತಾಚ್ಛವರ್ಷಂ ೨೯೪
(ಲೀಲಾವತಿ ೨-೧೨)

ತಾರಗೆಗಳ್ ಮುಸುಂಕೆ ಕುಮುದೋಜ್ಜ್ವಲಕಾಂತಿ ತುಳುಂಕೆ ಕೂಡೆ ಪಂ
ಕೇರುಹರಾಜಿ ಕಂದೆ ಪ್ರೋಣರ್ವಕ್ಕಿಯ ಕಣ್ಬೊಣ[1][ರಚಿತ್ತ][1] ಗುಂಪೆ ಶೃಂ
ಗಾರದಡರ್ಪು ಜಾರೆಯರ ಕೂರ್ಪು ಚಕೋರಿಗಳಾಸೆ ಮಿಕ್ಕ ನೀ
ಹಾರದ ದೇಸೆ ಕಣ್ಗೆಸೆದುದುಜ್ಜ್ವಲದಿಕ್ಪ್ರಕರಂ ಸುಧಾಕರಂ ೨೯೫

ಮದನದವಾಗ್ನಿ ತಪ್ತೆಯರ ಸು[2]ಯ್ಯ ನಖಂಪಚವಾಗಿ[2] ಬಪ್ಪವಿಂ
ಗದಿರನಲರ್ಚೆ ಚಂಚುವಿನೊಳೊಯ್ಯನರಲ್ದೊಲೆವುತ್ಪಲಾಗ್ರಪ
ತ್ರದೆ ಮೊಗೆದೂಡಿ ಪಾಡಿ ನಲಿದಾ[3]ಲಿಸಿ ತೋಜಿಸಿ ಸೋಂಕಿ ನೂಂಕಿ ಕೌ
ಮುದಿಯೊಳದೇಂ ಚಕೋರಿ ಪಿಳುಗಾಡಿಸಿದತ್ತು ನಿಜಾಗ್ರಶಾಬಮಂ ೨೯೬
(ಅನಂತನಾಥಪುರಾಣಂ ೭-೮೧)

ತೆರೆಮಸಗುತ್ತಮಿರ್ಪ ಘನಚಂದ್ರಿಕೆಯಂ ಪರಮಾನುರಾಗದಿಂ
ಪರಿದಿದಿರೇಱಯೇಱ ನಗೆಗಣ್ಪ್ರೋಣರೊಳ್ ತೆಗೆದೆತ್ತಿಯೆತ್ತಿ ನಿ
ರ್ಭರತೆಯೊಳೀಂಟಿಯೀಂಟಿ ನೆರೆದೋಕುಳಿಯಾಡಿಯಾಡಿ ಮ
ಚ್ಚರದೊಳೆ ತುಳ್ಕಿ ತುಳ್ಕಿ ನಲಿದಪ್ಪುವು ಕೂಡೆ ಚಕೋರಸಂಚಯಂ ೨೯೭

ನೆರೆದು ಚಕೋರಪ್ರಕರಂ
[4]ಖ[4]ರಚಂಚುವಿನುಡಿದು ತಿನೆ ಸುಧಾಕರಕಿರಣಾಂ
ಕುರನಿಕರಮನವರ್ದಿನ ಸೊನೆ
ಸುರಿದಪುದೆನೆ ಪಸರಿಸಿತ್ತು ಪೊಸವೆಳ್ದಿಂಗಳ್ ೨೯೮
(ಲೀಲಾವತಿ ೨-೨೪)

ಅತ್ತಲೆ ರಥಾಂಗಾಸುರ
ರಿತ್ತೀಂಟೆ ಚಕೋರದಿವಿಜನಾಯಕರೇಂ ಸೂ
ಸಿತ್ತಾ ಗಗನಸ್ಥಲಿ ಹರಿ ೨೯೯
ಯೆತ್ತಿದ ವಿಧುಕುಂಭದಮೃತಕರಧಾರೆಗಳಂ
(ಲೀಲಾವತಿ ೨-೦೨)

---

1 ರಲ್ತು (ಖ ಬ) 2 ಯ್ಯುರಿಯುಂಬ ಚಕೋರಿ (ಖ ಬ) 3 ರಿ (ಖ ಬ) 4 ಕ (ಖ ಬ)

ಕರೆದುವು ತಾವರಲ್ದಗಿವ ತಾವರೆ ಕೂಡಿ ಕುಕಿಲ್ವ ಪಕ್ಕಿಗಳ್
ಪರೆದುವು ಮಾಣ[1]ದಂಡಲೆಪ ಹಂಸೆಗಳುಂ ತಡಿಸಾರ್ದು[2]ವಿನ್ನು ಪ್ಪೆ
ಸಿರಿಬರಲುಂಟು[2] ಚಂದ್ರಬಲಮುಂಟು ನಿಶಾಬಲಮೆಂದು ರಾಗದಿಂ
[3]ಬಿರಿ[3]ವವೋಲೀನೆಸಬಿಲ್ ಮುಸಗುತಿರ್ದುವೊ ನೀಳ ಸರೋಜಮಾಲೆಗಳ್ ೩೦೦
(ಅನಂತನಾಥಪುರಾಣಂ ೭-೬೭)

ವಿರಹವ್ಯಾಕುಳಮಾಗೆ ಚಕ್ರಮಿಥುನಂ ಸಂಕೋಚಮಂ ತಾಳ್ದು ತಾ
ವರೆ ಕಾಮಾತುರಮಂ ರಜೋಧಿಕರಮುಂ ಖೇದಕ್ಕೆ....
....ಜೋಷಾಂಧರ್ಸುತ್ತವಂ ನಗುವವೋಲ್ ನೈದಿಲ್ಗೊಳಂ ಮೇಲ್ಮರ
ಲ್ದಿರಲುತ್ತಿರ್ದುದು ಚಂಚಕಂ ಮಧುರದಬ್ಜಾಹಾರವಾಚಾಳಿಕಂ ೩೦೧

ಕೊಳಕೆ ತಳಾಱನಾಯ್ತು ಕುಮುದಂ ಗಗನಕ್ಕೆ ತಳಾಱನಾಯ್ತು ಜಾ
ವಳಿಪ ಚಕೋರಮೀ ಪೊಸ ತಳಾಱಿಕೆಯೊಳ್ ಪ್ರಿಯೆ ಪೋದ ಪುಯ್ಯಲ
ಗ್ಗಲಿಸಿದೊಡಾರುಮೂಳಿಗಕೆ ಬರ್ಪವರಿಲ್ಲೆನಗೆಂಬ ಮಾಱಿಕ್ಕೆಯಿಂ
ದೊಳಱುವ ಕೋಕದೊಂದು ವಿಧಿಗಟ್ಟವೊಲಾಯ್ತೊ '[4]ಸ[ರ್ವೆಂದ][4]'ವೋಪಲಂ ೩೦೨

[5]ಮದಚಲ ಚಕೋರ[5]ಚಂಚೂ
ವಿದಳನದಿಂದಮೃತರಸದ [6]ಪೊನಲಿಡು[6]ತುಂ ಸೂ
ಸಿದ ಬೆಳ್ದಿಂಗಳ ತಿರುಳೆಂ
ದದಿನಪವಳಮೆಸೆದುದೊಸರ್ವ ಶಶಿಮಣಿವಿಸರಂ ೩೦೩
(ಲೀಲಾವತಿ ೨-೧೯)

ಕರೆಯಲ್ಪಣ್ಣದೆ ಪೀಠಮರ್ದಕನುಮೆನ್ನಂ ಪಚ್ಚುವಂ ಮತ್ತೆ ನಾ
ಗರಿಕಂ ನೂಂಕಿದಪಂ ವಿಟಂ ಬೆರಲ ಕೊಂಕಿಂ ಸನ್ನೆಗೈದಪ್ಪನೆ
ಲ್ಲರ ಮಾತೇಂ ಭವದಂಘ್ರಿಪಲ್ಲವಮನೀ [7]ವಾತಾಯನೋಪಾತ್ತ[7]ಶೀ
ತರುಚಿಪ್ರಾಂಶುಕರಂ ಕರಂ ಪಿಡಿದುವೆನ್ನೀ ಸಲ್ಗೆಯಂ ಮನ್ನಿಸೈ ೩೦೪
(ಅನಂತನಾಥಪುರಾಣಂ ೭-೮೮)

ಎಂದು ವಿದೂಷಕನರಸನ
ಮುಂದಸ್ಮಿತ ಲೋಚನಾಂಶು ಮ[8]ನದನುಮ[8]ತಿಯಂ
ಮುಂದಿಡೆ ಭೋಂಕನೆ ಕೈಗುಡು
ವಂದದೊಳೆ ಪಸಾದಮೆನುತೆ ಪೊಡೆವಡುತಿರ್ದ್ದಂ ೩೦೫
(ಅನಂತನಾಥಪುರಾಣಂ ೭-೮೯)

---

[1] ಡಿ (ಖ ಬ) [2] ಪೆಮ್ಮನಿಃಸಿರಿ ಬಿಹಳೆಂದು (ಖ.ಬ) [3] ಬಿರಿ (ಅ) [4] ವಿಂದು (ಖ ಬ)
[5] ಮದದ ಚಕೋರು (ಖ) [6] ಸೋಸೆವಿಡು (ಖ ಬ) [7] ವಾತ್ಯಾಯನಾಃಪಾತ (ಖ ಬ) [8] ದನನಹ
(ಖ ಬ)

ಧವಳಾಪಾಂಗಮರೀಚಿ ಮಂಡಳಿಸಿ ನಿಂದಂತಿರ್ಪ ಕರ್ಪೂರಕ
ರ್ಣವತಂಸಂ ಹರಿಚಂದನಂ ವಿಚಳಂ ಮುಕ್ತಾಫಳಂ [1]ಕ್ಷೌಮ[1]ಮೆಂ
ಬಿವಱಿಂ ಭೂಭುಜನೊಪ್ಪಿದಂ ಮೆಱೆವ ಪೌರಶ್ರೀಯನಿಂತೆಂದು ಬಿ
ನ್ನವಿಸಲ್ ಚಂದ್ರಿಕೆ ಬಂದು ಸಲ್ಗೆವಡೆದೊಲ್ವಾಲಿಂಗನಂಗೆಯ್ದವೋಲ್ ೩೦೬
(ಅನಂತನಾಥಪುರಾಣಂ ೭-೯೦)

ಪೊಱಲನಿತುಂ ಪಳಚ್ಚನಮೃತಪ್ಲವದಿಂ ತೊಳೆದಂತೆ ಸೊಂಪು ಪೊಂ
ಪುೞಿಸೆ ವಿಮಾನಮುಂ ನಭದೊಳಿಟ್ಟಭಿವೀಕ್ಷಿಸಲಿಂದುಬಿಂಬದಿಂ
ದಿೞಿವಮೃತಾಂಶುಮೂರ್ತಿಯೆನೆ ಸಾಂದ್ರ[2]ಸುಧೋ[2]ಜ್ವಲ ಚಂದ್ರಶಾಲೆಯಿಂ
ದಿೞಿದು ನರೇಂದ್ರಚಂದ್ರನೊಲವಿಂ ತಳರ್ದಂ ನಿಜರಾಜಗೇಹದಿಂ ೩೦೭
(ಅನಂತನಾಥಪುರಾಣಂ ೭-೯೧)

ಪರಿ[3]ವೇದಿ[3] ನಗರದೊಳ್ ನಾ
ಗರಕಂ [4]ರತ[4]ಕೋವಿದಂ ವಿಟಂ ಪ್ರಹಸನತ
ತ್ಪರನೆನಿಸುವವಂ ವಿದೂಷಕ
ನರ[5]ಸನ ಪಡಿ[5] ಪೀಠಮರ್ದಕಂ ನಾಯಕರೊಳ್ ೩೦೮
(ಅನಂತನಾಥಪುರಾಣಂ ೭-೯೨)

ಅನುನಾಯಕರೀ ನಾಲ್ವರು
ಮನುಕೂಲಂ ದಕ್ಷಿಣಂ ಶಠಂ ದುಷ್ಟಂ ನೆ
ಟ್ಟನೆ ನಾಯಕ[6]ರಿಂತೆಣ್ಬರ್
ಜನ[6]ಭರ್ತುಗೆ ಲಲಿತನಾಯಕಂಗೆ ಸಹಾಯರ್ ೩೦೯
(ಅನಂತನಾಥಪುರಾಣಂ ೭-೯೩)

ಅನುಕೂಲಾದಿಗಳೆಂಬ ಮಂದಪವನಂ ಚಂದ್ರಂ ವಸಂತಂ ಮುಗು
ಳ್ತ ನವಾಮ್ರಂ ಪಿಕ ಕೀರ ಭೃಂಗ ಕಳಹಂಸಶ್ರೇಣಿ ಕೈಕೊಂಡು ಬ
ರ್ಪಿನೆಗಂ ಮನ್ಮಥಚಕ್ರವರ್ತಿ ನಡೆದೀ ಬಂದಪ್ಪನೆಂಬಂತೆ ಬಂ
ದನಲಂಪಿಂ ಪೊಱಮಟ್ಟು ರಾಜಗೃಹಮಂ ಸಾಹಿತ್ಯರತ್ನಾಕರಂ ೩೧೦
(ಅನಂತನಾಥಪುರಾಣಂ ೭-೯೪)

ಮುಗುಳ್ಗಳ ಕಂಪಿದಚ್ಚನನೆಗಂಪಿದು ಪೂಗಳ ಕಂಪಿ[7]ದಿಲ್ಲಿ[7] ಮ
ಲ್ಲಿಗೆಗಳ ಕಂಪಿದುಬ್ಬರಿಪ ಜಾತಿಯ ಕಂಪಿದು ಬೇಱೆವೇಱೆ ಸಂ
ಪಗೆಗಳ ಕಂಪಿದೆಂಬವೊಲಳಿಸ್ವನವೊಪ್ಪಿರೆ ಬಂದು ಕಂಪನೋ
ಲಗಿಸಿದುದೆ[8]ಯ್ದೆ[8] ಭೂಪತಿಗದೇನೆಲರೋ ಪೊಸಮಾಲೆಗಾಱನೋ ೩೧೧
(ಲೀಲಾವತಿ ೨-೨೭)

---

[1] ಕ್ಷೋಭ (ಅ) [2] ಸರೋಃ (ಅ) [3] ದ್ವೈದಿ (ಅ) [4] ತರ (ಅ) [5] ಸಂಗನು (ಅ) [6] ರಿವ ರೆಣ್ಬರುಮನು (ಅ) [7] ದಲ್ತು (ಖ ಬ) [8] ತ್ತಿ (ಅ)

ಸಮಧಿಕ ಸೌಖ್ಯಮಾಗೆ ವನಲಕ್ಷ್ಮಿಗೆ ತಿರ್ದಿ ತಮಾಲಕೇಶಕೇ
ಶಮನಿನಿಸುಳ್ಕರಲ್ಚಿ ಕಮಲಾನನಮಂ ಸ್ತಬಕಸ್ತನಾಗ್ರದೊಳ್
ರಮಿಯಿಸಿ ಪಾಟಲಾಧರ ಸುಧಾರಸಮಂ ಸವಿದಟ್ಟಿಱಿಂ ಲತಾಂ
ಗಮನಮರ್ದಪ್ಪಿ ದಕ್ಷಿಣವಿಟಂಗೆಣೆಯಾದುದು ದಕ್ಷಿಣಾನಿಲಂ ೩೧೨

ಅಳಿಮಾಲಾಕೇಶಮಂ ಮೆಲ್ಲನೆ ಬರೆತೆಗೆದಬ್ಜಾನನಾಮೋದಮಂ ಪೀ
ರ್ದು ಲತಾಂಗಾಲಿಂಗನಂ ಸಂಗಳಿಸಿ ಕೃತಕಶೈಲೇಂದ್ರಶುಂಭನ್ನಿತಂಬ
ಸ್ಥಲಮಂ ತನ್ನಿರ್ಝರಾಂಬುಸ್ಮರರಸಮೊಸರ್ವಂತೆಱಲ್ ಸಿಚ್ಚಂ ವನಶ್ರೀ
ಗೊಲವಂ ಮಾಡುತ್ತುಮಿರ್ಕುಂ ಚತುರವಿಟನವೋಲ್ ದಕ್ಷಿಣಾಶಾಸಮೀರಂ* ೩೧೩
(ಜಗನ್ನಾಥವಿಜಯಂ ೯-೯೧)

ನವನೀಲೋತ್ಪಲಲಕ್ಷ್ಮಿಯಂ ನಗಿಸಿ ಮಲ್ಲೀರಾಮೆ[1]ಯೊಳ್[1] ಮೇಳವಾ
ಡಿ ವನೇಜಾತಿಸಿಯಂ ವಿಡಂಬಿಸಿ ವಿನೋದಂಬೆತ್ತು ಬಂದತ್ತು ಸ
ಬ್ಬವಕಾಱಂಗೆಣೆಯಾಗಿ ವಾರವನಿತಾಸೌಭಾಗ್ಯಘಂಟಾರುತಂ
[2]ಸುವಿಟಸ್ವೇದನವಾರುತಂ[2] ಕುಸುಮಚಾಪಜ್ಯಾರುತಂ ಮಾರುತಂ* ೩೧೪
(ಜಗನ್ನಾಥವಿಜಯಂ ೧೬-೧೧೦)

ನಿಱಿಯಂ ಸೆಱಂಗನೆತ್ತಿ ಮಿಸುಪೊಳ್ದೊಡೆಯಂ ನಸುಸೋಂಕಿ ಮೇಲುದಂ
ತೆಱೆದು ಕುಚಾಗ್ರದೊಳ್ ಪೊರಳ್ದಿ ಹಾರಮನೀಡಿಱಿದಾಡಿ ನಾಡೆ ಬಾ
ಯ್ದೆಱೆಯನಲಂಪಿನಿಂ ಸವಿದು ತೋರಕುರುಳ್ಗಳನೊಕ್ಕಲಿಕ್ಕಿ ಮುಂ
ದಱಿಯದೆ ಸೂಳೆಗೇರಿಯೊಳೆ ಸಂಚರಿಪಂ ವಿಟನಂತೆ ಮಾರುತಂ* ೩೧೫

ಸುೞಿಗುರುಳೊಳ್ ತೊಡಂಕಿ ವದನಾಂಬುಜಸೌರಭದೊಳ್ ಮುೞುಂಗಿ ಪೊಂ
ಪುೞಿಗೊಳುತಿರ್ದ ಸೋರ್ಮುಡಿಯೊಳೊತ್ತಿದ ಕತ್ತುರಿಯಂ ಕಲಂಕಿ ಮೈ
ವೞಿಯೊಳೆ ಮೇಲುದಂ ಕೊಲಗೆನೂಂಕಿ ಕುಚದ್ವಯದೊಳ್ ಪಳಂಚಿ ಪೊ
ಕ್ಕುೞೊಳಿಱಿದಾಡಿ ಕೂಡಿದುದು ವಲ್ಲಭನಂತಿರೆ ಮಂದಮಾರುತಂ ೩೧೬

ವನಿತಾಕೇಶಕಲಾಪನವ್ಯಕುಸುಮಾಮೋದಂಗಳೊಳ್ ಕಮ್ಮಕ
ಮ್ಮನೆ ನಾರೀನಿಬಿಡೋನ್ನತಸ್ತನತಟಪ್ರೋದ್ಘಟ್ಟದೊಳ್ ಮೆಲ್ಲಮೆ
ಲ್ಲನೆ ಕಾಂತಾಸುರತಪ್ರಮೋದಬಹಳಸ್ವೇದಾಂಬುವಿಂ ತಣ್ಣತ
ಣ್ಣನೆ ಬೀಸಿತ್ತು ವಿಲಾಸಿನೀಸದನದೊಳ್ ಬಂದೊಂದು ಮಂದಾನಿಲಂ* ೩೧೭

---

1 ಯಂ (ಅ) 2 ಸುವಿಟಸ್ವೈರರವಾರುತಂ (ಅ) * ಈ ಪದ್ಯಗಳು ನಾಲ್ಕನೆಯ ಆಶ್ವಾಸದಲ್ಲಿಯೂ ಬಂದಿವೆ.

ಯುವತೀಸಂತಾನನಾನಾಚಲದಳಕಲಸಲ್ಲಾಸ್ಯಲೀಲಾಪ್ರಬಂಧಂ
ವಿವಿಧಾಗಾರಾಂಗಣಪ್ರಸ್ಫುರಿತಕೃತಕಕಾಸಾರಪಾನೀಯಭಂಗೋ
ಚ್ಛನಬಿಂದುವ್ರಾತಶೀತಾವರಣನೊಲವಿನಿಂ ತೀಡಿದಂ ಸ್ತ್ರೀಕುಲೋದ್ಯ
ನ್ನವಕಸ್ತೂರೀಹಿಮಪ್ರೋನ್ಮಲಯಜಘುಸೃಣಾಮೋದಭಾರಂ ಸಮೀರಂ* ೩೧೮
(ಗಿರಿಜಾಕಲ್ಯಾಣಂ ೪–೨೨೦)

ಕಳಕೇಳೀಕೀರಪಾರಾವತಕುಹರಣವಾಚಾಲಮುಜ್ಜೃಂಭಮಾ[1]ನೋ
ಜ್ವ[1]ಳರಾಜಂ ನಿಷ್ಕು[2]ಟಾಂ[2]ಘೋರುಹನಿಲಯಜ[3]ಲಾದ್ರ್ರಂ[3] ರತಿಶ್ರಾಂತನಿರ್ಯ
[4]ಲ್ಲಲನಾನಿಶ್ವಾಸಪುಷ್ಪಪ್ರಸರದಗರು[4]ಸೌರಭ್ಯಸಂದೋಹ ಭಾರಾ
ಕಳಿತಂ ಬಂದೊಯ್ಯನೇನೂದಿದುದೋ ಪಣವಧೂಗೇಹದಿಂ ಗಂಧವಾಹಂ ೩೧೯
(ಚಂದ್ರಪ್ರಭಪುರಾಣಂ ೮–೪೫)

ಬೆಟ್ಟದ ಮೇಲೆ ಬಂದು ಸಿರಿ ನಿಲ್ಕೆರವಿಲ್ಲದೆ ಕೂರ್ತು ಸಲ್ಲರಿಂ
ತೊಟ್ಟಯನಾಗಳಂತೆ ತಿಳಿಗಾಟ್ಟವನುಯ್ಯಲ ಮೇಲೆ ಚಂದ್ರ ನೀ
ರ್ದಟ್ಟಿಸಿ ನೋಟಕ್ಕೆ ಕಾಂತೆಯರ್ಗೆ ಬಂದ ಬಸಂತದ ಮೇಲೆ ಬಿಚ್ಚತಂ
ನಾಟ್ಟುಗೆ ಜಾಗಮೆಂದು ಕೆಲಬರ್ ತಳಿರುಯ್ಯಲನೇಱಿ ಪಾಡಿದರ್ (?) ೩೨೦

ಸುಯ್ಯೆಲರುಯ್ಯಲಾಡಿಸೆ ಮದಾಳಿಯನುಯ್ಯಲ ಸುಣ್ಣರಂ ಸ್ಮರಂ
ಗುಯ್ಯಲರ್ವಿಲ್ಗೆ ಕಯ್ಯನಿರದೆಂಬವೊಲುಣ್ಮೆ ಮುರಲ್ದು ನೋಟಕರ್
ಪುಯ್ಯಲನೊಯ್ಯನಾಕೆಯೊಡನಾಡಿಗಳೊಳ್ ಕುಡೆ ಮುತ್ತಿನ್ನೈಸರಂ
ಮೆಯ್ಯೊಲೆಪಕ್ಕೆ ರಯ್ಯಮೆನೆ ಕೂಗೆ ವಿಲಾಸದಿನುಯ್ಯಲಾಡಿದಳ್ ೩೨೧
(ಚಂದ್ರಪ್ರಭಪುರಾಣಂ ೮–೪೭)

ಮೂಡಿದುದಿತ್ತಲೊಂದಭಿನವಂ ಶಶಿಬಿಂಬಮೆನಿಪ್ಪ ಶಂಕೆಯಂ
ಮಾಡೆ ಮನಕ್ಕೆ ಮುದ್ದುಮೊಗಮುಜ್ವಲಚಂದ್ರಿಕೆಯುಲ್ಲಿ[5]ನಿಂದು ಮೇ
ಲಾಡುವ ಲೀಲೆಯಿಂದೊಲೆ[6]ಯೆ ಮೈ[6] ಮೃಗಲಕ್ಷ್ಮ ಮೃಗಕ್ಕೆ ಗೋರಿಯಂ
ಪಾಡುವ ಮಾಬಿಕ್ಕೆಯಿಂ ಬಳಿಯೆ ಗೀತರಸಂ ತಳಿರುಯ್ಯಲಾಡಿದಳ್ ೩೨೨
(ಚಂದ್ರಪ್ರಭಪುರಾಣಂ ೮–೪೮)

ಪದನಖಕಾಂತಿ ತಾರಗೆಯ ಕಾಂತಿಯನೇಳಿಸೆ ಸುಯ್ಯ ಕಂಪೆಲ
ರ್ಗೊದವಿಸೆ ಕಂಪನಕ್ಷಿಗಳ ಚಂದ್ರಿಕೆ ಚಂದ್ರಿಕೆಯಂ ಪಳಂಚಿ ಗೇ
ಯದ ರುತಿ ಕಂತುಚಾಪರುತಿಯೊಳ್ ತಡಮಾಗೆ ಮುಖೇಂದುವಿಂದುವಿಂ
ಗಿದಿರಿಡೆ ಕಾಂತೆ ಮಿಂಚು ಪೊಳೆದಾಡುವವೋಲ್ ಪೊಳೆದುಯ್ಯಲಾಡಿದಳ್ ೩೨೩
(ಜಗನ್ನಾಥವಿಜಯಂ ೧೬–೧೧೪)

---

[1] ಜೊತ್ಸ (ಅ) [2] ಟುಂ (ಖ ಬ) [3] ಳಾದ್ರಂ (ಖ ಬ) [4] ಸ್ನಳನಾರೀ ಶ್ವಾಸಪುಷ್ಪಂ ಪ್ರಸವದಗನು (ಖ ಬ) [5] ನೀಡುವೋ (ಅ) [6] ಯಲೀ (ಅ)

ಈ ಪೊಸಸುಗ್ಗಿ ರಂಜಿಸಿದುದೀ ಪ್ರೊಸಜವ್ವನೆಯಿಂ[1]ದಮೊಳ್ಪ[1]ಸಂ
ವ್ಯಾಪಿಸೆ ಜಾಗಮಂ ಮೆಱೆದು ಕಾಮಿನಿ ಕಾಮಭುಜಾಗ್ರಮಂ ಜಯ
ಶ್ರೀ ಪರಿಪೇಱಲೇಱೆ ತಳಿರುಯ್ಯಲನಾ ಖಚರೀಜನಂಗಳೊಳ್
ರೂಪಿಡೆ ತನ್ನ ರೂಪ್ರೊಲಿದು ಪಾಡಿದಳಚ್ಯುತನಂಕಮಾಲೆಯಂ ೩೨೪

(ಜಗನ್ನಾಥವಿಜಯಂ ೧೬-೧೪೪)

ಬೀಱುದುದೊಂದೆ ಬಾಯಿನಮೆ ಬಾಲಕಿ ಬಾಲಕಿಯರ್ಗೆ ಗಾಡಿಯಂ
ನೀಱರ ಕಣ್ಗೆ ಸೋ[2]ಲ್ತ[2] [3]ಶ್ರುತಿಗಿಂಚರ[3]ಮಂ ನನೆವಿಲ್ಗ ಪಾಂಗಮಂ
ಬಾಱನೆಯಂಬನಾಸ್ಯರುಚಿ[4]ಯಿಂ[4] ನವಚಂದ್ರಿಕೆಗಿಂಪನಾಳ್ದ ತಂ
ಪಾಱದ ಬಾಯ ಕಂಪನೆಳದುಂಬಿಗೆ ಬೀಱುತಮುಯ್ಯಲಾಡಿದಳ್ ೩೨೫

(ಲೀಲಾವತಿ ೨-೩೯)

ತುದಿಕೊಳಿಸಿರ್ದ ವಾಮಚರಣಂ ಮಣೆಯಂ ಬಲದಂಘ್ರಿ ಮೆಟ್ಟಿ ಮಿಂ
ಚಿದ ತೊಡೆ ರಜ್ಜುವಂ ಪಿಡಿದ ತೋಳಮೊದಲ್ ಪೊಗರಂ ತುಳಂಕೆ ಸೂಂ
ಕಿದ ಮೊಲೆಯೊಡ್ಡು ಕೊಂಕಿ ನಿಮಿರ್ದೊಳ್ನಡು ಕಣ್ಗೊಳಿಸನ್ನಮುಯ್ಯಲೇ
ಱಿದಳಮೃತಾಂಶುವಕ್ತ್ರೆ ಕುಸಿದೇಱಿಸೆ ಮನ್ಮಥನಿಕ್ಷುಚಾಪಮಂ ೩೨೬

(ಅನಂತನಾಥಪುರಾಣಂ ೮-೪)

ಕಡೆಗಣ್ಣಿಂದಿಸುವಂತೆ ಚಂದ್ರಕರಮಂ ತಂಗಾಳಿಯಿಂ ಜೋಲ್ವ ಪೂ
ಮಿಡಿಯಂ ಜೊಂಪಿಸುವಂತೆ ಮುದ್ದುಮೊಗದಿಂ ಪೂರ್ಣೇಂದುಬಿಂಬಕ್ಕೆ ಥಾ
ಟಿಡುವಂತೆಲ್ಲರ ಧೈರ್ಯಮಂ ಮೊಲೆಯ ಬಿಣ್ಪಿಂ ನುರ್ಗಿ ನೂಂಕಲ್ಕೆ ಧೀಂ
ಕಿಡುಪಂತಾಡಿದಳುಯ್ಯಲಂ ತರುಣಿ ತಂಪಳ್ ಕಾಮನಿಂ ಪುಯ್ಯಲಂ ೩೨೭

(ಅನಂತನಾಥಪುರಾಣಂ ೮-೬)

ಇವಳೀ ಲೋಚನಮೆನ್ನ ಬಾಣಮಿವಳೀ ಪುರ್ವೆನ್ನ ಪೂವಿಲ್ಲು ಮಾ
ಯ್ದವಳೀ ಸೋರ್ಮುಡಿಯೆನ್ನ ಕೇತನದ [5]ಚೆಲ್ವಂ ಕೊಂಡೊಡೇನೊಂದು[5] ದೋ
ಷವೆ ಎನ್ನೋಪಳ ರೂಪನೀಕೆ [6]ಗೆಲಲೇಕೆಂದಂಗಜಂ[6] ಕಟ್ಟಿ ತೂ
ಗುವಪೋಲ್ ತೂಗಿದನುಯ್ಯಲೇಱಿಸಿ ವಿಟಂ ವಿಭ್ರಾಂತೆಯಂ ಕಾಂತೆಯಂ ೩೨೮

(ಲೀಲಾವತಿ ೨-೪೧)

ತೂಗಿ ನಿಜೇಶನಾ ಸೊಬಗನಬ್ಬಿಸೆ ನೋಟ್ಪವರುತ್ತಮಾಂಗಮಂ
ತೂಗಿ ತಗುಳ್ದು ನೋಟ್ಪ ವಿಟಕೋಟಿಗೆ ಮನ್ಮಥನಾತ್ಮಬಾಣಮಂ
ತೂಗೆ ಪೊದಱ್ದ ಮಾಂದಳಿರ ತೋರಣಮಂ ಸುಱಿತಪ್ಪ ತಂಬೆಲರ್
ತೂಗೆ ವಿಲಾಸದಿಂದೆ ಪೊಸಪೊಂಬೆಸದುಯ್ಯಲನೊರ್ವಳಾಡಿದಳ್ ೩೨೯

---

1 ದೆಸಲ್ ಜ (ಅ) 2 ಲ್ತು (ಖ) 3 ಸುತಿಗಿಂದೊಳ (ಅ) 4 ಯಂ (ಅ) 5 ಚೆಲ್ವಂ ಕೊಂಪನೆನ್ನೊಂದು (ಪಬ) 6 ಸೆಳೆದಳ್ಗೇಕೆಂದಜಂ (ಖ ಬ)

ನೆರೆದಳಿ ಪಾಱುವಂತಿರೆ ಕುರುಳ್ ಮೊಲೆಗಳ್ ಪೊಣರ್ವಕ್ಕಿ ಪಾಱುವಂ
ತಿರೆ ಪೊಳೆವಕ್ಷಿಗಳ್ ಚಳಚಕೋರಯುಗಂಗಳೆ ತಳ್ತು ಪಾಱುವಂ
ತಿರೆ ಶಿಖಿ ಪಾಱುವಂತಿರೆ ಬಟಿಲ್ಮುಡಿ ತಾನಲರಂಬು ಪಾಱುವಂ
ತಿರೆ ಮಿಗೆ ಕೀೞಿ ಪಾಱಿ ಗಗನೇಚರಿಯಂತೊಲೆದುಯ್ಯಲಾಡಿದಳ್ ೩೩೦

(ಲೀಲಾವತಿ ೨-೩೮)

ಸಿರಿಯ ವಿಳಾಸಮಂ ಶಚಿಯ ಸಂಪದಮಂ ರತಿಯೊಂದು ರಾಗಮಂ
ಗಿರಿಜೆಯ ಗಾಡಿಯಂ ಮದನ ಕೇಳ್ದೆಳಸುತ್ತಿರೆ ಕದ್ದನಿಲ್ಲ ಮೈ
ಸಿರಿಯೆಡೆಗೊಂಡನೇ ಕಱಿಯ ಚಂದ್ರಮ ಚಂದ್ರಿಕೆ ಚೈತ್ರದಿಂದೆ ಪೀ
ವರಕುಚೆ ತೋರಣಂ ನುಗುಳ್ದು ಗೆಲ್ದಪಳೆಂಬಿನಮುಯ್ಯಲಾಡಿದಳ್ ೩೩೧

(ಅನಂತನಾಥಪುರಾಣಂ ೮–೭)

ಇದು ನಿನ್ನೀಯೆಣನೆನ್ನೀಕ್ಷಣಕೆ ಸೆಣಸಿ [1]ತಳ್ಪೊಯ್ದು ನಿಂದಿರ್ದ[1] ದರ್ಪ
ಕ್ಕಿದು ನಿನ್ನೀಯಾಲವೆನ್ನೀಯಧರದಳದೊಳಾದೀರ್ಷೆಯಿಂ ಪಣ್ತು ಗರ್ವ
ಕ್ಕಿದು [2]ನೀನೆನ್ನಾ[2]ಸ್ಯದೊಳ್ ಮಚ್ಚರಿಸುವ ಮಱುಕಕ್ಕೆಂದು ಕಾಲ್ಗಾಲೊಳೀವಂ
ದದೆ ಚಂ[3]ದ್ರಂಗುತ್ತ್ರು[3]ಹಾರಂಗಳನೊದೆದೊಲವಿಂದುಯ್ಯಲಾಡುತ್ತುಮಿರ್ದಳ್ ೩೩೨

(ಲೀಲಾವತಿ ೨-೪೦)

ನಯನಮರೀಚಿಯುಂ ಕಬರಿಕಾಂತಿಯುಮಿರ್ದೆಸೆಗಿಂದ್ರನೀಲಮಾ
ಲೆಯ ವರಮೌಕ್ತಿಕಾವಳಿಯ ರಜ್ಜುಗಳಂತಿರೆ ಚಂದ್ರನುಂ ರತಿ
ಪ್ರಿಯನುಮದೇಂ ತೊಡರ್ಚೆ ಪಿಡಿದೋಜೆ ವಿರಾಜಿಸೆ ತೂಗುವಂಗಭಂ
ಗಿಯೊಳೊಲೆದುಯ್ಯಲಾಡಿ ಕಡು ಬಾಡಿಸಿದಳ್ ವಿಟರಂತರಂಗಮಂ ೩೩೩

ರತಿಯುಂ ಕಾಮನುಮಂಬರೇಚರವಿಲಾಸಶ್ರೀಯನೊಲ್ದಂತೆ ಹೃ
ತ್ಪತಿ ಕುಳ್ಳಿರ್ದೆಡೆಗೊ[4]ಟ್ಟೊಡಂದು ತೊ[4]ಡೆಯಂ ತಳ್ತೀಱಿ ನಲ್ಲಳ್ ಪ್ರಭಾ
ಪ್ಲುತನೇತ್ರಂ ತೆರೆ ಸುತ್ತೆ ಪೀಠಮಣಿಮಂಚಂ ಜೆಲ್ವನಾಗುಯ್ಯಲಂ
ತತರಾಗಾಮೃತವಾರ್ಧಿಯೊಳ್ ಮರಲೆವಿಟ್ಟೀಸಾಡುವಂತಾಡಿದಳ್ ೩೩೪

(ಅನಂತನಾಥಪುರಾಣಂ ೮–೫)

ಪವಳದಿನಿಂಗಡಲ್ ಶಫರದಿಂ ಕೊಳನುನ್ಮದಭೃಂಗನಾದದಿಂ
ದವಿರಳಪುಷ್ಪಭೂಜಮೆಸೆವಂತಿರೆ ಚಂದ್ರಿಕೆ ರತ್ನಭೂಷಣಾಂ
ಶುವಿನಲರ್ಗಣ್ಣ ಮಾರ್ಪೊಳೆಪಿನಿಂ ಮೃದುಗೇಯದಿನೊಯ್ಯನುಯ್ಯಲಾ
ಡುವ ಲಲಿತಾಂಗಿ ತನ್ನೆಡೆಗೆ ನೀಱರ ಚಿತ್ತಮನುಯ್ಯಲಾಡಿದಳ್ ೩೩೫

---

[1] ತಾಂ ಜೆರ್ಜೆ ಸೋೞಿಸ್ಪೊಂದು (ಅ) [2] ನಿನ್ನೀನಾ (ಖ ಬ) [3] ಪ್ರಾಂಶುಪ್ರ (ಖ ಚ)
[4] ಟ್ಟಬಟ್ಟಡೊ (ಅ)

ನೋಡುವನೇಕ ಸದ್ವಿಟಜನಂಗಳ ಪೆಣ್ಗಳ ಕಣ್ಗಳಾಡೆ ಕೊಂ
ಡಾಡುವ ತತ್ಸಖೀಜನದ ಚಾಗದ ಭೋಗದ ರಾಗವಾದೆ ತೂ
ಗಾಡುವ ಬಾಲಕೀಪ್ರಜನ ಕಂಕಣಝುಕ್ಕಂತಿ ಝೋಂಕನಾಡೆ ತಾ
ನಾಡಿದಳುಯ್ಯಲಂ ಮುಖಶಶಿಪ್ರಭೆ ಮುಚ್ಚಿ ಮುಸುಂಕೆ ಚಂದ್ರನಂ ೩೩೬
(ಗಿರಿಜಾಕಲ್ಯಾಣಂ ೪-೧೫೯)

ಏಱಿದ ಮಣೆಯುದಯನಗಂ
ತೋಱಿದ ಮುಖಬಿಂಬವಿಂದುಬಿಂಬಮುಪಾಂಗಂ
ಮಿಾಱಿದ ಚಂದ್ರಿಕೆಯೆನೆ ಕಳೆ
ಯೇಱಿದ ಪಡಿಚಂದ್ರನಂತೆ ಸೌಂದರಿಯೆಸೆದಳ್ ೩೩೭
(ಗಿರಿಜಾಕಲ್ಯಾಣಂ ೪-೧೫೮)

ದುಗುಲಮನುಟ್ಟು ತೊಟ್ಟು ಪೊಸಮುತ್ತನೆ ಚಂದನದಣ್ಪನಿಕ್ಕಿ ಮ
ಲ್ಲಿಗೆಯ ಸರಂಗಳಂ ಮುಡಿದು ಚಂಪಕಮಾಲೆಯನೆತ್ತಿ ಮೇಗೆ ತುಂ
ಬಿಗಳೆಡೆಯಾಡದಂತಱಿಯಲಾಗದವೋಲ್ ನವಚಂದ್ರಿಕಾಮರೀ
ಚಿಗಳೊಡಗೂಡಿ ಪೋದಳಭಿಸಾರಿಕೆ ಮುತ್ತಿನ ಬೊಂಬೆಯಂದದಿಂ ೩೩೮
(ಲೀಲಾವತಿ ೨-೩೬)

ಅಂಗಜನೈದು ಶರಂಗಳ ಬಂದ ಬ
ನಂಗಳ ಪುಟಿಲ ತಳಿರುಯ್ಯಲಚ್ಚವೆ
ಳ್ದಂಗಳ ಮೇಲೆ ಸಿರಿ ನಿಲ್ಕೆ ೩೩೯
(ಲೀಲಾವತಿ ೨-೩೪-೧)

ಮನಮನಂಟುವ ರೂಪು ದನಿ ನಗೆ ಮೆಲ್ಪು ತಂ
ಪನುಗುಣಮುಳ್ಳ ವಧುವಿರೆ ಬೇಱಿ ಪೂ
ವಿನ ಸರ[1]ಲೇ[1]ಕೆ ಮದನಂಗೆ ೩೪೦
(ಲೀಲಾವತಿ ೨-೩೪-೨)

ಜಾತಿಸೂಳೆಗೆ ರಣಭೀತನ ಪುಸಿನುಡಿ
ವಾತನ ಖಳನ ಕೆಳೆಯನ ಬದಗನ
ಬೂತಿನ ನೂತು ದಿಟಮುಲ್ತು ೩೪೧
(ಲೀಲಾವತಿ ೨-೩೪-೩)

ಪತ್ತಿದ ಜೂಜಗರ ಚಿತ್ತವ ಕಿಡಲೀಯ
ದಿತ್ತುದೆ ಕೋಟ ತನಗೆಂಬ ಸೂಳೆಯ
ಓತ್ತಿಲೊಳಿರದೆ ಸುರಭೂಜ ೩೪೨
(ಲೀಲಾವತಿ ೩-೩೪-೪)

1 ಲದೇ (ಅ ಖ)

ಎಱಗಿಸುವುದು ಗೆಟ್ಟು ಪೆಱರ್ಗೆ ತಾನೆಱಗೆ ಪೊ
ಕ್ಕಿಱುಯಲೆ ಪೋಗಿ ಮೂಗರಿವಡೆದರ
ತೆಱನಪ್ಪುದೆಲಗೆ ಬೆಲೆವೆಣ್ಣೆ ೩೪೩

(ಲೀಲಾವತಿ ೨-೩೪-೫)

[1]ನಯವಿದನೊಪ್ಪುವ ಬಿಯಕಾಱನೊಳ್ಳಿದ
ಪ್ರಿಯತಮನಾಗೆ ತನ್ನ ಮುನ್ನೋಂತ ನೋಂ
ಪಿಯ ಫಲವ್ವೆಸೆ ಬೆಲೆವೆಣ್ಣೆ ೩೪೪

(ಲೀಲಾವತಿ ೨-೩೪-೮)

ಕೆಡುವುದು ಕುಡದೊಡೆ ನಡೆಯದು ಪಿರಿದೀಯೆ
ಸೊಡಗರ್ಗುಡಿಗೆಣ್ಣೆಯೆಱೆವಂತೆ ಬೆಲೆವೆಣ್ಗೆ
ಕುಡುವುದು ಹದಕೆ ಚದು[2]ರಿ[3]ಗಂ ೩೪೫

(ಅನಂತನಾಥಪುರಾಣಂ ೮-೨೬)

ಕಂಪೋಡಿದಲರ್ಗಳನಿಂಪೋಡಿದೊಲುಮೆಯುಂ
ಸಂಪತ್ತು ಪೋದ ಬೊಜಗನ ಪಿಡಿದಿರ್ಪ
ಗಾಂಪು ಬೇಡಲೆಗೆ ಬೆಲೆವೆಣ್ಣೆ ೩೪೬

(ಲೀಲಾವತಿ ೨-೩೪-೭)

ನೆಲೆಮೊಲೆಯುಳ್ಳಿನಂ ನೆಲೆಯಕ್ಕು ಪೋಪರ್ಗೆ
ಎಲೆ ಪಣ್ತು ಬಿರ್ದ ಬಟ್ಟೆಯ ಮರನಂತೆ
ಮೊಲೆ ಬಿರ್ದ ಬೞಿಕೆ ಬೆಲೆವೆಂಡಿರ್ ೩೪೭

(ಲೀಲಾವತಿ ೨-೩೪-೯)

ಪರಿಹಾಸಮೊಪ್ಪುವಾದರ ನೆಲೆ ಗೀತವು
ಕ್ಕರಗೊಟ್ಟೆಯಿಲ್ಲದಿರೆ ನಾಡ ಕೋ[2]ರಿ[3]ಯ ಕೊ
ಟ್ಟರವದು ಸೂಳೆವನೆಯಲ್ತು ೩೪೮

(ಲೀಲಾವತಿ ೨-೩೪-೧೦)

ಅನುವಿಪ ತಾಯ ಮನ್ನಿಸುವ ತಂದೆಯ ಕಾಪ್ಪಿನೊಳಿಕ್ಕೆಗುಟ್ಟುವ
ಕ್ಕನ ಪದಪೆತ್ತಿ ಬೈವ ಕಿಱುದಂಗಿಯ ಕಣ್ಣೊಳೆ ಕೀೞು ಕಲ್ಪಿಪ
ಣ್ಣನ ಬಿಯವಿಲ್ಲದವ್ವಳಿಪ ತಮ್ಮನ ನೆತ್ತಿಗೆ ಮೆಯ್ಯನೊಡ್ಡಿ ನಿ
ನ್ನನೆ ಪಿಡಿದಿರ್ದ ನಲ್ಕೆಗಿದು ತಕ್ಕುದೆ ನಲ್ಮೆಗೆ ದೋಷಮಾಗದೇ ೩೪೯

---

[1] ಬಿಯಕಾರಸೊಪ್ಪುವ ಪ್ರಿಯತಮನಾಗೆ ಪೆ
ರ್ಮೆಯ ಬೆಳಸು ಪಳಮಾ ಪೆಣ್ಣು ನೋಂತ ನೋಂ
ಪಿಯ ಫಲಮೆಲಗೆ ಬೆಲೆವೆಣ್ಣೆ (ಅ)

[2] ರಿಂ (ಖ ಬ) [3] ಟಕೆ (ಅ)

ಅಗಿದೆನಗಿಂತು ಸಂಜೆಯನೆ ಸಾಧಿಸಿ ಸೂರುಳಿದಾಗಳೇಂ ಗಳೂ
ಳಿಗವೆನಗಿಲ್ಲ ಪೊೞ್ತು ಗುಣದಿಂ ನಿನ[1]ಗಾಂ ನೆಱೆಯೊಲ್ದೆ[1] ಕಾವನಾ
ಣೆ ಗಡೆಳಮಾವಿನಾಣೆ ಗಡ ಮಲ್ಲಿಗೆಯಾಣೆ ಗಡಿಂದುಬಿಂಬದಾ
ಣೆ ಗಡ ಬಸಂತನಾಣೆ ಗಡ ಬ[2]ಲ್ಲಡೆ ನಾನಱಿಂಗಂಡಳೆಂಬುದಂ[2] ೩೫೦

(ಲೀಲಾವತಿ ೨:೫೬)

ನೋಡೆನೆ ಕಣ್ಗಳಂಗವಿಸಲಾರ್ಪೊಡೆ ಗಂಡರ ಗಾಡಿಗೊಲ್ದು ಮಾ
ತಾಡೆನೆ ಬೆಂದ ಬಾಯ್ ಪೆಱರ್ಗೆ ಮುಚ್ಚಿ ಮುಸುಂಕಿದೊಡಿಚ್ಚೆಕಾಱರೊಳ್
ಕೂಡೆನೆ ತೋಳ್ಗೆ ಕೊಕ್ಕರಿಕೆ ಪುಟ್ಟಿದೊಡೆನ್ನಯ ಲೇಸನೆನ್ನೊಳ
ಱ್ಯಾಡಿಪುದೞ್ತಿಯೇ ಹರಸಿ ಹುಟ್ಟಿದೆನೇ ನಿನಗೆಂದು ವಲ್ಲಭಾ ೩೫೧

(ಅನಂತನಾಥಪುರಾಣಂ ೮–೨೭)

ಒಡಲುಂ ಜೀವಮುಮೊಂದಿದಂ[3]ತೆ ಮಲರುಂ ಕಂಪುಂ ಮಲರ್ದಂತೆ ಓ[3]
ತೊಡಗೂಟಂ ಸಮಸಂದ ನಮ್ಮೊಳಗೆ ತಪ್ಪಂ ಮಾಡ್ಪಿ ನಿನ್ನೊಂದು [4]ಸೈ
ತಿಡುತಿರ್ಪಾನಿನಿತೆಯ್ವದೇಂ[4] ಕುಟಿಲ ಸೂ[5]ರು[5]ಳ್ ನಲ್ಮೆಯೇ ನಲ್ಮೆಯು
ಳ್ಳಡ[6]ದೇಕಪ್ಪುದು ವೀಣೆಯಂ ಪಱಿಯೆ ಪಾಡುಂ ತೀರ್ದದಿಂ[6] ಸಾಲದೇ ೩೫೨

(ಅನಂತನಾಥಪುರಾಣಂ ೮–೧೭)

ಮನೆಗೆಲ್ಲಂ ಪಗೆಯಾದೆನೞ್ತಿಗೆ ಕರಂ ಗೆಂಟಾದೆನಿಂ ಮೆಚ್ಚಿದಂ
ಗನೆಯ[7]ರ್ಗೇೞ್[7]ದಳಾದೆನೋಪ ಗುಱಿಯಾದೆಂ ಪಂಚಬಾಣಕ್ಕೆ ಪ
ದ್ಮಿನಿಯಾಪೆಂ ವಿಧುವಿಂಗೆ ನಿನ್ನ ಕತದಿಂ ಕೇಳೞ್ತಿಕಾಱಂಗೆ ಕೂ
ರ್ತೆನಗಿಲ್ಲಿಂ ಪಿರಿದಕ್ಕುಮೆಂದು ಸುರಿವಳ್ [8]ಭೋರೆಂದು[8] ಬಾಷ್ಪಾಂಬುವಂ ೩೫೩

(ಲೀಲಾವತಿ ೨–೬೧)

ನಸು ನಿಮಿರ್ದಿರ್ದ ಬಾಯ್ ನಿಮಿರ್ದ ಗೋಣೆವೆಯಿಕ್ಕದ ನೋಟಮೊಯ್ಯನೊಂ
ದೆಸೆಗೊಱಗಿರ್ದ ಮೆಯ್ ಜಘನದಲ್ಲಿಯ ಕೈ ಮನವಟ್ಟ ಚೇಷ್ಟೆ ಕ
ಣ್ಗೆಸೆದಿರೆ ಸುಯ್ಯಲುಂ ಮಱೆವ ಚಿತ್ರದ ಪೆಣ್ಣವೊಲೊಂದು ಬಾಗಿಲೊಳ್
ಸಸಿಮುಖಿ ನೋಡುತಿರ್ದಳಿನಿಯಂ ತಡೆದಿರ್ಪೊಡೆ ಬರ್ಪ ಬಟ್ಟೆಯಂ ೩೫೪

(ರಸರತ್ನಾಕರಂ ೨೬೩)

ಬಂಬಲಬಾಡಿ ಮುಂಬಗಲನೆಯ್ದಿದ ನೆಯ್ದಿಲವೋಲ್ ಕುಮುಳ್ಗಳಾ
ತುಂಬಿಯ ಮಾಲೆವೊಲ್ ಪೊೞೆಯೆ ದೂರಿಸಿ ತನ್ನನೆ ಕಣ್ಣ ನೀರ ಫ

---

1 ಗೋೞಲ್ದುದು ಮಾತೆ (ಅ) 2 ಲ್ಲೊಡವಾನಱಿಂಗಂಡನೆಂಬುದಂ (ಅ) 3 ತಿರಲು ಕಂಪುಂ ಪೂವರಲ್ದಂತಿರೋ (ಅ) 4 ಬಾಯ್ವಿಡ ವೀಸಾದಮಿಡ್ಯೈವದೇ (ಅ) 5 ಳ್ಗ (ಖ ಬ) 6 ದು ನಾಳಿಯೆ ಬೀಣೆಯುಂ ಪಱಿದು ಪಾಡುತ್ತಿರ್ದುದು (ಖ ಬ) 7 ಗೊರ್ಳ್ಳಿ (ಅ) 8 ಬಾಱಿಪ್ಪ (ಕ ಖ ಬ)

ಪೂರ್ಣಂಬುವ ಕಾಱ್ಪುರಂಗಳೊಳೆ ತೇಂಕುವ ಕಾಂತೆಯನೆಯ್ದೆವಂದು ಚಂ
ದ್ರಂಬೊಲಲರ್ಚಿದಂ ಕರದಿನಪ್ಪಿ ಕಲಾನಿಳಯಂ ಮನಃಪ್ರಿಯಂ ೩೫೫

ನುಡಿದಂ ದೈನ್ಯದ ಮಾತನಾತನಿರದೆಟ್ಟಿದಳ್ ಮೌನದಿಂ ಮುಗ್ಧೆ ಕಾ
ಲ್ವಿಡಿದಂ ವಲ್ಲಭನೋಪಳೆದ್ದೊದೆದು ಪೋದಳ್ ವಿಱಾಜಿದಳ್ ಬಲ್ಮೆಯಿಂ
ಪಿಡಿದಾತ್ಮೇಶ್ವರನಿಕ್ಕಿದಂ ಕೊರಲೊಳೊಂದಂ ಹಾರಮಂ ಕಾದಲಳ್
ನಡುಗುತ್ತೆಕ್ಕಸರಕ್ಕದೊಂದು ಸರಮಂ ಬಾಷ್ಪಾಂಬುವಿಂದಿಕ್ಕಿದಳ್ ೩೫೬

(ಅನಂತನಾಥಪುರಾಣಂ ೮-೯)

ಮುಳಿವೆಂ ನಾನಾರ್ಗೆ ನನ್ನಂ ತಿಳಿಪುವ ಪಿರಿದುಂ ದಂದುಗಂ ಬೇಡವಿನ್ನಾಂ
ಮುಳಿಯೆಂ ನಿನ್ನಾಣೆ ನಿನ್ನೀ ನವನಖಪದಮಂ ಕುಂಕುಮಾದ್ರಾಂಕಿತೋರ
ಸ್ಥಳಮಂ ಸೊಪ್ಪಾದ ಬಿಂಬಾಧರಮನಿನಿತುಮಂ ಕಂಡು ಕಂಡಿನ್ನುಮಿನ್ನೇಂ
ಮುಳಿಸಿನ್ನೇಂ ಲಲ್ಲೆಯಿನ್ನೇಂ ಪುರುಡುಗಳೆನುತುಂ ತೀವಿದಳ್ ಕಣ್ಣನೀರಂ ೩೫೭

(ರಸರತ್ನಾಕರಂ ೧೪೫)

ಇನಿತುಂ ನಂಬಲೆ ಮನ್ಮನೋರಮಣಿ ನಿನ್ನೆನ್ನಂತರಂ ನೋಟಿಪ್ಪೊಡೀ
ತನು ಬೇಱಿಲ್ಲದೆ ಜೀವಮೊಂದೆಮಗೆನಿಪ್ಪೀ ಮಾತು ತಾನೀಗಳೋ
ಪನೆ ಕೇಳ್ ನಿಶ್ಚಯಮಾದುದಲ್ಲದೊಡೆ ನಿನ್ನೀ ಮೆಯ್ಯೊಳೊಂದಿರ್ದ ನೂ
ತನಮಾಗಿರ್ಪ ನಖಕ್ಷತವ್ಯಥೆಗೆ ಪೇಟಿನ್ನೀ ಮನಂ ನೋವುದೇ ೩೫೮

(ಶೃಂಗಾರರತ್ನಾಕರಂ ೩-೫೫)

ನೆಱೆ ಬಂದೀ ಮಧುವೆನ್ನನಂಗಭವನೆನ್ನಂ ಚಂದ್ರನೆನ್ನಂ ದಲೆಂ
ದಱಿಯೆಂ ಕೇವಳನೆನ್ನನೆಂದಱಿಯದಂದೀಗಳ್ ವಿಯೋಗಾರ್ತೆಯಂ
ನೆಱೆ ಬಂದೀ ಮಧುವೆನ್ನನಂಗಭವನೆನ್ನಂ ಚಂದ್ರನೆನ್ನಂ ಕೊಲಲ್
ತಱಿಸಂದಿರ್ದಪರಾತನೊಳ್ ನೆರಪು ನೀಂ ಶ್ರೀರೂಪಕಂದರ್ಪನೊಳ್ ೩೫೯

(ಲೀಲಾವತಿ ೭ ೪೪)

ಮುಳಿಯಲ್ವೇಡೆನ್ನನೇ ನೀಟ್ಟಿರಿಸದೆ ತಿಳಿಯೆಂದೆನ್ನನೇ ಬಾರನೇ ಮೇಣ್
ಕಿಳಿಪಲ್ ಬೋಳೈಸನೇ ಕಾಲ್ವಿಡಿಯನೆ [1]ಪಿ[1]ಡಿದೆಟ್ಟಿಪ್ಪಿಕೊಂಡಾಗ[2]ಳೀ[2]ಗಳ್
ಕೆಳದೀ ನೀಂ ಬಲ್ಲೆಯಿಂತೆಂದನುವಿಸಿದಪೆ ಬೇಸತ್ತೆನಾಂ ನಲ್ಲನಿನ್ನೀ
ಕೊಳಗಪ್ಪಂ ನೀನು[3]ಮಾಗಳ್ ಕೊಲುವ ಮದನನುಂ ಬಲ್ಲಿರಾನೆತ್ತ ಬಲ್ಲೆಂ ೩೬೦

(ಅನಂತನಾಥಪುರಾಣಂ ೮-೧೨)

ಮುನಿಸಂ ಮೆಯ್ತೋಱಿಸೆಂ ಕಂಡೊಡೆ ಕರಕರಿಸೆಂ ಪೊಯ್ದೊಡಂ ಬಯ್ಯೆನೇನೆಂ
ದನಸಂ ಮಾರ್ಕೊಳ್ಳೆನೀ ಸಾವಿನ ಸವಿಯಱಿ[4]ಯೆಂ ತಂದು ನೀನೊಮ್ಮೆ[4] ಕೂಡಾ

---

[1] ಪಿ (ಅ) [2] ಡೀ (ಅ) [3] ಮಾನುಂ (ಅ) [4] ಡೆಂ ಸಾಲದೇ ತಂದು (ಅ)

ತನಸಾತಂಗೀವ ಮುಯ್ಯಂ ನಿನಗೆ ಕುಡುವೆನೀಟಿಕ್ಕ ಪೋಗೆಂಬುದುಂ ಭೋಂ
ಕನೆ [1]ಬಂದೊಲ್ದಪ್ಪಿದಂ ಚುಂಬಿಸಿದನವನಿದಂ[1] ಕೇಳುತಿರ್ದಾತ್ಮನಾಥಂ ೩೬೧

(ಅನಂತನಾಥಪುರಾಣಂ ೮-೧೩)

ಅರಗಿಳಿ ಮಾತನಾಡಿದುದು ನಿನ್ನೊಡನಂತೆಳಸುತ್ತಮಿರ್ದೆ ನೀಂ
ಪುರುಳಿಯ ಕೂಡೆ ಪಾರಿವದ ಲಲ್ಲೆಗೆ ಭುಲ್ಲಿಸುತಿರ್ದೆಯೆಂದು ಮುಂ
ದರಗತಿಯಿಂದೆ ಹಂಸನೊಡನಾಡಿ[2]ದಳೆಂ[2]ದತಿಕೋಪದಿಂ ಪ್ರಿಯಂ
ಪುರುಡಿಪೆ ನಕ್ಕು ಚುಂಬಿ[3]ಸಿದೆನಾನವನೊಳ್ ನಗುತುಂ ತಳೋದರೀ[3] ೩೬೨

(ಅನಂತನಾಥಪುರಾಣಂ ೮-೪೬)

ಇನಿಯಂ ಕೂರ್ಮೆಯ ಕೂಟದೊಳ್ ಗುರು ಕಳಾಭಿಪ್ರಾಯದೊಳ್ ತಂದೆ ತಾಯ್
ತನುಸಂಸ್ಕಾರವಿಳಾಸದೊಳ್ ಸಖಿ ಸುಖಾಳಾಪಂಗಳೊಳ್ ಬಂಧು ನೆ
ಟ್ಟನೆ ಮುಟ್ಟಿರ್ದೆಡೆಯೊಳ್ ವಿಧಾತ್ರನೆನಗಿನ್ನೇೞೇೞು ಜನ್ಮಕ್ಕಮಾ
ತನೆ ಚಿತ್ತಪ್ರಿಯನಕ್ಕೆ ಸೂಕ್ತಿನಳಿನೀಹಂಸಂ ಸರೋಜೇಕ್ಷಣೇ ೩೬೩

(ಅನಂತನಾಥಪುರಾಣಂ ೮-೪೭)

ನನೆಯಾಗಿರ್ದಾಂ ಮನೋನಾಥನ ಸಿರಿಮುಡಿಯೊಳ್ ವಕ್ಷದೊಳ್ ಹಾರಮಾಗಿ
ರ್ದು ನಿತಂಬಾಭಾಗದೊಳ್[4]ವೇಷ್ಟಿ[4]ಸಿದ ದುಗುಲಮಾಗಿರ್ದು ಸರ್ವಾಂಗದೊಳ್ ಚಂ
ದನದಣ್ಪಾಗಿರ್ದು ಬಿಂಬಾಧರದೊಳರುಣಿಮಚ್ಛಾಯೆಯಾಗಿರ್ದು ಕಾಯಲ್
ನೆನೆವೆಂ ನೋಡಕ್ಕ ತಳ್ತಪ್ಪಿದೊಡೆ ಪೆಱರ ಕಣ್ಣೇಱುನಾಶಂಕೆಯಿಂದಂ ೩೬೪

(ಅನಂತನಾಥಪುರಾಣಂ ೮-೧೬)

ಪದಪದನಾಗಿ ಪಾಂಗಱಿದು ಬರ್ದೆಯರಂ ತನಗಾಗುಮಾಡಲಾ
ಱದೆಯುಮಲಂಪು ಪೋಗೆ ಕುಡಲಾಱದೆಯುಂ ಬಸನುಂ ನಿಮಿರ್ಚಲಾ
ಱದೆಯುಮದೆಂತೊ ಕೆಮ್ಮನೆ ಕೆಲರ್ ಪುೞಿವಾಸಿಸರಕ್ಕಟಾ ಚದುರ್
ಚದುರೆನುತಿರ್ಪರಾ ಚದುರದೇಂ ಕರಿದೊ ಬಿಳಿದೋ ಕದಂಬಮೋ ೩೬೫

ಇತ್ತೊಡೆ ಬೀಟವೀಯದೊಡೆ ಕಾಟಮದುಂ ಬೆಲೆವೆಣ್ಗೆ ಬಾೞಿಕಂ
ಬತ್ತುವ ಬೀಟಮುಂ ಸುಡು ಪರಾ[5]ಕಿ[5]ಯ ನೋಂಪಿಯ ಗಂಡ[6]ರಿರ್ವರೊಳ್[6]
ಕತ್ತುರಿ ಕಪ್ಪುರಂ ತೊಡಿಗೆ[7][ನಾಱು][7]ವದಂಬುಲವಚ್ಚವಾಸಿಗಂ
ಸುತ್ತುವ ಬಣ್ಣಸಣ್ಣಮಿವು ಬೀಟದ ಕೂಟದ ಸುಗ್ಗಿ[8]ಯಲ್ಲವೇ[8] ೩೬೬

(ಅನಂತನಾಥಪುರಾಣಂ ೮-೪೮)

---

1 ಬಂದಂ ತಳ್ಪಿದಂ ಚುಂಬಿಸಿದನೊಲಿದು (ಅ) 2 ದೆಯಿಂ (ಅ) 3 ಸುವೆನಾನುಱುತಂ ಪೊಗಪಿದಾವನಂತವಂ (ಅ) 4 ಪಂಟಿ (ಅ) 5 ತ್ರಿ (ಅ) 6 ರಿಂವಕರ್ (ಅ) 7 ನಾಱ (ಕಖ) 8 ಯೆನ್ನಿರೇ (ಅ)

ಹರ[1]ದನ ಬಡ್ಡಿ[1]ಗೊಟ್ಟೊಡವೆ ರಾಜಕುಮಾರನ ತೇಜದೇಟ[3]ಗೆ ನಾಣ್
ಬಿರುದನ ಚಿತ್ರವಿದ್ಯೆ ಕವಿಪಂಡಿತರೋದಿನ ಕೊಂಕು ಚೆನ್ನಪೊಂ
ಗರ ಕುಡಿಮುಂಜೆಱಂಗು ನಿಡುಬ್ಬೆತಲೆ ಬಾಱಿತ್ತಿಯೆ ತೋರ್ಪುದಂತವಂ
ಕರಹದ ಸೂಳೆ ಸುತ್ತುವಳೊ ಕುತ್ತುವಳೋ ಮನೆವಾರ್ತೆ[2]ಗೆಯ್ವ[2]ಳೋ ೩೬೭

(ಅನಂತನಾಥಪುರಾಣಂ ೮-೪೯)

ಸೂಳೆಯಗುರ್ಳ್ಳದೇನೆಲವೊ ಕೂರದೊಡಂ ಕಡುಗೂರ್ತರಂದದಿಂ
ಮೇಳಿಸಿ ಗಂಡರಿಂ ಪಡೆವುದರ್ಥಮನಲ್ಲದೊಡೆಮ್ಮ ಪೆರ್ಮೆಗಂ
ಪಾಳಿಗಮೊಲ್ದು ಕೊಟ್ಟಪರೆ ಕೂರ್ತೊಡಮೇಂ ಬೆಲೆವೆಣ್ಗೆ ಬೇಟಮೇಂ
ತಾಳದಮಕ್ಕುಮೋ ಕಟಿವೆಯೋಗರಮಕ್ಕುಮೊ ತುಪ್ಪಮಕ್ಕುಮೋ ೩೬೮

(ಲೀಲಾವತಿ ೨-೫೭)

ಹರದಂ ಲೆಕ್ಕಿಸುವಂ ಧರಾಧಿಪತಿ ತೇಜಂದೋಱುವಂ ಸಂದ ನಾಣ್
ಬಿರುದರ್ ಕಿತ್ತಲಗೆತ್ತಿ ಪೀವರಿಸುವರ್ ವಿದ್ವಾಂಸನೋದಿಂಗೆ ಬೋ
ಸರಿಸಲ್ ಪೊಂದುವನೂಳಿಗಕ್ಕೆ ನಡೆವಾತಂ ಸಲ್ಗೆಯಂ ಪೇಟಿಸೀ
ಪರಿ ತಾ ಲೋಭದ ಜಾತಿಯಿಚ್ಚೆಯಱಿದೀವಾತಂ ವಿಟಂ ಸದ್ವಿಟಂ ೩೬೯

ಎತ್ತಿದ ಬರ್ದೊ ಮೇಣ್ ಬವಗೊ ಪೇೞಿಮಿದೀಕೆಯ ಕೂರ್ಪೊ ಮೆಲ್ಪೊ ಚಿ
ಕ್ಕೆತ್ತಿಗೆ ಕೊಟ್ಟವಂ ಕುಡುವನಾಗಳೆ ಪೞಿಕ್ಕೆಗೆ ಪೞಿಕ್ಕೆಗರ್ಥಮಂ
[3]ತ್ರಿ[3]ತ್ರನೆ ನಣ್ಪಿನೊಳ್ ನಡೆವನಾ ಕಡುನಣ್ಪಿನ ಗಂಡನೋಹಿಯೊಳ್
ಪತ್ತುವ ನೋಹಿಗಿತ್ತವನೆ ಸಜ್ಜನಕಿತ್ತ[4]ವ[4]ನೆಂದು ಸುತ್ತುವಂ ೩೭೦

(ಲೀಲಾವತಿ ೨-೭೨)

ಬಿಯಮಂ ಬೇಡಿತನೀವರಗ್ಗದ ಬೊಜಂಗರ್ ಕೂರ್ತು ಕಣ್ಣಾಗಣದೊ
ತ್ತಿಯ ಮೇಲೊತ್ತೆ ಬರುತ್ತಮಿರ್ಪುದುಱಿದರ್ ಪೊಕ್ಕಾವಗಂ ಕೊಟ್ಟು ಕೋ
ಟೆಯುಮಂ ಕಾದೊಡನಿರ್ಪರಿಲ್ಲ ಪಡಪಿಂದೀ ಕೇರಿಯಂ ಬಿಟ್ಟು ಸೂ
ಳೆಯರೆಲ್ಲಂ ನೆರೆ ಪಳ್ಳಿವೋದರಿವಳೀ ಮಾಧುರ್ಯಮಿನ್ನೆಂತುಟೋ ೩೭೧

(ಲೀಲಾವತಿ ೨-೭೪)

ಮನೆವಾೞ್ ಸಲ್ವುದು ಕಾಮಧೇನು ಕಱಿದಂತೊಲ್ದೀಯಲುಂ ಬಿಚ್ಚತಂ
ಮನೆವಾೞ್ ಸಲ್ವುದು ಕಾಮದೇವನಳಿಯಂಜೊಕ್ಕಂತೆ ಸನ್ಮಾನದಿಂ
ಮನೆಯಂ ಮಕ್ಕಳುಮೊಪ್ಪುತಿರ್ಪುದು ಬಸಂತಂ ಭಾವನಾದಂತೆ [5]ಕಾ
ಮಿನಿಯಂ ನೋಂತಳೆ ದಲ್[5] ಮಗಳ್ ಪಡೆದಳೀಸೌಭಾಗ್ಯಮಂ ಭಾಗ್ಯಮಂ ೩೭೨

(ಅನಂತನಾಥಪುರಾಣಂ ೮-೨೪)

---

[1] ಹದನ ಬಟ್ಟೆ (ಖ ಬ) [2] ಗೀವ (ಅ) [3] ಬಿ (ಖಬ) [4] ಜೆ (ಖ ಬ)
[5] ಸಜ್ಜನಚಿಂತಾಮಣಿಯಂ (ಅ)

ಏಱಿಂದ ಜವ್ವನಂ ನಸು ಬೞಲ್ದುದು ಜೇಟದ [1]ಬೇಗೆ[1]ಯಿಂದೆ ಬೆಂ
ದಾಱಿದುದ್ದೈದೆ ಚಿತ್ರಮತಿಚಿತ್ರ[2]ರತಂ[2]ಗಳೊಳಿಚ್ಚೆಯಾಗಳುಂ
ನೀಱರನೀಗಳಾಯ್ದು ಅಸುತಿರ್ದ[3]ಪು[3]ವೀಕೆಯ ಕಣ್ಗಳೀಕೆ ಕಾ
ಯ್ದಾಱಿದ ಪಾಲವೊಲ್ ಸವಿಯನಿನ್ನುಪಭೋಗಿಸಲಾರ್ಗೆ ಮಾಡಳೋ ೩೭೩
(ಲೀಲಾವತಿ ೨-೯೦)

ಧನಮುಳ್ಳನುಮಿಲ್ಲದನುಂ
ಮ[4]ನದಾ[4]ಣ್ಮನುಮೊತ್ತೆಯಾಣ್ಮನುಂ ನೆರೆವೆಡೆಯೊಳ್
ತನಗೆ [5]ಸರಿ[5]ಯೆನಿಪ ಬರ್ದಿನ
ವನಿತೆ[6]ಗೆ ಸಲೆ[6] ಸಂದುದುಱಿದರೊಳ್ ಸಂದಪುದೇ ೩೭೪
(ಲೀಲಾವತಿ ೨-೮೨)

ಪಣಗೊಳ್ವಳ್ ಚೆಲ್ಲದಿಂದಂ ಚದುರನ ಚದುರಂ ಸೇಸೆಗೊಳ್ವಳ್ ರತಂ ತೋ
ರಣಮೆಂಬಂ[7]ತಿಕ್ಕಿ ಗೆಲ್ದು ಬ್ಬಸದ ಬೆ[7]ಸನಿಯುಂ ಕೂರ್ತನಂ ತೊಂಡಿನಿಂ ಕುಂ
ಟಣಿ ಮಾಳ್ಪಳ್ ಕೇಣದಿಂ ನಾಣೊಡೆಯನನೆಡೆಯೊಳ್ ನಿರ್ಧನಂ ಮಾಳ್ಪಳಿಂತೀ
ಗಣಿಕಾಸಂದೋಹದೊಳ್ ತೇಪೆಯೆ ಪುರುಷಗುಣಶ್ರೀಗಳಗ್ರಾ[8]ಹಿಯ[8]ಲ್ತೇ ೩೭೫
(ಲೀಲಾವತಿ ೨-೯೭)

ತೀಡುವ ಗಾಳಿಯಂ ಪಿಡಿದು ನೋಡುವ ಸಿಂಗಮನಾಗಳಂತೆ ನಾಯ್
ಮಾಡುವ ಬನ್ನಮೇಲೆ ಬಯಲಂಗವನಾಡುವ ಬೆಟ್ಟನಣ್ಣೆಕ
ಲ್ಲಾಡುವ ಚಂದ್ರನಂ ಪಿಡಿದು ಸೂಡುವ ಜೊಮ್ಮನನಾದೊಡಂ ಮರುಳ್
ಮಾಡುವ ಕಾಳುಗುಂಟಣಿಯರಾರುಮನೇಳಿಸಿ ಕಾಡದಿರ್ಪರೇ ೩೭೬

ಪೆಣಕಬಲಾರ್ಪರಾರ್ ಪೆಣಕೆ ಬಾಯಣಮುಳ್ಳೊಡೆ ಪೋದ ಜೀವಮುಂ
ಪಣಮನೆ ಬರ್ಕುಮಂತರದಿನೊಯ್ವ ಜವಂ ಪಣಮುಳ್ಳೊಡೊಯ್ವ ಕುಂ
ಟಣಿಯುರನೊಯ್ಯಲಾಜನಣಮೆಂಬಣಬಾರಕೆ ಸಂದ ಲೋಭಿಗುಂ
ಟಣಿಯುರನಾವ ದೈವ ಮುಱಿಗುಂ ನೆಱೆಯಲ್ಕವರಂತು ಗಂಡರಾರ್ ೩೭೭

ಅಱಿವುದು ಮೂಗನಿಕ್ಕುಟಿಱುಳೆ ಕೀಱ್ವುದು ಪಲ್ಗಳನೇಱು ಬಟ್ಟೆಯಾ
ಗಿರೆ ಕಿಱಿದೆಂಟು ಸೂಜಿ ಬಗಟೆ ಕೊಯ್ವುದು ಮುಂಡೆಯನುಟ್ಟ ಸೀರೆಯೊಂ
ದಱಿಪೊವೆದಿರ್ದುದಂ ಸುಲಿದು ಕೊಳ್ವುದು ಕುಂಟಣಿಯುಂ ಕುಟುಂಬದೊಳ್
ನೆರಪುವುದಲ್ಲದಂದು ಮುದುದೊತ್ತಿರ ಬಾಧೆಯೊಳಾರೊ ಬರ್ದಪರ್ ೩೭೮

ಕರೆಯದೆ ಕಾಡಿ ಕಂಟಿಸುವ ಕುಂಟಣಿಯುಂ ನೊಣಗಚ್ಚಿ ತಿಂಗೆ ಬಿಂ
ಗಿರಿಟೆ ಬಳಾರಿ ಬಾಧಿಸುಗೆ ಚಂಡಿಕೆ ನುಂಗುಗೆ ಮಿಱ್ತು ಕೂರ್ತು ಗು

1 ಬೆಂಕೆ (ಅ) 2 ತರಂ (ಖಬ) 3 ದೀ (ಖಬ) 4 ನೆಯಾ (ಖಬ) 5 ಮನೆ (ಖಬ) 6 ಯರೊಳ್ (ಖಬ) 7 ತೀಗ ಸೋಲ್ತೊರ್ಬಸದಬ (ಅ) 8 ಹ್ಯಮ (ಖಬ)

ಕ್ಕರಿಸುಗೆ ಕಾ[1]ಳಿ ಕೊಳ್ಗಿ[1]ಱಿಯಪಂ ಮುಱಿದಿಕ್ಕುಗೆ ಮಾರಿ ಭೈರವಂ
ಹರಹುಗೆ ಪೇೞಿಯುಂ ಪಿಡಿಗೆ ಪಾಳಜಿಗಾಂ ಮೊಗವಾರವೆಸ್ತ್ರವೆಂ ೩೭೯

(ಲೀಲಾವತಿ ೨ ೧೦೬)

ಮಾರಿ ಹೊಡೆದುಣ್ಗೆ ಕನ್ನೆಕು
ಮಾರಿಗೆ ಕುಱಿಯಾಗಿ ಬೇಳ್ಗೆ ಸಿಡಿಲೆಱಗುಗೆ ರಾ
ದ್ರೋರಗನೊರ್ಮೆಯೆ ನುಂಗುಗೆ
ಬಾರಿಸಲಾ ಬಿರುದ ನುಡಿವ ಮುದುಗುಂಟಣಿಯುಂ ೩೮೦

ಭಾವಿಪ ಸೇಽಪಾದರಿಪ ಪೇಳಿಪ ಮೇಳಿಪ್ರೊನಲ್ಪ ಗೆಲ್ಪ ಸೋ
ಲ್ವಾವರಿಪೇವಮುಂ ಪಡೆವ ಪೊತ್ತಿಪ ಜೊತ್ತಿಪಱಿಲ್ವ ನೇಲ್ವ ಮಾ
ಯಾವಿಗಳಪ್ಪ ಮುತ್ತಮುದುಗುಂಟಣಿಯರ್ಕಳ ಕೃತ್ರಿಮಂಗಳಂ
ಭಾವಕಚಕ್ರವರ್ತಿ ಕವಿಕೇಶವದೇವನೆ ಬಲ್ಲನುರ್ವಿಯೊಳ್ ೩೮೧

ಇಱಿದೇಱಿಮೊಱಿಂ ಗಂಡರೊ
ಳಱಿಪೆಂಬುದು ತನಗೆ ಮುತ್ತಮುದುಗೂಂಟಣಿ ತಾಂ
ಕಱಿವಣ್ ಮುತ್ತದ ಪಣ್ತೆಲೆ
ಪಱಿವಱಿಗೋಲ್ ಪಱಿದ ಭೇರಿ ನೀರ್ ತೆಗೆದ ಕೊಳಂ ೩೮೨

ನಗುವೊಡೆ ಪಲ್ ಕಱಿಲ್ದಪುವು ಡೊಳ್ಳಿನೊಳಪ್ಪುವ ಗಂಡರಟ್ಟಿಪರ್
ಪುಗುವೊಡೆ ಪಾಸಲುಂ ಪೊಡೆಯಲುಂ ನೊಲೆ ಸಾಲ್ವುವು ನಿದ್ರೆಯಲ್ಲಿ ಮೆ
ಲ್ಲಗೆ ತೊಡೆಮೇಲೆ ಬೀೞ್ವ ಮಱನಾಮಿ ಬೊಜಂಗತನಕ್ಕೆ ನೋಡೆ ಸೞ
ೞಗೆ ಕೊಡವೇಟ್ದರೀ ಪಱಿಬಳಾರಿಗೆ ಕೊಟ್ಟನದೊರ್ವನೊತ್ತೆಯಂ ೩೮೩

ಕಟ್ಟಿಗ ಪಲ್ಗಳಿಟ್ಟಿಜೆಯ ಕೀಣೆಗಳಿಂ ಕೊೞಿತನಾರ್ವ ಬಾಯ್ ಸುರು
ಳ್ದೊಟ್ಟಿದ ರೇಖೆ ಬಿಟ್ದಿ ಸಿಱಿಗೊಂಡ ಕುಚಂ ಸಱಿಗೊಂಡ ಪೆರ್ಬಸಿಱ್
ಬಿಟ್ಟಪುಗೆಟ್ಟ ತೋಳ್ ತೊಡೆ ತೆರಳ್ದ ಮೊಗಂ ನರೆ ಮತ್ತೆ ಮಾಣಳೀ
ಬಟ್ಟೆಯ ಚಿಕ್ಕಣಿಕ್ಕೆ ಪೊಸ ಬರ್ಬರ ಸೂಳೆಯರಾಳಿಗೊಂಬುದಂ ೩೮೪

ಕಾವುದು ದೇವ ಯಾಚಕನನಂಜದಿರಂಜದಿರೇಕೆ ನೇಲ್ವ ತೋ
ಳ್ವಾವಲೊ ಮತ್ತವಾರಣದ ಸೊಂಡಿಲೊ [2]ಕೋ[2]ದಿರ್ದೆವೃತ್ತಿನಿಂದೆ ಪೆ
ರ್ಬಾವೆರಡೊಡ್ಡುಗೊಂಡು ಪೊಱಮಟ್ಟವೊ ಪೋದೊಡೆ ಪೊಯ್ವುಪೆನ್ನ ನೋ
ವೋವತಿಭೀತಿಯಾದಪುದು ಸೂಳೆಯ ಸೋರ್ಮೊಲೆಗಂಡು ಭೂಪತೀ ೩೮೫

(ಲೀಲಾವತಿ ೨.೧೦೮)

ಸಿಡಿ ನಡೆಂಬೊತ್ತೆಯೇಂ ನಿನಗೆ ಸೀನೊಲಿದಿತ್ತುಡೆ ತೋಱ ಸೂಳೆಯಾ
ಪೆತ್ತೆ ಸುಡು ಕಾಣ ಕಣ್ಣೊಡೆಮರ್ವೆ ಪರೆಯುಂ ಪಿರಿದಬ್ಬೆ ನೀಮುಮೇಂ

[1] ೞಿಕೊಳ್ಳೆ (ಖ) [2] ಕಾ (ಅ)

ಪಡುವಿರೆ ಮೂರ್ಖ ಮುಪ್ಪೆ [1]ಮನಕಂ ನಿಮಗಂ[1] ಪೊಸವೆಂಡಿರಿರ್ದವೋಲ್
ಕುಪುವರೆ ಕಾಯ್ಗಳಿಂದಱಿಯ ಪಣ್ಣಿಸಿದೆಂಬುದ[2]ನೆಯ್ದೆ ಲೋಕದೊಳ್[2] ೩೮೬
(ಲೀಲಾವತಿ ೨-೧೨೫)

ಇದು ಚಿತ್ರಂ ಮೃದುಪಾದಪಲ್ಲವದ ಮೆಲ್ಪುಂ ನೋೞ್ಪೊಡೀ ಕೇಶಪಾ
ಶದ ನೀಳ್ಪಂ ಮೊಲೆಯಲ್ಲಿ ಲೋಚನದ ಬೆಳ್ಪಂ ಮಧ್ಯದಲ್ಪತ್ವಮು
ಪ್ಪುದ[3]ದಿಂ[3]ತೀ ಮುಡಿಯಲ್ಲಿ ಮಾನಿನಿ ಕರಂ ಲಾವಣ್ಯವಾರಾಶಿ ಬ
ತ್ತಿದೊಡಂ ಮೇಣ್ ತೆರೆ ಕಾಣಲಾದಪುದದೇಂ ನಿನ್ನೊಂದು ಸಾಮರ್ಥ್ಯಮೋ ೩೮೭

ಅಡರ್ದ ಕುಚದ್ವಯಂ [4]ಲಲನೆ[4] ಬಿ[5]ಟ್ಟಿ[5]ವಿವೇಕಿನೆ ಬರ್ದೆಯೆಂದಳಿಂ
ತಡಗಡಿಗೊಪ ನೀಂ ಸರಸಕಾಮಸಿಪಾಸದೊಳಿಟ್ಟ ಕೈಯನಿಂ
ಪಿಡಿದಿರೆ ತಮ್ಮೊಳಿಟ್ಟು ಸವಿದೋಱಿದ ದೂಸಱ[6]ನಿಂ[6]ದಹರ್ನಿಶಂ
ಕೆಡೆದಪುವಲ್ಲಿಗಾ ಸವಿಗೆ ಪೆರ್ಮೊಲೆಯಲ್ಲದೊ[7]ಡೇಕೆ ಬಿಡ್ದುವೋ[7] ೩೮೮
(ಲೀಲಾವತಿ ೨-೧೦೯)

ಮೊಲೆಗಳ್ ಬಿಟ್ಟುವಿದೊಪ್ಪದೆಂದು ಮನದೊಳ್ ಕಂಡಿರ್ದಳಿಲ್ಲೆಯ್ದೆ ಮುಂ
ದಲೆ ಬೆಳ್ಪೇಱಿದುದೆಂದು ನೊಂದು ಮನದೊಳ್ ಬತ್ತಿರ್ದಳಿಲ್ಲಿಂತು ಮು
ಪ್ಪಲೆದಾರ್ಪಂದವೊಲಾಗಿ ಮತ್ತಮೆನಗಂ ತಾಂ ಮೇಳಮಂ ತೋರ್ಪ ನಾ
ಣಿಲಿಯಂ ನೋಡವೊ ವೃದ್ಧೆಗೆನ್ನದೋರೆಯರ್ ಮೊಮ್ಮಕ್ಕಳಿಲ್ಲಾಗದೇ ೩೮೯

ನಂಬಿಸಲಾನೆ ಬಲ್ಲೆನಿದಿರಂ ಧನಮಂ ಪಡೆದಾನೆ ಬಲ್ಲೆನಿ
ನ್ನೆಂಬುದೆ ಲಜ್ಜೆ [8]ಹಾಗದ ಪಸುರ್ಮಣಿಯಂ ತೊಡವಿಲ್ಲದಂತು[8] ಬಾಯ್
ತಂಬುಲಮೆಂಬುದಂ ಪಡೆಯದಂತುಟಿ ಮಾಱುಡೆಗಾಣದಂ[9]ತುಮು[9]
ಟ್ಟುಂಬರಿಗೊಂಡು ತೇದಪುದು [10]ಜೀಟಮೊ ಪೇಱಿದು ದೈವಕಾಟಮೋ[10] ೩೯೦
(ಲೀಲಾವತಿ ೨-೧೧೬)

ಸತ್ತೊಡೆ ಪ್ರೋಕುಮಲ್ಲಪೆಪೆಯೊಳ್ [11]ಕಡಿವೋಕುಪೆ[11]ಜೇಂಟ[12]ವಕ್ಕ[12] ಬೇ
ಸತ್ತೊಡೆ ಮತ್ತೆ ಲಜ್ಜೆ ಗಡ ಮತ್ತೆ ಚಲಂ ಗಡ ಮತ್ತೆ ನಾಣ್ಗಡಂ
ಮತ್ತೆ ಬೊಜಂಗಗೊಟ್ಟೆ ಗಡ ಮತ್ತೆ ಸೊಗಂ ಗಡ ಮತ್ತೆ [13]ತಾ[13]ಯ್ಗಡಂ
ಮತ್ತೆ ಬರ್ದುಂಕುವಾಸೆ ಗಡ ಪೇಱಿದು ಜೀಟಮೊ ದೈವಕಾಟಮೋ ೩೯೧
(ಲೀಲಾವತಿ ೨-೧೧೯)

---

[1] ಧನಮುಂ ನಿಮಗೀ (ಅ) [2] ನಣ್ಣ ಕಾಣಿರೆ: (ಅ) [3] ನಿಂ (ಖಬ) [4] ದಯಿತೆ (ಅ) [5] ರ್ದು (ಅ) [6] ನೊಂ (ಅ) [7] ಡಿಂತು ಬೀಱಿಗ್ಗೆ (ಅ) [8] ಪಚ್ಚೆಯ ಪಸುರ್ಮಣಿಯುಂ ಕುಡಲಿಲ್ಲದಂತು (ಅ) [9] ತ್ತಿರ (ಅ) [10] ಜೀಟಮಿದೆನ್ನಯ ಪಾಪಮಲ್ಲದೆ (ಅ) [11] ಬಿಡೆ ಪೋಕುಮೆ (ಖಬ) [12] ಕ್ಕೆ (ಖಬ) [13] ಮೆ (ಖಬ)

ಮನೆ ಹೊಱಗಿಕ್ಕಿ ಕೇರಿ ನಗೆ ನಕ್ಕರೆ ಸಾಣೆಲಿಯೆಂದು ದೂಱಿ ನಾ
ಣನೆ ತೊಱೆದಾರುಮಂ ತೊಱೆದು ನಂಟರ ನಲ್ಲರ ಮಾತುಗೇಳದೋ
ಪನೆ ಪರಮಾತ್ಮನೋಪನೆ ಮನೋಭವನೋಪನೆ ದೈವಮೆಂದು ಬೆ
ನ್ನನೆ ಬರೆ ತನ್ನನೊಲ್ಲನಿದ ನೋಡುವೊಡೆ ಬೇಟಮೋ ದೈವಕಾಟಮೋ ೩೯೨

ಕಡು ಮುಳಿದಿರ್ದ ನಲ್ಲನಿದಿರಂ ಬರೆ ನಲ್ಲಳ ಬಾಯ ತಂಬುಲಂ
ಪುಡಿಯಿಡವೇಱ್ಕು ಮೈ ಬೆಮರವೇಱ್ಕು ಮೊಗಂ ಕಿಱಿದಾಗವೇಱ್ಕುಮೊ
ಳ್ನುಡಿ ತೊದಳಾಗವೇಱ್ಕು ನಡೆನೋಡುವ ದಿಟ್ಟಿ ಕಲಂಕವೇಱ್ಕು ನಾ
ಣೆಡೆ ತಲೆದೋಱವೇಱ್ಕುಮಿನಿತಿಲ್ಲದೊಡೊಲ್ಮೆಯನಿಕ್ಕು ಕಿಚ್ಚಿನೊಳ್ ೩೯೩

ಕಱಿವದನಾದ ಮುಚ್ಚು ಗಱಿಗಟ್ಟಿದ ಮೆಲ್ಪೊಳಗಾಱಿದಾಸೆ ಮೈ
ಯಱಿಪದ ಸೋಂಕು ಸಂದುದೆಱೆದಪ್ಪುಗೆ ಬಾಯ್ ಸವಿಗೆಟ್ಟ ಚುಂಬನಂ
ಪಱಿಸಿದ ಮುಚ್ಚುಮುಗ್ಗಲಿಪ ನಾಣ್ನುಡಿಯುಂ ಸತಿಗಾಗೆ ಬೇಟದಿಂ
ಪಱಿದಱಿನಪ್ಪಿನೊಳ್ ತೊಡರ್ದು ನೇಲ್ವವನೆಗ್ಗಿನ ಸುಗ್ಗಿಯಲ್ಲನೇ ೩೯೪

ಏಗೆಯ್ವೆನೆಂಬ ಚುಂಬನ
ವಾಗುಳಿಸುತ್ತಪ್ಪುವಪ್ಪು ಪದನಿಲ್ಲದ ಸಂ
ಯೋಗಂ ಸಾಲದೆ ವಿಟನಂ
ಪೋಗೆಂದುಂ ಪುಯ್ಯಲಿಡುವಳೇ ನೂಂಕುವಳೇ ೩೯೫

ಮನಮದು ಮನದನ್ನನ ಬೆ
ನ್ನನೆ ಪೋಗಿರೆ ತನ್ನ ಬಸನದಿಂ[1]ದವಳೊಳ್ಪಂ[1]
ಮನಮುಂ ಬಿಡೆ ಬಳೆಯಿಪ ಬೆ
ಳ್ಪನಮಿದು ಪಾಱ್ನೆಗೆ ಬಾಯಿನಂಗುಡುವಂದಂ ೩೯೬

(ಚಂದ್ರಪ್ರಭಪುರಾಣಂ ೮-೫೯)

ಆರ್ದ್ರವನಿತಂಬಮನಿಶಂ
ನಿದ್ರಾಂಕಿತ ಮುಕುಳನಯನವನ್ಯಕಾಲಾಪಂ
ಮುದ್ರಿತವದನಂ ವಿಟಜನ
ಹೃದ್ರೋಗಂ ಕಪಟಕಾಮಿನೀಸಂಯೋಗಂ ೩೯೭

ಅಮೃತದ ಕಂಡ ಸಕ್ಕರೆಯ ಕೂಟ[2]ಮುಮೊಲ್ವಳ[2] ಕೂಟಮುಂ ಸಮಾ
ನಮೆ ವಲಮೊಲ್ಲ[3]ದಳ್ಗೆ ವಿಟನೇ[3]ಟವಿಟಂ ಬರೆ ಕೂಟಮಿಂಪನೀ
ಗುಮೆ ಬೆಲೆ[4]ಗೊಂಡೆ[4]ನಾಂ [5]ಬೆಲೆಗೆ ಮೆಯ್ವೆಲೆ ಮೆಯ್ ನಲಿದಿತ್ತೆ[5]ನೆಂಬ ಕೂ
ಟಮುನದನೊಂದು ಕೂಟಮೆನಲಕ್ಕುಮೆ ನಂಜಿನ ಕಾಳಕೂಟಮುಂ ೩೯೮

(ಕಾವ್ಯಾವಲೋಕನಂ ೧೪೪)

---

[1] ದೊರ್ವಳ್ನಂ (ಬ) [2] ಮದೊಲ್ದಳ (ಖ ಬ) [3] ಧಂಗನೆಗೆನೇ (ಖ) [4] ಯಿತ್ತೆ (ಖಬ)
[5] ನಿನಗೆ ಮೆಯ್ಸೋಲೆಯುಂ ಮಿಗಿಲೀವೆ (ಖ ಬ)

ಬೆಲೆ ತಲೆಯುದ್ದಮಿಲ್ಲವಸರಂ ಮನೆವೊಕ್ಕೊಡೆ ಸೂಳೆಬಂಟರ
ಗ್ಗಲಿಸಿದ ಮಾತೆ ಪಕ್ಕೆದಲೆಯೊಳ್ ವಿಷಮಂ ರತಿ ವಾರನಾರಿಯೊಳ್
ಬೆಲೆ ಖರ ತುಚ್ಛವುಂಟವಸರಂ ಮನೆವೊಕ್ಕೊಡೆ ಪೊಕ್ಕನಿಚ್ಛೆಯ
ಗ್ಗಲಿಸಿದ ಮಾತೆ ಪಕ್ಕೆದಲೆಯೊಳ್ ವಿಸುತಂ ರತಿಯಿಲ್ಲ ಮಿಂಡಿಯೊಳ್ ೩೯೯

ಕಾಲ ಪಳಂಚಿನುಂಗುರದ ಮುತ್ತಿನ ಹಾರದ ಚೆನ್ನನಪ್ಪ ಹೊ
ನ್ನೋಲೆಯ ವಜ್ರದುಂಗುರದ ಕಂಕಣದೊಳ್ಪನೆ ತೋಱು ಪೋಪರಾ
ಬಾಲೆಯರೇವರೊಲ್ದೊಲಿಸಿ ಪತ್ತಿಸಿ ಚಿತ್ತಮನಿಂಬುಗೆಯ್ವ ಕೀ
ಸೋಲೆಯ ಕಾಚಿನುಂಗುರದ ಚುಂಚಿಯ ಬಂದಿಯರೆಮ್ಮ ನಲ್ಲೆಯರ್ ೪೦೦

ಹಸನಹ ರೂಪು ತಕ್ಕ ಹರೆಯಂ ಕಡು ಚೊಕ್ಕಳಿ ಜಾಣೆ ಹಕ್ಕಿವೊಲ್
ಕೊಸರುವ ಲಾಗು ಕೂಡಿ ತಣಿವಿಲ್ಲದ ಬಾಕುಳಿ ಗಂಡರಿಚ್ಛೆಯಂ
ಪೊಸಯಿಪ ಬೇಟಮಂ ಬೆಳಸುವಿಚ್ಛೆಯ ಜತ್ತಕಿ ತಾನೆ ಲೋಕದೊಳ್
ಬಸನದ ಬಿತ್ತೆನಿಪ್ಪಳೊಡಗೂಡಿದೊಡಲ್ಲದಲಂಪು ಪೋಪುದೇ ೪೦೧

ತೆಱನಱಿದೀವ ಕಾರ್ಯವಱಿದಂಜುವ ನೋಂತಱಿದಿಂಬುಗೆಯ್ವ ಮಾ
ತಱಿದುಚಿತೋಕ್ತಿಯಂ ನುಡಿವ ಮುಂದಱಿವಲ್ಲಿಗೆ ಕೊಟ್ಟು ನೋಟ್ಪ ಕ
ಣ್ಣಱಿದೆರ್ದೆಗೊಳ್ವ ಚಿತ್ತವಱಿದಾಲಿಪವೂರ್ಜಿತಬುದ್ಧಿಯಲ್ಲದಿಂ
ಬಱಿಯದ ಗಾವಿಲಂಗೆ ದೊರೆಕೊಳ್ವರೆ ಸೂಳೆಯರೆಂಬ ಡಾಳೆಯರ್ ೪೦೨

ಒದವಿದ ಕೂರ್ಮೆಯಿಲ್ಲದಳಿಪಾರಯಮಿಲ್ಲದ ಪಾಳಿ ರಾಗಮಿ
ಲ್ಲದ ಸುಸಿಲಟ್ಕಱಿಲ್ಲದ ಸೊಗಂ ನೆವಮಿಲ್ಲದ ಕಾಯ್ಪು ಬೇಂಟಮಿ
ಲ್ಲದ ಪುರುಡೇವಮಿಲ್ಲದಬಿಲುಬ್ಬೆಗಮಿಲ್ಲದ ಕಣ್ಣನೀರ್ ಕರಂ
ಚದುರರುಮಂ ಮನಂಗೊಳಿಪುದೇಂ ಕಡುಜಾಣೆಯರೋ ಲತಾಂಗಿಯರ್ ೪೦೩
(ಆದಿಪುರಾಣಂ ೧೨-೪೬)

ಅರೆಬಿರಿದಚ್ಚಮಲ್ಲಿಗೆಯ ಜೊಲ್ಲೆಹಮಿಕ್ಕಿದ ಮಿಂಚಿನೋಲೆ ಕಂ
ಡರಣೆಯ ಬೊಟ್ಟು ಕಪ್ಪುರದ ಮೂಗುತಿ ಮುತ್ತಿನ ಗಾಜುಗೊಪ್ಪು ಪಾ
ಲ್ನೊರೆಯವೊಲಪ್ಪ ಪಟ್ಟಣಿಗೆ ಚಂದನದಣ್ಪು ಬೆಡಂಗುವೀಱಿ ನೋ
ಟ್ಪರ ಬಗೆ ಬೆಳ್ಪನಪ್ಪಿನೆಗಮೊತ್ತೆಗೆ ನಿಂದಳದೊರ್ವಳೊಪ್ಪಿದಳ್ ೪೦೪

ತನುಲತೆ ಶೋಭೆಯಂ ತಳೆದು ನಿಲ್ವಿನೆಗಂ ಮುಖಲಕ್ಷ್ಮಿ ಪೂರ್ಣಚಂ
ದ್ರನನಿಳಿಕೆಯ್ದು ನಿಲ್ವಿನೆಗಮಾಭರಣ ಪ್ರಭೆಗಳ್ ಪೊದಬ್ದು ನಿ
ಲ್ವಿನೆಗಮಪಾಂಗಮಾಲಿಕೆ ವಿಜೃಂಭಿಸಿ ನಿಲ್ವಿನೆಗಂ ಮನೋಭವಂ
ನನೆಗಣೆವೊಟ್ಟು ನಿಲ್ವಿನೆಗಮೊತ್ತೆಗೆ ನಿಂದಳದೊರ್ವಳೊಪ್ಪಿದಳ್ ೪೦೫

ಕತ್ತುರಿಯಡ್ಡಬೊಟ್ಟೆಸೆಯೆ ಮುತ್ತಿನ ಮೂಕುತಿಯೊಪ್ಪೆ ಚುಂಚುಗಳ್
ಕತ್ತರಿವೀಲಿಯಂ ನಯದಿ ಜೋಲ್ದಿರೆ ಜೊಲ್ಲೆಹವೊರ್ಮೆ ನೀಱಿರಂ

ಸುತ್ತುತುಮೊರ್ವೆ ಕನ್ನಡಿಯನೀಕ್ಷಿಸುತುಂ ಕಡೆಗಣ್ಣೊಳಾಗಳಂ
ದೊತ್ತೆಗೆ ನಿಂದ ವೃತ್ತಕುಚೆಯಂ ನಡೆ ನೋಡಿದನಾ ಕುಮಾರಕಂ ೪೦೬
ವಿಲಸಿತ ಚಂದ್ರಮಂಡಲಮನೊಪ್ಪಿರೆ ರೋಹಿಣಿಯಪ್ಪಿದಂತೆ ನಿ
ರ್ಮಲ ಮುಖಚಂದ್ರನೊಳ್ ಮುಳುಗಿ ಮುತ್ತಿನ ಮೂಕುತಿ ಲೋಲಲೋಚನೋ
ತ್ಪಲರುಚಿವಿಭ್ರಮಂ ಭ್ರಮರಸಂಕುಲಮಂ ತೆಗೆಯುತ್ತಮೊಪ್ಪೆ ಕೋ
ಮಲೆ ಮದನಾಗ್ನಿ ಮೂರ್ತಿವಡೆದಿರ್ದವೊಲೊತ್ತೆಗೆ ನಿಂದಳೊಪ್ಪಿದಳ್ ೪೦೭
ತೊಳಗುವ ಪಾಟಲಾಧರದ ಚಂದನಗಂಧದ ಕೇತಕೀಲಸ
ದ್ದಳನಖದಬ್ಜವಕ್ತ್ರದ ರಥಾಂಗಕುಚಂಗಳ ಭೃಂಗಕುಂತಳಾ
ವಳಿಯಲರ್ಗಣ್ಣ ಪಲ್ಲವಕರಂಗಳ ಸಂಗತಿವೆತ್ತ ಚೆಲ್ವು ಕಂ
ಗೊಳಿಸೆ ಮನೋಜನಿರ್ಪ ವನಿತಾ[1][ವ][1]ನಮೆಂಬಿನಮೊರ್ವಳೊಪ್ಪಿದಳ್ ೪೦೮
ಮಿಸುನಿಯ ಕಂಕಣಂ ಪೊಳೆವ ಪೊಂಬಳೆಯೊಪ್ಪುವ ನಾಗಚಂಪಕ
ಪ್ರಸರದ ಚೊಲ್ಲೆಹಂ ಹಳದಿಯಂಬರಮೊಪ್ಪುವ ದೋರೆವಲ್ ಕರಂ
ಮಿಸುಗುವ ಪುಷ್ಯರಾಗಮಣಿಮುದ್ರಿಕೆಯಿಂದಮಲಂಪುಗೊಂಡು ನಿಂ
ದಸಿಯಳು ಪೋಲ್ತಳಂಗಜನ ವಲ್ಲಭೆಯರ್ಚಿಪ ಪೊನ್ನಬೊಂಬೆಯಂ ೪೦೯
ಮುತ್ತಿನ ಸೂಸಕಂ ಮುಡಿದ ಮಲ್ಲಿಗೆಯಿಕ್ಕಿದ ಮಿಂಚಿನೋಲೆ ಮೆ
ಯ್ಪತ್ತಿದ ಚಂದನಂ ಸುಲಿದ ಪಲ್ ಕಡೆಗಂಗಳ ಕಾಂತಿ ಕಾಲುಗು
ರ್ಗೆತ್ತಿದ ಮಿಂಚುವುಟ್ಟ ದುಗುಲಂ ಘನಸಾರದ ಹಾರಮೊಪ್ಪೆ ಬಂ
ದೊತ್ತೆಗೆ ನಿಂದ ವೃತ್ತಕುಚೆ ಮುತ್ತಿನ ಪುತ್ತಳಿಯಂತಿರೊಪ್ಪಿದಳ್ ೪೧೦
ಕುಡಿವುರ್ವಂ ನಸು ನೀವುತುಂ ತಿಲಕಮಂ ತಿದ್ದುತ್ತುಮಾಸ್ಯಾಬ್ಜಮಂ
ತೊಡೆವುತ್ತುಂ ಕುಟಿಲಾಳಕಾವಳಿಗಳಿಂ ಸ್ವೈತೊತ್ತಿ ಚೆಲ್ವಾಗೆ ನೇ
ರ್ಪಡಿಸುತ್ತುಂ ಮದಿರಾಲಸೇಕ್ಷಣೆ ಮದಸ್ತಂಬೇರಮಾಕಾರದಿಂ
ನಡುಪಾಡುತ್ತುಮುಪಾಂಗಣಪ್ರಘಣದೊಳ್ ತನ್ವಂಗಿ ಕಣ್ಗೊಪ್ಪಿದಳ್ ೪೧೧
(ಶೃಂಗಾರರತ್ನಾಕರಂ ೨-೫೯)

ನಗೆಗಣ್ ಸೂಸೆ ವಿಲಾಸಮಂ ನಗೆಮೊಗಂ ಲಾವಣ್ಯಮಂ ಬೀಱಿ ಸಾ
ವಗಿಸುತ್ತುಂ ಕಚಬಂಧಮಂ ಶಿಥಿಲನೀವೀಬಂಧಮಂ ಕಾಂಚಿಯೊಳ್
[2]ನೆಗಪುತ್ತುಂ ಸ್ಮರಮಂತ್ರಜೀವತೆಯವೊಲ್ ಬಾಹಾಲತಾಂದೋಳನಂ
ಬಗೆಯಂ ಬಲ್ಸೆಱಿಗೆಯ್ಯೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ[2] ೪೧೨
(ಮಲ್ಲಿನಾಥಪುರಾಣಂ ೮-೬೮)

---

1 ಜ(ಖಬ) 2 ತೆಗೆಯುತ್ತುಂ ಪ್ರಣಯಾನುಬಂಧಮುಖಿ ಶೋಃರ್ವೀಶಂಗೆ ಶೃಂಗಾರಚೇಷ್ಟೆಗಳಿಂ ಕಣ್ಗೆಸೆದಿರ್ದುದಿರ್ದ ಕೆಲದೊಳ್ ನಿಂದಿರ್ದ ಕಾಂತಾಜನಂ (ಅ) ಅಚ್ಚಿನ ಪ್ರತಿಯಲ್ಲಿಯೂ ಲೈಬ್ರರಿಯಲ್ಲಿರುವ ಮಲ್ಲಿನಾಥಪುರಾಣದ ಮತ್ತೆರಡು ಕೈಬರಹದ ಪ್ರತಿಗಳಲ್ಲಿಯೂ ಈ ಪದ್ಯದ ಉತ್ತರಾರ್ಧವು ಇಲ್ಲಿ ಪುಟಪಡಿಯಲ್ಲಿ ಪಾಠಾಂತರವಾಗಿ ಕೊಟ್ಟಿರುವಂತೆ ಇದೆ. ಸೂಕ್ತಿಸುಧಾರ್ಣವದ ಎರಡು ಪ್ರತಿಗಳಲ್ಲಿಯೂ ಮೇಲೆ ಮೂಲಪಾಠವಾಗಿ ಕೊಟ್ಟಿರುವಂತೆಯೇ ಇದೆ. ಇಲ್ಲಿ ಎರಡು ಪದ್ಯಗಳ ಪೂರ್ವಾರ್ಧ ಉತ್ತರಾರ್ಧಗಳು ಸೇರಿ ಹೀಗಾಗಿರಬಹುದೇ ?

ಕರಿಕುಂಭೋರೋಜೆ ಕಂಜಾನನೆ ಮಧುಕರಮಾಲಾಂಶು ಧಮ್ಮಿಲ್ಲೆ ಹಂ[1]ಸೀ[1]
ವರಲೀಲಾಯಾನೆ ಪೇೞುತ್ತೆಯ ಬೆಲೆಯನೆನಲ್ ಸಿಂಹವಿಕ್ರಾಂತ ರಾತ್ರೀ
ಶ್ವರರೋಚಿರ್ಧಾಮ ಕೀರ್ತಿಪ್ರಿಯತಮ ವಿಕಸಚ್ಚಂಪಕಾಮೋದ ಧಾರಾ
ಧರನಾದಾಯೇಂ ಬೆಸಂ ಕುಳ್ಳಿರಿಮೆನೆ ಚದುರಂ ಪೋದನಾಂದೋಳಶೀರ್ಷಂ ೪೧೩

ಕೈರವನೇತ್ರೆ ಚಕ್ರಮಿಥುನಸ್ತನೆ ಕೀರವಚಃಪ್ರಯುಕ್ತೆಯಂ
ಭೋರುಹಲಾಸ್ಯೆ ಪೇೞ್ ನಿನಗೆಯೊತ್ತೆಯದೇನೆನೆ ಲೋಕಮಿತ್ರ ತಾ
ರಾರಮಣಪ್ರಕಾಶ ಖಗನೈರಿವಿಹಂಗಮಸಾಳ್ವ ಅಪ್ಪದಿ
ಗ್ವಾರಣಸತ್ವ ಕುಳ್ಳಿರೆನೆ ತಾಂ ತಲೆದೂಗಿಯೆ ಪೋದನಾ ವಿಟಂ ೪೧೪

ವನಜಾತಾನನೆ ಪೇೞ್ ಸುಧಾಂಶುಯಶ ಕೇಳ್ ಹಂಸಾಂಗನಾಯಾನೆ ಪೇೞ್
ಘನನಾದಾನ್ವಿತ ಕೇಳ್ ಮದದ್ವಿರದಕುಂಭೋರೋಜೆ ಪೇೞ್ ಸಿಂಹಶೌ
ರ್ಯನೆ ಕೇಳ್ ಮತ್ತಮದಾಳಿಕಾಕಬರಿ ಪೇೞ್ ಚಂಪಕಾಮೋದ ಕೇ
ಳೆನಲಾ ಕಾಂತೆಯನಂತೆ ಬಿಟ್ಟನದನಿನ್ನೇನೆಂಬೆನಾಶ್ಚರ್ಯಮಂ ೪೧೫

(ಪುಷ್ಪದಂತಪುರಾಣಂ ೮-೧೧೧)

ಸಂಗೀತೋತ್ಸವ ಜೀವಿತೇಶ ವರವಿದ್ಯಾವಾಸ ಕಾಂತಾಜನಾ
ನಂಗಾಧ್ಯಕ್ಷ [2]ಲ[2]ಸದ್ವಿಲಾಸಗುಣಜಾಲೋಪೇತ ಸತ್ವಾಧಿಕಾ
ಶೃಂಗಾರಾನ್ವಿತ ಲೋಕರಕ್ಷಕ ಎನುತ್ತೊರ್ವಳ್ ಮಹಾಪ್ರೌಢೆಯು
ತ್ತುಂಗೋರೋಜೆ ಮರಾಳಯಾನೆ ವಿಟನಂ ಕೊಂಡಾಡೆ ನಕ್ಕಂ ನೃಪಂ ೪೧೬

(ಕಾವ್ಯಸಾರ ೩೭-೯೭೭)

ತರುವಲಿ ಬೇಡ ಪಿಂಬರೆಯದಂ[3]ಗ[3]ನೆಯಾದೊಡೆ ಬೇಡ ಜವ್ವನಂ
ಗರಗರನಪ್ಪ ಸೊಂಪುತನವುಳ್ಳವ[4]ಳಾ[4]ದೊಡೆ ಬಂದು ಮುಂದೆ ಸಂ
ಚರಿಸುಗೆ ನೋಡಿ ಗಾಡಿ ಬಗೆಗೆಟ್ಟುದುದೆ ಬೞಕೊತ್ತೆಗೊಂಡಪೆಂ
ಪರಮುಖನುಲ್ದು ಮೆಚ್ಚು ಮುಸುಕೊತ್ತೆ[5]ಯೆ[5]ನಿಪ್ಪುದನಿಕ್ಕು ಕಿಚ್ಚಿನೊಳ್ ೪೧೭

ನರೆಯ ಬೊಜಂಗನುಮಾನುಂ
ನೆರೆದಿರ್ದೊಡೆ ನೆರೆದು ಬಿನದದಿಂ ನೋೞ್ಪವರಿ
ನ್ನರಗಿಳಿಯುಂ ಬೆಳ್ವೊಱಸುಂ
ನೆರೆದಂತಮಸಜಸಿಕೊಳ್ವರೆಮ್ಮೊಳಮೋಘಂ ೪೧೮

ಒತ್ತೆಗೆ ನಿಲ್ವುದೆಂದುಱಿಯವೇಡ್ವಿಪಳೋಪಳನೆನ್ನನಿಂತೆ ತಾಯ್
ಮುತ್ತಳಿ ಪುಟ್ಟುವಂದು ಬೆರಕೊಂಬತು ತನ್ನಯ ತೋಳೊಳಾದುವೇಂ

---

[1] ಸೆ (ಖ) ಸಾ (ಬ) [2] ರ (ಕ ಖ ಗ ಬ) [3] ನ (ಖ ಬ) [4] ನಾ (ಖ ಬ) [5] ಯ (ಖ ಬ)

ಕುತ್ತದೊಳಾದ ಚುಚ್ಚುಗಲೆಯೇ ಎದೆಗಗ್ಗಳ ಕಪ್ಪು ಕಾಡಿ ಮೇಣ್
ಕುತ್ತಿಸಿಕೊಂಡುವೇ ನುಡಿವ ಕುಂಟಣಿಯಂ ಜವನೊಯ್ಯದಾದನೇ ೪೧೯

ನಿಮತಿನಿತೇಕೆ ಹೊಂದವಕಮಿತ್ತನಿನ[1]ಗ್ಗ[1]ಳವೀವರಾರಿಗೇ
ಕಮರ್ದನೆ ನಂಜು ಮಾಟ್ಪುರುಳಿಯೆಂಬುದೆ ಕೊಟ್ಟನೆ ಕಾಣಲಕ್ಕು ಮಾ
ನಮೆ ಮಱಿಯಾಗೆ ನೋವಿನೊಳಗಂದುಱಿಯೆಂ ಬಳಿಕೇವಿರೊಳೊಕ್ಕ ತು
ಪ್ಪಮ[2]ನುಡು[2]ಗಲ್ಕೆ ಬಂದಪುದೆ ನೀವಱಿಯಲ್ ಚಲಮೊಳ್ಳಿಕೆಯ್ಯುವೆಂ (?) ೪೨೦

ಇವಳಂ ಪೆತ್ತೆನೆ ಕುತ್ತುವೆತ್ತೆನಿವಳಿಂದಂ ಲಜ್ಜೆಗಟ್ಟೆನ್ನರಾ
[3]ರಿ[3]ವಳಂ ನುಂಗದು ದೈವಮೆನ್ನ ತಲೆಯಂ ಮೇಣ್ ಕೊಳ್ಳದೇನೆಂದು ಸಾ
ಱುವುದಂ ಸಾಧನ ಮೋನಮೆಂದು ನಿಲೆ ಕೂರ್ತಾ ಕೂರ್ತೆ ನೀನಿನ್ನು ಮಾ
ಡುವುದಂ ಮಾಡೆನೆ ಮುದ್ರಿಸಿತ್ತು ಮಗಳಿಂದಂ ತಾಯ ವಕ್ತ್ರಂ ಕರಂ (?) ೪೨೧

ಹರೆಯದಿನಗ್ಗಳಂ ಹಣದ ಮೇಗಣ ಮೋಹಮಿವಳ್ಗೆ ಬಪ್ಪಿನಂ
ತುರಿಪಮೆಯರ್ಥಮಂ ಕ್ರಮದಿನಾ ಮುದುಪಂ ಗಡ ಕೊಟ್ಟನೊತ್ತೆಯಂ
ಗರಗರನಾಯ್ತು ಬಲ್ಮೆ ಮುದುಗೂಗೆಯ ಬಾರಿಗೆ ಕೈ[4]ನೆ[4] ತಾನೆ ಮೈ
ಗರೆದೆನಗೊತ್ತೆಗೊಟ್ಟ ಸುಖ ಮಾಱಿಕ್ಕವೆಸಟ್ಟುದನಕ್ಕ ಬಟ್ದಿಪೆಂ (?) ೪೨೨

ತಲೆ ಹಱಿತ ನಾಯ ಸೊಡು ಗಾ
ವಿಲ ಬಟ್ಟೆಯ ಚಿಕ್ಕಣಿಕ್ಕೆ ಬೆಳ್ಗತ್ತೆಯ ನಾ
ಣಿಲಿ ನೆಲ್ಲಹೆಡಿಗೆ ಸಡಿಫಡ
ಚೆಲುವರಿಯದ ಕುಡದ ಕಾಮದೇವನ ದೇವಂ (?) ೪೨೩

ಮುಡುಹಿನ ಮು[5]ಕ್ಕಿ[5] ಸೊಕ್ಕದಿರದೇನಭಿಮಾನದ [6]ಜೊಡ್ಡಿ[6] ಬಾಲಮಂ
ಬಡಿದಪೆ[7]ಯೆ[7]ತ್ರ [8]ಚಿಃ[8] ಬಿಸುಡು[9]ಗೊಯ್ಕೆ[9]ಯರುಟ್ಟುದಱೊದ್ದೆ [10]ಬೀಱರ್[10]ಬೆರೞ್
[11]ಗಡಿಕೆ[11]ಯರಂಟಸುಂಟೆ ಸುಡು ಪಂ[12]ಜೆ[12]ಗಳೆಂಜಲ ಹಂ[13]ಜೆ[13]ಯೆಂದು ಬ
ಯ್ವೊಡನೊಡನೆತ್ತಿದರ್ ಮಸಗಿ ಬೇಂಟದ ಬನ್ನಮನಕ್ಕತಂಗಿಯರ್ (?) ೪೨೪
(ಅನಂತನಾಥಪುರಾಣಂ ೮–೩೧)

ಇದು ತಲೆಗೊಯ್ಸಿದತ್ತು ಮುಡಿಯಲ್ ನೆಱೆ ಕಲ್ಲದು ಬೇಕುಬೇಕಿದೆಂ
ದದೆ ತನುವೆಲ್ಲಮಂ ಕಿಡಿಸಿಕೊಂಡು ಮುಡಲ್ ನೆಱೆ ಕಲ್ಲದಾಯ್ತು ಬೇಂ
ಟದೊಳಿದು ಬೆಳ್ಪಿಲಂ ಕಿಱಿಯರಾರೊಳಲ್ಲದು ನೋಡ ಬಂದ ಕಾ
ಲದ ಪರಿಯಂ ಮುಗುೞ್ ಮೊಲೆಯ ಮೂಲಮುಮಾಡುವುದಕ್ಕೆ ಗೋಷ್ಠಮಂ (?) ೪೨೫

---

1 ಗ (ಗ) 2 ನುಂ (ಖ) 3 ತಿ (ಖ ಗ ಬ) 4 ಗೆ (ಬ) 5 ಕ್ಕೆ (ಅ) 6 ಜೋಡೆ (ಅ) 7 ಯಿ (ಅ) 8 ಚುಂ (ಅ) 9 ಗೋರಿ (ಅ) 10 ಪೆಬ್ಬೆ (ಅ) 11 ಕಡಿಯದ (ಅ) 12 ಚಿ (ಅ) 13 ಚಿ (ಅ)

ಇದು ನೆಲಮುಕ್ಕು ತಾ ಪಸಿದೊಡಲ್ತುಣವೇಳ್ಪುದು ತಾಯೊ ನೋೞ್ಪುಡಿಂ
ತಿದಱ ಗೃಹಕ್ಕೆ ಬಪ್ಪ ಮುಸುಕಂ ಬರವಿದ್ವವಿದಾವ ಲಗ್ನದೊ
....ಳುದ....ಕಲ್ತು ತನಗೆ ಷತ್ರಿಪ ಜೊತ್ರಿಪ ಕೇಣವೆಮ್ಮ ಕಾ
ಲದೊಳಿನಿತೊಂದ ನಾವಱಯೆವಿಂದಿನ ಕೋರಿಗಳಂದವದ್ಭುತಂ (?) ೪೨೬

ನೂಱುಮುಗಿಲಾಡಿದಪ್ಪುದು ಜೊಜಂಗರ ಸಂದಣಿ ಪ[1]ಟ್ಟಪ[1]ಟ್ಟಿಕಾ
ಕರ್ಮದ ರತ್ನಭೂಷಣದ ಕಾಂತಿ ತಳಿರ್ಪುದಿಂತು ಮೂಲನೀ
ಪೆರ್ಮೆಗೆ ನೋಂ[2]ತುದೀ ಪ[2]ರೆಯವೀ ಪದಪೀ ಸೊಬಗೀ ವಿಲಾಸಮೇಂ
ಕಾರ್ಮೞಿಯೊಳ್ ಬಸಂತನಿವಳಂಗಣದೊಳ್ ನೆಲಗೊಂಡುದಕ್ಕುಮೇಂ ೪೨೭
(ಅನಂತನಾಥಪುರಾಣಂ ೮-೧೯)

ಪರಿಣತೆಗಿನ್ನುಮಿಲ್ಲ ಬಳೆ ತಾನಿದು ಮೈನೆರೆದೊಂದು ಸುಗ್ಗಿ ಬಿ
ತ್ತರಿಸುಗುವಣ್ಣ ನಿಮ್ಮ ದೆಸೆಯಿಂ ಕಳೆಯೊಳ್ ಶ್ರಮಮುಂಟು ಮುನ್ನ ಬ
ಲ್ಲರ ಹುಸಿಶಿಕ್ಷೆಯಿಂದೆ ಮಱಮುಚ್ಚಿಸಲಾರ್ಪುವೆ ನಿಮ್ಮನನ್ನೆಗಂ
ಸರಸರಗೊಟ್ಟೆಗೞ್ತಿ ಪಿರಿದಾಮುದು ನೋಡಿರೆ ತನ್ನ ಪುಣ್ಯಮಂ ೪೨೮

ಮನಮಂ ಮೋಹಿಸು ನೋಟದೊಳ್ ನುಡಿಯೊಳಿಂಪಂ ಬೀಱು ಮೆಯ್ಮೇಳದೊಳ್
ತನುವಂ ಮೆಚ್ಚಿಸು ಕೂಟದೊಳ್ ಪಡೆದ ಮೆಯ್ಯಾಗೊಲ್ದವೊಲ್ ಸುತ್ತು ಸು
ಪ್ಪನನಿತ್ತಳ್ಕುವ ಲೋಭನಂ ಪುಗದಿರಾರ್ಗಂ ಕೂಡದಿರ್ ನಾಣ ಪೆಂ
ಪನೆ ಕಾಯೆಂದೆಳಸೂಳೆಗೋದಿಸುತಲಿರ್ದಳ್ ಸೂಳೆಸಿದ್ಧಾಂತಮಂ ೪೨೯

ಅಲಸದೆ ಬಿಚ್ಚತಂ ಬೆಸಸಿಯೆಂದುದಗೆಯ್ವುದು ಕೂರ್ತ ಭಂಗಿಯಿಂ
ದೊಲಿಸುವುದುಳ್ಳನಂ ಮುಳಿವುದಿಂಬಱದೀವನೊಳಾಳಿಕಾಱನಂ
ಸುಲಿದು ಬಿಸುಟ್ಪುದೋಜೆವೆರಸೆಂದು ವಿದಗ್ಧೆಯದೊಬ್ಬವಳ್ ಮುಗು
ಳ್ಮಲೆಗಳವಳ್ಗೆ ವೈಸಿಕಮನೋದಿಸುತಿರ್ದಳತಿಪ್ರಬಂಧದಿಂ ೪೩೦

ನೋಡುವರಂ ಮನಂಬಯಸಿದಂತಿರೆ ನಲ್ಮೆ ತುಳುಂಕೆ ಬಿಂಕದಿಂ
ನೋಡುವುದೆಯ್ದೆ ಮಾತನೊಸೆದಾಡುವರೊಳ್ ಬಗೆ ಪೆರ್ಚುದೋಱ[3] ಮಾ
ತಾಡುವುದಿತ್ತು ಕೂಡುವರೊಳಿಲ್ಲದ ಬೇಂಟಮನುಂಟುಮಾಡಿ ನೀಂ
ಕೂಡುವುದೆಂದು ಮುತ್ತನುಡುಗುಂಟಣಿ ಪುತ್ರಿಗೆ ದೀಕ್ಷೆಯಿಕ್ಕಿದಳ್ ೪೩೧
(ಜಗನ್ನಾಥವಿಜಯಂ ೧೬-೧೨೫)

ಚಲನ[3]ಪ್ರೋ[3]ದ್ಭಾಗಮಿಶ್ರಾಂಜನ ಜಲಚರಭಾಗಸ್ಥಿತೋಚ್ಚಸ್ತನದ್ವಂ
ದ್ವಲಸತ್ಕಾಶ್ಮೀರರಾಗಂ ಭುಜಶಿಖರಿಬಹಿರ್ವೃತ್ತಭಾಳೇಯಚಂಚ
ತ್ತಿಲಕಾಂಗಂ ಚಾರುಗಂಡಸ್ಥಗಿತ ಭುಜಲತಾಶ್ಲಿಷ್ಟಕೇಯೂರಚಿಹ್ನಂ
ಕಳೆದತ್ತಾತ್ಮೇಶ್ವರಂ ಪ್ರಾರ್ಥಿಸಿ ತಿಳಿಪದೆಯುಂ ಕೋಪಮಾ ಕಾಂತೆಗಾಗಳ್ ೪೩೨

[1] ಟ್ಟಿತ (ಅ) [2] ತಳೀಹ (ಅ) [3] ತ್ರೋ (ಖ ಬ)

ಒಲವಿನೊಳುರ್ಕಿ ಕಾದಲರ ಗಾಡಿಯ ಪೆಂರ್ಮೆಸಿರಿಯಲ್ಲಿ ಕಾಣ್ಬ ಕ
ಣ್ಮಲರ ಬಸಂತಮಲ್ತೆ ಬೆಳುದಿಂಗಳ ಹಣ್ಣೆಲೆಯಲ್ತೆ ನೋಟ್ಪೊಡ
ಗ್ಗಲಿಸದ ಕೂರ್ಮೆವೀಜಿದೊಡನೆನ್ನರ ಗಾಡಿಯುಮುಕ್ಕು ತುಯ್ಯಲ
ಟ್ಟೊಲೆ ನಿಧಿ ಪೋದ ಪಾಟಿ ಕುಟು ಬತ್ತಿದ ಜೇಂಗೊಡ ಬೀತ ಮಾಮರಂ ೪೩೩
ಒದವಿದಲಂಪು ಪೋಪಿನವನಂಕದ ಬಿಂಕದ ಪೆರ್ಚು ಪೊಚ್ಚಟಿಂ
ಗದ ಸಜುವಿಂಡಿಯೊಳ್ ಪೊರಳಿ ಪೊರ್ಕುಳಿಯಾದೊಡೆ ಪ್ರೌಢಿ ಗರ್ದುರಾ
ಡದೆ ನಲಿಗಚ್ಚು ಕಚ್ಚಿ ಕುಡಿಯಾಗಡೆಯಾಳನೆ ಸೀಳ್ದು ಸಿಜುಂಬುಳಾಡದಂ
ಟದೆ ನೆಜನೆಂದು ಭಾವದೊಳೆ ಬಳ್ಕುವ ಸೋಂಬೆಯನಿಕ್ಕು ಕಿಚ್ಚಿನೊಳ್ (?) ೪೩೪
ಕೊಡುವ ಗುಣಕ್ಕೆ ತಾನೊಡೆಯನೊಲ್ಮೆಗೆ ತಾನೊಡೆಯಂ ಚಲಕ್ಕೆ ತಾ
ನೊಡೆಯನೆಶಕ್ಕೆ ತಾನೊಡೆಯನಟ್ಠಿಗೆ ತಾನೊಡೆಯಂ ದಲೆಂಬ ನಾ
ಣೊಡೆಯನನಪ್ಪಿಯುಂ ಮಗುಟ್ದು ನಿ[1]ರ್ಲಜ[1]ಗಂಡರನಪ್ಪುತಿರ್ಪ ಪೆ
ಣ್ಬಡಣದ ಮುನ್ನಮುಳ್ಳನಿತು ಭಾಗ್ಯಮುಮೇನಜುತಯಾಗಿ ಪೋಗದೇ (?) ೪೩೫
ಮನೆ ಸಲೆ ಹೇವಿಳಂಬಿ ಸಹಕಾರಿ ವಿಕಾರಿ ವಿರೋಧಿಕೃತ್ಸುಹೃ
ಜ್ಜನಮೆ ಸಮಾನಮನ್ನಣೆ ವಿರೋಧಿ ಪರಾಭವಿ ಶಾಲಿ ಮಾವ ಮೈ
ದುನನೆ ಕರಂ ಪ್ರಮಾಥಿ ನಿಜವಲ್ಲಭೆ ದುರ್ಮುಖಿಯೆಂದೊಡೆನ್ನ ಪೆಂ
ಪಿನ ವಿಭವಂ ಪ್ಲವಂಗದವೊಲಾದುದು ಮನ್ಮಥಚಿತ್ರಭಾನುವಿಂ ೪೩೬
ಮುಸುಕಿಟ್ಟೊತ್ತಿಗೆ ಸಾರ್ದ ವೃದ್ಧನೊಳೊಡಂಬಟ್ಟೊತ್ತೆಯಂ ಕೊಂಬ ತಾ
ಯ್ಗೆ ಸರೋಜಾರುಣನೇತ್ರೆ ಯವ್ವನೆ ಲಸತ್ಕಾದಂಬರೀಮತ್ತ[2]ಧೀ[2]
ವಸೆಯೊರ್ವಳ್ ಮುದುನಾಯ ಮುತ್ತಮುಡುವೃದ್ಧಂಗೆನ್ನನಿಂತೋವದೊ
ಪ್ಪಿಸಿ ಪೊಂಗಟ್ಟುವ ಚೀಲದೊಳ್ ಮುಡುಗರಂ ತಂದಿಕ್ಕುವೆಂ ನಿಕ್ಕು[3]ವಂ[3] ೪೩೭
ಮದನನ ಕೂ[1]ಡಿ ಕಾಯ್ದು ಪುದದೇಕೆಗೆ[4] ಕಾಯ್ದು ಪುವೆನ್ನ ಕೂಡೆ ಪಾ
ಡಿದ ಮಜುದುಬಿಂಯೆ[5]ನ್ನಸರ[5]ಮೇಳದ ಕೋಗಿಲೆಯೆನ್ನ ಕಯ್ಯೊ[6]ಳಾ
ಡಿದ[6] ಗಿಳಿಯೆನ್ನ ಪಿಂದೆ ನಡಪಾಡಿದ ಹಂಸೆಗಳಿಂತಿವಕ್ಕೆ ತ
ಕ್ಕುದನುಸಿ[7]ರ್ದಪ್ಪನೆ[7]ನ್ನಿನಿ[8]ಯನಂ ಕರೆ ನೀಂ ತಿಳಿ ನೀಂ[8] ತಳೋದರೀ ೪೩೮
(ಅನಂತನಾಥಪುರಾಣಂ ೮-೨೩)

ನೆವದಿಂ ಕಾಯ್ದು ಕನಲ್ದು ಪೋದಿನಿಯನಂ ಕಣ್ಮುಟ್ಟೆನೊಳ್ ಕಂಡು ಕೈ
ರವಪತ್ರಾಯತನೇತ್ರೆ ಕೀಲಿಸಿದವೊಲ್ ಕಾಲ್ಸೇಡುಗೊಂಡಳ್ ಚಳ
ತ್ಪವನಾಪಾತ ಪತಾಕೆವೊಲ್ ನಡುಗಿದಳ್ ಘರ್ಮಾಂಬುವಿಂ ತೇಂಕಿದಳ್
ನವಲಜ್ಜಾರಸದೊಳ್ ಮುಳುಂಗಿವಳನಂಗಸ್ರೋತದೊಳ್ ಕೂಡಿದಳ್ ೪೩೯
(ಅನಂತನಾಥಪುರಾಣಂ ೮-೨೨)

---

[1] ರ್ಲಜರ (ಖ ಬ) [2] ಜೇ (ಬ) [3] ವೆಂ (ಬ) [4] ಡಿತಾವಮುಸೆನಗೀಕೆಗೆ (ಅ) [5] ನ್ನೆಸೆವ (ಅ) [6] ಳೋದಿದ (ಅ) [7] ರ್ದೆಸ್ನನೆ (ಅ) [8] ಯಂಕರೆಗೇಂತಿಳಿದೇಂ (ಖ ಬ)

ಅರಲಂಬಿಂ ಗಱಿಸನ್ನೆದೋಱುವನಸಂಗಂ ಚಂ[1]ದ್ರಮಂ[1] ಕೂಂಕುವಂ
ಕರದಿಂ ತಂಬೆಲರೆಂಬನಡ್ಡಳಿಸುವಂ ಚೈತ್ರಂ ಪಿಕಾರಾವದಿಂ
ಕರೆವಂ ನಲ್ಲನಗಲ್ದೊಡಂ ಮುಳಿದು ತಾವೇಗೆಯ್ದೊಡಂ ಪಲ್ಲವಾ
ಧರೆ ಕೇಳಂಜು[2]ವೆನಲ್ಲಳೀ[2] ಹದಿರನೋಪಂ ಕಾಣ್ಗುಮೆಂದಂಜುವೆಂ ೪೪೦
(ಅನಂತನಾಥಪುರಾಣಂ ೮-೨೧)

ನವನಖರೇಖೆಗಳ್ ಬರೆದ ಗಲ್ಲದ ರೇಖೆಗಳಂತೆ ತೋಱೆ ಮೂ
ಡುವ ಮೊಲೆಯೊಡುವಳ್ಳೈದೆಗಳೊಳ್ ಸೆಱೆಸಾರಿವೊಲಾಗೆ ನಾಡೆ ನೋ
ಡುವರೆಡಗಣ್ಣ ಥಾಳದೊಳೆ ಹಾಸಗೆವಾಯ್ತೆ ಮನಂ ವಿಟರ್ಗೆ ಹೋ
ದುವು ರವಣಂ ಗುಣಕ್ಕವಳ ಜವ್ವನನೆತ್ತದೊಳಾರೊ ಸೋಲದರ್ ೪೪೧
ನೆತ್ತದ ಸಾರಿಯಂತೆ ಮೊಲೆ ಮಡಲೊಂಡ ಗುಣವೇಱಿ ಲಜ್ಜೆ ನಾಣ್
[3]ಸ[3]ತ್ತವು ಗಾ[4]ಳು[4]ಗಣ್ ಪರಿದುವಾಸೆಯ ಪಾಸಗೆಯಂತೆ ಬೇಡಳೊಂ
ದೊತ್ತೆಯನಿಲ್ಲ ಪೆಣ್ತನಕೆ ಪಾವುಗೆಯಂ ಗಡಿಗೆಟ್ಟ ರೇಖೆಗಳ್
ಪತ್ತಿದುವಾದೊಡಂ ಬಱಿಯ ಸೋಲಮೆ ನೋಡಿರೆ ಮೂಳನಾಟಮಂ ೪೪೨
(ಅನಂತನಾಥಪುರಾಣಂ ೮-೧೫)

ನುಡಿ ನುಡಿಯೆಂ ಚಲಂ ಚಲಮೆ ಬೇಟ್ಪುದೆ ಬೇಟ್ಪುದದೇಕದಂತೆ ಚಿಃ
ಪಡಪುೞಿದೆಲ್ಲರಂ ನಗಿಸಿಕೊಂಡಪೆಯಾಗದದಾಗದಿ . . . .
ರ್ದೆಡೆ ಮುಳುಗೆತ್ತು ಬಿಟ್ಟುಡಿದು ಕೊಂಬೞಿದಲ್ಲದು ಚಿನ್ನಜಾಲನಂ
ಬಿಡು ಬಿಡೆನೆಂಬ ಕುಂಟಣಿಯ ಸೂಳೆಯ ಸೂಟ್ನುಡಿಯಿತ್ತುದಟ್ಟಿಯಂ ೪೪೩
ಕುಂಟಣಿದೊಟಿತ್ತು ಕೂರಿಸಿದ ಕಾದಲನಂ ಬಿಸುಡೆಂದು ಕೀಱಿ ಬಾ
ಯುಂಟಿನಗೆಂದು ಬಗ್ಗಿಸುವೆ ಕೂರದ[5]ರಾರ್ ಕಿಱಿ[5]ಯಂದು ನಿನ್ನನೇಂ
ನಾಂಟವೆ ಪೂವಿನಂಬು ಕಡುಪೋವಡಿಯಾದಪೆ ನಿನ್ನ ಮೆಯ್ಯ ನು
ಣ್ಗಂಟೊಡವುಟ್ಟಿ ಮಟ್ಟಮಿರೆ ಮೀಱುವರಾರೊ ಮನೋಜನಾಜ್ಞೆಯಂ ೪೪೪
(ಮಲ್ಲಿನಾಥಪುರಾಣಂ ೭-೬೪)

ನುಡಿ ಸವಿನೋಟವೊಂದು ಸವಿ ಸೋಂಕು ದಿಟಂ ಸವಿ ತೋಟಿಯಾವಗಂ
ಕಡುಸವಿ ಪೊಯ್ಯೆ ಮುನ್ನ ಸವಿ ಬಯ್ಯೆ ಕರಂ ಸವಿಯಪ್ಪ ಚುಂಬನಂ
ಗಡಣಮಿವಿಂತುಮೆಯ್ದೆ ಸವಿಯಪ್ಪುವು ತನ್ನ[6]ಪಸಾದ[6]ದಿಂದಮೆಂ
ದೊಡೆ ಸವಿ ಬೇಟದಿಂದೆ ಪೆಱತಾವುದೊ ಭಾವಿಸಿ ನೋಡೆ ನಾಡೆಯುಂ ೪೪೫
(ಚಂದ್ರಪ್ರಭಪುರಾಣಂ ೮-೫೫)

---

1 ಡುವಂ (ಅ) 2 ವಳಲ್ಲಸೀ (ಅ) 3 ಪ (ಅ) 4 ಳ (ಅ) 5 ರಾರಿಱಿ (ಖಬ) 6 ಪಸಾರ (ಗಘ)

ಪ್ರಣಯದಿನಾದ ಹೋರಟೆಯೆ ಹೋರಟೆ ಮಾಣ್ದೊಡೆ ಕೂಟದೊಳ್ ಮನಂ
ತಣಿಯದದೊಂದು ಕೋಟಲೆಯೆ ಕೋಟಲೆ ಮಾಣ್ದೊಡಗಲ್ದ ಪೊೞ್ತಿನೊಳ್
ರಣರಣಕೋತ್ಥವೇದನೆಯೆ ವೇದನೆ ಮಾಣ್ದೊಡೆ ಮತ್ತಮಿನ್ನವ
ಪ್ಪಣಕಮೆ ಪುಟ್ಟುಗೆಂದೊಡಕಟೇನಪಸೌಖ್ಯರೋ ಕೂರ್ತ ಮಾನಸರ್ ೪೪೬

(ಚಂದ್ರಪ್ರಭಪುರಾಣಂ ೮–೫೮)

ಕೊರೆದೊಡೆ ಬಿಟ್ಟುಗಳ್ [1]ಬಿರಿ[1]ವುವುಣ್ಮುವ ಲೋಳೆಯ ಲಾಳೆಗಳ್ ಪೊನ
ಲ್ವರಿವುವು ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪು[2]ದೆಂ
ದಿರದೆರ್ದೆ[2]ಗಪ್ಪುದತ್ತಳಗವಾ [3]ಮುದುಪಂ ಬಿಡೆ[3] ಬಂದು ಪೊಂಗಳಂ
ಸುರಿದೊಡಮಾರೊ ಸೈರಿಸುವರಾತನ ಪಲ್ಲಿಲಿವಾಯ ನಾತಮಂ ೪೪೭

(ಪಂಪಭಾರತಂ ೪-೧೦೦)

ಒಡನೆಯ ಪುಣಿಸೆಯ ಮರಗಳ್
ಕೆಡೆದುವು ನಿಮಗಿನ್ನುಮಜ್ಜ ಪೆಂಡಿರ ಕಜ್ಜಂ
ನಡೆವುದಕೆ ತೆಱಹದಲ್ಲದು
ನಡೆಯೆಂದೊಡೆ ಬಿಟ್ಟು ಬಿದಿರ್ದು ಪೋದಂ ಮುದುಪಂ ೪೪೮
ಕೊರೆವಳ್ ಪಲ್ಲಿಂ ಬಲ್ಮೆ
ಗರೆವಳ್ ಕನವರಿಸಿ ಬಳ್ಳುಗರೆವಳ್ ಬಾಯಿಂ
ಸುರಿವುದು ನೊರೆ ಕೇಳ್ಪಟ್ಟ
. . . . ಳೊರ್ವಳಕೆಯ್ತಕಂಜಿ ಪೊಱಮಟ್ಟೆರ್ದಂ ೪೪೯

ಮಸಣದ ಬೂದಿಯಂ ತಳಿದರೋ ತಲೆಸೇಸೆಗೆ ಮಿಂಡರೊತ್ತೆಯೇಂ
ಬಸಲೆಯ ಬಾಡೊ ಚೌಕಿಗೆಗೆ ಬಪ್ಪುದುಮಾಗುಳಿ ಮುನ್ನ ಬಪ್ಪುದು
ದ್ದೆಸದೆ ಬೊಜಂಗನೊಳ್ ನುಡಿಯುತುಂ ಕೊರೆವಳ್ ಕಡುನಿದ್ರೆಗಣ್ಣಿಯೇಂ
ಕಿಸುಕುಳಿ ಕುಂಭಕರ್ಣನೊಡವುಟ್ಟಿದಳೋ ಹಡೆದುಂಬ ಸೂಳೆಯೋ ೪೫೦
ಕುಡಿದೊಡೆ ಪೊಟ್ಟೆಯಿಂದೆ ಬೞನೀರ್ ಪೊಱಪಾಯ್ದುವೆ ಸುತ್ತಿ ಕಾಲನೇಂ
ತೊಡರ್ವುವೆ ದಾಂಟುವಲ್ಲಿ ನಿಱ ಪುತ್ತುರಿಯೂದಿದೊಡಂತೆ ಬಾಯನೇಂ
ಸುಡುವುದೆ ಮುಟ್ಟೆ ದೇವರೊಳೆ ಕೀಲಿಪುದೇ ಕರಮೇಕೆ ಸೂರುಳೆಂ
ದೊಡರಿಸ[4]ಲಿನ್ನದೇಕೆಲಿಗೆ ಮನ್ನಿಪ ಮನ್ನಣೆಯುಳ್ಳಡೆಯ್ದವೇ[4] ೪೫೧

(ಚಂದ್ರಪ್ರಭಪುರಾಣಂ ೮–೬೦)

ನುಡಿಯೆಲ್ಲಂ ಪೊಲೆ ಸೂರುಳೊಳ್ ನಿಱ ಪೊಸಂತಿಲ್ [5]ಪುತ್ತುವಾಯ್ ಪೊಂಗೊೞಲ್
ಕುಡಿನೀರೊರ್ಮೆಗೆ[5] ಕಮ್ಮನಪ್ಪ ಬೞನೀರೂರೂರ ದೈವಂಗಳುಂ

---

[1] ಪಱ (ಕ) [2] ದಂತ್ತಿರಮೆಮ (ಖಬ) [3] ನರೆಪಂ ನರೆ (ಅ) [4] ಲಣ್ಣಪೆಣ್ಣ ಪುಸಿಮುನ್ನಣೆಯುಳ್ಳೊಡಮಂತದೆಯ್ದದೆ (ಅ) [5] ಪೊಂಗೊೞಲ್ ಪತ್ತುವಾಯ್ ಕುಡಿನೀರೀಕೆಗೆ (ಅ)

ಪಡಿಗೆತ್ತೋಡಿದುವೀಕೆಗಂಜಿ [1]ವಿಟರೆಂ[1]ದುಂ ಗೆಂಟು ತಮ್ಮಜ್ಜಿ ಸ
ತ್ತೊಡಮಾ [2]ಮಾಯದ[2] ಪೆಣ್ಣ ಕಣ್ಗೆ ಪುಸಿಕಣ್ಣೀರಲ್ಲದೇಂ ಬರ್ಕುಮೇ ೪೫೨
(ಲೀಲಾವತಿ ೨-೧೦೨)

ಸಿರಿ ಚೆಲ್ವಂ ಸಿರಿಯಲ್ಲಿ ರೂಪು ಮಿಗೆ ಚೆಲ್ವಂ ರೂಪಿನೊಳ್ ಮತ್ತೆ ಮುಂ
ಬರೆಯಂ ಚೆಲ್ವಮಿನಿತ್ತುಮೆಯ್ದೆ ಕಡು ಚೆಲ್ವಂ ಬೇಟದಿಂ ಬೇಂಟಮೆಂ
ಬರಸಂ ಮನ್ನಿಸದಂಡನಾಯಕಮದೇಕಾ ಲಕ್ಷ್ಮಿಯಾ ರೂಪುಮಾ
ಹರೆಯಂ ಬೇವಿನ ಸುಗ್ಗಿ ಪಾಟ್ಮನೆಯ ಚಿತ್ರಂ ಕಾಡ ಚಂದ್ರಾತಪಂ ೪೫೩
(ಅನಂತನಾಥಪುರಾಣಂ ೮-೫೮)

ಮತ್ತೆ ಬೊಜಂಗರಿಲ್ಲ ಪೊಜ[3]ಗೊ[3]ಚ್ಚತವೇಂ ನಿನಗುಂಟು [4]ಕೊಳ್ಳೆ[4] ಚಿ
ಕ್ಕೊತ್ತೆಗೆ[5]ಯೊತ್ತೆಯಿತ್ತು[5] [6]ಶನಿ[6]ಯಂತಿರೆ [7]ನಿಲ್ವರೆ[7] ಸೂಳೆ ಕೇಳ[8]ದೀ[8]
ಯೊತ್ತೆಗೆ ನಾಣ್ಚೆಯುಂ ಪೞಿಮಡಾಂ ಮೊಱೆಯಿಟ್ಟಪೆನೆಂದು ಸುತ್ತಿದಳ್
ಮುತ್ತಿದಳಬ್ಬೆ ಚಾ[9]ಕಿ[9]ಗೆಯನೊರ್ಬಳೆ ಮಾರಿಯ ಮೂರಿಯಂದದಿಂ ೪೫೪
(ಲೀಲಾವತಿ ೨-೧೨೨)

ಹಡಣಂ ಪೋದತ್ತು ಕುತ್ತಂ ಕಱಿದುದು ಶನಿ ಪಿಂಗಿತ್ತು ಗುಹ್ಯಾಂಗದಿಂ ಮ
ತ್ತೆಡೆಗಪ್ಪಿತ್ತೆಂದು ಜನ್ಮಂ ಹಱಿದುದುಱಿದುದೆಂತಾನುಮೇಱಾಳಿ ಭಂಡಂ
ಕಡು ಭಂಡಂ ಕೂಸಿಗೀಗಳ್ ಬಿನದದ ತಡೆ ಬಿಟ್ಟತ್ತವಳ್ಗೆಂದದೊರ್ವಳ್
ನುಡಿವಳ್ ನಿಶ್ಚಿಂತದಿಂ ಕುಂಟಣಿ ನೆರೆಯವರೊಳ್ ಸ್ವೇಚ್ಛೆಯಿಂದಂ ನಗುತ್ತಂ ೪೫೫

ಗಾಳಿಸು ಗೆಲ್ವನಂ ಹರಹು ಹೂಜೆಗನಂ ಸುಲಿ ಸುತ್ತುಗಾಱನಂ
ತಾಳಿಸು ತೇ[10]ಪೆಯಂ[10] ಕುಡದೆ ಕಾಡುವನಂ ರಸಬೋನವೆತ್ತು ಮಾ
ಕಾಳಿಗೆ ಧಾಳನಂ [11]ನೆ[11]ಗಪು ಟಕ್ಕಿಪನಂ ತುಱಿ ಮೇಕುದೋರ್ಪನಂ
ಮಾಳ[12]ಚಿ[12]ಗಿಕ್ಕು ಪೊಱಿಬ್ ಪುಸಿವನಂ ಪೊ[13]ಸತಿ[13]ಕ್ಕಗೆ ಪ[14]ಚ್ಚೆಗಾ[14]ಱನಂ ೪೫೬
(ಲೀಲಾವತಿ ೨ ೧೦೭)

ಮನೆಯೊಳ್ ಕಾಲ್ ನೆಲೆಗೊಂಡು ನಿಂದಱಿಯನೀ ಜೋಕಾಱಿಯಂತಿರ್ಕೆ ಸೊಂ
ಬನೊಳೊಲ್ದಾಡುವಳೊಲ್ಲಳಾ ಹರಳಿಗಂ ಕಡ್ದೊ[15]ಯ್ವ[15]ನೇನಿರ್ದೊಡಂ
ತನಗಿಂಬಿಲ್ಲದೆ ಗೆ[16]ಯ್ಯ[16]ನಂತದಱಿನೀ ಪೆಣ್ ಪೆ[17]ಣ್ಣಿನೊಳ್ ಗಂ[17]ಡುಗಂ
ಡಿನೊಳಾವಾವ ಮುಹೂರ್ತದೊಳ್ ಪಡೆದನೀ ಪಾಱಾದ ಮೂಳಂಗಳಂ ? ೪೫೭

---

[1] ದಿಟವೆಂ (ಖ ಗ ಬ) [2] ನಂಜಿನ (ಅ) [3] ಸೊ (ಕ ಖ) [4] ತೋಳೆ (ಅ)
5 ಪೊಕ್ಕೆಯಿಂತು (ಅ) [6] ಸುನಿ (ಅ) [7] ನಿಲ್ತಿರೆ (ಖ ಬ) [8] ದೊಃ (ಅ) [9] ರಿ (ಖ ಬ)
10 ಪಸಂ (ಅ) 11 ತೆ (ಖ ಬ) 12 ಚೆ (ಅ) 13 ಸೆದಿ (ಅ) 14 ಚ್ಚಕಾ (ಖ ಬ ಗ)
15 ಯ್ವೆ (ಖ ಬ) 16 ಯ್ಯ (ಖ ಬ) 17 ಣ್ಣೆನೊಳ್ಗಂ (ಖ ಬ)

ಪೂವಿನ ಸುಗ್ಗಿ[1]ಯಂತೆ[1] ಪೊಸಬೇಟಮದಾದೊಡೆ [2]ಕಣ್ಣೊ[2]ಳೋಪರಂ
ಕಾವುದು ಸುತ್ತಿ ಮುತ್ತಿ ಸವಿಯೊಳ್ ಸೆಱಗೆಯ್ವುದು ಜೀವನುಂ ತಡಂ
ಗಾವುದು ಮೆಚ್ಚಿತಂ ಸಲಿಸಿ ನಲ್ಲರ ಮೆಯ್ಸುಖಕೆಂದು ದೇಹಮಂ
ತೀವುದು ತಾನೆ ತನ್ನ ಪಗೆಯಪ್ಪ[3]ದೆ[3] ಬರ್ಪುದೆ ಪೋದ ಜವ್ವನಂ ೪೫೮
(ಲೀಲಾವತಿ ೧೪-೪೩)

ಬೇಟದ ಸುಗ್ಗಿ ನಾಲ್ಕುದಿನವಾ [4]ದಿನಪೊ[4]ಳ್ [5]ಬಸ[5]ಮಾದ ಗಂಡರೊಳ್
ಕೂಟಮೆ [6]ಕೋ[6]ಟೆಯೆಂದು ಸಮಸಂದೆವೆಯಂ ಮಱೆಯಾಗದಂತು ಬಾಯ್
ನಾಟಿರೆ ಬಾಯೊ[7]ಳಿರ್ಪು[7]ಡುಗದಂತೆ ತೊ[8]ಡರ್ದಿ[8]ರದೇಕೆ ತೋಟಿಯಂ
ಪಾಟಿಸಿ ತಾಮೆ ತಮ್ಮಗಳನಾಱಡಿಗೊಳ್ವರೊ ನಾಡ [9]ನಾಡೆಯರ್[9] ೪೫೯
(ಲೀಲಾವತಿ ೧೪-೪೦)

ನಸುನೋಟಂ ಜನವಶ್ಯಮಾಕೃತಿ ಗತಿಸ್ತಂಭಂ ವಚಃಪ್ರೌಢಿ ಭಾ
ವಿಸೆ ಸಮ್ಮೋಹನಮಂತ್ರವಾದರಣೆ ಚಿತ್ತಾಕರ್ಷಣಂ ಕೂಟವ
ನ್ಯಸುಖೋತ್ಪಾದನಮಂತ್ರ ದುರ್ಧರ ವಿಯೋಗಂ ಮಾರಣೋದಾರಯಂ
ತ್ರಸಮಂ ತಾನೆನಿಸಲ್ಕೆ ಸಾಲದೆ ಪುರಂಧ್ರೀಮಾತ್ರಮೆಂಬಾರ್ತೆಯೊಳ್ ೪೬೦

ಅರುಣಾಧರೆ ಶಶಿಮುಖಿ ಕನ
ಕರೋಚಿ ಪುಂಖಾಂಗಿ ಗುರುಕುಚದ್ವಯೆ ಸಿತವಿ
ಸ್ಫುರಿತದೃಶೆ ಮಂದಯಾನೆಯ
ನುರುಮುದದಿಂ ವಾರವನಿತೆಯೆನ್ನದರೊಳರೇ ೪೬೧

ಅತಿರಕ್ತೆರ್ವರುಂ ಗಡ
ರತಿ ಗಡ ರಾಗೋತ್ಕಟಂ ಗಡೇಕಾಂತಗೃಹ
ಸ್ಥಿತಿಗಡಮೇನೆಂಬುದೊ ಪೇೞ್
ಸತತಂ ತಂತಮ್ಮ ಪದದ ಮೆಯ್ಯಱಿದವರಾ್ ೪೬೨

ನೆರೆ ಪಱಿದೋಡೆ [10]ಕೇರಿ[10] ಪೊಱಗಿಕ್ಕೆ ಜನಂ ಬೆಱಗಾಗೆ ಬೀದಿಯೊಳ್
ನೆರೆಯೆ ಕುಕಿಲ್ವ ಕೂಕಿಱಿದು ಕೊಂದೊಡೆ ಸಾವವೊಲಾರ್ದು ಕೂಡದೊಂ
ದರಸಿಯದೊಂದು ಹಾದರಮೆ [11]ಜಕ್ಕಿಯ ಕೂ[11]ಟಮೆ ಕೂಟದೇಟಿಗ್ಗಿಯೊಳ್
ಸುರಕೆನಬಾರದೆಂಬ ಬೆಲೆವೆಣ್ಣಿನ ಕೂಟದೊಳಿಕ್ಕು ಕಿಚ್ಚುಮಂ ೪೬೩
(ಅನಂತನಾಥಪುರಾಣಂ ೮-೫೭)

---

[1] ಯತ್ತೆ (ಅ) [2] ಕಾಣ (ಖ ಬ) [3] ಪು (ಖ ಬ) [4] ದೆಸೆಯೊ (ಅ) [5] ವಶ (ಖ) [6] ತೋ (ಅ) [7] ಳಪ್ಪು (ಅ) [8] ಡಂಕಿ (ಅ) [9] ಗೊಟ್ಟಿಯರ್ (ಅ) [10] ಕೇಱಿ (ಅ)
[11] ಜಕ್ಕಿಯರೂ (ಅ)

ಬಾರ ಮರಾಳಿಕಾಗಮನೆ ನೋಡ ಚಕೋರವಿಲೋಲನೇತ್ರೆ ನಿಂ
ದಾರಯ ಪೀವರಸ್ತನನಿತಂಬಭರಾಲಸೆ ಕೇಳ ಕಾಮಕಾ
ಳೋರಗ ಕೇಶಪಾಶೆ ಎನಗುತ್ತರಮಂ ಕುಡ ಚಾರುವೇಣುವೀ
ಣಾರವೆ ನೀನದಾರ ಮಗಳೆಲ್ಲಿಗೆ ಪೋದಪಯಾವುದಾಶ್ರಯಂ ೪೬೪

(ಶಬ್ದಮಣಿದರ್ಪಣಂ ೧೨೮ನೆಯ ಸೂತ್ರಕ್ಕೆ ಉದಾಹರಣೆ)

ಸರಸಿಜನೇತ್ರೆ ಪೂರ್ಣಶಶಿಮಂಡಲವಕ್ತ್ರೆ ಗಭೀರವಾಣಿ ದಿ
ಗ್ವರವರಕೀರ್ತಿ ನಾಥವರವಂಶಗುಣಾಸ್ಪದಚಿತ್ರಪುತ್ರಿಯಾ
ಸುರತವಿಲಾಸವಲ್ಲಿಗವನಿರ್ದುದೆ ಮಂದಿರವೇಕೆ ದೂರದಿಂ
ಪರಿಕಿಸಿ ಬಂದು ರಾಗದೆ ತಳಾಱಿಕೆ ನಿನ್ನಯ ಬೆನ್ನೊಳೋಪಳಾ ೪೬೫

ಮಿಡಿಯಂ ಸಾರ್ಚಿ ಪೞಂಚಿ ಸೋರ್ವುಡಿ ತಡಂಗಾಲ್ವೊಯ್ಯೆ ಸಂವ್ಯಾನಮು
ಳ್ಪುಡೆಯಂ ವಾಮಕರಾಗ್ರದಿಂ ಪಿಡಿದು ವೃತ್ತೋತ್ತುಂಗವಕ್ಷೋಜದಿ
ಟ್ಟೆಡೆಯೊತ್ತೊತ್ತಿನೊಳೆತ್ತಲುಂ ಕೆದಱಿ ಮುಕ್ತಾಮಾಲೆ ಬಂದೋಪವಳ್
ಪಿಡಿದಬ್ಬಾಡಿ ಕನಲ್ದು ಪಕ್ಕೆದಲೆಯಂ ಪೋಪೋಪನಂ ಕೋಪದಿಂ ೪೬೬

ನಡುಗೆ ತನು ಪೊಡರೆ ಬಿಸುಸುಯ್
ಗುಡುಗುಡನುಗೆ ಬಾಷ್ಪವಾರಿ ಕಾಲತ್ರಯಮಂ
ಪಡೆದೋಪಳ ಮುಳಿಸಿತ್ತುದು
ಕಡು ಚೆಲ್ವಂ ಪ್ರಿಯತಮಂಗೆ ಬಕ್ಕಂಬಯಲೊಳ್ ೪೬೭

ಸವಿ ತವದನ್ನೆಗಂ ಮನದ ಪತ್ತುಗೆಗಳ್ ಕಿಡದನ್ನೆಗಂ ಪೆಱಂ
ಗವಳೆಡೆಯಾಡದನ್ನೆಗವೊಡಂಬಡುಮೇವಮುಮಿಲ್ಲದನ್ನೆಗಂ
ತವಿಪುದು ತನ್ನನೊಪ್ಪಿಸುವುದೆಂದುದನೆಂಬುದು ಕೂರೆ ಕೂರ್ಪುದೋ
ಱುವುದು ಪಲುಂಬಿ ಪೋದ ಬೞಿಕಂ ಪರಪ್ಪು[1]ಬ್ಬೆಗ[1]ಯಾಗಯಂಗಳಂ (?) ೪೬೮

(ಚಂದ್ರಪ್ರಭಪುರಾಣಂ ೮-೮೧)

ವ್ಯಾಳಬಿಡಾಳದಂತುಗುರ್ಗಳಂ ನಲಿಯಾಡುವ ಸೊಕ್ಕಿ ಬಂದ ಶುಂ
ಡಾಳದ ಮಾಟಿಕ್ಕಯಿಂದೆ ಕರದಿಂದೆ ತುಡುಂಕುವ ಮೆಯ್ಯ ಥಾಳ ಕೊಂ
ಡಾಲದೊಳೆನ್ನನೋಲಗಿಪ ಬರ್ಸದೊಳಿಂದುಱಿದುವೊ ಡಾಳಚಂ
ಡಾಳಸುಧಾಳವಾದಿನಿಯನುಂ ಕೆಲನುಂ ನಗುವಂತೆ ಮಾಡಿದ್ಪೈ (?) ೪೬೯

[2]ಉರದಿಂ[2] ಬರಿಯಿಂದಗ್ರಂ
[3]ಬರೆ ಕೆಂಪೆಸೆಯಲ್ಕೆ[3] ಸೀಳ್ದ ನಖರೇಖೆಯೆಸೞ್

---

[1] ತ್ತರೆ (ಅ) ದ್ಧಗ (ಚಂ ಪ್ರ ಪ [illegible] ಪ್ರತಿ) [2] ಕೊರಲಿಂ (ಅ) [3] ಬನೆಗಂ ಕೆಂಪೆಸೆಯೆ (ಅ)

[1]ಪೊ[1]ರೆಯೆನಿಸೆ ಪದ್ಮಕುಟ್ಮಳ
ದಿರವಂ ಪರಿಭವಿಸಿ[2]ದತ್ತು ತ[2]ತ್ಕುಚಯುಗಳಂ ೪೭೦
(ಚಂದ್ರಪ್ರಭಪುರಾಣಂ ೮-೫೬)

ಮಿಱುಗುವ ವಿದ್ರುಮಾಧರದ ಮಧ್ಯದೊಳಾಯತವೃತ್ತಮಾದ ನು
ಣ್ಗಱೆಯಿದು ಮನ್ಮನಕ್ಕೆ ಪಡೆದಪ್ಪುದು ಮನ್ಮಥವಹ್ನಿತಾಪದಿಂ
ಮಱುಕಮನಪ್ಪುಕೆಯ್ದೆರ್ದೆಯೊಳಿರ್ಪುದನೊಲ್ಲದೆ ಬಾಯ ಬಾಗಿಲಿಂ
ನೆಱೆ ಪೊಱಮಟ್ಟು ಪೋದಿವಳ ಲಜ್ಜೆಯ ಪಜ್ಜೆಯಿದೆಂಬ ಪೋಲ್ಪೆಯಂ ೪೭೧
(ಚಂದ್ರಪ್ರಭಪುರಾಣಂ ೮-೫೭)

ಚುಂಬಿ[3]ಸಿ[3] ಬೀಗಿ ಬೆಳ್ಪಡರ್ದ ಬಾಯ್ದೆಱೆಯಾಳಿ[4]ಸಿ[4]ದಪ್ಪಿನೊತ್ತಿನಿಂ
ದಂ ಬಿಡೆ ಗುಜ್ಜುಗೊಂಡ ಮೊಲೆ ಪೋರ್ಕುಳಿ[5]ಯಿಂ[5]ದಮೆ ಹಂತಿದಪ್ಪಿ ತಾ
ಱುಂಬೞಿಯುಂ ತೆರಳ್ದ ಕುಪುಳುಣ್ಮೆ ಬೆಮರ್ ನಸುಬಾನಲಾದ ಬೊ
ಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡಿಪುವೀ ಲತಾಂಗಿಯಾ ೪೭೨
(ಚಂದ್ರಪ್ರಭಪುರಾಣಂ ೮-೭೨)

ಉನ್ನತಿಯಿಂದುತ್ಕಂಠತೆ
ಯನ್ನೆಱೆ ನಿನಗೀವುದಿವರ್ಗೆ ಮಾಡವೆ ಕೊರ್ಬಂ
ನಿನ್ನನೆರ್ದೆಗಿಡಿಪುವುೞಿದರ
ನಿನ್ನೆರ್ದೆಗಿಡಿಸವೆ ಲತಾಂಗಿ ಕಠಿನಕುಚಂಗಳ್ ೪೭೩
(ಚಂದ್ರಪ್ರಭಪುರಾಣಂ ೮-೭೪)

ಒಸೆದಪ್ಪುವ ಪದದೊಳ್ ಮೆಯ್
ನಸುಸೋಂಕದ ಮುನ್ನಮೆ[6]ದೆಯೊಳೆಡೆವೊಕ್ಕವೊ[6]ಲು
ರ್ವಿಸುವ ಪುಳಕಕ್ಕೆ ಕಂಟಕ
ವೆಸರಂ ಕೊಟ್ಟುಜನ ಸುಜನತೆಗೆ ಬೆಱ[7]ಗಾದೆಂ[7] ೪೭೪
(ಚಂದ್ರಪ್ರಭಪುರಾಣಂ ೮-೭೫)

ಪತ್ತುಗೆಗೆಟ್ಟುಮೊಂದು ನುಡಿಗೊಂಬತನೆಂದೆರಡೆಂಟನೀಗಳಾ
ನೆತ್ತಱುವಂದಮೆಂಬ ತೆಱದಿರ್ದಪೆ ನಲ್ಲನ ತಾಯ ತಂದೆಯ
ಚ್ಚೊತ್ತಿದ ಮೂಱು ಮೋಹಮುಮನೇೞೆಲೆವೋಗದೆ ಕಲ್ತೆ ನಾಲ್ಕು ಸೂೞ್
ಸತ್ತೊಡ[8]ದಾರೆಯೆಂದೞಪ[8]ಲ್ಪೈದೊಲವೆಯ್ದುಗುಮಿನ್ನೆಗಂ ಪ್ರಿಯಂ ೪೭೫
(ಚಂದ್ರಪ್ರಭಪುರಾಣಂ ೮-೭೯)

---

1 ಗೊ (ಅ) 2 ತೀಕೆಯು (ಅ) 3 ಸೆ (ಖ) 4 ಸ (ಖ ಬ) 5 ಯಂ (ಖ ಬ) 6 ಡೆಯೊಳೆಡೆಗುಡಪವೊ (ಅ) 7 ಗಪ್ಪಂ (ಅ) ಗಾಗೆಂ (ಖ ಬ) 8 ವಾಶಿಕ ಯಿಂತಿವಳ (ಖ ಬ)

ಒಲವೊಳಗಾಗೆ ದೈವದಿನದಂ ಬಡವಂ ನಿಧಿಗಂಡ ಮಾಳ್ಕೆಯಿಂ
ಸಲಸಲುಮೋವಲುಂ ಸುಖಮನಾರ್ಜಿಸಲುಂ ಬಗೆದಾರದೊಳ್ಪನೊ
ಕ್ಕಲಸಿಕೆಯಂ ನಿಮಿರ್ಚಿ ಪುರುಡಂ [1]ಪೊಸೆದೆಯ್ದೆ ಪೊಲಂಬುದಪ್ಪಿ[1] ಕೋ
ಟಲೆಗೊಳಗಪ್ಪ ಪಾಟ್ಸನದ ಮಾನಸರಂ ಸುಡು ಸಂದ ಗೊಡ್ಡರಂ ೪೭೬
(ಚಂದ್ರಪ್ರಭಪುರಾಣಂ ೮-೮೦)

ತಿವ್ರರಾತ್ಮದ್ಯುತಿ ತೋರ್ಪ ಕರ್ಪುರ ತಿಲಕಂ ತಾರಾಗಣಂ ಬಂದು ನೋ
ಡುವ ಯೂಥಂ ಮಧು ತೆತ್ತಿಗಂ ವಿರಹಿ ಮಾಜಾಂಕಂ ನೃಪಂ ಚಿತ್ತಸಂ
ಭವನಾಗಲ್ ಕಡುಕೆಯ್ದು ಕಾಯ್ದು ಕಳನಂ ಬಂದೇಱುವಂತೇಱಿದಂ
ನವಸಂಧ್ಯಾರುಣಭಾಸಿ ನಾಸವದಿಶಾಶೈಲೇಂದ್ರಮಂ ಚಂದ್ರಮಂ ೪೭೭

ತೊಲಗೆ [2]ಮನ[2]ಸ್ತಮಂ ಕಿಡೆ ನಿಜೇಕ್ಷಣರಾಗದ ಸಂಜೆಗೆಂಪು ನಿ
ರ್ಮಲ ದರಹಾಸಚಂದ್ರಿಕೆಯುಮಂ ಕುಡೆ ಕಾಲ್ವಿಡಿದೋಪ[3]ನೋಪಳಂ[3]
ತೀವುವುದಂ ಪ್ರಸನ್ನತೆಯನೋಪಳ ವಕ್ತ್ರಹಿಮಾಂಶುಮಂಡಳಂ
ಬೆಳಗಿದುದುಣ್ಮಿ ಪೊಣ್ಮಿ ಜಘನದ್ರವಚಂದ್ರಶಿಲಾಂಬುನಿರ್ಝರಂ ೪೭೮
(ಜಗನ್ನಾಥವಿಜಯಂ ೧೬-೧೨೨)

ಶಕುನಿವ್ರಾತಾರವಂ ಮನ್ಮಥರಥಬಲವದ್ಭೀಂಕೃತಂ ಕಂಠನಾದಂ
ಮಕರಾಂಕಜ್ಯಾಲತಾಟಂಕೃತವತಿದೃಢಹಸ್ತಪ್ರಹಾರಸ್ವನಂ ದ
ರ್ಪಕಭೇರೀಭಾಂಕೃತಂ ತಾನೆನೆ ಯುವತಿರತಾರಂಭ ಕೋಲಾಹಲಧ್ವಾ
ನಕಮಂತಾ ಕಂತುಸೇನಾಕಳಕಳದವೊಲಾಶ್ಚರ್ಯಮಂ ತಂದುದಾಗಳ್ ೪೭೯
(ಜಗನ್ನಾಥವಿಜಯಂ ೧೬-೧೨೩)

ಪೊಡುವುತ್ತುಂಗಸ್ತನಂ ಕೊಂಕಱಿದು ನಿಮಿರ್ದ ನೀಲಾಳಕಂ ಜೋಲ್ದ ಬಂಬ
ಲ್ಮುಡಿ ಬೆಳ್ಪೇಱಿರ್ದ ಬಿಂಬಾಧರಮಣಿ ನಸುಕೊಂಕಿರ್ದ ಕರ್ಣೋತ್ಪಲಂ ಕೆಂ
ಪಡರ್ದಾಲೋಲೇಕ್ಷಣಂ ಕಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ
ಕುಡೆ ನೆಮ್ಮಿರ್ದೋಪನಂ ಮೆಯ್ಬೆಮರನೆಲರೊಳಂದಾಱಿಸುತ್ತಿರ್ದಳೊರ್ವಳ್ ೪೮೦
(ಜಗನ್ನಾಥವಿಜಯಂ ೧೬-೧೨೪)

ಮದಿರಾಪಾನಕ್ಕೆ ಮೆಯ್ದಾರದೆ ಸುಱಿವೆಲರಂ ಪಾರದುದ್ಯಾನಮಂ ಸಾ
ರದೆ ಮಲ್ಲೀದಾಮಮಂ ಸೂಡದೆ ಹಿಮರುಚಿಯಂ ನೋಡದಾನಂದದಿಂ ಪಾ
ಡದೆ ಕೆಯ್ಗೆಯ್ದೊಂದಲಂಪಿಲ್ಲದೆ ಕೆಳದಿಯರೊಳ್ [4]ಸ[4]ಲ್ಲದೇಕಾಂತದೊಳ್ ನಿ
ಲ್ಲದಿರಾಂ ಬರ್ಪನ್ನವಾಯಂ ನಿನಗಿದು ವಿಗತಾಪಾಯ[5]ಮಿಾ ಪೇಟ್ದು[5]ಪಾಯಂ ೪೮೧
(ಜಗನ್ನಾಥವಿಜಯಂ ೧೬-೧೨೭)

---

[1] ಪೊಸತೀವಮನಂಟುಮಾಡಿ (ಖ ಬ) [2] ತಮ (ಖ ಬ) [3] ಳೋಪಸಂ (ಖ ಬ) [4] ಸೊ (ಅ) [5] ಮಪ್ಪೊಂದು (ಅ)

ಮುಕುಳಂ [1]ಮಾದಲರಾ[1]ಯ್ತು ಪೆಯ್ಯೆರಿಸಿನಂ ಕಂಪೋಡಿತೀ ಬೆಂದ ದೀ
ಪಿಕೆಯುಂ ಕಱ್ಗುಡಿವಟ್ಟುದೆನ್ನಿನಿಯನಿನ್ನುಂ ಬಾರನೇಕೆಂದು ದ
ರ್ಪಕದಾವಾನಲದ[2]ಗ್ಧ[2] ತುಂಗಕುಚಶೈಲಾಗ್ರಕ್ಕೆ ಸುಯ್ದುಂಬಕಾಂ
ಬುಕಣಾ[3]ಸಾರ[3]ಮನಿಕ್ಕಿದಳ್ ಮದನಮೋಹಾಸಾರಮೆಂಬಂ[4]ದದಿಂ[4] ೪೮೨
(ಲೀಲಾವತಿ ೨-೪೮)

ನಗಲೀ ನಾಯಕಸಾರಕೀನಯನವೃಂದಂ ಸುತ್ತಿನೊಳ್ಪಾದ ಮೈ
ಲಗೆವೆಳ್ದಿಂಗಳ ಸೋಂಕು ಸ್ಪೈರಿಸದವೊಲ್ ಪ್ರೊಂಕಲ್ ಮಡಲ್ವಂದು ರಾ
ಜಗೃಹದ್ವಾರನಿವಿಷ್ಟನಾಗಿ ಸುಖಸಂದೋಹಕ್ಕೆ ಬೀಱಿಕ್ಕೊಟ್ಟು ಸೆ
ಜ್ಜೆಗೆ ಬಂದಂ ಸ್ತಿಮಿತಾಗತೋತ್ಕಂಪಿತಕಾಂತಾಪಾಂಗಮಾಲಾಹತಂ ೪೮೩

ಜಗದಧಿಪತಿಯರಮನೆಯಂ
ಪುಗುವಲ್ಲಿ ಗೃಹಪ್ರವೇಶಮಂಗಳತೂರ್ಯಂ
ಮಿಗೆ ಮೊೞಗಿತ್ತೆನೆ ಪೊಣ್ಮಿದು
ದು ಗಭೀರಂ [5]ತತ್ತೃತೀಯಭೇರೀನಾದಂ[5] ೪೮೪
(ಚಂದ್ರಪ್ರಭಪುರಾಣಂ ೮-೯೩)

ಮುನಿದು ಕಟಾಕ್ಷದಿಂದಡ[6]ರೆ[6] ನೋಡೆ ಭಯಾದೃತನಂತೆ ತೋಱಿ ಸ
ಮ್ಮನಿಸದೆ ಮತ್ತೆ ಕಾಯ್ದೊದೆಯೆ ಕಾಲ್ವಿಡಿದೋವದೆ ಬಯ್ಯೆ ತಳ್ತು ಚುಂ
ಬನಮನೊಡರ್ಚೆ ತತ್ತದುಚಿತಕ್ರಿಯೆಯಿಂದವೆ ನಂದೆವೊಯ್ದು ತ
ನ್ಮನಮುಮನಂತೆ ಸಂತಸಮನೆಯ್ದಿಸಿದಂ ರತಿಸೌಖ್ಯ[7]ದಿಂ[7] ನೃಪಂ ೪೮೫
(ಚಂದ್ರಪ್ರಭಪುರಾಣಂ ೮-೯೪)

ಸುದತಿ ರತಾಂತಸೌಖ್ಯಮನಧೀಶನ ದೇಹದಿನಂದು ಪೋಗಲೀ
ಯದೆ ಪಿಡಿದಂದದಿಂ ತೊಡೆಯ ತೋಳ ತಗುಳ್ಪಮರ್ದೊಪ್ಪೆ ನಾಡೆಯುಂ
ಪದೆದಮರ್ದಪ್ಪಿದಂತಿರಮರ್ದಪ್ಪಿರೆ ಬಂದ ಸುಷುಪ್ತಿ ಚಿತ್ರಮಂ
ಪುದಿಯೆ ಮಹೀಶನಿರ್ದನಿನಿಸಂ ನಿಜಯೋಗದೆ ಯೋಗಿಯಿರ್ಪವೊಲ್ ೪೮೬
(ಚಂದ್ರಪ್ರಭಪುರಾಣಂ ೮-೯೫)

ನೊರೆಯೊಡನೆ ತಡಿಗೆ ಬೆಳ್ದಾ
ವರೆಯು ಕಱಿಲ್ದೆಸಟ್ಗಿಳ್ಪಿದೆ ಕೊಳನೊಳ್ ಸಾರ್ವಂ
ತಿರೆ ಪಡುವಣ ದೆಸೆಗಿರದೋ
ಸರಿಸಿರ್ಪವು ತಿಂಗಳೊಡನೆ ಮೀನ್ಗಳ್ ನಭದೊಳ್ ೪೮೭
(ಚಂದ್ರಪ್ರಭಪುರಾಣಂ ೮-೯೬)

1 ಬಾಯ್ದರಲಾ (ಖ ಬ) 2 ಗ್ಧ (ಅ) 3 ನೀಕ (ಅ) 4 ತೆವೋಲ್ (ಆ)
5 ತತ್ತ್ರಿಯಾಮ ತೂರ್ಯಾರಾವಂ (ಅ) 6 ರಿ (ಖ ಬ) 7 ನುಂ (ಖ ಬ)

ರತಿನಾಟಕಾಭಿನಯಮಂ
ಕೃತಕೃತ್ಯಂಮಾಡಿ[1]ಯೊಯ್ಯನಾ[1]ಗಿರೆ ದೀಪ
ದ್ಯುತಿ ಯುವತಿಯರೊಳ್ ನಿದ್ರಾ
ವತಾರಮಾದತ್ತು ಮೂಡವೆಳಗಪ್ಪಾಗಳ್ ೪೮೮
(ಜಗನ್ನಾಥವಿಜಯಂ ೧೬-೧೩೭)

ತೆರೆವೊಯ್ಲಿಂದೆಬ್ಬಿ ಕಾಸಾರದ ಪರಿಸರದೊಳ್ ನಿದ್ರೆಗೆಯ್ವಂಚೆವಿಂಡಂ
ದರಹಾಸಶ್ರೀಯನಂಭೋಜಿನಿಗೆ ಪಡೆದು ನೆಯ್ದಿಲ್ಗಳಿಂದುಳ್ಳಲರ್ವಂ
ಬುರುಹಕ್ಕೆಟ್ಟಿರ್ಪ ಭೃಂಗಂಗಳ ಗಜಱಯೆಲರಿಂ ಕೊರ್ಬಿ ಚಾಂಡಾಲಗೇಯ
ಸ್ವರದೊಳ್ ತಳ್ವೊಯ್ದ್ದತಿಸ್ವೈರದೆ ಸುಟಿಱದುದು ವೈಭಾತಿಕಂ ಮಾತರಿಶ್ವಂ ೪೮೯
(ಜಗನ್ನಾಥವಿಜಯಂ ೧೬-೧೩೬)

ಕೂಡೆ ಮನೆಮನೆಯೊಳೊಯ್ಯನೆ
ಚಾಡಿದುವೊಡನೊಡನೆ ಮಿಥುನತತಿಯಿರುಳೊಲವಿಂ
ಸೂಡಿದ ಪೂಮಾಲೆಗಳುಂ
ಮಾಡದ ಸೊಡರ್ಗುಡಿಗಳುಂ ನಿಶಾನಿರಸನದೊಳ್ ೪೯೦
(ಚಂದ್ರಪ್ರಭಪುರಾಣಂ ೮-೯೮)

ಓರಂತೆ ಮೆಚ್ಚಿದಂ ಕೃತಿ
ಸಾರಂ ಶಶಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೪೯೧

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸು ಧಾ ರ್ಣ ವ ದೊ ಳ್
ಚಂದ್ರೋದಯವರ್ಣನಂ ಅಷ್ಟಮಾಶ್ವಾಸಂ ಸಂಪೂರ್ಣಂ

1 ರಜ್ಯಮಾ (ಅ)

# ಸೂರ್ಯೋದಯ ವರ್ಣನಂ

ಕುಮುದಂ ಮಿಾನ್ ಚಂದ್ರಮಂ ಚಂದ್ರಿಕೆ ಕಳೆಯಱತಂ ಜ್ಯೋತಿಸಸ್ಯಂ ನಯಂಗುಂ
ದೆ ಮನಂ ಪಂಕೇರುಹಂ ತಣ್ಣೆಲರವಸರತೂರ್ಯಂ ರಥಾಂಗದ್ವಯಂ ಸಾಂ
ಧ್ಯಮಯೂಖಂ ಪೆರ್ಚೆ ಮರ್ಬುಂ ಸುಸಿಲ ಮಱಪು ಪಕ್ಷಿಸ್ವನಂ ಭೈರವೀರಾ
ಗಮುಗುರ್ವಂ ಬೀಱಿ ಪಾಂಥರ್ ನಡೆಯೆ ಕವಿಯಿನರ್ಕೋದಯಸ್ತೋತ್ರಮಕ್ಕುಂ ೧

ಹಳಹಳಸಿರ್ದ ತಾರೆ ಕಳೆಗುಂದಿದ ಚಂದ್ರನಲರ್ಕೆಗುಂದಿದು
ತ್ಪಲ[1]ಮತಿ[1]ಶೈತ್ಯಮಪ್ಪೆಲರು ನಂದುವ ದೀಪ್ತಿಯಗಲ್ವ ಜಾರೆಯರ್
ಗಲಿಪುವ ಕೋೞ ಶಂಖಮರುಣಚ್ಛವಿ ಕೆಂಪಿನಮಂಡಲಂ ರತ
ಕ್ಕೆಳಸುವ ಕೋಕಮಬ್ಜ[2]ವಿಕಸಂ[2] ಸಲೆ ಸೂರ್ಯನ ವರ್ಣನಕ್ರಮಂ ೨

ನಿರುಪಮ ಸುಕುಮಾರತೆಯಂ
ಧರಣಿಗೆ ನೆಱೆಯಱಪಲುಷ್ಣಕರನ ಕರಂಗಳ್
ಪರೆಯದ ಮುಟ್ಟದ ಮುನ್ನಮೆ
ಮುರುಟೆದುವೆನೆ ಮುಗಿದುವುತ್ಪಲಪ್ರಕರಂಗಳ್ ೩

(ಲೀಲಾವತಿ ೩-೮)

ಪೊಳ್[3]ಪಂಚೆ[3]ವೋಯ್ತು ತಾರಗೆ
ಬೆಳಗ[4]ಱತು[4]ದು ಹಿಮಕರಂಗೆ [5]ನಾಡೆ[5] ಚಕೋರಾ
ವಳಿ ಬೆಱಗಾದುವು ಕುಮುದಂ
ಗಳ ನಗೆಯಗೆಯೆತ್ತಿ ಪೋಯ್ತು ಮುನ್ನೆಸಱನೊಳ್ ೪

(ಲೀಲಾವತಿ ೩-೫)

ನಿಲ್ಲದೆ ತಮೋಗಜಂ ಕಿಱ
ದಿಲ್ಲದೆ ಬೆಳೆದೊಗೆದ ಪಡುವಣವನೀ ಜನಮಂ
ತಲ್ಲಿ ಮರವಾಯೆ ಪಡುಗಡ
ಲಲ್ಲುದಿರ್ದುವು ಬಹಳ ತರಳ ತಾರಾಕುಸುಮಂ * ೫

ಒದವಿದ ತಾರಗೆಗಳ್ ನಿ
ಲ್ಲದವೆಲ್ಲಂ ಪರೆದು ಪೋಗೆ ಬೆಳಗಪ್ಪಾಗಳ್
ಚದುರಂಗದ ಬೆಳ್ಗರುವುಡು
ಗಿದ ನೀಲದ ಮಣಿಯ ಮಾಟಿಕ್ಕೆಯಾಯ್ತಾಕಾಶಂ ೬

---

[1] ವನ (ಗ ಘ) [2] ದುದಯಂ (ಖ ಬ) [3] ಪಿಂಬು (ಅ) ಪಿಂದೆ (ಖ ಬ)
[4] ಗುಳಿ (ಅ) [5] ಮಾಯ್ದು (ಅ) * ಈ ಪದ್ಯ (ಖ ಬ) ಪ್ರತಿಗಳಲ್ಲಿಲ್ಲ

ಒದವಿದ ಗಗನಾಂಗಣದೊಳ್
ಕೆದಱಿದ ಪೂವಲಿಯ ಕಸವನೇಂ ಕಳೆದರೊ ದಿ
ಕ್ಸುದತಿಯರೆಂಬಂದದಿನೊ
ರ್ವೊದಲೊಳ್ ಮೀನ್ ಪರೆದು ಪೋದುವರುಣೋದಯದೊಳ್ ೭

ಎಸಗಿದುದು ತಣ್ಣೆಲರ್ ನಾ
ಲ್ದೆಸೆ ಪಳಚನೆ ತೊಳಗಿ ಬೆಳಗಿ ತುಱುಗಿದ ತಾರಾ
ಪ್ರಸರಮವು ಕಂಚಗಾಱ
ಪ್ರಸರಮನುಡುಗಿದವೊಲುಡುಗಿ ಪೋದುವು ನಭದೊಳ್ ೮

[1]ಲತಿಕಾಲಾಸ್ಯೋ[1]ಪದೇಶವ್ಯಸನಿ ನವಲತಾಂದೋಳಿಕಾಮೋದಸಂತ
ರ್ಪಿತ ಚಂಚಚ್ಚಂಚರೀಕಂ ಕಮಲವನರಜೋರಂಜಿತಾಂಗಂ ಪುಳಿಂದೀ
[2]ರತಘರ್ಮ[2]ಸ್ವೇದವಿಚ್ಛೇದನಪಟು ಮೃಗಸಂದೋಹರೋಮಂಥಫೇನೋ
ದ್ಗತಬಿಂದುಸ್ಯಂದಿ ತೀಡಿ[3]ತ್ತೆಸಗಿ ಸುರಭಿ[3]ವೈಭಾತಿಕಂ ಮಾತರಿಶ್ವಂ ೯
(ಕಾದಂಬರಿ ಪೂ. ಭಾ ೧೪೫)

ತೀರ್ದುದು ಸುವರ್ಣಮುಡುಪನೊ
ಳಿರ್ದೊಡೆ ಪಡಪಾ[4]ಗ[4]ದೆಂದು ರವಿಯಂ ಕರೆಯ
[5]ಲ್ಕಿರ್ದ[5]ಲರ [6]ಧಾರೆ[6]ಯುಱಿಂದವೊ
ಲಿರ್ದಪ[7]ನುಱೆ ಕಂದಿ ಪಡುವದೆಸೆಯೊ[7]ಳ್ ಚಂದ್ರಂ ೧೦
(ಅನಂತನಾಥಪುರಾಣಂ ೮-೬೦)

ಪೆಱದೆಗೆದು ಚಂದ್ರಿಕಾಜಲ
ಮಱಿತುದು ಕೆಸಱಂತೆ ತೋಱೆ ಗಗನಚ್ಛವಿ ಬಾಂ
ದೊಱೆಯಪರತಟದೊಳೆಳಮೀಂ
ಗುಱುಕುವ ಬಕನಂತಿರಿರ್ದುದಿಂದುವ ಬಿಂಬಂ ೧೧
(ಲೀಲಾವತಿ ೭-೯೯)

ಇಡಿದುದ್ದಂ ಬೆಳೆದೇಱಿಗ್ಗವೆಟ್ಟದ ಬಿದಿರ್ಗಾಡೆಲ್ಲಮಂ ಬೇಗೆ ನಿ
ಚ್ಚಡರ್ವಂತಿರ್ದುದು ಸಂಜೆಗೆಂಪದಱ ಬಿತ್ತೊಂದೊಂದರಲ್ ತೋರ್ಪಿನಂ
[8]ಪಿಡಿದಂತಿರ್ದುವು[8] ನಟ್ಟ ಬಾಂದೊಱೆಯ ಮೀನೆಲ್ಲಂ ಕ[9]ಟಿಲ್ ತಂದ[9] [10]ಜೆಂ
ಗೊ[10]ಡೆಯಂತಿರ್ದುವು ಪಕ್ಕೆವೆಟ್ಟದೆಡೆಯೊಳ್ ನೀಹಾರರುಙ್ಮಂಡಲಂ ೧೨

---

[1] ರತಿಕಾಲಾನ್ಯಾ (ಖ ಬ) [2] ರತಿಬೇದ (ಖ ಬ) [3] ತಂದಗುರ್ವಿಂ ನೆಗಳ್ದಭಿನವ (ಕ) [4] ಱ (ಖ ಬ) [5] ಲ್ಪೇಟ್ದಿ (ಅ) [6] ದಾರಿ (ಕ ಖ ಗ ಬ) [7] ನಿದೆ ಕಂದೆ ಪಡುವಗಡೆಯೊ (ಅ) [8] ಇಡಿತಂದಿರ್ದುವು (ಕ) ಸಿಡಿತಂದಿರ್ದುವು (ಖ ಬ) [9] ಟಿಲ್ವಚ್ಚ (ಗಘ) [10] ಜೇನೊ (ಕ)

ರಸಮೊಸರ್ವ ಜೇನ ಬಱಂವು
ಟ್ಟೆ ಸುರಿದು ಕವಿದಿಟ್ಟ ಕಂದುವೆಳ್ಳಿಯ ಕೊಡನಾ
ಟಿಸಿ ಮುಡಿಗೆ ಸುತ್ತಿ ಬಿನದದೆ
ಬಿಸುಟ್ಟ ಪೂಮಾಲೆಯೆಸಿಸಿದುದು ವಿಧುಬಿಂಬಂ * ೧೩

ವಾರುಣಿ ಕಳ್ಳನೀಂಟೆ ಮಱಿದಿಕ್ಕಿದ ಬಟ್ಟಲೊ ಭೀತಿಯಿಂ ಸಿಶಾ
ಸ್ವೈರಿಣಿ ಪೋಗೆ ಬಿರ್ದ ಕಿವಿಯೋಲೆಯ ಮೌಕ್ತಿಕ ಪತ್ರಮೋ ನಭೋ
ವಾರಣಮೊಲ್ಲದೊಕ್ಕ ದಧಿಪಾಂಡುರಪಿಂಡಮೊ ಪೇಟಿೞನಲ್ಕೆ ನೀ
ಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿಯೊಳ್ ೧೪

(ಲೀಲಾವತಿ ೩-೩)

ಪುಡಿಯಡ[1]ರೆ[1] ನಿಮಿ[2]ರ್ದ[2] ಪುತ್ತಿನ
ಕುಡಿ ಕೆಡೆದತ್ತಾಲಮೊಲೆದುದದಱಡಿಯೊಳ್ ತೂಂ
ಕಡಿ[3]ಸಿ[3] ಮಿಗಂ ಮುಂದಣಿಗೊ
ರ್ಗುಡಿಸಿದು[4]ದಾ[4] ಪಡುವ ಪಡುವಮೃಗಲಾಂಛನನಾ ೧೫

(ಲೀಲಾವತಿ ೩-೪)

ಆವರಿಸಿ ನಿಂದ ನಿಜಕಿರ
ಣಾವಳಿಗಳನುಡುಗಿಕೊಂಡು ತೀವಿದ ಕೊಳದೊಳ್
ಕಾವುಡಿದ ಬಿಳಿಯ ತಾವರೆ
ವೂವಾಟ್ದವೊಲಾಟ್ದನಂಬುನಿಧಿಯೊಳ್ ಚಂದ್ರಂ ೧೬

ತೞರ್ದ ವಿಯೋಗಿನೀ[5]ನಯನ[5]ವಾಃಕಣಸಂಕುಳದಂತೆ ತಾರಕಾ
ವಳಿ ಮಸುಳ್ದತ್ತು ಯಾಮಿನಿಯ ಜೆನ್ನನೆ ಪ್ರೋಷ ದುಕೂಲಚೇಲದಂ
ಚಳಮನೆ ಪೋಯ್ತು ಚಂದ್ರಿಕೆ ನಭೋವಧು ಸೂಡಿ ಬಿಸುಟ್ಟ [6]ಮಾಲ್ಯಮಂ
ಡಳದವೊ[6]ಲಿರ್ದುದಸ್ತಗಿರಿಮಸ್ತಕದೊಳ್ ತುಹಿನಾಂಶುಮಂಡಳಂ ೧೭

(ಜಗನ್ನಾಥವಿಜಯಂ ೧೬-೧೩೫)

ವಾರುಣಿಯನೊಲ್ದು ಮುಟ್ಟಿದ
ಕಾರಣದಿಂ ಮುೞುಗುವಂತೆ ತನ್ನಯ ಕಱೞಯುಂ
ನೀರೊಳಲೆವಂತೆ ಪಶ್ಚಿಮ
ವಾರಿಧಿಯೊಳ್ ಮಗ್ನನಾದನಂದಮೃತಕರಂ ೧೮

(ಲೀಲಾವತಿ ೩-೬)

---

[1] ೧ (ಖ ಬ) [2] ರ್ದ (ಖ ಬ) [3] ಪ (ಅ) [4] ದೋ (ಅ) [5] ಹೃದಯ (ಖ ಬ) [6] ಮಾಲೆಮಂಡಳಿಸಿದೊ (ಖ ಬ) * ಈ ಪದ್ಯ (ಖ ಬ) ಪತ್ರಿಗಳಲ್ಲಿಲ್ಲ

ಭುವನಮನಾವಗಂ ಪುದಿದು ತೀವಿದ ತಣ್ಗದಿರ್ಗಳ್ ಪೊದಟ್ದು ಕೈ
ರವವನವಾದುವೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ
ದುವು ಸುರಸಿಂಧುವಾದುವು ಸುಧಾರ್ಣವಮಾದುವು ಚಂದ್ರಕಾಂತಮಾ
ದುವು ಹಿಮಮಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯವಾದುದೇ ೧೯

(ಲೀಲಾವತಿ ೩-೭)

ತಾರಗೆಯ ಕುಮುದವನದ ಚ
ಕೋರಂಗಳ ಕಣ್ಗೆ ಕವಿದ ಕಟ್ಟಿಲೆಯೆನೆ ನೀ
ಹಾರಕರನಲಸಿ ಪಟಿತ್ಕಗೆ
ಸಾರಲೊಡಂ ಮಗುಟಿಡ ಮರ್ಬು ಪರ್ಬಿತ್ತಾಗಳ್ ೨೦

(ಲೀಲಾವತಿ ೩-೯)

ಜಲಜಲಿಸುವ ಬೆಳ್ದಿಂಗಳ್
ತೊಲಗಲೊಡಂ ಮು[1]ಂದು[1]ಗೆಟ್ಟು ಶಶಿಮಂಡಲದೊಳ್
ನೊಲನೆಡಪೆ ಹರಿಣ[2]ನೆಡೆ[2]ಗಿಡೆ
ಮೊಲಗತ್ತಲೆಯಾಯ್ತು ಯಾಮಿನೀ[3]ನಿ[3]ರಸನದೊಳ್ ೨೧

(ಅನಂತನಾಥಪುರಾಣಂ ೮-೬೪)

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ ಚಂದ್ರಮಂಡಲಂ
ಬಾಡಿದ ಮಾಧವೀಮಧುರಮಂಜರಿಯಂತಿರೆ ತಾರಕಾಳಿ ನೀ
ರೋಡಿ ಕಟಿಲ್ದು ಬಿಟ್ದ ಕಟಿಂವೂಗೆಣೆಯಾಗಿರೆ ತಣ್ಣನಪ್ಪೆಲರ್
ತೀಡೆ ತಪೋವನಂಬೊಲತಿ ಪಾವನಮಾಯ್ತು ನಭಂ ಪ್ರಭಾತದೊಳ್ ೨೨

(ಮಲ್ಲಿನಾಥಪುರಾಣಂ ೧೦-೧೫)

ಮೀನ್ ಗಗನಾಗ್ರದೊಳ್ [4]ಪಟಿತಯ[4]ಮುತ್ತುವೊಲೊಂದೆರಡಿರ್ದುವಚ್ಚವೆ
ಳ್ದಿಂಗಳನೀಂಟೆ ಬಿಟ್ಟವು ಬಟಿಲ್ದ ಚಕೋರಿಗಳಸ್ತಶೈಲದೊಳ್
ತಿಂಗಳೊಸರ್ಕೆ ಜೇನಬಟಿಂವುಟ್ಟೆವೊಲಿರ್ದುದು [5]ತತ್ಪ್ರಭಾತದೊಳ್[5]
[6]ಕಂಗೊ[6]ಳಿಸಿತ್ತು ಮೂಡದೆಸೆ ಕಾಡೆಳವೆಕ್ಕಿನ ಕಣ್ಣಬಣ್ಣದಿಂ ೨೩

ಶರನಿಧಿಯಲ್ಲಿ ಸಂಭವಿಸಿದಂ ಕಮಲೋದರನೆಮ್ಮ ಭಾವನಿಂ
ದಿರೆಯೊಡವುಟ್ಟಿದಳ್ ಶಿವಲಲಾಟದ ಚಂದ್ರಮನಣ್ಣನೆಂಬುದಂ
ಪರಿಕಿಸದಂಧನೊತ್ತಿ ಪಿಡಿದಾಸ್ಯದೆ ಕಚ್ಚಿದನೆಂದು ಶಂಖನಾ
ಧರಣಿಧರಂಗೆ ಪುಯ್ಯಲಿಡುವಂದದಲಿರ್ದುದು ಸುಪ್ರಭಾತದೊಳ್ * ೨೪

---

[1] ಟ್ಟು (ಖ ಬ) [2] ನಡಿ (ಅ) [3] ವಿ (ಅ) [4] ಪೊಳೆಯೆ (ಗ ಘ) [5] ಚಂದ್ರಮಂಡಲಂ (ಗ ಘ) [6] ಸಂಗ (ಕ ಖ ಬ) * ಈ ಪದ್ಯವು (ಕ) ಪ್ರತಿಯಲ್ಲಿಲ್ಲ.

ವಾರಿಧಿಗರ್ಭನಂ ಹರಿಕರಾಶ್ರಯನುನ್ನತ ದೇವಪೂಜೆಗಾ
ಕಾರಣನಂ ಕರಂ ಶುಚಿಯನುಜ್ವಲನಂ ದುರಿತೋಪಹಾರಿಯಂ
ಕಾರಣಮಿಲ್ಲದೀಯಧಮನೆಂಜಲಮಾಡಿದನೆಂದು ಶಂಖವಾ
ಚಾರಧರಂಗೆ ಪುಯ್ಯಲಿಡುವಂದದೊಲಿರ್ದುದು ಸುಪ್ರಭಾತದೊಳ್ * ೨೫

ತೆಗೆ ತೆಗೆ ಕಾಳಗತ್ತಲೆ ತೆರಳ್ದಿರದೋಡೆಲೆ ಸಂಜೆ ಪೋಗು ಪೋ
ಗಗಿಯದ ತಾರಕಾಳಿಯಿನಿಸುಂ ನಿಲವೇಡೆಲೆ ನಿದ್ರೆ ಬಂದಪಂ
ಪಗಲ ಬೊಜಂಗನೆಂದವನಿಗುತ್ಸವದಿಂ ನೆಱೆ ಸಾಱುವಂದದಿಂ
ನೆಗೆದುದು ದೇವವೇಶ್ಮದೊಳೆ ರೋಗಭಯಂಕರ ಶಂಖನಿಸ್ವನಂ * ೨೬

ಮುಟ್ಟುಪಡಾಯ್ತು ಜೊನ್ನದುಣಿಸುಂಬ ಚಕೋರಚಯಕ್ಕೆ ಬಂಧನಂ
ಬಿಟ್ಟುದು ಪದ್ಮಕೋಶವೊಳಕೊಂಬ ಮದಾಳಿಗೆ ಚಕ್ರವಾಕ ನೀಂ
ಬಿಟ್ಟಿರಬೇಡ ನಿಮ್ಮ ನಿಯರೊಳ್ ನೆರೆಯೆಂದುಱೆ ಸಾಱುವಂತೆ ಬೊ
ಬ್ಬಿಟ್ಟು ಕಡಂಗಿ ಕೂಗಿದುದುವಾಗಳು ಕುಕ್ಕುಟನೊಂದು ನಿಚ್ಚಟಂ * ೨೭

ವಾರಿಜಮಿತ್ರನಿಂ ಬಹನೆ ಕೂ ಶಶಿ ನೀಂ ಪೆಱಸಾರು ಸಾರು ಕೂ
ನಾರಿಯುರಂಗದೊಳ್ ಪುದಿದ ಜಾರರೆನಿಪ್ಪವರೋಡಿಯೋಡಿ ಕೂ
ಕೀರ ಮದಾಳಿ ಕೋಗಿಲೆ ವಿಹಂಗ ಕಳಿಂಗಗಳೇೞಿಯೇೞಿ ಕೂ
ತಾರೆ ತಮಂಧ ಸಾರೆನುತೆ ಕೂಗುತಲಿರ್ದುದು ತಾಮ್ರಚೂಡನುಂ * ೨೮

ಸರಸಿಜಮಿತ್ರ ಕೂ ತಮವಿದಾರಣ ಕೂ ಹಿಮಧೂಮಕೇತು ಕೂ
ನರರ ಜಡಾರಿ ಕೂ ಖಗಮೃಗಂಗಳ ಜೀವನರಕ್ಷಪಾಲ ಕೂ
ಪಿರಿದುಮುದಾರದಿಂದೆ ತಿಮಿರಂಗಳ ನುಂಗಿಪ ಜಾರಚೋರರಾ
ಹರಣವಿರೋಧಿ ಕೂ ಎನುತ ಕೂಗುತಲಿರ್ದುದು ತಾಮ್ರಚೂಡನುಂ * ೨೯

ಪಕ್ಕ ದ್ವಂದ್ವಂಗಳಂ ಝಾಡಿಸಿ ಕೆಲಕೆ ನಿಮಿರ್ದೊತ್ತಿ ಮೂಗಿಂದೆ ಗೋಣಂ
ಹಿಕ್ಕುತ್ತಂ ಬಂದು ಗೇಹಂಗಳನಡರಿ ನಿಶಾದೇವಿ ನೀಂ ಪೋಗು ಪೋಗಂ
ದರ್ಕಂ ಪೂರ್ವಾಚಲಕ್ಕೆಯ್ದಿದನೆನುತೆ ಕರಂ ಸಾಱುವಂದಂದದಿಂದಂ
ಕುಕ್ಕೂಕೂ ಎಂಬ ನಾದಂ ನೆಗೞೆ ನಗರದೊಳ್ ಕೂಗಿತಾ ತಾಮ್ರಚೂಡಂ ೩೦

ಬೆಳಗಾಗಲೆಬ್ಬಿ ಗೞಿಪುವ
ಗಿಳಿಗಳ [1]ಜಱುಚುವ[1] ಪಿಕಂಗಳೆಳಸುವ ಕೋಕಂ
ಗಳ ಕಳಕಳದಿನಿಸೊಱಗಿದ
ಕುಳಟೆಯರೆಚ್ಚತ್ತು ಭಯದೆ ತಳವೆಳಗಾದರ್ ೩೧

(ಲೀಲಾವತಿ ೩-೧೧)

1 ಗಜಱುವ (ಖ ಗ ಬ) * ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ

ರಸದ ಮಳಯಜದ ಘುಸೃಣದ
ಕುಸುಮದ ಕಪ್ಪುರದ ಕವಿದ ಸೊವಡಿಂಗಳಿಗಳ್
ಮುಸುಱಿ ನವನೀಲಪಟವಂ
ಮುಸುಕಿದವೋಲಸತಿಯೊರ್ವಳಡಿಯಿಡುತಿರ್ದಳ್ ೩೨
(ಲೀಲಾವತಿ ೩-೧೨)

ಉಗುತುಂ ಪೂಮಾಲೆಯಂ ಸೋರ್ಮುಡಿಯಿನೆಡೆಗೆ ಬಿಣ್ಪೆಂಬವೋಲ್ ನೀವಿಯಂ ಸಾ
ವಗಿಸುತ್ತುಂ ತೂಕದಿಂದಂ ನಡೆಗೆಡಿಪ ನಿತಂಬಂಗಳ ಕಟ್ಟುವಂತ
ಕ್ಷಿಗಳಂ ಮುಚ್ಚುತ್ತೆ ನಿದ್ರಾಜಡತೆಯಿನಡಿ[1]ಗೋರೊರ್ಮೆ[1] ಭೂಛಾಯೆಯಂ ನುಂ
ಗುಗುಮೆಂಬಂತಾಗಳರ್ಕೋದಯಭಯವಶದಿಂ ಪಾಣ್ಬೆ [2]ಪೋತಂದಳೊರ್ವಳ್[2] ೩೩
(ಲೀಲಾವತಿ ೩-೧೪)

ಇನಿಯನಲಂಪಿಸಿಂ ತೆಗೆದು ಚುಂಬಿಸಿ ತಂಬುಲಮಿಕ್ಕಿ ಸುಯ್ದು ಪೊ
ಯ್ದನುವಿಸಿ ಕೂಡೆ ನೊಂದ [3]ತುಟಿಯಂ[3] ತುದಿನಾಲಗೆಯಿಂದೆ ಪತ್ತಿದಿಂ
ಪನೆ ಸವಿವಂತಿರೀಂಟೆ ಕುಚದೊಳ್ ನಸುನಾಂಟಿದ ತನ್ನ ಖಾಂಕಮಂ
ತನುರುಹದೇಟಿಙ್ಗಯಿಂದೆಳ[4]ಸಿ[4] ನೋಡುತದೇಂ ಕಿಱುಜೋಡೆ ಪೋದಳೋ ೩೪
(ಲೀಲಾವತಿ ೩-೧೬)

ರಮಣ[5]ರ ಸತಿಯರ[5] ನಿನನ
ಸ್ತಮಿಸಲೊಡಂ ಬಂದು ಪುಗಿಸಿ ಮಗುಟ್ದಿಂ ವಿಧುವ
ಸ್ತಮಿಸೆ ಪೊಱಮಡಿಸಿ ಕಳೆದುದು
ತಿಮಿರಂ ಪಾಣ್ಬೆಯರ ದೂತನಾಗಲೆವೇಟ್ಕಿಂ ೩೫
(ಲೀಲಾವತಿ ೩-೧೦)

ನಸು[6]ನೆನೆದೊ[6]ಯ್ಯನುಳ್ಳಲರೆ ಪೋಟಿಙ್ಲೆ ಕಂದದೆ ಕೂಡೆ ಬಣ್ಣದಿಂ
ರಸಮೊಸರ್ವಂತಿರೊಕ್ಕ ನಱುದಂಬುಲಕಂ [7]ಮುಡಿಯಿಂ[7] ಕನಲ್ದು ಬಿ
ಟಿಙ್ಸೆವಲರ್ಗಂ ಮದಾಳಿ ಮೊರೆ[8]ದೆಟಿಙ್[8]ಱಗುತ್ತಿರೆ ಬೀದಿಗಳ್ ಜನ
ಕ್ಕಸತಿಯರೆಟ್ದು ಪೋದುದನೆ ಪೇಟ್ವವೊಲಿರ್ದುವು ಸುಪ್ರಭಾತದೊಳ್ ೩೬
(ಲೀಲಾವತಿ ೩-೧೭)

ಉಗುಟ್ದವು ಪೀರ್ದ ಕಟ್ತಲೆಯನಟ್ಕಿಸಲಾಱದೆ ಕಾಱುವಂತೆ ಕಾ
ಡಿಗೆಗಳನಾಗಳೋಪವರ ಕೇ[9]ಳಿ[9]ಗಳಂ ಕೊರಲೆತ್ತಿ ನೋಡುವಂ

---

[1] ಗೊರ್ಮೊರ್ಮೆ (ಖ) [2] ಯೆಯ್ತಂದಳಾಗಳ್ (ಖ) [3] ಧರಮಂ (ಖ ಗ ಬ)
[4] ವಿ (ಖ ಬ) [5] ವಸತಿಗಳ (ಅ) [6] ನನೆಯು (ಕ ಖ ಬ) [7] ಕುರುಳಿಂ (ಅ)
[8] ದೆರ್ದೆ (ಅ) [9] ರಿ (ಅ)

ತೊಗೆದುವು ನೋಡಿ ನಾಣ್ಚಿ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್
ತೆಗೆದುಡಗಿರ್ದುವೊಳ್ಗುಡಿಗಳಂ [1]ರತ[1]ದೀಪಿಕೆಗಳ್ ನಿಶಾಂತದೊಳ್ ೩೭
(ಲೀಲಾವತಿ ೩-೧೮)

ಕಡುನಲ್ಲಂ ನೆರೆ[2]ದಿರ್ಪನೆ[2]ಣ್ಣೆ ಸವೆದತ್ತಿಲ್ಲಿನ್ನುವೋವೆತ್ತ ಸೋ
ರ್ಮುಡಿಯಿಂ [3]ಬಿ[3]ಬ್ದುದು ಪುಷ್ಪಮಾಲೆಯೆನುತುಂ ಮುಗ್ಧಾಕ್ಷಿ ಚಿಂ[4]ತಾತು[4]ರ
ಕ್ಕೆಡೆಯಾಗಿರ್ಪಿನಮೆಟ್ಟಿದಂಕೆಯೆಲರಿಂದು[5]ದ್ಬುದ್ಧ[5] ಪಾರಾವತಂ
ಸೊಡರಂ [6]ಬೀಸಿದುದೆಯ್ದೆ ಕೇಳಲೆನಸುಂ[6] ತಾನಟ್ಟಿವಟ್ಟಂದದಿಂ ೩೮
(ಲೀಲಾವತಿ ೩-೧೯)

ಬೆಳಗಪ್ಪ ಜಾವದೈಕಿ
ಲ್ಗೊಳೆ ಶೀತಕ್ಕಾಱದಳ್ಕಿ ತೊಟ್ಟೆರ್ದ ಧರಾ
ತಳವೆಂಬ ಪೆಣ್ಣ ಪೊಸಕಂ
ಚುಳಿಕೆಯ ಪೊಸಮುತ್ತಿನಂತಿರಾದವು ಪನಿವುಲ್ ೩೯

ಯೋಗಿಜನಕ್ಕೆ ತತ್ವಗತಿಸಂಸ್ಥಿತಿಯುಂ ಕಳೆಯೊಳ್ ಕಳಾವಿದ
ರ್ಗ್ಗೆ ಗುರುವೇಧೆಯುಂ ಕವಿಜನಕ್ಕೆ ಕವಿತ್ವದ ಸಾರಮುಂ ಬಹೂ
ದ್ಯೋಗಿ ಜನಕ್ಕೆ ತದ್ವಿಷಯಸಿದ್ಧಿಗಳುಂ ನೃಪರ್ಗನ್ಯರಾಜರಾ
ಜ್ಯಾಗಮವೃ[7]ದ್ಧಿ[7]ಯುಂ ಮನಕೆ ಪೆರ್ಚುವುದೊಪ್ಪುವ ಸುಪ್ರಭಾತದೊಳ್ ೪೦

ಮುಂದೆ ಮಹಾಸುರಮಥನಂ
ಬಂದೇಱಿದನುರಗಿರಿಶಿಖಾಗ್ರಮನೆಂದೋ
ರಂದದೆ ಮೊರೆವಳಿಯಿಂದರ
ವಿಂದಾಘದ ಮುಂದೆ ನಿದ್ದೆ ತಿಳಿದುವು ಕೊಳಗಳ್ ೪೧

ಹರಗಿರಿಯಂ ಪರಿದೇಱುವ
ಹರಿಪಾದಕ್ರಮಮ ಸರಸಿ ಪರಪಿದ ನೀಲಂ
ಬೆರಸಿದ ಪೀತಾಂಬರಮೆನೆ
ಬಿರಿದಲರ್ದುವು ತುಂಬಿವೆರಸಿ ಪೊಂದಾವರೆಗಳ್ ೪೨

ಕೆಂಗದಿರನ ಕರಕಿಸಲಯ
ಸಂಗದಿನಾರಕ್ತಮಾದ ಕೆಂದಾವರೆಗಳ್
ಸಂಗಡಿಸಿಯಲರ್ದವಂಗಜ
ನಿಂಗಳಮಂ ವಿರಹಿಗಳ್ಗೆ ನಲಿಗೆದಱಿದವೋಲ್ ೪೩

---

1 ತರ (ಖ ಬ) 2 ಪಕ್ಷ್ಮಪತೆ (ಅ) 3 ಸೋ (ಅ) 4 ತಾಂತೆ (ಅ) 5 ದ್ಧೂತ (ಕ ಖ ಬ) 6 ಪೊಯ್ದುದು ಕೇಳಲಾಕೆಯುಳಸಂ (ಅ) 7 ತ್ತಿ (ಖ)

ಹರೆಯದ ಕಟ್ತಿಲೆ ಪ್ರೋ ಪಲ್
ಮೊರೆದಪುವುೞಿದಿರ್ದ ಜೊನ್ನವಱಿಗಳ್ಗೆಂಬಂ
ತಿರೆ ಧವಳ ಜಲಜವಲರ್ದುವು
ಪರಿಹರಿಸಂತವಱಿ ಪುಟ್ಟುತನಕಲರ್ಗೊಳದೊಳ್ (?) ೪೪

ನಡು ನಸುಪೊಂಗಿ ಸುತ್ತಿಱಿಯೆ ಪೊತ್ತಿದೆಸೆೞ್ಮನೆವೆರ್ಚೆ ತಣ್ಣೆಲ
ರ್ಗಡೆದೆಱಪಾಗೆ ಪೊಕ್ಕು ಸುೞಿಯುತ್ತಿರೆ ತಳ್ಪು ಸಡಿಲ್ದಗಲ್ದರಲ್
ಪಿಡಿದುಡುಗಿರ್ದ ಕೇಸರದ ನುಣ್ಗೊನೆ ಸೂ[1][ನ][1]ಮರಲ್ದು ಚೆಲ್ವಿನೊಳ್
ಗಡಣಿಸಿದತ್ತು ಮುಂಬಗಲೊಳಂಬುರುಹಂ ಸರಸೀಸಮೂಹದೊಳ್ ೪೫

ಜಗಮಂ ಬೆಳಗುವ ಮಗನಂ
ಗಗನಂ ಪಡೆದೊಸಗೆಗೆಂದು ವಾ [2][ರಿ][2]ನೃಪಂ ತೊ
ಟ್ಟಗೆ ಬಿಟ್ಟ ತಮದ ಸೆಱೆಯಿನ
ಲೊಗೆದುವು ಮುಂ ಸಿಲ್ಕಿದಳಿಗಳಲರ್ದಂಬುಜದಿಂ ೪೬

ಇನನ ವಧೂಟಿಯರೆಂಬೀ
ಮುನಿಸಿಂದಿರದೆಯ್ದೆ ಮುತ್ತಿ ಗಳಗರ್ಜನೆಗೆ
ಯ್ವನುಪಮ ತಮೋ ಭಟಾರ್ತಮಿ
ವೆನೆ ಜಿನುಗುತ್ತಿರ್ದುವಳಿಗಳಬ್ಜಾಕರದೊಳ್ ೪೭

(ಕುಸುಮಾವಳಿ ೧-೪೮)

ತನಿ[3]ವಂಡಂ ತೊ[3]ರೆವಿಟ್ಟು ಕುತ್ತೆಸಳ್ಗಳೊತ್ತಿಂದೋಡಿ ನಿಂದೂಡುವ
ಬ್ಜನಿಯೊಳ್ ಗೋಸಗೆಯುಂಡು ಪಾಡುವಳಿಯಿಂ ಚಂಡಾಳಬಾಳಾಕಳ
ಧ್ವನಿಯೊಳ್ ಮಂದ್ರತೆಯಂ ತಗುಳ್ಚಿ ಕಿವಿವೊಕ್ಕ[4]ಶಂಗದೇಂ[4] [5]ಸೌಖಶಾ
ಯನಿಕಂ[5] ತಾನೆನಿಸಿತ್ತೊ ಸೆಜ್ಜೆವನೆಯೊಳ್ [6]ಪ್ರಾಭಾತಶೀ[6]ತಾನಿಲಂ ೪೮

(ಅನಂತನಾಥಪುರಾಣಂ ೮-೬೯)

ಅಟ್ಟಳೆಯಂ ಪಳಂ[7]ಚಲಿದು[7] ಗೋಪುರಮಂ ಪರಿದೇಱಿ ಕೋಂಟೆಯಂ
ಮೆಟ್ಟಿ ಸುಧಾ[8]ಶ್ರಮಾ[8]ವಳಿಗೆ ಲಂಘಿಸಿ ಹರ್ಮ್ಯತಳಕ್ಕೆ ಪಾಯ್ದು ಚೌ
ವಟ್ಟದೊಳೆಯ್ದಿ ದೇವಕುಲ[9]ದಾ[9]ದಲೆಯಿಂ ಗಗನೋ[10]ದ[10]ರಕ್ಕೆ ಧೀಂ
ಕಿಟ್ಟುದು ದುಂದುಭಿಸ್ವನಮನೇಳಿಸಿ ಭೋಂಕನೆ ಶಂಖನಿಸ್ವನಂ ೪೯

(ರಾಮಚಂದ್ರಚರಿತಪುರಾಣಂ ೫-೧೦೭)

---

[1] ನೆ (ಕ) ಸು (ಖ ಬ) [2] ರಿ (ಕ) ಲೆ (ಖ ಬ) [3] ವಣ್ಣಂ ಸ್ರೊ (ಅ) [4] ಸಂಗದಿಂ (ಅ) [5] ಸೌಖ್ಯಸಾಯನಿಕಂ (ಅ) ಸೌಖ್ಯತಾನೆನಿಸಂ (ಕ) ಸೌಖ್ಯಸಾನಿಸಿಕಂ (ಖ ಬ) [6] ಸುಪ್ರಾತಗೀ (ಅ) ಸುಪ್ರಾತಶೀ (ಕ) [7] ಚಿಪುರ (ಅ) [8] ಗೃಹಾ (ಅ) [9] ಕಾ (ಕ) [10] ತ್ಕ (ಕ ಖ ಬ)

ಪಾಡಱಿಂದಂತರಂಗವಿರಹವ್ಯಥೆ[1]ಯಿಂ[1] ಬಱಿತೋಡುವಂತೆ ಬಾ
ಯ್ಗೂಡಿ ಪೊದಟ್ಟಿ ಕಂಬನಿಯ ಮುಂಬ[2]ನಿಯಿಂಬಿನೊಳಂ[2] ಮುಱಿಂಗಿ ತೇಂ
ಕಾಡಿ ಕೊರಲ್ ಪೊಣರ್ಚಿ ಪುಳಕಂ ನೆಗೆತಪ್ಪಿನ ಹಮ್ಮುದಂಗಳಿಂ
ಕೂಡುವ [3]ನಲ್ಲಳಱ್ಕೆಯಱಿದೊಂದಿನಿಸಿರ್ದುವು[3] ಜಕ್ಕವಕ್ಕಿಗಳ್ ೫೦
(ಅನಂತನಾಥಪುರಾಣಂ ೮-೬೮)

ಎಱಕೆ ನೆಱಲ್ದಿರೆ ಕೊರಲೊಡ
ನೊಱಗಿರೆ ಮದನಾಂಬು ಸುರಿಯೆ ಕಂಗಳ್ ಸುಖದಿಂ
ಕಿಱುಕಿಱುದೆಱೆದಿರೆ ಸುರತದ
ಮ[4]ಱುಕಂ[4] ಪೊಸತಾಯ್ತು ಜಕ್ಕವಕ್ಕಿಯ ಪೊಣರೊಳ್ ೫೧

ಬರಲಿದಿರ್ವಂದು ವ್ಯೆಗಳೆರಡಿಲ್ಲವೆ ಪಕ್ಕದಿನಪ್ಪಿ ಕಂಗಳಿಂ
ಸುರಿಯೆ ಮುದಶ್ರು ಮುಂದಲೆಯ ತುಪ್ಪುಱಿನೊಯ್ಯನೆ ಕಚ್ಚಿ ಚಂಚುವಿಂ
ಸರಸಮೃಣಾಳನಾಳದ ಕುಸುಂಕುಱನಿತ್ತೆಳದೊಯ್ದು ಕಾಂತನೊಳ್
ನೆರೆದು ರಥಾಂಗ ಕಾಂತೆಯಿರ್ದೆಯಾಱಿದುದಾದಮೆಗಂ ಪ್ರಭಾತದೊಳ್ ೫೨

ಎತ್ತಣಿನಕ್ಕೆ ಬಂದು ದನಿದೋಱೆ ಸಮುತ್ಸುಕಲೋಲಲೋಚನಂ
ಪತ್ತಿ ಸಮಂತು ತಳ್ತೆಱಗಿ ಪಕ್ಕದಿನೊರ್ಮೊದಲಪ್ಪೆ ಚಂಚುವಿಂ
ನೆತ್ತಿಯ ತುಪ್ಪುಱಿಂ ಕರ್ದುಕಿ ಮೆಯ್ಸ್ವಡೆ ಕೂಡಿ ಸಮಾನ ಹರ್ಷದಿಂ
ದುತ್ತರಮಪ್ಪಿನಂ ಕೊಳದೊಳಿರ್ದುವು ಸಂಧಿಸಿ ಜಕ್ಕವಕ್ಕಿಗಳ್ ೫೩

ಪರೆಯೆ ಕರುಳ್ಗಳಂತೆ ತಿಮಿರಂ ಮುಗಿಯುತ್ತಿರೆ ನೆಯ್ದಿಲ[5]ಕ್ಷ್ಮಿ[5]ಯುಂ
ತಿರೆ ಬೆಮರಂತಿರಾಱುತಿರೆ ತಾರಗೆ ತೀರೆ ವಿಭಾಂತಕಾಂತನೊಳ್
ನೆರೆದು ಸುಖಾಂತ್ಯದೊಳ್ ಕರಗುತಿರ್ಪ ಮನೋಹರಿಯಾರ್ದ್ರಕುಂಕುಮಾಂ
ಬರಮೆ [6]ಜಗುಟ್ದಿ[6]ವೊಲ್ ಬೆಳತುದೈಂದ್ರಿಯ ಸಾಂಧ್ಯಮಯೂಖಪಲ್ಲವಂ ೫೪
(ಲೀಲಾವತಿ ೩-೮೦)

ಇನನ ಬರವಿಂಗೆ ಪೂರ್ವಾಂ
ಗನೆ ಕುಂಕುಮಪಂಕದಿಂದಲಂಕರಿಸಿದಳೋ
ತನುವನೆನೆ ಸಂಜೆ ರಂಜಿಸಿ
ತಿನನುದಯಮನಱುಪುವಂತೆ ಮೂಡಣ ದೆಸೆಯೊಳ್ ೫೫

ಕಮಲಿನಿಗಂ ಕೋಕದ್ವಯ
ಸಮುದಯಕಂ ಕೆಟ್ಟರಳಿದರೆಂದಿನನೆ ಪಸಾ
ಯಮನಟ್ಟಿದಂತೆ ಮೆಱೆದುದು
ನಿಮಿರ್ದರುಣೋದಯದೊಳೆಸೆವ ಸಂಧ್ಯಾರಾಗಂ ೫೬
(ಅನಂತನಾಥಪುರಾಣಂ ೩-೬೫)

---

1 ಯುಂ (ಅ) 2 ದಮಿಂ ಪೊಸತೊಳ್ (ಅ) 3 ನಗ್ಗರಿಕ್ಕೆ ವೆಱೆದೊಂದಿ ನಿಮಿರ್ದುವು (ಅ) 4 ಱತಂ (ಕ)

ಪಡುವಲ್ ಚಂದ್ರನ [1]ಬೆ[1]ಳ್ವೆಳ
ಗೊಡರಿಸುವರುಣೋದಯಾಂಶು ಮೂಡಲ್ ಕೈಕೊಂ
ಡೆಡೆಯಣ ತಮಮೊಪ್ಪಿದುದಿರು
ಳುಡುಗಿದ ಕಟ್ಟಿಲೆಯ [2]ಬಱಿಯ ಮಱಿಗಳಿವೆನಿಸಲ್[2] ೫೭
(ಅನಂತನಾಥಪುರಾಣಂ ೮-೬೩)

ವಾಯಸಕೋಟಿಯೂರ ಬನದಿಂ ಪಥಿಕರ್ ಸಲೆ ಕೇಳುವಂತೆ ಕಾ
ಕಾಯೆನುತೂರನೆಯ್ದಿದುವು ಗೂಗೆಗಳೋಡಿ ಘು ಘುಮ್ಮೆನುತ್ತೆ ನೀ
ಡಾಯುನುವೋದುದೀ ಜಗಮುಮೆಲ್ಲಿಯುಮಿಲ್ಲೆನೆ ನುಂಗಿ ನೀಲಶೈ
ಲಾಯತಮಾದ ಕತ್ತಲೆಯಡಂಗಿದುದೇಟಿಗೆಯ ಸುಪ್ರಭಾತದೊಳ್ ೫೮

ತೆಱೆದುವು ಗೋಪುರಪ್ರತತಿ ಸೆಜ್ಜರದಿಂ ಗಜರಾಜಿಯಶ್ವಮೆ
ಬ್ಬುಱೆ ದನಿದೋಱಿದವು ಬಿಡದೆ ನೇಲ್ದುದು ಜಾಯಿಲಸುಕ್ಕಡಕ್ಕೆ ಪೊ
ಕ್ಕೆಱುವುಲಿ ಕಾಣಿಸಲ್ಕಣದೆ ಸಂಚರಮಾದುದು ರಾಜಗೇಹದಿಂ
ಪೊಱಮಡುತಿರ್ದುದುದ್ಧತವಿಳಾಸದೆ ಪಾಳೆಯದಂಗನಾಜನಂ (?) ೫೯

ತೊಡೆ ತೊಡೆಯೊಳ್ ಮರಳ್ದು ನಿಲೆ ಪೇರುರಮುಂ ನೊಲೆಯುಂ ಮರಲ್ದೊಱೆ
ಲ್ದಡಸಿರೆ ಮಧ್ಯಭಾಗಯುಗಳಂ ನಳಿತಂದು ತಗುಳ್ದು ಪತ್ತಿ ಚೆ
ಲ್ವಡೆದಿರೆ ಕಂದದೊಳ್ ಭುಜಲತಾವಳಿ ತಳ್ತಿರೆ ಬಾಯೊಳಗೊಂದಿ ಬಾಯ್
ತೊಡರ್ದಿರೆ ಕೂಡೆ ನಿದ್ದೆ ತಿಳಿದೆರ್ದುವು ನಲ್ಲರ್ವೊಣರ್ ನಿಶಾಂತ್ಯದೊಳ್ ೬೦

ಅಳಿದ ಕುರುಳ್ ತಡಂಮುಡಿದ ಸೋರ್ಮುಡಿ ಬೀಗಿ ಬೆಳರ್ತ ದೋರೆವಾಯ್
ಮುಳಮುಳಿಸುತ್ತಮಿರ್ಪ ನಗೆಗಣ್ ನಸುಜೋಲ್ದುಡೆ ಕೊಂಕಿದೋಲೆ ಚ
ಪ್ಪಲರ್ದ ಘನಸ್ತನಂ ನವನಖಾಂಕಮಲಂಕರಿಸಲ್ ನಿಜೇಚ್ಛೆಯಿಂ
ಸುಳಿವಬಲಾಜನಂ ದಿನಕರೋದಯಕಾಲದೊಳೊಪ್ಪಿ ತೋಱುಗುಂ ೬೧

ಊದಿದುದು ತಣ್ಣೆಲರ್ಗಳಳಿ
ನಾದಂ ಗಾಂಧರದೊಳೊಂದಿ ನೆಗಟ್ಬುದು ಪದ್ಮಾ
ಮೋದಮಿನಿಸಿಂ ತೊವರ್ತೊವ
ರಾದುವು ಕೂಗಿದುವು ತಾಮ್ರಚೂಡಚಯಂಗಳ್ ೬೨
(ಕಾವ್ಯಾವಲೋಕನಂ ೩೯೨)

ಪರೆದುದು ಮರ್ಬು ಪರ್ಬಿದುದು ಕೆಂಬೆಳಗಿಂದ್ರದಿಶಾವಿಭಾಗಮುಂ
ಸುರಭಿ ಸಮೀರನೂದಿದುದೆಸಟ್ ಮಿಸುಕಲ್ ತೊಡಕಿತ್ತು ಪಂಕಜಂ
ಸರಮಱಿದೊಂದನೊಂದೆಳಸುತಿರ್ದುವು ಕೋಕಮುಲೂಕಸಂಕುಳಂ
ಚಱಿಯಿಸಿ ಬಂದಡಂಗಿದುವು ಪಕ್ಕಿಗಳೆದ್ದುವು ಸುಪ್ರಭಾತದೊಳ್ ೬೩

[1] ಕೊ (ಕ ಖ ಬ) [2] ಜಳಿಯುಮಱಿಯಿಂಪೊಗುಮೊಳೆಯೊಳ್ (ಕ ಖ ಗ ಬ)

ಕಱಿದುವು ಪನಿ[1]ಪುಲ್ಲೊಳ್[1] ಕಂ
ದೆಱಿದುವು [2]ನವಿಲೆರ್ದು ಕರಿಣಿಕರ್ಣಂಗಳನೆ[2]
ಝಱಿಸಿದುವಾಗುಳಿಯಿಂ ಬಾಯ್
ದೆಱಿದುವು ಸಿಂಗಂಗಳಲ್ಲಿ ಮುನ್ನೀಸಱನೊಳ್ ೬೪
(ಕಾದಂಬರಿ ಪೂ. ಭಾ ೧೪೨)

ಧೃತನಿದ್ರಾಲಸ್ಯಭಾರಂ ತೊಲಗೆ ಬಿದಿರ್ದಲರ್ ಪಂಕಮಂ ಕೂಡೆ ತೀನೆ
ರ್ದ ತನುಸ್ಥಾನಂಗಳಂ ಕೊಂಕಿನೊಳಡಿಗಡಿಗಂದಂಟೆ ಸೋಂಕೆತ್ತಿ ಕೂಗಿ
ತ್ತ್ರತಿರಾಗಂ ಕುಕ್ಕುಟಂ ಕುಂಟಣಿಯರ ಬೆಸದಿಂದೊತ್ತೆಗೊಂಡನ್ಯಕಾಂತಾ
ರತಿರಾಗಶ್ರಾಂತೆಯರ್ಗಂದುದಯದೊಸಗೆಯಂ ಸಾಱುವೊಂದಂದದಿಂದಂ ೬೫

ಒದವಿದ ನಿದ್ರೆ ಪಿಂಗೆ ಕುಸಿದೊಯ್ಯನಡಂಗಿದ ಗೋಣನೆತ್ತಿ ನೀ
ರದಪಥದತ್ತಲೊರ್ಗುಡಿಸಿ ನೋ[3]ಡಿ ಶಿರೋಧರ[3]ಕೇಸರಂಗಳಂ
ಬಿದಿರ್ದು ತಟಂತಟಿಂದೆಱಕೆಗುಟ್ಟಿ ತಗುಳ್ದೊಡನೊತ್ತಿ ಕೋೞಿ ಕೂ
ಗಿದುದಮರ್ದಪ್ಪಿದೋಪರೆರ್ದೆ ಪವ್ವನೆ ಪಾಱೆ ನಿಶಾವಸಾನದೊಳ್ ೬೬

ಕಲಸಿದ ಕೂಟಿ ತಂಬುಲದಲಕ್ಕಿಯ ಮೊಟ್ಟೆಯ ಮೊಟ್ಟೆ ಬೆನ್ನೊಳ
ಗ್ಗಲಿಸಿರೆ ಕಯ್ಯ ಕೈದು ಪಸುರ್ವಟ್ಟೆಸೆವಕ್ಷತೆ ತೊಟ್ಟ ಕೆರ್ಪುಗಳ್
ಬಲದ ಹಸುಂಬೆ ನಾಂದೆ ವಳಯಕ್ಕಧಿದೇವತೆ[4]ಕೂರ್ಗೆ[4] ಬಂಧುಗಳ್
ನೆಲಸುಗೆನುತ್ತೆ ಮೇಲ್ ಪರಸಿದರ್ ಪಥಿಕರ್ ನಡೆದರ್ ಪ್ರಭಾತದೊಳ್ (?) ೬೭

ಅರೆರಥ ಹೊನ್ನಗಾ[5]ಲಿ[5] ನಸು ಪಿಂಜ[6]ಳು[6]ಕುತ್ತಿರೆ ರನ್ನದೀಸು ಮೇ
ಲ್ಮರಲೆ ರಥಾಗ್ರದೊಳ್ ಪದುಳಮಿರ್ದರುಣಂ ನಸುಬಿಟ್ಟು ನೇಣನ
ಝರರೆಯೆನುತ್ತುಮಾ[7]ಲಿ[7] ನಭಮಂ ತುಡುಕುತ್ತಿರಲಾ ಹರಿವ್ರಜಂ
ಹರಿದಡರ್ದೇಱಿ ಬಂದುದಯಶೈಲಮನೇಱಿದನಬ್ಜಿನೀಪ್ರಿಯಂ ೬೮

ಒಳವು ಮಣಿನಿಕರಮುದಯಾ
ಚಳದೊಳ್ ಗಡಮೆಂದು ಬಂದು ನಿಂದಳ್ಗಿಂದ್ರಂ
ಕುಳಿಶದೊಳೆ ಮಿಾಂಟಿ ಮಗುೞ್ದಿ
ಝಳಿಸಿದ ಮಾಣಿಕಮನರುಣಕಿರಣಂ ಪೋಲ್ತಂ ೬೯
ತಡೆಯದೆ ತಮಮೆಲ್ಲಮನೊಂ
ದೆಡೆಯೊ[8]ಳ್[8] ತಂದೊಟ್ಟೆ ಪೂರ್ವದೆಸೆಯೊ[9]ಳ್[9] ಧಾತ್ರಂ

---

1 ಪುಲ್ಗಳ (ಅ) ಪುಲ್ಗಳ್ (ಕ) ಪುಲ್ಲಿಗೆ (ಖ ಬ) 2 ಪುಲಿಗಳ್ ನವಿಲ್ಗಳುಂ ಕರಿಗಳನೆ (ಕ ಖ ಬ) 3 ಡುತಸೆತ್ತಿಯ (ಗ ಘ) 4 ದೊರ್ಕೆ (ಖ ಬ) 5 ಡಿ (ಕ) 6 ಳಿ (ಕ) 7 ರಿ (ಖ ಬ) 8 ಳಿ (ಕ) 9 ಳಿ (ಖ ಬ)

ಸುಡುಸುಡಲುರಿವೆರಸಿದ ಬ
ಲ್ಗಿಡಿಯಂ ಪೋಲ್ತೆಸೆದನರುಣಕಿರಣಸಹಸ್ರಂ ೭೦

ಜಲಧಿಚಳೋರ್ಮಿಚಾಮರಚಯಂಗೆ ದಿಶಾಧಿಪದಿಗ್ಗಜೇಂದ್ರಸಂ
ಕುಳಪರಿವಾರ[1]ಭೋ[1]ಗಿಗೆ ನಭೋಮಣಿಮಂಟಪಮಂಡನಂಗೆ ಕ
ಣ್ಗೊಳಿಸೆ ಜಗನ್ಮಹಾಪ್ರಭುಗಭೀಕ್ಷ್ನಿಸಲೆತ್ತಿದ ಸುಪ್ರಭಾತಮಂ
ಗಳ ಮಣಿದರ್ಪಣಕ್ಕೆ ದೊರೆಯಾಯ್ತುದಯಾದ್ರಿಯೊಳರ್ಕಮಂಡಲಂ ೭೧
(ಲೀಲಾವತಿ ೩-೮೨)

ಸುರದಿಕ್ಕಾಮಿನಿ ಪೊಯ್ಯೆ ಮೇಗೊಗೆದ ಶೋಣಂ ಕಂದುಕಂ ತಾನಿದೆಂ
ಬರ ಮಾತಿ[2]ರ್ಕೆಮ[2] ಮಿಾಂಗಳೆಂಬಲರ್ಗಳಂ ಕೊಯ್ಯಲ್ಕೆ ತತ್ಕಾಂತೆ ಬಿ
ತ್ತರದಿಂದೆತ್ತಿದ ಕೆಂದಳಂ ದಲೆನೆ ಕಣ್ಗಾದಂ ಬೆಡಂಗಾದನಂ
ಬರಲಕ್ಷ್ಮೀವೃತಚಂದ್ರಿಕಾ[3]ಧವ[3]ಳವಾಸಸ್ತ್ರಸ್ಕರಂ ಭಾಸ್ಕರಂ ೭೨
(ಚಂದ್ರಪ್ರಭಪುರಾಣಂ ೮-೧೪೦)

ಮುರರಿಪು ಪಾರಿಜಾತಕುಜಮಂ ಕೊಳೆ ಬಿಲ್ವಿಡಿದಂದು ಸೋಲ್ತೆನಿಂ
ಪರಿಣತನಪ್ಪೆನಡ್ಡಣದೊಳೆಂದೊಸೆದರ್ಚಿಸಿ ಮೂಡವೆಟ್ಟದೊ
ಳ್ಗರುಡಿಯೊಳಿಂದ್ರನಾಂತ ಪೊಸಮಾಣಿಕದಡ್ಡಣಮಿಂತಿದೆಂಬಿನಂ
ಕರಮೆಸೆದಿತ್ತು ಶೋಣರುಚಿಯಿಂದುದಯಾದ್ರಿಯೊಳರ್ಕಮಂಡಲಂ ೭೩
(ಜಗನ್ನಾಥವಿಜಯಂ ೧೬-೧೩೯)

ಸ್ಮರಪರಿತಾಪದಿಂ ಮುಳುಗಿ ಕೋಟಲೆಗೊಂಡೆರ್ದೆಯಾಱಿ ಸುತ್ತಲುಂ
ಪರಿಪರಿದಾತ್ಮವಲ್ಲಭೆಯನೀಕ್ಷಿಸಿ ಕಾಣದೆ ಜಕ್ಕವಕ್ಕಿಗಳ್
ಸರಸಮೃಣಾಳಮಂ ಶಿಖಿಗೆ ತೋಱಿದವೋಲ್ ಕರಗುತ್ತಮಿರ್ಪುದುಂ
ಕರುಣಿಸಿದಂತೆ ಬಂದುದಯಶೈಲಮನೇಱಿದನಂಬುಜಪ್ರಿಯಂ ೭೪

ನಿಶಿ ಬಿಟ್ಟೋಡೆ ಶಶಾಂಕನುನ್ನತಕರಂಗಳ್ ಬಾಡೆ ಕಂಜಾಳಿ ಸಂ
ತಸಮಂ ಸೂಡೆ ಮರಾಳಿ ಪಾಡೆಯೊಲವಿಂ ಚಕ್ರದ್ವಯಂ ಕೂಡೆ ಶೈ
ತ್ಯಸಮೀರಂ ನೆಱೆ[3] ತೀಡೆ ಕೈರವನಿಕಾಯಂ ಬಾಡೆ ಪೂರ್ವಾದ್ರಿ [4]ಕೆಂ
ಬಿಸಿಲಿಂದೊಪ್ಪಿರೆ ಮೂಡಿದಂ[4] ಭಗಣಶೋಭಾತಸ್ಕರಂ ಭಾಸ್ಕರಂ* ೭೫

ನಗೆಯಂ ಪಂಕಜವಕ್ತ್ರದೊಳ್ ದುಗುಡಮಂ ನೈದಿಲ್ಗಳೊಳ್ ಲಲ್ಲೆಯು
ಪ್ಪಗೆಯಂ ಕೋಕಯುಗಂಗಳೊಳ್ ಪದಪಿನಿಂ ಕಣ್ಬೇನೆಯಂ ಗೂಗೆಯೊಳ್
ಸೊಗಸಂ ದಿಕ್ಸತಿಯೊಳ್ ಪೊದಟ್ಟಿ ಜಯಮಂ ರಾಜಾಂಗನಾನೀಕದೊಳ್
ಮಿಗೆ ಮೂಡುತ್ತುದಯಾದ್ರಿಯೊಳ್ ನೆಲಸಿದಂ ಪಂಕೇಜಿನೀವಲ್ಲಭಂ* ೭೬

---

1 ಭಾ (ಅ) 2 ರ್ಕದು (ಕ ಖ ಬ) 3 ಏಱು (ಕ ಖ ಬ) 4 ಯೋಗಸಮಂ ಬರದಿಂ ದೇಱಿದಂ (ಖ ಬ) * ಈ ಎರಡು ಪದ್ಯಗಳು (ಕ) ಪ್ರತಿಯಲ್ಲಿಲ್ಲ

ಎಳದಳಿರಂತೆ ಪೆರ್ಮರದ ಕೊಂಬುಗಳೊಳ್ ನವಧಾತುನಿರ್ಝರಂ
ಗಳ ಪೊನಲಂತೆ ಶೈಲಶಿಖರಂಗಳೊಳುಜ್ವಲಮಪ್ಪ ಮಾಣಿಕಂ
ಗಳ ರುಚಿ ಪರ್ವಿದಂತೆ ಸುರ[1]ಗೇಹ[1]ಕನತ್ಕಳಶಂಗಳೊಳ್ ತಳ
ತ್ತಳಿಸಿದುದೀಷದುನ್ಮಿಷಿತಮಂಡಳಚಂಡಕರಾಂಶುಜಾಳಕಂ ೭೭

(ಲೀಲಾವತಿ ೩-೮೧)

ಒಸಗೆಯನಂಬುಜಪ್ರತತಿಗುಬ್ಬಸಮಂ ಪೊಸನೆಯ್ದಿಲೋಳಿಗು
ರ್ಬಿಸುವೆಡರಂ ತಮಸ್ಸಮಿತಿಗೋತೊಡಗೂಟಮನಾ ವಿಯೋಗದಿಂ
ದೆಸಗುವ ಚಕ್ರವಾಕಮಿಥುನಕ್ಕೆ ದಿಶಾನನದುಜ್ಜಳಿಕ್ಕೆಯುಂ
ಬಿಸಿಗದಿರ್ಗಳ್ ಕವಿಲ್ತೊಡನೆ ಸೂಸಿದುವಾದಮೆ ಸುಪ್ರಭಾತದೊಳ್ ೭೮

ಇದೆ ಹೇಷಾಘೋಷದಿಂ ವಾಹಳಿಗೆ ಕರೆವವೋಲ್ ಕಟ್ಟೆ ಬಂದಶ್ವಮಿಾಯಿ
ರ್ದಪದೆ [2]ಗುರ್ಬಿಂ[2] ಪಣ್ಣಿ ಬಂದೋಜೆಗೆ ನಿಱಿಸಿದ ಕಟ್ಟಾನೆ ಸೇವಾರತೋತ್ಸೇ
ಕದಿನೀಗಳ್ ದೇವ ಬಂದಿರ್ದಪುದು ಸಕಳರಾಜನ್ಯಕಂ ಮಂತ್ರಿವರ್ಗಂ
[3]ಪದನಂ ಪಾ[3]ರ್ದಿರ್ಪುದಿನ್ನುಪ್ಪವಡಿಸು ಜನತಾನೇತ್ರನೀರೇಜ[4]ಭಾನೂ[4] ೭೯

(ಲೀಲಾವತಿ ೩-೮೪)

ದಾನೇಭಂ ಪುಂಗವಂ ಕೇಸರಿ ಸಿರಿ ಸುಮನೋಮಾಲೆ ಚಂದ್ರಂ ದಿನೇಶಂ
ಮಿಾನಂ ಕುಂಭಂ ಕೊಳಂ ಪಾಲ್ಗಡಲಿಭರಿಪುಪೀಠಂ ಸುರೋದ್ಯದ್ವಿಮಾನಂ
ಶ್ರೀನಾಗಾವಾಸಮುಚ್ಚಂ ಮಣಿ[5]ಚ[5]ಯಮನಲಜ್ವಾಲೆಯೆಂದಿಂತಿವೆಲ್ಲಂ
ಮಾನಾಲಂಕಾರನೊಳ್ ಮಾಡುಗೆ ಜಿನಜನನೀಷೋಡಶಸ್ವಪ್ನದೊಳ್ಪಂ ೮೦

(ಲೀಲಾವತಿ ೩-೭೫)

ನವರೋಮಾಂಚದ ಕೀಲ್ ಸಡಿಲ್ದು ತೊಡೆ [6]ತೋಳ್[6]ಮೆಯ್ಯೆಲ್ಲಮೆಚ್ಚತ್ತು ಚಿ
ತ್ರವಧೂಬಾಲಮೃಣಾಳಬಾಹುಲತಿಕಾಸಂಶ್ಲಿಷ್ಟರತ್ಯಂತಿಕೋ
ತ್ಸವಸಂಸ್ಕಾರಿಕಮಾಗೆ ಕಣ್ದೆಱೆದುವೊಂದೇ[7]ಕ[7]ಕ್ಷಣಂ ನಿಂದು ಮೈ
[8]ಸವಿದೆಟ್ದಂ[8] ಮಣಿಮಂಚತಳ್ಪತಳದಿಂ ಸಾಹಿತ್ಯರತ್ನಾಕರಂ ೮೧

(ಅನಂತನಾಥಪುರಾಣಂ ೮-೭೦)

ಮಧುರಾಜ್ಯಾವೇಕ್ಷಮಂ ನೀನೊಡರಿಸು ತಲಸಂಸ್ಪರ್ಶನಂ ಮಾಡು ಸಂಧ್ಯಾ
ವಿಧಿಯಂ ನಿರ್ವರ್ತಿಸಚ್ಚಾರುಣಮಣಿಗಣದಿಂದರ್ಘ್ಯಮಂ ಭಾಸ್ಕರಂಗೆ
ತ್ತು ಧರಾದೇವೋತ್ತಮಾವರ್ಜನ ವಿರಚನೆಯಂ ತಾಳ್ದು ಶುದ್ಧಾತ್ಮನಾಗಿ
ರ್ದಧಿದೈವಾರಾಧನಂಗೆಯ್ ವಿವಿಧವಿಧಿಸಪರ್ಯೋಪಚರ್ಯಾಂಶದಿಂದಂ ೮೨

---

1 ಕೂಟ (ಅ) 2 ಪರ್ವಿಂ (ಅ ಕ) 3 ಸದನಂ ಸಾ (ಕ ಖ ಬ) 4 ಮಿತ್ರಂ (ಖ ಬ)
5 ಮ (ಕ) 6 ಗಳ (ಕ ಖ ಬ) 7 ತ (ಕ ಖ ಬ) 8 ನಿಮಿರ್ದೆದ್ದಂ (ಕ ಖ ಬ)

ಹಳಚಿತು ಸೂರ್ಯೋದಯಮಿ
ಸ್ಥಳಕೆಲ್ಲಂ ಕಾವ್ಯಸಾರದೊಳಗೆಂದುದು ಹೊ
ಯ್ಸಳವಂಶಮೇರು ಯಾದವ
ಕುಳಾಂಬರದ್ಯುಮಣಿ ಸೋಯಿದೇವನೃಪಾಲಂ ೮೩

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ಸೂರ್ಯೋದಯವರ್ಣನಂ ನವಮಾಶ್ವಾಸಂ ಸಂಪೂರ್ಣಂ

# ಋತುವರ್ಣನಂ

## ವಸಂತೋದಯವರ್ಣನಂ

ತರು ಮೃಗ ಪಕ್ಷಿ ಮೇಘ ಜಲ ವಾಯು ದಿಶಾಜನ ಕಾಯಭೋಗ ಭಾ
ಸ್ಕರ ವಿಧು ರಾತ್ರಿ ವಾಸರ ಸುರಾಲಯ ಪರ್ವ ರತೋಪಚಾರ ಸಿಂ
ಧುರಮದಜನ್ಮ ಯಾನ ಮದನೋದಯ ಸಸ್ಯವಿಶೇಷಭಾವದೊಳ್
ಪರಿಣತನಪ್ಪವಂಗೆ ಋತುವರ್ಣನವಿಸ್ತರಮೊಪ್ಪಿ ತೋಱುಗುಂ ೧

ಪದದೊಳ್ ಠಾಯಿಗಳೋ[1]ಯರಂ[1]ಬಡೆಯೆ ವಾಕ್ಯಾರ್ಥಕ್ಕೆ ಪಕ್ಕಾಗೆ ರಾ
ಗದ [2]ಮರ್ಯಾದೆಯ[2]ನುಕ್ರಿಯಾಂಗುಳಿವಿಳಾಸಂ ಭಾವಮುಂ ತಾ[3]ಳೆ[3] ಕ
ಬ್ಬದ ನಿರ್ವಾಹದ ಮೇ[4]ಗೆ[4] ಜ್ಯೆಸಿಕೆ ಬೆಡಂಗಂ ಬೀಱೆ ನಿಂದೊರ್ವಳೋ
ದಿದಳಾಂದೋಳದೆ ಪಲ್ಲವಾಧರೆ ವಸಂತೋತ್ಪದ್ಯಮಂ [5]ಪ[5]ದ್ಯಮಂ ೨

(ಅನಂತನಾಥಪುರಾಣಂ ೬-೭೧)

ವಿಕಸತ್ಪುಷ್ಪಾಟ್ಟಹಾಸಂ ಸ್ಮಿತಕುಸುಮರಜೋಭಸ್ಮ[6]ವಿಭ್ರಾಜಿ[6] ಮಾದ್ಯ
ತ್ಪಿಕನಾದಂ ಭೃಂಗಸಿದ್ಧಾಂಜನರಸಘುಟಿಕಂ ಪಲ್ಲವೋದ್ಯಜ್ಜಟಂ ಕ
ಯ್ಯ ಕಪಾಲಂ ಚಂದ್ರಬಿಂಬಂ ತನಗೆನೆ ಜಗತೀಚಕ್ರಮಂ ಚೈತ್ರಕಾಪಾ
ಲಿಕನೆಂಬಂ ಬಂದದೇಂ ಮೋಹಿಸಿದನೊ ಮಧುಬಿಂದೂದ್ಗಮಂ ಗಂಧವಾಹಂ ೩

(ಲೀಲಾವತಿ ೯-೧೧೯)

ನನೆದೋಱುತ್ತ್ರದಿ[7]ಮ್ರುರ್ತ್ತ್ರೆ[7] ಮುಂತೆ ಪನೆಗಳ್ ತೋರ್ಪಂತೆ ತಂಗಾಳಿ ಕೆಂ
ಗೊನ[8]ರೊ[8]ಳ್ ದಟ್ಟಡಿಯಿಟ್ಟುದೊಳ್ನಗೆ ಪೊದಟ್ದಿತ್ತಬ್ಬದೊಳ್ ಕೋಕಿಲಂ
ಕೊನರಂ ಕರ್ಚಿ ತೊದಳ್ಸರಂಗೆಡೆದುದೆತ್ತಂ ನಂದನಶ್ರೀಯ ನಂ
ದನನಾನಂದ[9]ನ[9]ನನ್ಯಜಂಗಣುಗನಾಯ್ತಿಂತೀ ವಸಂ[10]ತೋದಯಂ[10] ೪

(ಅನಂತನಾಥಪುರಾಣಂ ೬-೭೨)

ಎಳವೆಱೆ ದಾಡೆ ಕೆಂದಳಿರೆ ನಾಲಗೆ ಮಾಮರನಳ್ಳಿಗೊಂಬಿನೊಳ್
ನಿಳಿರ್ದೆಳವಳ್ಳಿ ಬಾಲಮಲರ್ದೊಂಗಲೆ ಕೇಸರಮೆಂಬಿನಂ ಮನಂ

---

1 ರಣಂ (ಅ) 2 ಮಾಧುರ್ಯಮ (ಅ) 3 ಳ್ದಿ (ಅ) 4 ಲೆ (ಅ) 5 ಗ (ಅ)
6 ನೈಭಾಸಿ (ಖ ಘ) 7 ಗರ್ಂತಿ (ಅ) 8 ಯಾ (ಕ ಖ ಬ) 9 ಮ (ಕ ಖ ಬ)
10 ತಾಗಮಂ (ಅ)

ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ
ಗೊಳಿಸಿದುದುತ್ಕಕೀರ ಮದಕೋಕಿಲ ಗರ್ಜಿತ ತರ್ಜಿತಂಗಳಿಂ ೫
(ಅಜಿತನಾಥಪುರಾಣಂ ೬-೨೩ ; ಶಬ್ದಮಣಿದರ್ಪಣಂ ಪುಟ ೫೫)

ಮಧುಲಕ್ಷ್ಮೀನೃತ್ಯಹಸ್ತಂ ಗತಿಯುವತಿವಯಃಕೇಳಿಶೃಂಗಂ ಸುಧಾಂಭೋ
ನಿಧಿಘಕ್ಕಾನಾದ್ರಕೋಣಂ ಮನಸಿಶಯಮಹಾತ್ರಸ್ತಹಸ್ತ್ಯಾಂಕುಶಂ ವಾ
ರಿಧರಾಧ್ವಕ್ಷೇತ್ರಸೀ[1]ರಂ[1] ಹಿಮಕರಸಲಿಲಾಧಾರಲೀಲಂ ತಟಾಕಾ
ವಧಿಯೆಂಬೊಂದಂದದಿಂದಂ ಪೆಱೆ ನೆಱೆ ಮೆಱೆದತ್ತಾರ ಕಣ್ಗಂ ಮನಕ್ಕಂ ೬

ಸಿರಿ ಬಂದಾಶ್ರೈಸಿದಳ್ ಮಾಧವನುದರದೊಳೊತ್ತಿಟ್ಟುಕೊಂಡಂ ದಿನೇಶಂ
ಪಿರಿದುಂ ಕೂರ್ಪಂ ಸುಧಾಸೂತಿಯೆ ಮುನಿದಪನೆನ್ನನ್ವಯಕ್ಕೆಂದು ನೀರೇ
ಜರುಹಂ ಕಾಯ್ಪಿಂ ನಿಜಾಗ್ರಾಯುಧವನಿಡೆ ಪಿಡಿಲ್ದೊಂದು ಭಾಗಂ ನಭಾಭ್ಯಾಂ
ತರದೊಳ್ ಸೂಸಿತ್ತೆನಲ್ಕೇನೆಸೆದುದೊ ಭಗಣಾನೀಕದಿಂದರ್ಧಚಂದ್ರಂ* ೭

ವಿರಹಿಯ ಗಂಟಲಗಾಳಂ
ಸ್ಮರವೀರನ ಮಸೆದ [2]ಸೆಂ[2]ಡುಗೋಲ್ ಮಧುಲಕ್ಷ್ಮೀ
ತರುಣಿಯ ಸೆಳ್ಳುಗುರೆನೆ
ಕರಮೆಸೆದತ್ತಂದು ಕೊಂಕಿದೆಳವೆಱೆ ನಭದೊಳ್ ೮

ಒತ್ತಂಬದೆ ವಿರಹಿಗಳಂ
ಚಿತ್ತಭವಂ ಬಂದಿವಿಡಿದು ಗಂಟಲ ಬಳೆಯಂ
ಕೆತ್ತಿಸುವ ಬೊಮ್ಮಪಾಶದ
ಕೃತ್ತಿಗೆಯೆನೆ ತೊಳಗಿ ಬೆಳಗಿತೆಳವೆಱೆ ನಭದೊಳ್ ೯

ತಿಳಿಪಲ್ ವಾಸಂತಿಯಂ ಸಂದಿ[3]ಸಿ[3] ಪುಗಲೆನೆ ಪುಂಸ್ಕೋ[4]ಕಿಲಂ ಧಾರ್ಷ್ಟ್ಯದಿಂ[4] ಬಂ
ದೊಳಪೊಕ್ಕಡ್ಡೈಸಿ ಮಲ್ಲೀಮುಕುಳಕಲಿತಭೃಂಗಾವಳೀ ನೀಲಮುಕ್ತಾ
ಫಳಮಂ ತಂದಿತ್ತು ಪಾದಂಬಿಡಿದು ನೆಗೆವಿನಂ ಕಂಟಕಂ ಚೂತಿಕಾಕೋ
ಮಳೆಯಂ [5]ನಿಶ್ಶೇಷದೋ[5]ಷಂ [6]ಮೆ[6]ಱೆಯೆ ತಿಳಿಪಿದಂ ಪ್ರೇಮಕಾಂತಂ ವಸಂತಂ ೧೦
(ಅನಂತನಾಥಪುರಾಣಂ ೬-೭೪)

ಮದನಂಗೀ ಲೋಕಮಂ ಸಾಧಿಸುವೆಡೆಗೆ ನೆರಂ ಬಂದುದೆಂಬಂದದಿಂದು
ನ್ಮದಕರ್ಣಾಟದ್ವಿ[7][ಜೋ][7]ತ್ಕೂಜಿತಕಳನಿನದಂ ಬಂದುದೆಂಬಂದದಿಂ ಪೊ

---

[1] ಲಂ (ಬ) [2] ಪಿಂ (ಕ ಖ ಬ) [3] ಸೆ (ಅ) [4] ಕಿಲಡ್ಡಿಂಡಿಮಂ (ಕ ಖ ಬ)
[5] ವಿಶ್ಲಿಷ್ಟರೋ (ಅ) [6] ಮ (ಅ) [7] ಜ (ಅ) * ಈ ಪದ್ಯವು ಎಂಟನೆಯ ಸಂಧಿಯ ೨೫ನೆಯ ಪದ್ಯವಾಗಿ ಹಿಂದೆಯೇ ಬಂದಿದೆ. ಎಲ್ಲ ಪ್ರತಿಗಳಲ್ಲಿಯೂ ಈ ಸ್ಥಳದಲ್ಲಿ ಪುನಃ ಉಪಯೋಗಿಸಿರುವುದರಿಂದಲೂ ಇದರ ಮೂಲಸ್ಥಾನವು ಇದೋ ಅದೋ ಎಂಬುದನ್ನು ಸ್ಪಷ್ಟವಾಗಿ ನಿಷ್ಕರ್ಷೆ ಮಾಡಲು ಸಾಧ್ಯವಿಲ್ಲವಾದುದರಿಂದಲೂ ಇದನ್ನು ಇಲ್ಲಿ ಉಳಿಸಿಕೊಂಡಿದೆ

ಣ್ಮಿದ ಭಾಸ್ವಚ್ಚಂದ್ರಬಿಂಬಕ್ಕಭಿನವಕಿರಣಂ ಬಂದುದೆಂಬಂದದಿಂ ಬಂ
ದುದು ನೀಳಾಂದೋಳಕೇಳೀವಿಳಸನಲಲನಾಗೀತಕಾಂತಂ ವಸಂತಂ ೧೧
ಸ್ಮರರಾಗಾಂಧತ್ವದಿಂದಂ ಪಗಲೊಳಮುಸತೀಕೇಳಿ ಪೊಣ್ಮಲ್ ವಿಯೋಗಾ
ತುರಜೀವಾಹಾರದಿಂದಂ ರತಿಪತಿ ತಣಿಯಲ್ ಪುಷ್ಪಚಾಪಾಸ್ತ್ರಟಂಕಾ
ರರ[1]ವೋದ್ಭಿನ್ನಪ್ರಪಾಂಥ[1]ಪ್ರಕರಹೃದಯರಕ್ತಾಂಬುಗಳ್ ಕೂಡೆ ಮಾರ್ಗಾಂ
ತರದೊಳ್ ಸೂಸುತ್ತಿರಲ್ ಬಂದುದು ಶಿಶಿರನೃಪೋದ್ಯತ್ಕೃತಾಂತಂ ವಸಂತಂ ೧೨

(ಕಾದಂಬರಿ ಪೂ.ಭಾ ೭೨೦)

ಕಳಿಕಾಸಂಜಾತಚೂತಂ ಮುಕುಳಿತವಕುಳಂ ಪಲ್ಲವೋಲ್ಲಾಸಿ ಕಂಕೆ
ಲ್ಲಿ ಲತಾಂತಾಕ್ರಾಂತವಾಸಂತಿಕಮೆಸೆದುದು ಯೋಗಿವ್ರಜಸ್ವಾಂತಕುಂತಂ
ವಿಲಸನ್ಮಲ್ಲೀಲತಾಂತಂ ರಟದಳಿಪಟಲಧ್ವಾಂತಮಿಂದುಪ್ರಭಾಸಂ
ಕುಲಭಾಭಾಸ್ವದ್ದಿಗಂತಂ ಜಿತಸಕಲಜಗತ್ಸ್ವಂತುಕಾಂತಂ ವಸಂತಂ ೧೩

(ಜಗನ್ನಾಥವಿಜಯಂ ೧೪-೪೨)

ಬನಮಂ ಕೆಂದಳಿರಿಂದೆ ಬಾಸಣಿಸುತುಂ ದಿ[2]ಗ್ಭಿತ್ತಿ[2]ಯಂ ಬಂದ ಮಾ
ವಿನ [3]ಕಂ[3] ಪಿಂದಮೆ ಪೂಸುತುಂ ವಿರಹಿಯಂ [4]ಮತ್ತಾ[4]ಳಿಸೀ ಕೋಕಿಲ
ಧ್ವನಿಯಿಂದಂಜಿಸುತುಂ ಸಮಸ್ತಜನಮಂ ಪುಷ್ಪಾಸವಾಸಾರದು
ರ್ದಿನದಿಂ ಸೊರ್ಕಿಸುತುಂ ಪೊದಟ್ಟಿದುದು ಜಗತ್ಕಾಂತಂ ವಸಂತಾಗಮಂ ೧೪

(ಕಾದಂಬರಿ ಉ. ಭಾ ೭೮೧)

ಬೆಳಪೀ ಚಂದ್ರಾಂಶು ಪೊತೀ ವಿಚಕಿಳ[5]ಮಲೆವೀ[5] ತಂಬೆಲರ್ ಬಗ್ಗಿಪೀ ಕೋ
ಕಿಳವೆನ್ನೊಳ್ ತಾವೆ ಮಾಟ್ಟಿಂ ಭುವನಜಯಮನಾಂ ಕಯ್ದುಗೆಯ್ವನ್ನಮೇನೆಂ
ದೆಳಮಾವಂ ನೆಮ್ಮಿ ತನ್ನೋಪಳ ಮೊಲೆಗೆಲನಂ ನೋಡುತುಂ ತುಂಬಿಯಿಂದಂ
ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ ೧೫

(ಜಗನ್ನಾಥವಿಜಯಂ ೧೪-೪೧)

ಅಲರ್ವದನಾಯ್ತು [6]ಮುನ್ನೆನೆ ತಮಾಲದ ಕಿಟ್ಗವಲಿಂ[6] ತಳಿರ್ತ ಮಾ
ವಲೆದುದು ಬೆಳ್ಪುಗೂಡಿದುದು ಮಲ್ಲಿಗೆ ತುಂಬಿಯ ಸಂತೆ ಸಂಭ್ರಮಂ
ನಿಲೆ ನೆರೆದತ್ತು ಬಾನಪೆಟಿ ಕೇದಗೆ ಬೆಳ್ಗಟಿಗಟ್ಟಿದಂತೆವೋಲ್
ಜಲಕನೆ ಮೇಲೆಮೇಲೆ ಕಳೆವೊತ್ತುದು ಬಂದ ವಸಂತಮಾಸದೊಳ್ ೧೬

ಒದವಿ ಧರಾತಳಕ್ಕೆ ಬರುತಿರ್ದ ಬಸಂತನ ಕೂಡೆ ಮಾವು ಬಂ
ದುದು ಮಧುದೂತಿ ಬಂದುದೆಳಮಲ್ಲಿಗೆ ಬಂದುದಶೋಕವಲ್ಲಿ ಬಂ

---

[1] ವಂ ಪ್ರೊದ್ಭಿನ್ನಪಾರ್ಥ (ಖ ಬ) [2] ಗ್ರಾಜಿ (ಅ) [3] ಕೆಂ (ಕ ಖ ಬ) [4] ಮುಕ್ತಾ (ಕ ಖ ಗ ಬ) [5] ಲಗೆಯಿಂ (ಕ ಖ ಗ ಬ) [6] ಮುಂನೆನೆಸೆಮಾಳಧವಿಕಿಳ್ಗಮಂ (ಕ)

ದುದು ಸುರಹೊನ್ನೆ ಬಂದುದಿನಿತುಂ ನೆಱೆ ಬಂದುವು ಜಾತಿಯೊಂದೆ ಬಾ
ರದು ಕುಸುಮಾಸ್ತ್ರಭೂಪನದನಾವ ಜಗದ್ವಿಜಯಕ್ಕೆ ಪೇೞ್ವನೋ ೧೭

ನನೆಯ ತೊಡಂಬೆ ಮಲ್ಲಿಗೆಯೊಳೊಂದೆರಡಾದುವು ಮಾಮರಂಗಳೊಳ್
[1]ಕೊ[1]ನರ್ಗೊನೆ ಮೂಱು ನಾಲ್ಕು ತಲೆದೋಱಿದುವುಂಡಿಗೆ ಸಾಧ್ಯಮಾದುದಿಂ
[2]ದೆ[2]ನಗೆ ಜಗತ್ರಯಂ ಮಲೆವರಾರೆನುತುಂ ಕುಸುಮಾಯುಧಂ ರತಿ
ಸ್ತನಪರಿರಂಭಣಪ್ರಣಯಿ ಪಾಡಿಸುವಂ ಬಿರುದಂ ಮದಾಳಿಯಿಂ ೧೮
(ಮಲ್ಲಿನಾಥಪುರಾಣಂ ೫-೨೪)

ಚದುರರ ಮೆಚ್ಚನಚ್ಚಱಿಪ ಮಾಧವಲಕ್ಷ್ಮಿಗೆ ಪತ್ರಭಂಗಮಾ
ದುದು ವನಮಾಲಿ ಪಂಕ್ತಿಗುರುಳಾದುದು ತುಂಬಿಗಳೋಳಿ ನಾದಮಾ
ದುದು ಪಿಕನಾದಮು[3]ಟ್ಟ[3] ಬಿಳಿದಾದುದು ಚಂದ್ರಿಕೆ ನಲ್ಮೆ ದಿ[4]ಟ್ಟ[4]ಯಾ
ದುದು ಮಲಯಾನಿಳಂ ತಿಲಕಮಾದುದು ಶೀತಮರೀಚಿಮಂಡಲಂ ೧೯

ವನರುಹ[5]ಮೆ[5]ಡ್ಡಮಪ್ಪ ಮೊಗಮಾದ ತಳಿರ್ ತಳಮಾದ ಕೋಕಿಳ
ಧ್ವನಿ [6]ದನಿಯಾ[6]ದ ಪಣ್ಣಡಕೆ ಬಾಯ್ದೆಱೆಯಾದೆಳವಳ್ಳಿ [7]ಮಿಕ್ಕ[7] ನೂ
ತನತನುವಾದ ಮಲ್ಲಿಗೆಯ ತುಂಬಿಯ ಕೂಟಮೆ ನೋಟಮಾದ ನಂ
ದನ ವನಲಕ್ಷ್ಮಿ [8]ಮಾಧವಮಹೀಶನ ಕಾಂತೆಯೊ ಕಂತುಕಾಂತೆಯೋ[8] ೨೦
(ಶಾಂತಿಪುರಾಣಂ ೭-೧೦)

ಕಳಹಂಸೀರಾಜಗೇಹಂ ಮಧುಪಮದ[9]ವ[9]ತೀಪಾನಕೇಳೀಗೃಹಂ ಮಂ
[10]ಡ[10]ಳಲಕ್ಷ್ಮೀಮಂಡ[11]ನಾ[11]ಸ್ಥಾಯಿಕೆ ಮಲಯಮರುದ್ವಾ[12]ಹಿನೀ[12]ಭೂಮಿ
[13]ಕೋ[13]ಕೀ
ಕುಳಸದ್ಮಂ ಕಾಮುಕಾಳೋಕನದವದಹನಂ ಕಾಮಚಕ್ರೇಶಚಾತು
ರ್ಬಳಚಕ್ರಂ ಚೈತ್ರ[14]ಜೈತ್ರ[14]ಧ್ವಜಚಯಮಲರ್ದುದ್ದಂಡಮಾಯ್ತಬ್ಜಷಂಡಂ ೨೧
(ಅನಂತನಾಥಪುರಾಣಂ ೬-೭೫)

ಸ್ಮರಕಾಂತಾಪ್ರೇಯಸೀಸ್ಥಾಸಕಘುಸೃಣಲತಾಮಂಟಪಂ ದರ್ಪಕಾಧೀ
ಶ್ವರದಿಗ್ಜೈತ್ರೋತ್ಸವೋತ್ತಂಚಿತ ಮಣಿಮಯದೂಷ್ಯಂ ಮೃಗೀಭೂತಕಾಮಾ
ತುರದಾವಜ್ವಾಳಿಕಾಮಂಜರಿ ಮಧುಮಧುಪಾನಪ್ರಮತ್ತಾಟವೀಪಿಂ
ಜರಿತಾಸ್ಯಾಡಂಬರಂ ಪೂತೆಸೆದುದಸದಳಂ ಪ್ರೋತ್ಪಲಾಶಂ ಪಲಾಶಂ* ೨೨
(ಅನಂತನಾಥಪುರಾಣಂ ೬-೭೬)

---

[1] ಕ (ಅ) [2] ನ್ನೆ (ಅ) [3] ಟ್ಟೆ (ಕ ಖ ಗ ಬ). [4] ಟ್ಟ (ಕ) ಟ್ಟೆ (ಖ ಬ) [5] ವೆ (ಕ ಖ ಬ) [6] ಸರಮಾ (ಅ) [7] ಯೇಳೆ (ಅ) [8] ಕಣ್ಗೆಸೆದು ತನ್ನನೆ ನೋಡಿಸಿದಳ್ ತಯಾ ರ್ಯರಿಂ (ಅ) [9] ರ (ಬ) [10] ಗ (ಅ) [11] ಸಾ (ಅ) [12] ಹಳೀ (ಕ ಖ ಬ) [13] ಕೇ (ಕ ಖ ಗ ಬ) [14] ರಾಜ (ಅ) * ಈ ಪದ್ಯ (ಖ ಬ) ಪ್ರತಿಗಳಲ್ಲಿಲ್ಲ

ಇನಿಯರ ಕಂತು ರಾಗರಸಮಂ [1]ದಳ[1]ವೇಱಿಸುವಂತೆ ಕಾಮದೇ
ವನ ಕರವಾಳ್ಗೆ ಕಾಮಿಹೃದಯಾರುಣವಾರಿಯನೆತ್ತುವಂತೆ ನಂ
ದನವನಲಕ್ಷ್ಮಿಯಂ ಘುಸೃಣದಿಂ ಪೊರೆವಂತೆ ಸುಧಾಂಶು ಸಂಜೆಗೆ
ತ್ತನುವಿಸುವಂತೆ ಕೆಂದಳಿರ ಪೊಂಪುಟಿ [2]ಪಪ್ಪ[2]ಕಮಾಯ್ತಶೋಕೆಯೊಳ್ ೨೩

(ಅನಂತನಾಥಪುರಾಣಂ ೬.೭೭)

ಎಳಲತೆಯ ಲಾಸ್ಯ[3]ಲೀಲೆಯೊ
ಳ್[3]ಳಿನೀಗೀತಕ್ಕೆ ನಿಂದು ಬಾಜಿಪ ಮಂದಾ
ನಿಳನಟನ ಪೊನ್ನ ತಾಳಂ
ಗಳೆವೆನಿಸಿದುವಲರ್ದ ಕರ್ಣಿಕಾ[4]ಪ್ರಸರಂಗಳ್[4] ೨೪

(ಅನಂತನಾಥಪುರಾಣಂ ೬.೭೮)

ಸೊಡ[5]ರ ಕುಡಿ[5]ಯಗೆ[6]ಗಳಂ ಪಸು
ರ್ವ[6]ಡಲಿಗೆಗಳೊಳಡಕಲಿಟ್ಟು ರತಿ ಪೊಯ್ದವೊಲೇಂ
ಜಡಿದುದೊ ಸಂಪಗೆ ನನೆಯಿಂ
ಜಡಿಪುದು ಮಧುಲಕ್ಷ್ಮಿ ತೊಟ್ಟ ಪೊಸಪೊಂದೊಡವಂ ೨೫

(ಅನಂತನಾಥಪುರಾಣಂ ೬.೭೯)

ಪನೆಗಳ್ ಪಣ್ಣನೆ ತೋರ್ಪ ಮೆಲ್ಲನೆ ಮುಗುಳ್ವಾಯ್ ನುಣ್ದಳಿರ್ ಕೋಕಿಲ
ಧ್ವನಿ ಮುದ್ದಾದ ತೊದಳ್ಸರಂ ಪೊಳೆವ ಮಾಂಗಾಯ್ ಕಾಯಿ ಲಾಲಾಜಲಂ
ಸೊನೆ ಪೆಣ್ದುಂಬಿಯ ಜಿಂಕು ತುಂಬಿಗಳಪಂ ಕೈಸಾರ್ಕೆ ಕೈವರ್ಪ ಚೆ
ಲ್ವನೆ ಪೋಲ್ತಿರ್ದುವು ನಂದನಾವಳಿಗಳೊಳ್ ಮಾಕಂದಮಾ ಕಂದನಂ ೨೬

ಅರಗಿಳಿ ದರ್ಭೆ ಪೂತರಲ್ದ ಮಲ್ಲಿಗೆ ಜನ್ನಿವರಂ ತಳಿರ್ ಮನೋ
ಹರತರಮಪ್ಪ ಕಾಸೆ ಕಟಿಲ್ದಲ್ಲೊಗುವೊಳ್ಳಲರಕ್ಷತಂಗಳಾ
ಗಿರೆ ಮಱಿದುಂಬಿಯಿಂಚರಮೆ ಸಾಮರವಕ್ಕೆಣೆಯಾಗೆ ಕಾಮನಂ
ಪರಸುವಿಳಾಮರಂಜೊಲೆಸೆದಿರ್ದುದು ಚೂತಕುಜಂ ವಸಂತದೊಳ್ ೨೭

ರವದಳಿ ಗೆಜ್ಜೆ ಸೋಗೆಗಳೆ ಚುಂಚು ನವಾಂಕುರ ರಾಜಿ ದಾಡೆ ಪ
ಲವಮುರಿಗಣ್ ಪಿಕಂ ಡಮರುಗಂ ಸೆಳೆಗೊಂಬು ಭುಜಾಸಿ ಕಿಂಕಿಣೀ
ರವಸಮುದಾರಕೀರತತಿ ಪಣ್ಗಳೆ ಪಂದಲೆಮಾಲೆಯಾಗೆ ಭೈ
ರವನವೊಲೇಂ ವಿಯೋಗಿಗತಿಭೈರವಮಾದುದೊ ಬಂದ ಮಾಮರಂ ೨೮

---

[1] ಮದ (ಖ ಬ) [2] ಪಂಪ (ಕ ಖ ಗ) [3] ದಳಿಯೊಳಗ (ಅ) [4] ರಪ್ರಸರಂ (ಅ)
[5] ಗುಡಿ (ಅ) [6] ಯಂ ಪಚ್ಚೆಯಪ (ಅ)

ಪೊಸ ನನೆಯೊಳ್ ಪಸುರ್ಪಲರೊಳಂ ಚಿರಮಲ್ಲದ ಬೆಳ್ಪು ಪಲ್ಲವ
ಪ್ರಸರದೊಳೆಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್
ಮಿಸುಗುವ ಕರ್ಪು ಬರ್ಚಿಸಿದವೊಲ್ ಬಗೆಗೊಳ್ವಿನೆಗಂ ಬಸಂತದೊಳ್
[1]ಬಸದಿಯ ಬಾಗಿಲಂ ತೆಱೆದ ಮಾಟಿಕ್ಕೆ[1]ಯೊಳಿರ್ದುದು ಬಂದ ಮಾಮರಂ ೨೯
(ಆದಿಪುರಾಣಂ ೧-೬೬)

ಎಳಗಿಳಿವಿಂಡಿನೋದುವ ಮಠಂ ಭ್ರಮರಂಗಳ ಗೀತಶಾಲೆ ಕೆಂ
ದಳಿರ್ಗಳ ಜನ್ಮಭೂಮಿ ವನಲಕ್ಷ್ಮಿಯ ಪೆರ್ಮುಗನೋತಗಲ್ದ ಕೋ
ಮಳೆಯಗ ಜೂಜು ಭೂತಳದ ಕಲ್ಪಕುಜಂ ಸಕಲಾವನೀರುಹಂ
ಗಳ ತಲೆನಾಯಕಂ ತುಱುಗಿ ಬಂದುದು ಚೂತಕುಜಂ ವಸಂತದೊಳ್ ೩೦

ನನೆಗೊಂಬಾಣತಿಮಾಡಿ ಪಾಡುವವೊಲಿರ್ದತ್ತು ಭೃಂಗಾಂಗನಾ
ಧ್ವನಿಯಿಂದಂ ತಳಿರ್ಗೊಂಬು ಪೆರ್ಚಿ ನಗುವಂತಿರ್ದತ್ತು ಪುಂಸ್ಕೋಕಿಲ
ಧ್ವನಿಯಿಂದಂ ಮಿಡಿಗೊಂಬು ಬಾಜಿಸುವವೋಲಿರ್ದತ್ತು ಕೀರೋಲ್ಲಸ
ದ್ಧ್ವನಿಯಿಂದಂ ಪೊಸಸುಗ್ಗಿಯುತ್ಸವಮುನಾದಂ ಬೀಱುವಿಮ್ಮಾವಿನೊಳ್* ೩೧

ತಳಿರೊಳ್ಗೊಂಬಿನೊಳೊಳ್ಪ ಕೋಕಿಳಕುಳಂ ಪೂಗೊಂಬಿನೊಳ್ ಪಾಡುತಿ
ರ್ಪಳಿವೃಂದಂ ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ ಪಾಯ್ದು ಬಂ
[2]ದೆಳ[2]ಸುತ್ತಿರ್ಪ ಶುಕಾಳಿ [3]ಕೆಯ್ವ ಬೆಸದೊಳ್[3] ತಂತಮ್ಮ ಠಾಣಾಂತರಂ
ಗಳೊಳಿರ್ದಂಗಜತಂತ್ರದಂತೆಸೆವಿ[4]ನಂ[4] ಚೆಲ್ವಾದುದಿಮ್ಮಾವುಗಳ್ ೩೨
(ಆದಿಪುರಾಣಂ ೧೧-೯೬)

ಅಲರಂಬಾದುದು ನಿನ್ನ ಕೋರಕದಿನೆ[5][ನ್ನಾ][5] ಚೆನ್ನವಿಲ್ ನಿನ್ನ ಗೊಂ
ಚಲ ಪೂವಿಂ ತೆಳೆದತ್ತು ತೋಮರಮ[6]ನಿನ್ನೆನ್ನಾ[6]ಜ್ಞೆ ನಿನ್ನಿಂದ ಸ
ತ್ಫಲಮಾಯ್ತೆಂದು ಮನೋಜರಾಜ[7]ನೆ[7] ಪಸಾಯಂಗೊಟ್ಟ ಕೆಂಬಟ್ಟೆಯಂ
[8]ತಳೆದಂತಾದುದು[8] ನೀಳ್ದ ಕೆಂದಳಿರ್ಗಳಿಂದಂ ಬಂದ ಮಾಕಂದದೊಳ್ ೩೩
(ಅನಂತನಾಥಪುರಾಣಂ ೬-೮೬)

ರತಿಗವತಂಸಮಾದ ತಳಿರಾವ ಮರಕ್ಕೊಳವೆನ್ನ ಬಿಲ್ಗೆ ಸಂ
ಗತಶರಮಾದ ಪೂಗುಡಿಗಳಾವ ಮರಕ್ಕೊಳವನ್ಯಪುಷ್ಪಮೂ
ಕತೆಗಗದಂಗಳಾದ ಕೊನರಾವ ಮರಕ್ಕೊಳವೆಂದು ಮನ್ಮಥಂ
ಸ್ತುತಿಯಿಸಿ ಮಾಮರಕ್ಕೆ ಕುಜರಾಜಸಮಾಖ್ಯೆಯನಿತ್ತನಚ್ಚಿಯಿಂ ೩೪
(ಚಂದ್ರಪ್ರಭಪುರಾಣಂ ೭-೪೫)

---

1 ಬಸವಾಳ್ತಿ ಬಾಳ್ತಿಗಳ ಬಾಚಿಕ್ಕೆ (ಕ) ಬಸತಿಗಳ ಬಾಳ್ತಿ ಬಾಳ್ತಿಗಳಬಾಳೆ (ಖ ಬ)
2 ಡುಳಿ (ಅ) 3 ತಮ್ಮ ಬೆಸದಿಂ (ಅ) 4 ನಿಂ (ಅ) 5 ನ್ನಂ (ಕ ಖ ಬ) 6 ನೆನ್ನೊಂದಾ (ಅ)
7 ನ (ಅ) ನು (ಕ ಖ ಬ) 8 ಚಲದಂತಾದುವು (ಅ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ

ವನಮಾಲಾ[1]ಕ[1]ಳಿತಂ ಸುಪ[2]ರ್ಣಮಿ[2]ಳಿತಂ ಸತ್ಕಾಂತಿಪೀತಾಂಬರಂ
ಘನಸುಚ್ಛಾಯನನಂತಭೋಗಿನಿಳಯಂ ಲಕ್ಷ್ಮೀಸಮೇತಂ ಸುದ
ರ್ಶನಸೇವ್ಯಂ ಸುಮ[3]ನಸ್ಸಮೂಹಶರಣಂ[3] ತೋಡಾಯ್ತು[4]ಪೇಂದ್ರಂಗೆ[4] ಮ
ಜ್ಜನಕಂಗೀ ಮರನೆಂದು ಮಾಮರಕೆ ಕಾಮಂ ಕೊಟ್ಟನಾ[5]ತಿಥ್ಯ[5]ಮಂ ೩೫
(ಪುಷ್ಪದಂತಪುರಾಣಂ ೮-೮೦)

ತಳಿರೊಳ್ ನೀನೆ ಬೆಡಂಗನಯ್ ನನೆಗಳೊಳ್ ನೀಂ ನೀಱನಯ್ ಪುಷ್ಪಸಂ
ಕುಳದೊಳ್ ನೀನೆ ವಿಳಾ[6]ಸಿಯಯ್[6] ಮಿಡಿಗಳೊಳ್ ನೀಂ [7]ಚೆಲ್ವನಯ್[7] ಪಣ್ತ ಪ
ಣ್ಗ[8]ಳೊಳೋ[8]ವೋ ಪೆಱತೇನೊ ನೀನೆ ಭುವನಕ್ಕಾರಾಧ್ಯನಯ್ ಭೃಂಗಕೋ
ಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ [9]ಚೆನ್ನಂ[9]ಗಳೇ ೩೬
(ಆದಿಪುರಾಣಂ ೧೧-೯೮)

ಒಂದೆರಡು ಮೂಱು ನಾಲ್ಕರ
ಲಿಂದೈದಾಱೇೞು ಮಿಡಿಗಳಿರದೆಂಟೊಂಬ
ತ್ತೊಂದಿದ ಪಣ್ಗೊನೆಯಿಂ ಪ
ತ್ತುಂ ದೆಸೆಗಂ ಮಾವು ಬೀಱುತಿರ್ದುದು ಸಿರಿಯಂ ೩೭

ಕಳಿಕೆ ಕೊನರ್ ತಳಿರ್ ಮುಗುಳಲರ್ ಮಿಡಿ ಕಾಯ್ ನಸುದೋರೆ ದೋರೆಪ
[10]ಣ್ಗಳಿನಿರದಾ[10]ಗಳಾನ ಪರಿಯಿಂ ನಡೆ ನೋೞ್ಪರ ಮಾತೆ ತಾನೆ ಕ
ಣ್ಗಳ ಸಿರಿ[11]ಯಾಗಿ[11] ರಮ್ಯಮೆನಿಸಿರ್ದು ವಿಯೋಗಿಜನಕ್ಕೆ ವಲ್ಲಭಾ
ವಳಿಗದು ಡಾಮರಂ ಮದನತೋಮರಮಾದುದು ಬಂದ ಮಾಮರಂ ೩೮
(ಜಗನ್ನಾಥವಿಜಯಂ ೧೪-೨೭)

ಎಳೆವ ನವಾಂಕುರಂ ಕಳಿಕೆ ಪೆರ್ಚು ಕೊನರ್ ಕೊನೆ ಕೆಂದಳಿರ್ ತಳಿರ್
ಪಸುರೆಲೆ ಚಿಕ್ಕ ಸಣ್ಣನನೆ ಬಲ್ನನೆ ಮೊಗ್ಗೆ ಮರಳ್ವ ಮೊಗ್ಗರಂ
ನಸುಮಿಡಿ ಸಿಂಪು ಪೂಮಿಡಿ ಬಲಿಲ್ಮಿಡಿ ಕಾಯ್ ಪೊದಟ್ಟಿ ಕಾಯ್
ನಸುಪರೆದೋರೆ ದೋರೆಯುರೆವಣ್ ತನಿವಣ್ಣೆಸೆದತ್ತು ಮಾಮರಂ ೩೯

ಸೊನೆಯಿಂ ಗಂಧದಿನಗ್ರಪಲ್ಲವದಿನಾದಂ ನೀಳ್ದ ಕೊಂಬಿಂ ಜಗ
ಜ್ಜನಮಂ ಬೆರ್ಚಿಸುತಿರ್ಪ ಕಾಯಬಲದಿಂ ಭದ್ರತ್ವಮಂ ತಾಳ್ದಿ ತೊ
ಟ್ಟನೆ ಮಾಡಿತ್ತತಿಪೂತ ಚೂತಮಹಿಜಾತಂ ಪ್ರೀತಿಯಿಂ ಕಂತುಗಿಂ
ತು ನಿತಾಂತಂ ಮದದಂತಿಯಂತಿರೆ ತದೀಯಸ್ವಾಂತವಿಭ್ರಾಂತಿಯಂ ೪೦

---

1 ನಿ (ಅ) 2 ರ್ವಲು (ಅ) 3 ನಃಪ್ರತಾನನಿಚಿತಂ (ಅ) 4 ನೋಡಲ್ಕೆ (ಕಾ ಸಾ) 5 ತೋದ್ಯ (ಕಾ ಸಾ) 6 ಸನ್ಯೆ (ಕ ಖ ಗ ಬ) 7 ಸೊಂಪನ್ಯೆ (ಖ ಬ) 8 ಳಿನೋ (ಅ) 9 ಚಿಹ್ನಂ (ಕ ಖ ಬ) 10 ಣ್ ಬಳಸಿರಲಾ (ಅ) 11 ತಾನೆ (ಅ)

ತುಱುಗಿ ತಳಿರ್ತ ಕೊಂಬು ನೆಱೆ ಪೂತು ಮರಲ್ದುಮರಲ್ದ ಕೊಂಬು ಕಿ
ಕ್ಕಿಱಿಗಿಱಿದಳ್ಳೆಗೊಂಬು ಸೆಳೆಗೊಂಬೆಳಗೊಂಬು ಕವಲ್ತ ಕೊಂಬು ಕಾ
ಯ್ತೊಱಗಿದ ಕೊಂಬು ಪಣ್ಗೊನೆಯ ಪಿಂಗೊನೆಯಂ ಕೆಳೆಗೊಂಡ ಕೊಂಬು ಬಿ
ತ್ತಱಿಯದ ಬೀಜಗೊಂಬೆಸೆದುದಾಮ್ರವನಾಂತರದೊಳ್ ನಿರಂತರಂ* ೪೧

ಅವಿರಳಮಾದ ಮೆಯ್ವಸುರೆ [1]ಪಚ್ಚೆದಿಮಿರ್[1] ತಳಿರುಟ್ಟ ಪಟ್ಟೆಯೊ
ಪ್ಪುವ ತಿಳಕಂ ಮಧುವ್ರತಮಲರ್ದಲರ್ಗೊಂಚಲೆ ದಂಡೆ ಕೋಕಿಲಾ
ರವಮದು ಬೀರಮದ್ದಳೆಯ ನಿಸ್ವನಮಾಗಿರೆ ಕಟ್ಟೆ ಬಂದ ಕಂ
ತುವ ಬಿರುದಂ[2]ಕರಂತೆ[2] ಕರಮೊಪ್ಪಿದುವಂದಿನ ಬಂದ ಮಾವುಗಳ್ ೪೨

(ಚಂದ್ರಪ್ರಭಪುರಾಣಂ ೭-೪೨)

ಮಿಳಿರ್ವೆಳಗೊಂಬು ಕೈ ಕುಳಿರ್ವ ಕೆಂದಳಿರೊಂದಿದ ಕರ್ಣತಾಳಮಿ
ಟ್ಟೆಳಮೆನೆ ಸೋರ್ವ ಸೋನೆ ಮದಭೃಂಗ[3]ಕು[3]ಲಧ್ವನಿ ಭೃಂಗಮಾದ ಕೋ
ಕಿಳರುತಿ ಬೃಂಹಿತಸ್ವನ ಬಿಗುರ್ತು ತಳಿರ್ತೆಳವಳ್ಳಿ ಶೃಂಖಲಾ
ವಳಿಯೆನೆ ಮುಟ್ಟೆಬಂದುದೆಳಮಾಮರನೆಂಬ ಮದಾಂಧಸಿಂಧುರಂ ೪೩

ಎಳದಳಿರೆಂಬ ಪೇಲು[4][ದಲಸಲ್][4] ಸೆಳೆಗೊಂಬುಗಳೆಂಬ ತೋಳ್ಗಳಿಂ
ದಳಿಕುಳಮೆಂಬ ಕುಂತಳಮನೋಸರಿಸುತ್ತಲರೆಂಬ ಕಣ್ಮಲರ್
ಪೊಳೆಯೆ ಪೊದಟ್ದ ಪಣ್ಣೆಲೆಯ ಪೆರ್ಮೊಲೆಯೊತ್ತಿನದೊಂದು ಭಾರದಿಂ
ತೊಲಗದೆ ನಿಂದು ಚೂತಲತೆ ನೋಡಿದಳಂದು ವಸಂತರಾಜನಂ ೪೪

ಬಂದೆಳಮಾವೆ ಚಿತ್ತಜನ ಬೀಡಿನೊಳಾವುದು ರಾಜವಾರ್ತೆ ಕಾ
ಮಂ ದಯೆಗೆಟ್ಟು ಕಾಮುಕಜನಕ್ಕುಱಿ ಜರ್ವಿ ವಸಂತರಾಜ ಕೊ
ಲ್ಲೆಂದುಱಿ ದಂಡುವೇಟ್ದಿನದುವಲ್ಲದೆ ಮನ್ಮಥಚಕ್ರವರ್ತಿಯೆ
ಯ್ತಂದಪನಿಂದು ನಾಳೆ ಬದುಕಿಲ್ಲ ವಿಯೋಗಿಗೆ ಪಂಕಜಾನನೇ ೪೫

ಆಲರ್ದೊಂಗಲ್ಗಳೆ ನೂಪುರಂಗಳೆನಿಸಲ್ ಮಾಂಗಾಯೆ ಮಾಂಗಾಯವೊಲ್
ಪೊಳೆಯಲ್ ಕೆಂದಳಿರೆಂಬ ಕೆಂಜೆಡೆ ಮರಲ್ದಲ್ಲಾಡೆಯುಂ ಕೋಕಿಲಂ
ಗಳ ಹುಂಕಾರದೊಳಂ ತೊದಳ್ ನುಡಿಯುತುಂ ಮುದದಿಂದಮುದ್ಯಾನಲಕ್ಷ್ಮೀ
ಯೆಳಕಯ್ಯಿಂದೆಱಿ[3]ತಂದ ಕಂದನವೊಲೇಂ ಚೆಲ್ವಾದುವಿಮ್ಮಾವುಗಳ್ (?) ೪೬

ಪುದಿದೆಳಗಾಯ್ ವಸಂತದ ಮೊದಲ್ ನೆರೆದೊಪ್ಪುವ ದೋರೆಗಾಯ್ ವಸಂ
ತದ ನಡು ಪಣ್ ವಸಂತದ ಸೆಱಂಗೆನೆ ತನ್ಮಯಮಪ್ಪಿನಂ ವಸಂ

---

[1] ಪತ್ತಿದುವುರ್ (ಖ ಬ) [2] ದದಿಂದೆ (ಅ) [3] ಕ (ಕ) [4] ಡೆ ಲಸತ್ (ಕ ಖ ಬ)

* ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಪುದಿದೆಳಗಾಯ್ ವಸಂತದ ಮೊದಲ್ ನೆರೆದೊಪ್ಪುವ ದೋರೆಗಾಯ್ ವಸಂ
ತದ ನಡು ಪಣ್ ವಸಂತದ ಸೆಱಂಗೆನೆ ತನ್ಮಯಮಪ್ಪಿನಂ ವಸಂ
ತದ [1]ಪುದಿದಾ[1]ದಿಮಧ್ಯಮವಸಾನಮೊಡಂಬಡೆ ತನ್ನೊಳಂ ವಸಂ
ತದೊಳಮಿದೇಂ ವಸಂತ[2]ದದಗುಂತಿಗೆ ಬಾೞ್ಮೊದಲಾಯ್ತೊ[2] ಮಾಮರಂ ೪೭

(ಶಾಂತಿಪುರಾಣಂ ೭-೧೪೩)

ಮಾವಿನ ಕೊನೆ ಮಾವಿನ ನನೆ
ಮಾವಿನ ಪೂ ಮಾವಿನೆಳೆಯ ಮಿಡಿ ಮಾವಿನ ಕಾಯ್
ಮಾವಿನ ಪಣ್ಣಿಂದೆ ಜನಂ
ಭಾವಿಸೆ ಸರ್ವಾಂಗಸೌಂದರಂ ಮಾವೆಲ್ಲಂ ೪೮

(ಕಾವ್ಯಾಲೋಕನಂ ೪೮೭)

ಕೋರಕಜಾಲದಿಂದೆಸೆದು ಕೆಂದಳಿರೇಱಿ ಮಡಲ್ತು ಕೂಡೆ ಕಾ
ಯ್ತಾರಮನಕ್ಕಮಿಾ ಮಱೆಯ ಬಳ್ಮಿಡಿಯಾಗಿ ಪಸುರ್ಪುಗೆಟ್ಟು ಕಾಯ್
ದೋರೆಗಳಾಗೆ ದೋರೆಯಿನಿತುಂ ತನಿವಣ್ಗಳುಮಾಗೆ ಮಾಮರಂ
ಪೌರಜನಕ್ಕೆ ಬೀಱುವುವು ಸತ್ಕವಿಯಂತೆ ರಸಾಯನಂಗಳಂ ೪೯

ತುಱುಗಿದುದೊಂದು ಕೊಂಬು ನನೆಯಿಂ ತಳಿರಿಂ ಪೆಱತೊಂದು ಕೊಂಬು ಸು
ತ್ತಿಱಿದುದು ತಳ್ತ ಬಳ್ಮಿಡಿಯ ಕಾಯ್ಗಳ ಗೊಂಚಲಿನೊಂದು ಕೊಂಬು ಪೂ
ತೊಱಗಿದುದೊಂದು ಮಾಮರದೊಳೊಂದೆಳಗೊಂಬುದು ಕೂಡೆ ನಾಡೆ ಪ
ಣ್ತೊಱಗಿದುದೇನದಂಗಜ ಮಹೀಭುಜನಿರ್ಕೆಯ ಚಿತ್ರಶಾಲೆವೊಲ್ ೫೦

ಉಗುರೊತ್ತಿಂ ಸೋರ್ವ ಸೊರ್ಕುಂಗೊನರ ಸೊನೆಗೆಯೇವೈಸಿ ಬಾಯ್ಧಾರೆಯಂ ತಾ
ಳುಗೆ ಮುಟ್ಟುತ್ತ್ರೀಂಟೆ ಬಾಯಂ ತೆಱೆದು ಪರಭೃತಂ ಕಾಯ್ದು ಕಿೞ್ಕೊಂಬಿನೊಳ್ ಕೈ
ಮಿಗೆ ಪೊಕ್ಕುರ್ವೇೞೆ ತುಪ್ಪುಱ್ ಮಡಗೆದಱಿ ಕುಳಿರ್ ಪೋಪುಗಿಲ್ ಪೋಪುಗಿಲ್ [ಪೋ
ಪುಗಿಲೆಂದಿಮ್ಮಾವಿನೊಳ್ ಕಣ್ಮಲೆದುದುಲಿದು ತನ್ನಿಚ್ಛೆಯಿಂದನ್ಯಪುಷ್ಟಂ* ೫೧

(ಅನಂತನಾಥಪುರಾಣಂ ೬-೭೩)

ಸೊನೆವನಿ ಚುಂಚುವಿಂ ಪನಿಯೆ ಮಾಂಗೊನರಂ ನ[3]ಲಿ[3]ಗರ್ಚೆ ಸೊರ್ಕಿನಿಂ
ತನು ದಳವೇಱೆ ಕಂಠವಿವರಂ ತೊವರೇ[4]ಱಿ[3,4] ಪಟುತ್ವವೇಱಿ[3] ಕಾ
ಮನ ನನೆಯಂಬುಗಳ್ ವಿರಹಿವೃಂದದ ಮೆಲ್ಲೆರ್ದೆಯಂ ಪುಗಲ್ ನಿಜ
ಧ್ವನಿ ಬಗೆಯಂ ಪುಗಲ್ ಬಿಡೆ ಪುಗಲ್ ಪುಗಲೆಂದುದು ಕೋಕಿಲವ್ರಜಂ ೫೨

(ಜಗನ್ನಾಥವಿಜಯಂ ೧೪-೩೮)

---

1 ನಿಮಿರ್ದಾ (ಅ) 2 ದೊಳಗಾಡಿಯ ವ್ರೊಲಾಯಿತು ಬಂದ (ಕ ಖ ಬ) 3 ಸು (ಅ)
4 ಱಿ (ಅ) * ಈ ಪದ್ಯವು (ಖ ಬ) ಪ್ರತಿಗಳಲ್ಲಿಲ್ಲ ; (ಕ) ಪ್ರತಿಯಲ್ಲಿ ಬಹಳ ಸ್ಖಾಲಿತ್ಯವಿದೆ

ಪ್ರಣವೋತ್ಥಶ್ರುತಿಮಧುರ
ಕ್ವಣಿತಂ ದ್ವಿಜಮುಖ್ಯವೃತ್ತಿ ಕೃಷ್ಣರುಚಿತ್ವಂ
ಪೆಣೆದಿರೆ ಪುರೋಹಿತಬ್ರಾ
ಹ್ಮಣನೆನಿಸಿತ್ತತನುನೃಪತಿಗೀ ಪರಪುಷ್ಟಂ† ೫೩

(ಚಂದ್ರಪ್ರಭಪುರಾಣಂ ೭-೮೮)

ತನಿವಣ್ಣಿಂ ಮಾರುತಾಂದೋಳ[1]ದಿನೊ[1]ಸರ್ವ ರಸಾಸಾರಮಂ ದೂರದಿಂ ಭೋಂ
ಕನೆ ಕಂಡೆಯ್ತಂದು ಕಂಠಂ ನಿಮಿರ್ದಮರ್ದಿರೆ ಪಕ್ಷದ್ವಯಂ ಜೋಲೆ ಕಣ್ ಮಾ
ಲನದೊಳ್ ಸಮ್ಮೀಳನಂಬೆತ್ತಿರೆ [2]ತನಿರಸಮಂ ಪೀರ್ದು ಪೀರ್ದಾರ್ದು[2] ಕಿಱುಕೊಂ
ಬಿನೊಳಡ್ಡಂ ಮೆಟ್ಟಿ [3]ತೆ[3]ಟ್ಟುಂದೆಱೆಯೆ ಗಱಿಪಿದತ್ತಾವ್ರದೊಳ್ ತಾಮ್ರತುಂಡಂ ೫೪

(ಚಂದ್ರಪ್ರಭಪುರಾಣಂ ೭-೮೭)

ಅಳಿ ಗಿಳಿ ಕೋಗಿಲೆ [4]ಕರ್ದುಕಿದೊ
ಡೆ[4]ಳವೆಱೆಯಂ[5]ಕುಶಮನಗ್ರ[5]ಪಲ್ಲವದೆಡೆಯೊಳ್
ಕೊಳಿಸಿ ಬಸಂ[6]ತನ[6] ಬರವಿಂ
ಗೆಳಮಾವಿನ ಗಜಮನಿಱುಂದು ಸರಿದಂ ಶಿಶಿರಂ ೫೫

(ಅನಂತನಾಥಪುರಾಣಂ ೬-೮೧)

ಕನಗಾರ್ಯಂ ಕಚ್ಚಿ ಮೆಯ್ಯೊಕ್ಕರಿಸಿರೆ ಸೊನೆಯಂ ಮೊಕ್ಕಳಂ ಕಚ್ಚಿ ಕಿಱಿತ್ರಿಂ
ದೆನುತುಂ ಕಿಱುಕೊಂಬಿನಿಂಬಂ ಬಿಸುಟು ತುರಿಪದಿಂ ಲಂಘನಂಗೆಯ್ದು ಮೇಲ್ಕೊಂ
ಬಿನ ಪಣ್ಣಂ ಚಂಚುವಿಂ ಪೀರ್ದೊಸರ್ವ ರಸಮನೊಲ್ದಂದದಿಂದೀಂಟೆ ಕೈಮಿ
ಕ್ಕೆನಸುಂ ಕೈಗಣ್ಮೆ ತೆಟ್ಟುಂದೆಱೆದು ಗಱಿಪಿದತ್ತಾವ್ರದೊಳ್ ತಾಮ್ರತುಂಡಂ ೫೬

ಸಯ್ಗೊಂಬಿನ ತಳರ್ವುದುವಿನ
ಮಯ್ಗರೆದಿರೆ ಗಿಳಿಯ ಶಿಶುಗೆ ಪಣ್ಗಳ ರಸದಿಂ
ಬಾಯ್ಗಿಣ್ಣಲಾಗಿ ಮಾಣದೆ
ತಾಯ್ಗಿಳಿ ತಂದೆಱೆದುದೊಂದು ಚೂತದ್ರುಮದೊಳ್ ೫೭

ಗಿಳಿಯ ಹಸುಗೂಸು ಮಾವಿನ
ಸೆಳೆಗೊಂಬಿನ ತಳಿರ ತೊಟ್ಟಿಲೊಳಗಱುತಿರೆ ಕಂ
ಡಳಿನಿವಹಮೞ್ಕಱಿಂ ಜೋ
ಗುಳಮಂ ಪಾಡಿದುವು ತೂಗಿದುದು ಗಂಧವಹಂ ೫೮

---

[1] ದೊಳೊ (ಕ ಖ ಬ) [2] ತಣಿವಿನೆಗಂ ಪೀರ್ದು ಮೆಯ್ವೆರ್ಚಿ (ಅ) [3] ತ (ಕ ಖ ಬ) [4] ಕರೆದೊಡೆವ (ಅ) [5] ಕುಶವದಗ್ರ (ಅ) ಕುಸುಮವಗ್ರ (ಖ ಬ) [6] ತಂ (ಖ ಬ) † ಈ ಪದ್ಯವು (ಕ) ಪ್ರತಿಯಲ್ಲಿಲ್ಲ

ಮಳಯಾನಿಲನಿಂದಲುಗುವ
ಸೆಳೆಗೊಂಬಿನ ಪಣ್ಣನಂತುಮಿಂತುಂ ಕರ್ದುಕ
ಲ್ಕಳೆವಳಿಪರಗಿಳಿ ಪೋಲ್ತುದು
ಮುಳಿದೋಪಳ ವದನಚುಂಬನೋತ್ಸುಕ ವಿಟನಂ ೫೯

ಪಸರಿ[1]ಸಿ[1] ಚೂತ ಕಟ್ಟು ಗುಡಿಯಂ ಪೊಸಮಲ್ಲಿಗೆಗಾಯ್ತು ನೂತನ
ಪ್ರಸವವಿಭೂತಿ ನಿನ್ನರಸಿಗೆಂ[2]ದುಱೆ ಪೇೞ್ದಿ[2]ವೊಲತ್ತಣಿಂದೆ ಬಂ
ದೊಸೆದಳಿಕಾಂತೆ [3]ಪೇೞ್ ಸೆಳೆದುಕೊಂಡು[3] ನವೀನದಳೋತ್ತರೀಯಮಂ
ಪೊಸಯಿಸಿ ಸೂಱೆಗೊಂಡುದಲರ್ಗಂಪುಗಳಂ ಸಹಕಾರಕಾಂತನಾ ೬೦
(ಲೀಲಾವತಿ ೯-೧೦೩)

ಮುಳಿದುೞಿದೋಪರಳ್ಕಿರ್ದ ಪುಗುೞ್ತಿರಿವಂತೆ ಮುಗುೞ್ತು [4]ನಾಣಜಾ[4]
ಣೊಳಗೆ ಸಡಿಲ್ವಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾ[5]ಡಿ[5] ಪೊ
ಟ್ವಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳ್[6]ಲರ್ವಿ[6]ರಿವಂತೆ ಕಂಪು ಕೈ
ಕೊಳೆ ಬಿರಿದತ್ತು ತುಂಬಿ ನೆರೆವಲ್ಲಿಗೆ [7]ಮ[7]ಲ್ಲಿಗೆ ಸಂತೆಯಂತೆವೊಲ್ ೬೧
(ಅನಂತನಾಥಪುರಾಣಂ ೬-೮೪)

ಪಸುರ್ಗೊಳಸೋರೆ ಬೆಳ್ಪು ಬಳೆಯುತ್ತಿರೆ ತೆಂಕಣಗಾಳಿಯಿಂ ಸಡಿ
ಲ್ವಸು [8]ಪೊರೆಯಾಗೆ[8] ಸಂಜನಿತ ಕಾಮಶಿಳೀಮುಖಪಾತದಿಂ ರಸಂ
ಪೊಸತು ಪೊದಟ್ಟು ಪೊಣ್ಮೆ ವಿರಹಾತುರೆಯಂತೆವೊಲೇಂ ಸುಗಂಧನಿ
ಶ್ವಸಿತಮನೆತ್ತಿತೋ ಬಿರಿದ ಮಲ್ಲಿಗೆ ಬಂದ ಬಸಂತಮಾಸದೊಳ್ ೬೨
(ಲೀಲಾವತಿ ೯-೧೦೫)

ಕುಸುಮಕುಳಕ್ಕೆ[9]ನಿನ್ನ ರಸೆ[9] ನಿನ್ನ ವಿಳಾಸಮೆ ನಿನ್ನ ಚೆಲ್ವೆ ನಿ
ನ್ನೆಸಕಮೆ ನಿನ್ನ [10]ಸ್ಸೈಪೆ[10] ಮಧುಲಕ್ಷ್ಮಿ[11]ಯುಮಾ[11]ಮಲಯಾನಿಲೇಂದುಗಳ್
[12]ಪಸರಿಕೆ[12] ನಿನ್ನ ಸೌರಭ[13]ದಿ[13]ನೆಂದಭಿಷೇಕಪುರಸ್ಸರಂ ಸ್ಮರಂ
ನಸು ಬಿರಿದಿರ್ದ ಮಲ್ಲಿಗೆಗೆ ಕಟ್ಟಿದ[14]ನೊಲ್ದಧಿರಾಜ[14]ಪಟ್ಟಮಂ ೬೩
(ಶಾಂತಿಪುರಾಣಂ ೭-೧೪೨)

ಪರೆಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತೆಂಬೆಲರ್
ಪೊರೆ[15]ವೊರೆಯಂ ಸಡಿಲ್ಚೆ[15] ನಡು ಪೊಂಗಿರೆ ಮಲ್ಲಿಗೆಗಳ್ ಬಸಂತದೊಳ್

---

1 ಸು (ಆ) 2 ದೆಡೆವೇಳ್ವ (ಅ) 3 ಯೆಂ ಸೆಳೆದುದೊಂದೆ (ಅ) 4 ಸಂದನಾ (ಆ)
5 ಡೆ (ಕ ಖ ಬ) 6 ಳಲ್ವಿ (ಕ ಖ ಬ) 7 ವ (ಖ) ಯ (ಬ) 8 ವೊಱಕೆಯಾಗಿ (ಕ ಖ ಗ ಬ)
9 ನೀನರಸಿ (ಕ ಖ ಬ) 10 ಸಗ್ಗೆ (ಅ) 11 ಯೊಳಾ (ಅ) 12 ಪೊಸಯಿಸೆ (ಅ) 13 ಮ (ಆ)
14 ನಂಕದರಾಜ್ಯ (ಅ) 15 ಪೊಳೆಯಿಂ ಸಡಿಲ್ಚಿ (ಖ ಬ)

ಬಿರಿವೊಡೆ ನಲ್ಲರಂ ನೆನೆದ ನಲ್ಲರ ಮೆಲ್ಲೆರ್ದೆಗಳ್ [1]ನಿರಂತರಂ[1]
ಬಿರಿ[2]ವುವವೆಂ[2]ತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇೞೆಗೊಂಡುದೋ ೬೪
(ಪಂಪಭಾರತಂ ೫-೩೩)

ಬನದ ವಿಭೂತಿ ತಂಬೆಲರ ಮೆಯ್ಸಿರಿ ತುಂಬಿಯ ಗೀತಶಾಲೆ ಚೈ
ತ್ರನ ತೊಡವೊತಗಲ್ದ ರೆರ್ದೆದಲ್ಲಣವೋಪರ ಸ್ವೈಪ್ರ ಕಾಮನಂ
ಬಿನ ಕಣಿ ಪುಷ್ಪಸಾಯಕನ ಕೀರ್ತಿಯ ಬಿತ್ತುಮೊದಲ್ ನೃಡಾರಿವೀ
ರನ ಜಯಶಕ್ತಿ[3]ಯಂತೆ[3]ಲರ್ದ ಮಲ್ಲಿಗೆಯಂ ಹರಿ ಮೆಚ್ಚಿ ನೋಡಿದಂ ೬೫
(ಜಗನ್ನಾಥವಿಜಯಂ ೧೪-೭೦)

ಅರಲ ಸರಲ್ ಸರಲ್ಗಡೆಸೆವಿಕ್ಷುಧನುರ್ಲತೆ ಬಿಲ್ಗಡಲ್ಲಿಯುಂ
ತಿರು ಗಡ ಪುಷ್ಪಸೂತ್ರಮೆಸೆವಂ ಗಡ ತಾನುಮನಂಗನೆಂದುಮಿಾ
ಪರಿ ಪರಿಹಾಸ್ಯಮಾಡಿಮೆನುತುಂ ನಗೆಯೊಳ್ ಪೊರೆಯೋಗಿ ವಿಚ್ಛೃತಂ
ಬಿರಿವವೊಲಂತದೇಂ ಬಿರಿದುದೋ ಪೊಸಮಲ್ಲಿಗೆಗಳ್ ಬಸಂತದೊಳ್ ೬೬

ಬಲ್ಲಹನಾದನುರ್ವಿಗೆ ಬಸಂತನವಂಗೆ ಸಹಾಯನಾತನಿಂ
ಮಲ್ಲಿಗೆಗಾದುದಗ್ರಮಹಿಷೀಪದವಿಂ ಪೆಱತಾವುದೆಲ್ಲಿಯುಂ
ಮಲ್ಲಿಗೆಯಾಣೆ ಮಲ್ಲಿಗೆಯ ಘೋಷಣೆಯೆಂದು ಕಡಂಗಿ ನಲ್ಲರ
ಲ್ಲಲ್ಲಿಯೆ ಸೂಡಿ ನೋಡಿ ನಡೆ ಸೌರಭದಿಂ ದಳವೇಱಿ ಸೊಕ್ಕುವರ್ ೬೭

ಪೊಸ ಸಿರಿಗಂಧದೊಳ್ ತೊಡೆದು ಕರ್ಪುರದೊಳ್ ಪು[4]ಳಿ[4]ಗರ್ಚಿ ಕೂಡೆ ಬೆ
ಳ್ಪೆಸೆಯೆ ಹಿಮಾನಿಳಂ ತೆಗೆಯೆ ಪೂರ್ಣನಿಶಾಕರನೆಂಬ ಸಾಣೆಯೊಳ್
ಕುಸುಮಶರಂಗೆ ಜಾಣ್ ನೆಱಿಯಲೆಂದು ವಸಂತಕನೆಂಬ ಕಮ್ಮಱಂ
ಮಸೆದಲಗೆಂಬಿನಂತೆಸೆಯುತಿರ್ದುವು ಮಲ್ಲಿಗೆಗಳ್ ಬಸಂತದೊಳ್ ೬೮

ಚಳಕಿಗೆಯಾದುವಾವವಱ ಬಲ್ಮುಗುಳಾವವಱಗ್ರಪಲ್ಲವಾ
ವಳಿ ಮುಡಿಯೊಳ್ ತೊಡರ್ಚೆ ರತಿಗೊಪ್ಪಮನಿತ್ತುವು ಪುಷ್ಪವಲ್ಲಿಯುಂ
ಫಳತರುವುಂ ದಿಟಕ್ಕೆ ಪೆಱತಾವುದೊ ಮಲ್ಲಿಗೆ ಚೂತಮೆಂದೆ ಕಂ
ಗಳೆ ಪಸವೋಡುವನ್ನಮೆಮೆಯಿಕ್ಕದವಂ ಮಧು ನಿಂದು ನೋಡಿದಂ ೬೯
(ಮಲ್ಲಿನಾಥಪುರಾಣಂ ೫-೨೫)

ಕಳಶಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ ಪುಂಸ್ಕೋ
ಕಿಳನಾದಂ ವೇದಮಂತ್ರಂ ಕುಡಿ ಗುಡಿ ಮಧು ಮೌಹೂರ್ತಿಕಂ ಪೂತವಲ್ಲೀ
ಕುಳಮೆಲ್ಲಂ ನಿಬ್ಬಣಂಬಂದಬಲೆಯರೆನೆ ಚೂತಂಗಮಿಾ ಮಲ್ಲಿಕಾಕೋ
ಮಳೆಗಂ ಕೊಂಡಾಡಿ ಕೈನೀರೆಱೆದನತನು ಲಾವಣ್ಯಪುಣ್ಯಾಂಬುವಿಂದಂ ೭೦
(ಮಲ್ಲಿನಾಥಪುರಾಣಂ ೬-೪೪)

---

1 ಬಸಂತದೊಳ್ (ಅ) 2 ಮವವೆಂ (ಅ) 3 ಯಿಂಪ (ಅ) 4 ಡಿ (ಖ ಬ)

ಇದು ಧಾತ್ರೀಪಾರಿಜಾತಂ ಸಕಲಸುಕವಿವೃಂದಪ್ರಣೂತಂ ವಸಂತಾ
ಭ್ಯುದಯಪ್ರೀತಂ ಮನೋಭೂನೃಪವಿಜಯರಥಖ್ಯಾ[1]ತ[1]ಸೂತಂ ವನಶ್ರೀ
ಸುದತೀಪ್ರೇಮಾತ್ಮಜಾತಂ ಫಲತರುವರವೃಂದಾರ[2]ಕೋದ್ಯದ್ಯು[2]ಪೇತಂ
ಮದಭೃಂಗೀಗೀತ[3]ಗೀತಂ ಕೃತವಿರಹಿವಿಘಾತಂ ದಲೀ ಬಾಲಚೂತಂ ೭೧

(ಚಂದ್ರಪ್ರಭಪುರಾಣಂ ೭.೯೦)

ರತಿಮದನಂ ವಸಂತಸಮಯಂ ಪುಳಿನಂ ನಳಿನಂ ಕೊಳಂ
ದ್ಯುತಿಲತೆ ಮಾವು ಕೀರಕಳಭಂ ಕಳಕಂಠರವಂ ರಥಾಂಗದಂ
ಪತಿ ತಳಿರುಯ್ಯಲೋಪರ ಸುಸಿಲ್ ನನೆ[4]ವಿಲ್ ನನೆಯಂಬು ಮಂದ[4]ಮಾ
ರುತ ನಳಿನೀನಿನಾದಮಿವಜಂ ಪೊಸಮಲ್ಲಿಗೆಗಕ್ಕೆ ಮಂಗಳಂ ೭೨

(ಮಲ್ಲಿನಾಥಪುರಾಣಂ ೬.೪೬)

ಜನಸಮ್ಮೋಹನವಿದ್ಯೆ ತನ್ನ ಮಧುವಿಂ ಪುಟ್ಟೆತ್ತು ಪುಷ್ಪಂಗಳು
ಳ್ಳನಿತುಂ ನೋಂತ[5]ವೆ[5] ತನ್ನ ಕೇಟಿಕಸಟಿ ಸೌಭಾಗ್ಯಕ್ಕೆ[6]ನಿಪ್ಪಗ್ಗದಿಂ
ವನದೇವೀ[7]ಸಖಿಗೀ[7] ವಸಂತವಿಜಯಶ್ರೀದೇವಿಗೀ ಚೂತರಾ
ಜನ ಮಾದೇವಿಗೆ ಮಲ್ಲಿಕಾರಮ[8]ಣಿ[8]ಗಂ ಭದ್ರಂ ಶುಭಂ ಮಂಗಳಂ ೭೩

(ಮಲ್ಲಿನಾಥಪುರಾಣಂ ೬.೫೧)

ಮುರಿದ ತೊಡಂಬೆಯೊಳ್ ಮೊ[9]ಗ[9]ಸಿ ತೋರ್ಪ ಪಸುರ್ಸನೆ [10]ನಾಡೆ[10] ಬೆ
ಳ್ಳರಿಸಿದ ಮೊಗ್ಗೆ ಕೂಡೆ ಬಿಳಿದಾದ ಮುಗುಳ್ ಪೊರೆವೋದ ಕುಟ್ಮಳಂ
ಬಿರಿದಲರೆಂಬಿವಂ ತಿಳಿದು ಮಲ್ಲಿಗೆಯೊಳ್ ಶರಪಂ[11]ಚಕಂ[11]ಗಳಂ
ವಿರಚಿ[12]ಸಿ[12]ಪಂಚಬಾಣವೆಸರಂ [13]ಪಡೆ[13]ದಂ ಮದನಂ ಬಸಂತದೊಳ್ ೭೪

(ಮಲ್ಲಿನಾಥಪುರಾಣಂ ೬.೪೭)

ಅಸದಳಮಾದ ಮಲ್ಲಿಗೆಯ ಬಂಧುರಗಂಧಮನಾಂತು ತೆಂಕಣಿಂ
ದೆಸಗುವ ಗಾಳಿ ಗಂಧವಹನಾದುದು ಮಾಗಿಯ ಪೋಗು ಕಾಪ್ಪಿರಂ
ಮಸಗುವ ಮಲ್ಲಿಕಾಮಧುವಿನಿಂ ಮಧುಮಾಸಮುಮಾಯ್ತು ಕೈದುವಂ
ಪೊಸಯಿಸಿ ಮಲ್ಲಿಕಾಕುಸುಮದಿಂ ಕುಸುಮಾಯುಧನಾದನಂಗಜಂ ೭೫

(ಮಲ್ಲಿನಾಥಪುರಾಣಂ ೬.೪೮)

ಸುರಭಿಸಮೀರಣಂಬೆರಸು ಬೇಗದೆ ಬಂದಲರ್ಗಣ್ಣ ಸನ್ನೆಯಿಂ
ಕರೆಯೆ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ
ಪರವಧುವಂ ವಿನೀಳಪರಿಧಾನಮನಾಕೆ ಮಧುಪ್ರಸಂಗಕಾ
ತರೆ ಮುಸುಕಿಟ್ಟಪೋಲ್ ಮುಸುಱಿ ಪೀರ್ದಪ್ರ ಸೌರಭಮಂ ಮದಾಳಿಗಳ್ ೭೬

(ಮಲ್ಲಿನಾಥಪುರಾಣಂ ೬.೪೧)

---

[1] ತಿ (ಕ ಖ ಬ) [2] ಕತ್ನ್ಯಾಭ್ಯೈ (ಅ) [3] ಸೂ (ಖ ಬ) [4] ಯಂಬುಗಳಿಂದ ಬಂದ (ಖ ಬ) [5] ದೆ (ಕ ಖ ಬ) [6] ತೆನ್ನೇಱಿಕ್ಕಿಯಿಂ (ಖ ಬ) [7] ಸಖಿಯೀ (ಖ ಬ) [8] ನ (ಕ ಖ ಗ ಬ) [9] ಸ (ಅ) [10] ಮೋನೆ (ಅ) [11] ಜರಂ (ಕ ಖ ಬ) [12] ಸೆ (ಕ ಖ ಬ) [13] ತೆಳೆ (ಅ)

ಬಿರಿಮುಗುಳೊಳ್ ಮುಸುಂ[1]ಬ[1]ನಲೆದೊಯ್ಯನೆ ಕರ್ಣಿಕೆಯಂ ಕರ್ದುಂಕಿ ಕೇ
ಸರಮನೆಱಂಕೆ[2]ಯಿಂ[2] ಕೆದಱಿ ಬಂಡನುರಂಬರಮುಂಡು ತಳ್ತಿ ಸಟಿ
ಪ್ರೊರೆಯೊಳಡಂಗಿ ನುಣ್ಚರದಿನಾಣತಿಮಾಡಿದುದುನ್ಮದಾಳಿ ತಾ
ವರೆಯೊಳಗಿರ್ಪ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನೆಂಬಿನಂ ೭೭
(ಮಲ್ಲಿನಾಥಪುರಾಣಂ ೬.೯೯)

ಸರಸಪಲಾಶಪುಷ್ಪಚಯದೊಳ್ ವನಲಕ್ಷ್ಮಿಯ ರತ್ನನೂಪುರ
ಸ್ವರಮೆನೆ ಮಲ್ಲಿಕಾಮುಕುಳದೊಳ್ ರತಿಕಾಂತನ ಬಾಣಭೀಂಕೃತ
ಸ್ವರಮೆನೆ ಹೇಮತಾಮರಸದೊಳ್ ಜಲದೇವಿಯ ವಕ್ತ್ರಕೂಜಿತ
ಸ್ವರಮೆನೆ ಪೊಣ್ಮಿದತ್ತು ಮಧುರಂ ಮಧುಮತ್ತಮಧುವ್ರತಸ್ವನಂ ೭೮
(ಜಗನ್ನಾಥವಿಜಯಂ ೧೪_೪೦)

ರಾಗದೆ ಕೂಡೆ ಝೇಂಕರಿಸಿ ಪುಷ್ಪರಸಂಗಳನುಂಡು ಸೊರ್ಕಿ ಬೆಂ
ಡಾಗಿ ತಳಿರ್ಗಳೊಳ್ ಕೆಡೆದು ಪೂಮರನಂ ಮುಸುಕಿಟ್ಟು ಜೋಗುಳಂ
ತೂಗಿಯರಲ್ಗೆ ಬಂದು ನೆಗೆವಂಬರದೊಳ್ ವನಲಕ್ಷ್ಮಿಗಿತ್ತಿಯಿಂ
ಮೇಗೆ ಮನೋಜನೆತ್ತಿಸಿದ ಪೀಲಿಯ ಸತ್ತಿಗೆವೋಲ್ ಮದಾಳಿಗಳ್ ೭೯

ಎತ್ತುಂಗೋಲಂ ವಿರಹಿಗೆ
ಚಿತ್ತಭವಂ ತೊಟ್ಟನಿಕ್ಕಿದಂತಿರೆ ಬನದಿಂ
[3][ದೆತ್ತಿ][3] ಗಗನಕ್ಕೆ [4][ಪಾಱು][4]ವ
ವೆತ್ತಂ ಮಧುಮತ್ತಚಿತ್ತ ಷಟ್ಚರಣಂಗಳ್ ೮೦
(ಶಬ್ದಮಣಿದರ್ಪಣಂ ೧೮.೧)

ವಿರಹಿಗಳಿತ್ತ ಸಾರದಿರಿ ತಣ್ಣೆಲರೀ ಬನಮೆಲ್ಲ ಮನ್ಮಥಂ
ಗಿರಲಿದೆ ದುರ್ಗ ಮಾಮರನೆ ಡೆಂಕಣಿ ಕಾಯ್ದುರಿಯುಣ್ಣೆ ಕೆಂದಳಿ
ರ್ವುರಿಯೆಳಮಾಳೆ ದಳ್ಳಿಸುವಶೋಕೆ ಧನುರ್ವಸಿತೇಕ್ಷುದಂಡ ಷ
ಟ್ಚರಣದ ನಾಳಿಗೋಲೆನುತ ಕೋಗಿಲೆ ಸಾಱಿ ಬಸಂತಮಾಸದೊಳ್ (?) ೮೧

ಮುಗುಬ್ದಿಂ ಮಗುಬ್ದಿ ಪೊಸಮ
ಲ್ಲಿಗೆಯುವಲಂ ಸಿರಿಯ ದೇಸೆಯಂ ಕಂದರ್ಪಂ
ಪೊಗಟ್ದಿಂ ರತಿಗಂ ತಂಗಾ
ಳಿಗಮಳಿಗಂ ಗಿಳಿಗಮಿಂದುಗಂ ಕೋಗಿಲೆಗಂ ೮೨

ಮೊದಲೊಳ್ ತಂಬೆಲರ್ಗಾನೆ ಬೋದಣಿಗೆಗಂಪಂ ಬೀಱಿದಂ ಸುಗ್ಗಿ ಬ
ರ್ಪುದು[5]ಮಾ[5] ನಂದನಕಾನೆ ಮುಂದು[6]ಗೆಡೆದಂ[6] ಪುಷ್ಪೇಷುಗಂ ಪುಷ್ಪಬಾ

[1] ಕೆ (ಹ ಬ) [2] ಯೊಳ್ (ಹ ಬ) [3] [illegible] (ಕ ಹ ಬ) [4] [illegible] (ಕ ಹ ಬ)
[5] ಸೀ (ಅ) [6] ದೆಗೆದಂ (ಅ)

ಱದ ಮುಂಗಾ[1]ಣ್ಕೆಯನಿತ್ತೆ[1] ನಾನೆ ಪೆಱ[2]ವೆ[2]ನ್ನಂತಾದುರ್ವೆ ಮೈಮೆಗಾ
ಸ್ಪದಮೆಂಬಂತೆವೊಲಾಯ್ತು ಮಾಧವಿ ಮದಾಳಿಧ್ವಾನಸಂತಾನದಿಂ ೮೩

(ಜಗನ್ನಾಥವಿಜಯಂ ೧೪-೬೩)

ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂದೆ ಬಂದು ನೀ
ನೆನಗೆ ವಸಂತನಾಗಮನಮಂ ನೆಱೆ ಸೂಚಿಸಿಕೊಟ್ಟೆಯೆಂದು ನಂ
ದವನವನಲಕ್ಷ್ಮಿ ಕೀರರವದಿಂ ಪೊಗೞ್ದತ್ತ ಪಸಾಯದಚ್ಚಮು
ತ್ತಿನ ಪೊಸಪಚ್ಚಮಂ ತಳೆದವೋಲದಿರ್ಮುತ್ತೆ ಮುಗುಳ್ತುದೆತ್ತಲುಂ ೮೪

(ಚಂದ್ರಪ್ರಭಪುರಾಣಂ ೭-೪೧)

ಮಲಯಮರುಚ್ಚಮೂಪತಿಗರಲ್ಗಳ ಸೌರಭದಂಗಚಿತ್ತಮಂ
ಕಲಪಿಕನಾಯಕರ್ಗೆ ಪೊಸಮಾಂಗೊನರಂಗಡಿಸೂಱೆಯಂ ಶುಕಾ
ವಳಿಯ ಪದಾತಿಗಿತ್ತು ತನಿವಣ್ಗಳ ಪೊಟ್ಟಣಮಂ ವಸಂತನ
ಗ್ಗಳಿಕೆಗೆ ಬಂದು ಸಂವರಣೆದೋಱ ಮನಂಬಡೆದಂ ಮನೋಜ[3]ನಾ[3] ೮೫

(ಅನಂತನಾಥಪುರಾಣಂ ೬-೮೫)

ಹರನುರಿಗ[4]ಣ್ಗೆ ನೀಂ[4] ಸೊನೆಯ ಸೋನೆಯನಾಗಿಸು ಚೂತ ಕಂಠದೊಳ್
ಗರಳದ ಕರ್ಪನೊತ್ತಿ ಕಳೆ ಚಂದ್ರ[5]ಮ[5] ಪೂಸಿದ ಬೂದಿ ಪಾ[6]ಱ[6] ಮೈ
[7]ಕರಲಿಡೆ ಬೀಸು[7] ಗಂಧವಹ ಕೆಂದಳಿ[8]ರೊಂದಲಗಿಂ[8] ಕಪರ್ದಿಯೊಳ್
ಬೆರಸು ಬೞಕ್ಕೆ ನೀನೆನುತೆ ನೋಡಿದನಂಗಭವಂ ವಸಂತನಂ ೮೬

(ಅನಂತನಾಥಪುರಾಣಂ ೬-೮೭)

ಬಂದಪನಿಂದು ನಾಳೆ ಮದನಂ ವನಕೇಳಿಗೆ ರಾಜಕೀರ ಮಾ
ಕಂದದ ಕಾಪು ನಿನ್ನದು ಮದಾಳಿಯೆ ಪೂಗಳ ಕಾಪು ನಿನ್ನದೆ
ಲ್ಲಿಂದಿರು ಬಾಗಿಲೊಳ್ ಪಿಕ ಸರೋವರಮಂ ಕಳಹಂಸ ಕಾಪುಗೊಳ್
ವಂದಿಸಿ ಗಂಧವಾಹ ಕೊಳಲೆಂದು ನಿಯಾಮಿಸಿದಂ ವಸಂತಕಂ ೮೭

## ವೈಶಾಖವರ್ಣನಂ

ವನಜ[9]ಲ[9]ಕೇಳಿಗಿಂಬುಗುಡುವಂತೆ ಪಗಲ್ ಪಿರಿದಾದುದೊಯ್ಯನೊ
ಯ್ಯನೆ ಕಿಱದಾದುದಂದಿನಿರುಳಾಱಸುವಂತಿನನಿಂದ[10]ಗಲ್ದ[10] ಪ
ದ್ಮಿನಿಯ ನಿರೋಧಮಂ ಶಿಶಿರನಿಂ ಮುಳಿದಿಟ್ಟಪಸವ್ಯಗಂಧವಾ
ಹನ ಕರಚಕ್ರದಂತೆ ಬಡಗ[11]ಲ್ ನಡೆದ[11]ತ್ತು ಹಿಮಾಂಶುಮಂಡಲಂ ೮೮

(ಅನಂತನಾಥಪುರಾಣಂ ೬-೮೯)

---

1 ಣಿಕೆಗೊಟ್ಟೆ (ಅ) 2 ತೆ (ಅ) 3 ನಂ (ಖ ಬ) 4 ಣ್ಣನಿಂ (ಕ ಖ ಬ)
8 ನ (ಅ) 6 ಱಿ (ಅ) 7 ಮರೆವಡೆಸುತ್ತ (ಅ) ಮರೆದೊಡೆ ಬೀಸು (ಕ ಖ ಬ)
5 ದೊರಂಗಲಸಿಂ (ಕ ಖ ಬ) 9 ದ (ಕ ಖ) 10 ದಗ್ಧ (ಖ ಬ) 11 ಲ್ಲಡರ್ದ (ಖ ಗ)

ಇನಿತಾನುಂ ಮೃಗತೃಷ್ಣೆಯಂ ಪಡೆಯುತುಂ ದಿಗ್ಭಾಗದೊಳ್ ತಳ್ತ ಕಾ
ನನದೊಳ್ ಬೇಗೆಯನಿಕ್ಕುತುಂ ಕದಡುತುಂ ನೀರ್ದಾಣಮಾದಂತುಟಂ
ಬಿನ[1]ದಂ ತ[1]ಪ್ಪೆಡೆಯೊಳ್ ತೆರಳ್ಚಿ ತೊವಲಂ ತಂದಿಕ್ಕುತುಂ ಬೇಂಟೆಗಾ
ಱನವೋಲ್ ಬೇಸಗೆ ಬಂದು ಪೊಕ್ಕು [2]ಕವಿದತ್ತೆತ್ತಂ ಮಹೀಭಾಗವಂ[2] ೮೯

ಪಾವಸೆಯಾಗಿ ಪೋಯ್ತು ನಗನಿರ್ಝರಣಂ ತೊಱೆಗಳ್ ಪದಪ್ಪುಮಾ
ಯ್ತಾವಗಮಾಕ್ಷಿಸಲ್ಕೆ ಕೆಸಱಾಯ್ತು ಕೊಳಂ ಕೆಱೆ ಬತ್ತಿಪೋದುವಿ
ರ್ಪಾವೆಡೆಯೆಂಬಿನಂ ಬಱತು ಬೀಟೆಯನಾಳ್ದುದು ಜೆಂಚೆ ದೂರ ಪೆ
ರ್ಬಾವಿಯೊಱಂತೆ ತೋಡುವಿನೆಗಂ ತಳ[3]ಕೋಡಿದು[3]ದಾ ನಿದಾಘದೊಳ್ ೯೦

ತನುಪಂಕಾಗ್ರಮುಹುರ್ಲುಠಚ್ಛಫರಮಾಬದ್ಧಾಶ್ಮಸಂಧ್ಯಂತರಾ
ಳನಿವಿಷ್ಟೋರುಕುಳೀರಕಂ ತಳ[4]ನದೀ[4]ನಿರ್ಮಗ್ನಕೂರ್ಮಂ ಚಿರಾ
ಭ್ಯನುಸಂಧಾನ[5]ವಿಲೀನ[5]ದೀನಮುಖ[6]ಹಂಸಂ[6] ಮ್ಲಾನ[7]ಕಲ್ಹಾರ[7] ಕೋ
ಕನದಂ ಕಣ್ಗೆ[8]ಳ[8]ದಾಯ್ತು ತತ್ಸಮಯದೊಳ್ ಶುಷ್ಯತ್ಸರಸ್ಸಂಚಯಂ ೯೧
(ಚಂದ್ರಪ್ರಭಪುರಾಣಂ ೯-೮೨)

ಬೆಟ್ಟದ ಕಲ್ಲ ಸಂದಿಯೊಳಗೊಯ್ಯನೆ ಪೊಣ್ಮುವ ನಿರ್ಝರಕ್ಕೆ ಕ
ಯ್ಯಿಟ್ಟು ಪಿಪಾಸೆಯಿಂದ[9]ಲ[9]ರೆಮಾಲಿತಲೋಚನನಾದ ದಂತಿಯಂ
ತೊಟ್ಟನೆ ಮುಟ್ಟಿ ಕಂಡದಱ ನ್ನೆನೆಟಿಲಾಸೆಗೆ ಜಾತಿವೈರಮಂ
ಬಿಟ್ಟೊಳಪೊಕ್ಕು ಪಟ್ಟಿತು ಬಿಸಿಲ್ಗಗಿದೊಂದು ಗಜಾರಿ ಬಿಚ್ಚತಂ ೯೨

ಬಟ್ಟೆಯ ಪಳ್ಳದೊಳ್ ಪಲವೊಱಂತೆಗಳಾದುವು ಕಾ[10]ಡೊಳಿರ್ದ[10] ಕಾ
ಲ್ಪಟ್ಟೆಗಳಿಲ್ಲಮೆ[11]ಯ್ದುವುವು[11] ನೀರ್ನೆಲೆಯಂ [12]ಪಟಿವಾಟಿ[12]ಬಾವಿಯೊಳ್
ಪುಟ್ಟದ ಸೊಪ್ಪುಪೇಟ್ಟುದು ಜಲೋದಯ [13]ಲೋ[13]ಭಮನೆತ್ತಿ ಪೊತ್ತು ಡೋ
ಣಿಟ್ಟು ದನಕ್ಕೆ ನೀರೆಱೆವ ಸಂಭ್ರಮಮುಣ್ಮಿದುದೂರ ಪಕ್ಕದೊಳ್ ೯೩

ಕಾನನಮುರಿದುದು ರವಿಕಾಂ
ತಾನಳನಿಂ ನಗದ ಶಿಖರಮೊಡೆದುದು [14]ಸಿಡಿಲ್ದು[14]
ತ್ತಾನೆಯ ತಲೆ ಬಿರಿದುದು ಮು
ಕ್ತಾನೀಕಂ ತೋಱತ್ತ ಬೆಟ್ಟಬೇಸಗೆ ಬಿಸಿಲೊಳ್ ೯೪

---

1 ದಕ್ಕ (ಗ ಘ) 2 ದುಮುದೆತ್ತೆತ್ತಂ ದಿಶಾಭಾಗದೊಳ್ (ಖ ಗ) 3 ವೋದುದು (ಕ) ಕೋಯ್ತುಡಿ (ಖ ಬ) 4 ತಟೀ (ಅ) 5 ನಾಶ (ಅ) 6 ಹಾ (ಕ ಖ ಗ ಘ ಬ) 7 ಕಾಹ್ಲಾದ (ಕ ಖ ಬ) 8 ನಿ (ಕ ಖ ಗ ಘ ಬ) 9 ರ್ (ಕ) ಡ (ಖ ಬ) 10 ಳೆದ್ದಿ (ಗ ಘ) 11 ಯ್ದಿರದು (ಗ ಘ) 12 ಪಾಳ್ಪಾಳಿ (ಕ ಖ ಬ) 13 ಲಾ (ಗ ಘ) 14 ಸೀಳ್ದು (ಖ ಬ)

ಬಿರಿಯದ ಬೆಟ್ಟಮಿಲ್ಲ ಮುಱಲಾಗದ ಪೆರ್ದೊಱೆಯಿಲ್ಲ ಬೆಂದೊಗಲ್
ಪೊರೆವೊರೆಯೆರ್ದು ಸಾಯದ ಮೃಗವ್ರಜಮಿಲ್ಲ ಬಿದಿರ್ ತಗುಳ್ದು ಮಾ
ಱಿಹೊರಸಿದ ಕಿಚ್ಚಿನಿಂದಡಸಿ ಬೇಯದ ಕಾನನಮಿಲ್ಲ ತೃಷ್ಣೆಯಿಂ
ದುರುಳದ ಪಾಂಥರಿಲ್ಲ ವಿಷಮಾರ್ಕಕರೌಘದೊಳಾ ನಿದಾಘದೊಳ್ ೯೫

ವಿಸರದ್ದಾವಾಗ್ನಿಜಿಹ್ವಾಕಬಳಿತಲತಿಕಾನೋಕಹಶ್ರೇಣಿ ನಿರ್ನೀ
ರಸರಸ್ಸಂತಪ್ತಪಂಕಾಕುಲಿತಕಮಠಪಾಠೀನಸಂತಾನಮತ್ಯು
ಗ್ರಸಮೀರಾಘಾತಜಾತಸ್ಫುರದವನಿರಜಃಸ್ಪರ್ಶದುರ್ದರ್ಶಮುರ್ವೀ
ರಸಪಾನೋತ್ತಾನಭಾನುದ್ಯುತಿಯೆನಲೆಸೆದತ್ತಸ್ತಮೋಘಂ ನಿದಾಘಂ ೯೬

ಸುರರಾಜಂ ಬೞಿಯಟ್ಟಲಾತುರಿಸುವಂ ಮೇಘಕ್ಕೆ ಕಾಯ್ದುರ್ಕ್ಕಿ ಸಾ
ಗರದಿಂ ಪೋಗಲೊಡರ್ಚುವಂ ವರುಣನುಗ್ರಂ [1]ವ್ಯಗ್ರ[1]ನಾತ್ಮೀಯಭೂ
ಧರದಿಂದಂ ಹಿಮವನ್ನಗಕ್ಕೆಳಸುವಂ ಪಿಂಗಂ [2]ವಟ[2]ಚ್ಛಾಯೆಯಿಂ
ಪೆರಿಗಾಂಕಂ ಭುವನಕ್ಕದೇಂ ಭಯದಮಾಯ್ತೋ ಘೋರ ಘರ್ಮಾಗಮಂ ೯೭

[3]ತೂರ್ಪೇಱಿದ[3] ಕಡುವಿಸಿಲ ಪ್ರೊ
ಡರ್ಪಿಂಗಿಟಿಂದಂತೆ ತೀರತರುಗಳ್ ತಱದಿಂ
ಮಾರ್ಪೊಳೆವ ನೆವದಿ ನೀರ್ವೊ
ಕ್ಕಾರ್ಪುವದೇಂ ಪಿರಿದೊ ಭುವನಭೀಷ್ಮಂ ಗ್ರೀಷ್ಮಂ ೯೮

ನಟ್ಟನಡುವಗಲ ಬಿಸಿಲುರಿ
ಯಿಟ್ಟೊಡೆ ಸುಟ್ಟಪ್ಪುದೆಂಬವೊಲ್ ಪಸರಿಪುದಂ
ಬಿಟ್ಟುಡುಗಿಯೊಂದೆ ಮೆಯ್ಯಂ
ಮೆಟ್ಟಿರ್ಪವೊಲಿರ್ಪುವಂದು ತಾಟ ನೆಟಲ್ಗಳ್ ೯೯

ಸಾಱುವ ಪಕ್ಕಿ ಕೋಡ ಗಱಿ ಸೀಯ್ಯಟವಿಲ್ಲೆಲೆಯುಕ್ಕಿ ಪೆರ್ಮರಂ
ತಾಱದವಿಲ್ಲರಣ್ಯಮೃಗಯೂಥದ ಬೆನ್ [4]ಪೊಳೆಚೆರ್ದು[4] ಬಾಯ್ಗಳ
ಪೋಱದವಿಲ್ಲ ಬೆಟಚ್ದ್ [5]ಡೆದು ಪಾಱದವಿಲ್ಲ ಪಯೋಧಿ ತಾಯ್ಮಣಲ್
ತೋಱದವಿಲ್ಲದೇಂ ಪ್ರಳಯಕಾಲಮೊ ತೀವ್ರನಿದಾಘಕಾಲಮೋ ೧೦೦

ಕುಲಗಿರಿ ಕಾಯ್ದು ಕರ್ಬುನದ ಬೆಟ್ಟುವೊಲಿರ್ದುವು ಧಾತ್ರಿ ಕಾದ ಕಾ
ವಲಿಯವೊಲಿರ್ದುದಂಬುನಿಧಿ ದಿಬ್ಬೆಗೆ ಕಾಸಿದ ತೈಲದಂದದಿಂ
ತಲೆದಳೆದುಕ್ಕುತಿರ್ದುವು ದಿಶಾವಿವರಂ ಸಲೆ ಕಾಱುಗಾಱನ
ಜ್ವಾಲೆಯವೊಲಿರ್ದುವೇಂ ಪ್ರಳಯಕಾಲಮೊ ತೀವ್ರನಿದಾಘಕಾಲಮೋ ೧೦೧

---

[1] ಪ್ರಜ್ಞ (ಅ ಕ ಬ) [2] ತಟ (ಗ ಫ) [3] ತೂಪಿಱಿದ (ಕ) [4] ಘಳಿಲೆರ್ದು (ಕ) ಪೊಣೆಲೆರ್ದು (ಖ ಬ) ಪೊಣೆಚೆರ್ದು (ಫ) [5] ದೋರ್ (ಖ ಬ) ಟ್ವೊ (ಗ ಫ)

ಒಲೆಗಲ್ಪೋಲ್ ಕಾಯ್ದುವೆಂಟುಂ ದಿಗಿಭದ ಬಿದುಗಳ್ ಕಾಯ್ದ ಕರ್ಬೊನ್ನ ಪೆಗ್ಗ
ವಲಿ[1]ವ್ರೋಲಾಯ್ತು[1] ನೆಲಂ [2]ಸಂ[2]ಪಳೆಯನೆಜ[3]ದವೋಲ್ ಕಾಯ್ದು
ಚುಯ್ಯೆಂದುವೇೞಿಂ
ಕುಲಪಾರಾವಾರಮಿಾ ಬೇಸಗೆಯ ಬಿಸಿಲೊಳಿನ್ನೆಂದಿ[3]ದೇ[?]ಕಾರ್ಣವಂ ಭೂ
[4]ತಳಮಕ್ಕುಂ ಪೇೞಿನಲ್ ಪರ್ವಿದು[4]ದತಿಶ[5]ಯಿತ[5]ಗ್ಲಾನಿದಾಘಂ ನಿದಾಘಂ ೧೦೨
(ಜಗನ್ನಾಥವಿಜಯಂ ೭೧-೭೨)

ರಸದಾಳಿಂಬದ ಪಣ್ಣ ಬಿತ್ತು ಬಿರುಕಿಂ ತೋರ್ಪಂತೆಯುರ್ಬೆಟ್ಟಿ ಪೆ
ರ್ಬಿಸಿಲಿಂದಿರ್ಬಗಿಯಾದ ಮಸ್ತಕದೊಳಾ ಸದ್ರಕ್ತಮುಕ್ತಾಳಿಗಳ್
ನಸುದೋಱುತ್ತಿರೆ ನೆಮ್ಮಿ ಪೆರ್ಮರನನೊಂದಂ ಕಣ್ಗಳಂ ಮುಚ್ಚಿ ಮೂ
ರ್ಬಿಸಿದಂತಿರ್ದುದು ದಂತವೇಷ್ಟಿತಕರಂ ಮತ್ತೊಂದು ಮತ್ತದ್ವಿಪಂ ೧೦೩

ಬಿಸಿ[6]ಲಳುರೆ[6] ಬಿರಿದ ಬಿದುವಿಂ
ನಸುದೋಱುವ ರಕ್ತ[7]ಸಿಕ್ತ[7] ಮುಕ್ತಾಫಳಮಂ
ರಸದಾಳಿಂಬದ ಬಿೞ್ತೆಂ
ದೊಸೆದು ಕರ್ದುಂಕುವುವು ಶುಕಕುಳಂ [8]ಮದ[8]ಗಜದಾ ೧೦೪
(ಜಗನ್ನಾಥವಿಜಯಂ ೧೬-೬೯)

ರದನಂ ಚುಱುತ್ತಿಂಬಿನಂ ಕಾಯ್ದೊದೆದು [9]ಬಿರಿಸಿಗಾಲ್ಪೀಡಿರಿರ್ದಿ[9]ರ್ಪ ಸೊಪ್ಪು
ಱುದ ಬಾಯಂ ಬಿಟ್ಟು ಒಕ್ಕಂಬಯಲನುದಕವೆಂದೂಡಿ ಕುಂಭಸ್ಥಲಂ ತೀ
ವಿದ ಮುಕ್ತಾಜಾಲಕಂ [10]ಬಿಬ್ಬರನೆ[10] ಬಿರಿದರ[11]ಲ್ಪೋಗೆ[11] ಸೈತಾದ ಮಧ್ಯಾ
ಹ್ನದೊಳಿರ್ದತ್ತೊಂದದುದ್ಯದ್ವನಕರಿ ದರಿಯುಂ ನೆಮ್ಮಿ ಘರ್ಮಾಂಬುವಿಂದಂ (?) ೧೦೫

ಪೞು ಬೇಗೆವೋಗೆ ತನ್ನಯ
ನೇೞ[12]ಲಂ[12] ಬೇಱತೊಂದುಗೆತ್ತು ಸಾರ್ವ್ವಳಿಪಿಂ[13]ದಂ[13]
[14]ಸುೞಿದೆಡಕಂ ಬಲಕಂ ಬಸ[14]
ವೞಿದುದು ಬೇಸಗೆಯ ಬಿಸಿಲೊಳೊಂದಿಭಕಳಭಂ ೧೦೬
(ಚಂದ್ರಪ್ರಭಪುರಾಣಂ ೯-೭೪)

ಅಱಿಯದರವಿಂದದಲರಂ
ಪೞಿದುದ ನೆವಮಿಟ್ಟು ಸುಟ್ಟಪಂ ರವಿಂಸಿನುತುಂ

---

1 ಯೊಲ್‌ಕಾಯಿದತ್ತೀ (ಕ) ಯೊಲ್ಕಾಯ್ತು (ಖ ಬ) 2 ಸಿಂ (ಅ) 3 ಗೇ (ಖ ಬ) 4 ತ್ರಳವುಕ್ಕುಂ ಪೇಱದೆಂಬವ್ರೋಲುರ್ಬಿಗುದ (ಕ) ತಳಕಂಪೇೞಿತೆಂಬ ವ್ರೋಲು ರ್ಬಿದುದ (ಖ ಬ) 5 ಯಡ (ಅ) ಯಿಕೆ (ಖ ಬ) 6 ಲೊಳರೆ (ಖ ಬ) 7 ಸುಕ್ತ (ಖ ಬ) 8 ಪಸ (ಖ ಬ) 9 ಸೈಗಾಲ್ ಪಿಡಿದಿರ್ಪ (ಕ) 10 ಬಿಕ್ಕನೆ (ಕ) 11 ಲ್ಪೊಗೆ (ಕ) 12 ಲನೆ (ಅ) 13 ಡಂ (ಬ) 14 ಸುೞಿಸುೞಿದೆಡಬಲಕಂ ಬಲ (ಖ ಬ)

ಮಱುಗಿ ಮೊಱೆಯಿಡುವ ತೆಱದಿಂ
ಮುಱಿದೆತ್ತಿದುದಗ್ರಕರದಿನಿಭವೇಳದಳಿರಂ ೧೦೭

ಭಾನುಕರೋಷ್ಣದಿಂದೊಡೆದು ಕೊಂಬು ಶಿರಂ ಬಿರಿಕೇಱಿ ತೋರ್ಕೆವೆ
ತ್ತಾನನದೊಳ್ಪು ಬಲ್ಪುಱಿಂಯೆ ಬೆಂಗಡಿ[1]ವಂ ಕಿ[1]ಱುವೀಡೆವೀಱಿ ನ
ಟ್ಪನಿಸಿದಂತೆ ಕಾಲ್ಗಳಿರೆ ಕಾಡಱಿದೇವ[2]ರ[2] ನೋಂಪಿಗಿಟ್ವ ಮ
ಣ್ಣಾನೆಯ ಮಾಱ್ಕೆಯಿಂ ಮಿಡುಕದಿರ್ದುದು ದಂತಿ ನಿದಾಘಕಾಲದೊಳ್ ೧೦೮

ಗಂಟಲುರಂಬರಂ ಬಱತು ಗೋಣೆಬಿಲಲ್ ಕಡುಸೇದೆಯಿಂದೆ ವ್ಯೆ
ಕಂಟಣಿಸುತ್ತೆ ಕೋಡ ಗಱಿ ಸೀದು ಮುರುಂಟೆ ವಿಹಂಗಸಂಕುಲಂ
ಗೆಂಟಱಿಖೊಳೊಂದಿ ತಾಱಿದ ಮರಂಗಳ ತೊಱಲುಗೊಂಬುಗೊಂಬಿನೊಳ್
ಸುಂಟಗೆಗೋದ ಮಾಱ್ಕೆಯವೊಲಿರ್ದುವು[3][ಡುಂ][3]ಗಿ ನಿದಾಘಕಾಲದೊಳ್ * ೧೦೯

[4]ಅಡೆವೊ[4]ತ್ತುವ ಬೇಸಗೆಯೊಳ್
ಪೆಡೆವಣಿ ಬಿಡೆ ಕಾಯ್ದು ನೆತ್ತಿ ಛಿಟಛಿಟಲೆನುತುಂ
ನಡೆಗೊಳ್ಳಿಯಂತೆ ನಡೆದುದು
ಗಿಡುಗಳ ನೆೞಲಾಸೆಗಹಿಪ ನಸುವಿಡುತುಸಿರಂ ೧೧೦

ಪೆಡೆಯ ಪೊದಲ್ಗೆ [5]ತಂದ[5]ಡರೆ ಮಂಡಳಿಸಿತ್ತಹಿ [6]ಕಾಯಮೆಲ್ಲಮಂ[6]
ಕೊಡೆವಿಡಿ[7]ದಂ[7]ತರಲ್ಚಿದುದು ಸೋಗೆಯಸೋವದೆ ಸೋಗೆ ಸೀರ್ದುದೋ
ಗಡಿಸದೆ [8]ಸೋ[8]ರ್ವ ನಾಲಗೆಯ ಬಿಂದುವನಂದಿರ್ದೆಯಾಱಿ ಸಿಂಗಮುಂ
ತುಡುಗವಪೇನಲಭ್ಯತರಪೋ ನೆೞಲುಂ ಜಳಮುಂ ನಿದಾಘದೊಳ್ ೧೧೧

(ಚಂದ್ರಪ್ರಭಪುರಾಣಂ ೯-೮೦)

ಉಱೆಕಾಯ್ದ ಸೂರ್ಯರಶ್ಮಿಗೆ
ಮೊಱೆಯಿಡಲೆಂದೆತ್ತಿ ಪಿಡಿದ ತೊಸಲೆಂಬಿನೆಗಂ
ತುಱುಗಿರ್ದಾವರೆಗೊಂಬಂ
ಮುಱಿದು ನೆೞಲ್ಮಾಡಿಕೊಂಡು ನಡೆವರ್ ಪಥಿಕರ್ ೧೧೨

(ಜಗನ್ನಾಥವಿಜಯಂ ೧೭-೭೧)

ಉರಿವ ನಿದಾಘದಾಘದೊಳೆ ಮೇರುನಗಂ ಪೊರೆವೋಗಿ ಸುತ್ತಲುಂ
ಕರಗ ಬೞಿಕ್ಕೆ ಱಾವಳಯಮೇಣ್ದೆಸೆಗಂ ನೆಱೆ ಸೂಸಿ ಕಾಱ್ಪಿರಂ

---

1 ವಕ್ಕಿ (ಬ) 2 ತ್ರೆ (ಕ) 3 ಡೂ (ಕ ಖ ಬ) 4 ಡಿಯೊ(ಕ ಖ ಬ) 5 ಕಂಡ (ಕ ಖ ಬ) 6 ಶೇಷಕಾಯಮಂ (ಅ) 7 ವಂ (ಕ ಖ ಬ) 8 ಪೀ (ಖ ಬ)
* ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಬರಿದು ಬಿಲಸ್ಥಲಂಗಳೊಳಪೊಕ್ಕುೞಿದಿರ್ದುದದಲ್ಲದಂದು ಪೇೞ್
ಜರಗಿನ ಪೊಂಗಮಿಾ ನೆಲಕಮಾವುದೊ ಸಂಗತಿವೆತ್ತಕಾರಣಂ ೧೧೩
(ಚಂದ್ರಪ್ರಭಪುರಾಣಂ ೯-೭೦)

ನೆತ್ತಿಯೊಳಾವಗಂ ತಳೆದ ಬಾಂದೊಱೆ ಮಾಣದೆ [1]ನಿಲ್ಲೆ[1] ಚೂಡದೊಳ್
ಪತ್ತಿಸಿದಾ ಹಿಮಾಂಶುಕಳೆಯುಪ್ಪಿದ ಹೈಮವತೀಲತಾಂಗಮೊ
ಪ್ಪುತ್ತಿರೆಯುಂ ಪೊದಱ್ದಿರಿವ ಬೇಸಗೆ[2]ಗೊರ್ಮೆಯೆ[2] ಬೆರ್ಚಿ [3]ರೌಪ್ಯ[3]ಭೂ
ಭೃತ್ತಟನಂದನಾವಳಿಯ ತ[4]ಣ್ಣೆೞ[4]ಲಂ ಬಿಡ[5]ನೊರ್ಮೆ[5]ಯುಂ ಮೃಡಂ ೧೧೪
(ಚಂದ್ರಪ್ರಭಪುರಾಣಂ ೯-೪೧)

ಹಿಮಕರನಂ ತುಱುಂಬಿ ಹಿಮವಾರಿಯ ಗಂಗೆಯನಿಟ್ಟು ಜೂಟದೊಳ್
ಹಿಮಗಿರಿಪುತ್ರಿಯಂ ಮುದದಿನಪ್ಪಿ ಹಿಮಾಂಗದ ನಾಗಮಂಡನೌ
ಘಮನೊಸೆದಾಂತು ತಾಪಹರ[6]ನಪ್ಪುದ[6]ನೀಶನುದರ್ಕದರ್ಶಿ ಮು
ನ್ನಮೆ ಸಮಕಟ್ಟೆ [7]ನಿಂದ[7]ನೆನೆ ಬೇಸಗೆ ಬೇಸಱಿಸಿತ್ತು ಲೋಕಮಂ ೧೧೫
(ಜಗನ್ನಾಥವಿಜಯಂ ೧೭-೭೭)

ಜಲನಿಧಿತಲ್ಪನುಂ ಜಲರುಹೋದರನುಂ ಜಲಜಾತನೇತ್ರನುಂ
ಜಲಧಿಸುತೇಶನುಂ ಜಲದವರ್ಣನುಮೆಂಬುದನೀ ನಿದಾಘಮಂ
ಕಳೆಯಲೆ ಪಣ್ಣಿಕೊಂಡನಸುರಾರಿವೊಲಾವನನಾಗತಜ್ಞನೆಂ
ದಿಳೆ ನುಡಿವಂತು ಪೆರ್ಚಿಸಿಲನುರ್ಬಿಸಿತುರ್ಬಿ ನಿದಾಘಮುರ್ಬಿಯೊಳ್ ೧೧೬
(ಜಗನ್ನಾಥವಿಜಯಂ ೧೭-೭೬)

ಅಳುರ್ವ ನಿದಾಘ[8]ದಿಂ[8] ತ್ರಿಭುವನಂ ನೆಱೆ ನಿರ್ಜಲಮಾದೊ[9]ಡಂ[9] ಕಮಂ
ಡಳುಜಳಶೀತದಿಂ ತೃಷೆಯನಾಱಿಪೆನೆಂದರವಿಂದಜಂ ಕಮಂ
ಡಳುವಿನೊಳಂದು ಬಯ್ತು ಪಿಡಿದಾ ಜಲಮಿಂದುಪಕಾರಿಯಾಯ್ತೆ[10]ನಲ್[10]
ತಿಳಿದೆನಿದೊಂದ[11]ನೆಂದೊಡೆ[11] ನಿದಾಘದ ದಾ[12]ಘಮನೇನ ಬಣ್ಣಿ[12]ಪೆಂ ೧೧೭
(ಜಗನ್ನಾಥವಿಜಯಂ ೧೭-೭೫)

ಸುರಪಂ ನೇತ್ರವ್ರಜವ್ಯಾಜದೆ ಕುಮುದದಳಶ್ಲಿಷ್ಟನಾದಂ ನಿದಾಘಾ
ತುರದಿಂದಬ್ಧಿಸ್ಥನಾದಂ ಶಿಖಿ ಯಮನಗಲಂ ಛಾಯೆಯಿಂದಂ ತಮಿಸ್ರಾ
ಚರನಾದಂ ರಾಕ್ಷಸಂ ಪಾಶಕರನುದಧಿಯಂ ಪೊರ್ದಿದಂ ಮಾರುತಂ ತಂ
ಬೆರಲಾದಂ ಕಿನ್ನರೇಶಂ ಹಿಮನಗಮನೆ ಸಾರ್ದಂ ಹರಂ ಗಂಗೆವೊತ್ತಂ ೧೧೮

---

1 ಭಾಳ (ಅ) 2 ಯುಮ್ಮೆಗೆ (ಅ) 3 ಭೂರಿ (ಕ ಖ ಬ) 4 ಣ್ಬೆಱ (ಅ)
5 ನಾಡೆ (ಖ ಬ) 6 ನೊಪ್ಪುವ (ಅ) 7 ಕೊಂಡ (ಅ) 8 ಮಂ (ಖ ಬ) 9 ದೀ
(ಅ) 10 ಲೇ (ಅ) 11 ನೆನ್ನದೋ (ಖ ಬ) 12 ಹಮನೇನನೆಂದ (ಅ)

ರವಿಕಾಂತೋಪಳವಹ್ನಿಯಿಂದಡವಿಗಳ್ ಭಸ್ಮಾವಶೇಷಂಗಳಾ
ದುವರಲ್ವೋದುವು ಬೆಟ್ಟುಗಳ್ ನದನದೀ ದ್ರೋಣೀಜಲಂ ಕಾಸಿದೆ
ಣ್ಣೆವೊಲು[1]ರ್ಕೆಟ್ಟು[1]ವು ಮೂಷೆಯುಟ್ಟ ತೆಱದಿಂ ಗ್ರಾವಸ್ಥಲಂ ಲೋಹಮಾ
ದುವು ರೇಣುಸ್ಥಲಿ ಕಾಱುವಿಟ್ಟುವು ನಿದಾ[2]ಘದ್ರಾಘಿಮೋದ್ರೇಕದೊಳ್[2] ೧೧೯
(ರಾಮಚಂದ್ರಚರಿತಪುರಾಣಂ ೭-೭೯)

ಮೃಗಕುಳಮಾಸೆಗೆಯ್ದು ಮೃಗತೃಷ್ಣಿಕೆಯಂ ಜಲಮೆಂದು ತೃಷ್ಣೆಯಿಂ
ಪಗಲಿಱಿವನ್ನೆಗಂ ಪರಿದು ಗಂಟಲುರಂಬರಮಾಱಿ ಬೆಂದೊಡಲ್
ತೆಗಳಗೆ ಬೀೞೆ ಬಾಯ್ಗೆ ಕ[3]ರಿ[3]ಸಂ ಬರೆ ನಾಲಗೆಗಿಟ್ಟು ನಟ್ಟದಿ
ಟ್ಟೆಗಳೊಡನಳ್ಳೆವೊಯ್ಯೆ ನಡೆಗೆಟ್ಟವು ತೃಷ್ಣೆಯಿನಾರೊ ಬೇಯದರ್ ೧೨೦
(ರಾಮಚಂದ್ರಚರಿತಪುರಾಣಂ ೭-೯೩)

ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆವಂ ಮತ್ಸ್ಯಾವತಾರಕ್ಕಿನಂ
ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ ದೇವರ್ಕಳಾಗ್ನೇಯಮೆಂ
ಮ ಹವಿರ್ಭಾಗಮನೊಲ್ಲದಿಂದುಕಲೆಯಂ ಕೊಳ್ವರ್ ಮೃಡಂ ಪಾರ್ವತೀ
ಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯನಂದಾಲಿಂಗನಂ ಮಾಡುವಂ ೧೨೧
(ರಾಮಚಂದ್ರಚರಿತಪುರಾಣಂ ೭-೯೮)

ಹುತ್ತಿನೊಳುಬ್ಬೆಗೊಂಡು ಪೊಱಮಟ್ಟು ಪಗಲ್ ಬಿಸಿ[4]ಲಟ್ಟೆ[4] ಕೆಂಡಮಂ
ಪತ್ತಿಸಿದಂತೆ ಕಾಯ್ವ ಮಣಿಯಿಂ ಪೆಡೆ ಬೇಯೆ ಪೊದಟ್ಟು ಧೂ[5]ಳಿ[5]ಯೊಳ್
ಪೊತ್ತಿದ ಧೂಳಿವಟ್ಟೆಯೊಳುರಂ ಪು[6]ಗು[6]ಳ್ದೇೞೆ ಪೋ[7]ರ[7]ಳ್ದು ಪೋಗಿ [8]ಸ್ರೋ
ಕ್ಕಿತ್ತಗಿ[8]ದೊಂದು ಪಾಟಿ ಪಱಿವಾವಿಯ ನೀರ್ದೆಗೆದಿರ್ದ ಬೀಡೆಯಂ ೧೨೨

ಅತಿತಪ್ತೋದ್ದೃಪ್ತಧೂಳೀಪಿಹಿತಮಹಿತಳಂ [9]ತುಂಗ[9]ವಾತೂಳಿಕಾಲಿಂ
ಗಿತ ರೋದೋಮಂಡಲಂ ಪ್ರೋಚ್ಚಲಿತಮರುಮರೀ[10]ಚಿವ್ರಜವ್ಯಾಪ್ತ[10]ದಿಕ್ಸಂ
ತತಿ ಬಂದತ್ತುಗುರ್ವಿಂ ಬಗೆಗೆ ಪಡೆದಮೋಘಂ ಸಮುದ್ಭೂತ[11]ಮಾಘಂ[11]
ಹೃತನದ್ಯೌಘಂ ವಿಮೋಘಂ ಜನಿತಜನಮನೋಗ್ಲಾನಿದಾಘಂ ನಿದಾಘಂ ೧೨೩
(ಚಂದ್ರಪ್ರಭಪುರಾಣಂ ೯-೬೫)

ಅರ್ಕಾಂಶುವಿಂದೆ ಪಾಲ್ಗಡ
ಲುಕ್ಕಲ್ ನೀರ್ದಳಿಯಲುದಕಮಿಲ್ಲದೆ ಹರಿ ತಾಂ

---

[1] ಬೆರ್ದು (ಖ ಬ) [2] ಘೋದ್ರೇಕದಿಂದಂ ಕರುಂ (ಖ ಬ) [3] ರು (ಖ ಬ) [4] ಲೆಳ್ವ (ಕ) ಲೇಳೆ (ಖ ಬ) [5] ನೆ (ಕ) [6] ನ (ಕ) ಶು (ಖ ಬ) [7] ದ (ಖ ಬ) [8] ತಾಂ ಪೊತ್ತನಿ (ಕ ಖ ಬ) [9] ತೂಲ (ಖ) [10] ಚೀಜಾಲ (ಅ) [11] ನೋಃಪಂ (ಖ ಬ)

ತಟಿಕ್ಕೃಸಿಕೊಂಡು ಪೋದಂ
ಪಟಿಕ್ಕಿಯನೆನಿಸಿತ್ತು ಲೋಕಭೀಷ್ಮಂ ಗ್ರೀಷ್ಮಂ ೧೨೪

ಹಿಮತಾಂಬೂಲೋರುರಾಗಾಧರಮದೃಢನಿತಂಬಾಂಬರಂ ತಾಲವೃಂತೋ
ತ್ಥಮರುದ್ವ್ಯಸ್ತಾಲಕಂ [1]ನಿಸ್ಸೃ[1]ತಮಧುಲವಸಾ[2]ದ್ರೋರ್ದ್ಗ[2]ಮಾಲಂಬಿಕೇಶಂ
ನಿಮಲೋದ್ಯದ್ಯಂತ್ರಧಾರಾಜಲಕಲುಷಿತನೇತ್ರಾಂಜನಂ ಚಂದನಾಪಾಂ
ಡಿಮಗಾತ್ರಂ ಗ್ರೀಷ್ಮಸಾಯಂಸಮಯದೊಳೆಸೆದತ್ತಂದು ಬಾಲಾಕಳಾಪಂ ೧೨೫
(ಚಂದ್ರಪ್ರಭಪುರಾಣಂ ೯-೮೨)

ತುಱುಗಿ ನದೀನದಂಗಳ ಜಲಂಗಳೆ ಕಾ[3]ಯ್ದು[3]ಸರೆಣ್ಣೆಯಂದದಿಂ
ಬಱತವು ಮೀಂಗಳಟ್ಟೆ ತೆಱದಿಂ ಕುದಿಗೊಂಡುವು ನಾಗಲೋಕದಿಂ
ಪೊಱಮಡಲಾಸೆಗೆಯ್ದು ನಹಿನಾಯಕನಂಬುಧಿ ಬತ್ತೆ ಮಾಣಿಕಂ
ಮಿಱುಗಲದೊಂದು ಕೆಂಡದೊಲೆಯಿರ್ಪವೊಲಿರ್ದ[ನಹೀಶ]ನಾವಗಂ ೧೨೬

ಸ್ಮರರಾಗಕ್ಕಂತರಾಯಂ ಜಲನಿಧಿಗೆರ್ದೆಗಿಚ್ಚೀಕ್ಷಣಕ್ಕಂಕುಶಂ ಹು
ಲ್ಲುರಿ ದಿಗ್ಜಾಲಕ್ಕೆ ಶೈಲಕ್ಕಶನಿ ಕರಗಸಂ ಹಸ್ತಿಮಸ್ತಕ್ಕೆ ಪಾಂಥ
ಗುರ್ಱಿಗುಯ್ಯಲ್ ತಾರು[4]ಗು[4]ತ್ತಂ ತರುಗೆ ತಪನರಾಜೀಸಮೂಹಕ್ಕೆ ದಾಹ
ಜ್ವರಮತ್ಯುದ್ದಾಹಭೀಮಾತಪಮನಲುರಿದತ್ತಂದಿಳೌಘಂ ನಿದಾಘಂ ೧೨೭

ನದನದ್ಯೌಘಾಂಬುವಂ ಪೀರ್ದೆಳೆ ನೆಱೆಯದೆ ಬಾಯ್ಬಿಟ್ಟವೋಲ್ ಬೀಡೆಗಳ್ ಪ
ರ್ವಿದು[5]ವುಷ್ಣಾಂ[5]ಶುಪ್ರಭಾಮಂಡಲದ ಪುದುವಿನಿಂ ಬೆಂದವೋಲಾಗಸಂ ಕಂ
ದಿದುದಾದಂ ದಿಗ್ವಧೂಸಂತತಿಯೊದವಿದ ತಾಪಕ್ಕೆ ಮೆ[6]ಯ್ಯಾನದಳ್ವಿಂ[6]
ದವ ಭೇರೀರಾವಮುರ್ವಿರ್ದುದು ಬೆಸೆಗಳೊಳೀಂ ಗ್ರೀಷ್ಮಮಾದತ್ತೊ ಭೀಷ್ಮಂ ೧೨೮
(ಚಂದ್ರಪ್ರಭಪುರಾಣಂ ೯-೬೬)

ಜ್ವಲನೋಷ್ಮಗ್ರೀಷ್ಮತಾಪಕ್ಕಗಿದಡವಿಗಳೊಳ್ ಬ್ಬೆಗುವೊಟ್ಟಿಪ್ಪಿನಂ ಪ
ಲ್ವಲಶಯ್ಯೋದ್ದೇಶಮಂ ಪೊರ್ದಿದುದಿರದೆ ಮುಹುಶ್ಶೃಂಗನಿಸ್ತಾಡನ ಪ್ರೋ
ಚ್ಚಲಿತಾಂಭಶ್ಶೀಕರಂ ಸ್ಟೈರಿಭವಿಸರಮಗಾಧಪ್ರವಂತೀಹ್ರದಾಂತ
ರ್ಜಲದೊಳ್ ನಿಷ್ಕಂಪಿತಾಂಗಂ ಮುಱುಗಿದುದು ಬಹಿಃಪುಷ್ಕರಂ ಹಸ್ತಿಯೂಥಂ ೧೨೯
(ಚಂದ್ರಪ್ರಭಪುರಾಣಂ ೯-೬೮)

ಬಿಡದಿನ್ನುಂ ತನ್ನನೆಮ್ಮನ್ವಯದ ಗಜಮನೆಂಟುಂ ಕೊರಲ್ಗೊಂಡು ಪೊತ್ತಿ
ರ್ದೊಡಮೆಮ್ಮೊಳ್ ಕಾ[7]ಯ್ಪನಿಂ[7]ತೀಯುವನಿ [8]ಮೆ[8]ಱೆದಪಳ್ ಮಾಣದೆಂದೆಂದು ಪ್ರಯ್ಕ

[1] ವಿಶ್ರ (ಖ ಬ) [2] ಜೋರ್ತ್ತ (ಕ ಖ ಬ) [3] ಯ್ಪ (ಖ ಬ) [4] ತು (ಖ ಬ)
[5] ವಶ್ಯಾಂ (ಖ ಬ) [6] ಯ್ಯನ್ನದಳ್ವಂ (ಅ) ಯಾನರಳ್ವಂ (ಖ ಬ) [7] ಯ್ಪಳಿಂ(ಖ ಬ) [8] ಮ
(ಖ ಬ)

ಲ್ಗುಡುವಂತಾತ್ಮಾಗ್ರಹಸ್ತಂಗಳೊಳಿನಕಿರಣೋದ್ಭೀತಿಯಿಂ ಪಲ್ಲವಂಗ
ಳ್ಪಿಡಿದುಗ್ರಗ್ರೀಷ್ಮದೊಳ್ ಸಾಮಜವಿತತಿ ತೊಟಿಲ್ದತ್ತು ವಾವಾರ್ಂಘೆಯಿಂದಂ ೧೩೦

(ಚಂದ್ರಪ್ರಭಪುರಾಣಂ ೯-೬೯)

ನಯನೌಘಚ್ಛಲದಿಂದೆ ನೈದಿಲೆಸಳಂ ಶಕ್ರಂ ಮುಸುಂಕಿಟ್ಟನೈ
ದೆ ಯಮಂ ಛಾಯೆಯನೊಂದಿನಿತ್ತಗಲದಿರ್ಪಂ ಪಾಶಹಸ್ತಂ ಪಯೋ
ಧಿಯನಾಶ್ರೈಸಿದನಾವಗಂ ತುಹಿನಭೂಮಿಾಧ್ರಕ್ಕೆ ಸಾರ್ದಂ ಹರ
ಪ್ರಿಯನಾವರ್ತಿಸೆ ತಳ್ತು ನಾಲ್ದೆಸೆಯುಮಂ ಗ್ರೀಷ್ಮಪ್ರತಾಪೋದಯಂ ೧೩೧

(ಚಂದ್ರಪ್ರಭಪುರಾಣಂ ೯-೭೦)

ಬೇಸಗೆಯ ಬಿಸಿಲೊಳಾ ಕೈ
ಲಾಸನಗಂ ನೆಱೆಯೆ ಕರಗಿ ಕ[1]ಣ್ಣಿ[1]ಟ್ಟು ಕರಂ
ಸೂಸಿ ಪರಿದಪುದು ದೆಸೆಗೆನೆ
ಮಾಸರಮಾಗಿರ್ದುವೊಗೆದ ಮೃಗತೃಷ್ಣಿಕೆಗಳ್ ೧೩೨

(ಚಂದ್ರಪ್ರಭಪುರಾಣಂ ೯-೭೧)

ಬಿಸಿಲಳುರೆ ಕರಗಿ ಹರಿವ
ಶ್ಮಸಾರವುಂ ಗಿರಿಯ ನಿರ್ಝರಂಗೆತ್ತೀಂ ಚುಂ
ಬಿಸಿ ಚಂಚು ಜೇಯೆ ತಲೆ[2]ಬಿದಿ[2]
ರ್ದಸುವರೆಯಾದುದೊ ತೃಷಾರ್ತನೊಂದು ಮಯೂರಂ ೧೩೩

(ಚಂದ್ರಪ್ರಭಪುರಾಣಂ ೯-೭೨)

ಕಡುವಿಸಿಲ ಕಾಯ್ಪಿನಿಂ ಬಿ[3]ರಿ
ದೊ[3]ಡೆದುಗೆ ಬಿಸುಮುತ್ತು ಸೋರ್ವ ಸೀರ್ಪನಿಗೆತ್ತೊಂ
ದೆಡೆಮಡಗದೆ ನೋಣೆದು ನವಿಲ್
ಮಿಡುಕಿದುದತಿತೃಷ್ಣೆಯಿಾಗು[4]ಮೆರ್ದೆಗದವಟಿಲಂ[4] ೧೩೪

(ಚಂದ್ರಪ್ರಭಪುರಾಣಂ ೯-೭೪)

ಪರಿಪೂರ್ಣಗರ್ಭಭರದಿಂ
ಬರಲಾರದೆ ನಿಂದೊಡ್ಡೈದಿ ನದಿಯಂ ಜಲಮಂ
ಪಿರಿದೂಡಿ ಬಂದು ತೆಗೆತೆಗೆ
ದಿರದೆಱೆದುದು ಕರಣೆಯಿಂದೆ ಕರಿಣಿಗಿಭೇಂದ್ರಂ ೧೩೫

(ಚಂದ್ರಪ್ರಭಪುರಾಣಂ ೯-೭೬)

---

1 ಚಿ್ಗ (ಅ) 2 ನಿದಿ (ಖ ಬ) 3 ದುವೊ (ಅ) 4 ಮಂತೆರ್ದೆಗಟಿಲಂ (ಖ ಬ)

ಒದವಿದ ಬೆಟ್ಟಬೇಸಗೆಯ [1]ಕೂ[1]ರ್ವಿಸಿಲರ್ವಿಸೆ ಬೆರ್ಚಿ ವಾಯುವೇ
[2]ಗದೆ[2] ಹರಿಣಂ ಸಮು[3]ತ್ಪ್ಲುತ[3]ದಿನಿಂದುವ ಬಿಂಬಮನೋಡಿ ಪೊಕ್ಕು ಮ
ಧ್ಯದೊಳೊಸಱುತ್ತುಮಿರ್ಪ ಸುಧೆಗಂ ಕುಳಿರ್ವಾಲನೆೞಲ್ಗಮಲ್ಲಿ ಪೋ
ಗದೆ ನೆಲಸಿರ್ದುದಲ್ಲದೊಡದೆಲ್ಲಿಯದೇಣಶಶಾಂಕಸಂಗಮಂ ೧೩೬

(ಚಂದ್ರಪ್ರಭಪುರಾಣಂ ೯-೭೭)

ಬಿಸಿಲೊಳೆ ಬಿಬ್ಬರಂ ಬಿರಿದ ಮಸ್ತಕಶುಕ್ತಿ[4]ಕೆಯಿಂದೆ ಮುತ್ತು[4]ಮುಂ
ದೆಸೆ [5]ಕವಿತಂದೊಡಾಂತಿರುತೆ[5] ನೋವುಮನಿಂತಿದಪೂರ್ವತೋಯಭೃ
ದ್ವಿಸರದೆ ವಾಃಕಣಂಗಳುಗುತಂದಪುವೆಂದೆ ಪೊಡರ್ಪುಗೆಯ್ದು ಪೂ
ರಿಸುವಳಿ[6]ಪಿಂದೆ[6] ಪುಷ್ಕರಮನೆತ್ತಿದುದಂದು ನಭಕ್ಕದೊಂದಿಭಂ ೧೩೭

(ಚಂದ್ರಪ್ರಭಪುರಾಣಂ ೯-೭೫)

ನೀಱೆಯರೆತ್ತಿ ತಂದೆಱೆವ ತಣ್ಗ[7]ರಗಂ[7]ಗಳನಗ್ರನಾಳದಿಂ
ದೂಱಿಂದ ಧಾರೆಯೊಡ್ಡಿದ ಕರಾಗ್ರದಿನಾನನದತ್ತ ತುಂತುಱಿಂ
ತೋಱೆ ಕೊರಳ್ ತಗುಳ್ದು ಮಿಡುಕಾಡೆ ವಿಲೋಚನಮೊಯ್ಯನೇೞೆ ಮೆ
ಯ್ಯೂಱಿಂ ನಿಜೇಚ್ಛೆಯಿಂದುಸಿರ್ದು ನೀರ್ಗುಡಿವಂದಗದಿಂದಮೊಪ್ಪುಗುಂ (?) ೧೩೮

ಪೂಸಿದ ಚಂದನಂ ಮುಡಿದ ಪಾದರಿ ತೊಟ್ಟೆಳಮುತ್ತು ಸುತ್ತಿನೊಳ್
ಮಾ[8]ಸ[8]ದ ತೆಂಗಿನೋಲೆ ಹದನಾಱಿದ ಬೆ[9]ಳ್ಕ[9]ಡಿ ಮೆಲ್ಲಪಚ್ಚೆನೀ
ರ್ವಾಸು ತಗುಳ್ದ ಗಂಜಣಿಯೊಳೊಂದಿದ ಬಾಳದ ಬೇರ ಚಪ್ಪರಂ
ಬೇಸಗೆ ಸಂದ ಭೋಗಿಗೆ ವಿಲಾಸದ ದೇಸೆಯನುಂಟುಮಾಡುಗುಂ * ೧೩೯

ಪೂಸುವ ಬೀಸುವ ಮುಡಿಯಂ
ಪಾಸುವ ನೀರ್ಗುಡಿಯಲೆಱೆವ ಕಿೞೆಗ್ಗವೆಸದೊಳ್
[10]ವಾಸಂತಂ[10] ವಿಟರ್ಗಾದುದು
ಬೇಸಗೆಗಾದುದು ಬೋಜಂಗತನಮಬಲೆಯರೊಳ್ ೧೪೦

ಮದನವಿಕಾರಮಂ ವಿರಚಿಪಲ್ಲಿಗೆ ಬೇಸಗೆ ಸೂಳೆಬಂಟನಾ
ದುದು ವಿಟರ್ಗಂಗನಾಜನದೊಳಿಂತೆನೆ ವಿಶ್ಲಥಮುತ್ತರೀಯಮಾ

---

[1] ಪ (ಕ ಖ ಬ) [2] ಱಿಂದ (ಅ) [3] ತ್ಸುಕ (ಕ ಖ ಬ) [4] ಯಮುತ್ತಿನಿಂದೆ (ಖ ಬ) [5] ಗುರುದಂತರಂದುಱಿದೆ (ಖ ಬ) [6] ಬಂಧ (ಖ ಬ) [7] ಳಸಂ (ಖ ಬ) [8] ಸಿ (ಖ) [9] ಳ್ಕ (ಕ) ಳ್ಪ (ಗ ಘ) [10] ಪಾಶತ್ವಂ (ಕ ಖ) * ಈ ಪದ್ಯವಾದ ಮೇಲೆ (ಕ) ಪ್ರತಿಯಲ್ಲಿ ವರ್ಷಾಕಾಲದ ವರ್ಣನೆಗೆ ಸೇರಬೇಕಾದ ಒಂಬತ್ತು ಪದ್ಯಗಳಿವೆ. ಅವು (ಖ ಬ) ಪ್ರತಿಗಳಲ್ಲಿ ಆ ಪ್ರಕರಣದಲ್ಲಿಯೇ ಇರುವುದರಿಂದ ಅವುಗಳನ್ನು ಅಲ್ಲಿಯೇ ಸೇರಿಸಿದೆ.

ದುದು ಬಱತ[1]ತ್ತು[1] ಬಾಯ್ [2]ನಿಡುಪನಾ[2]ಳ್ದುದು ಸುಯ್ ನಿವಿರುತ್ತುಮುಣ್ಕಿ ಪೊ
ಣ್ಮಿದುದು ಪರಿಶ್ರಮಂ ತನುಗೆ ಸಂಗಳಿಸಿತ್ತು ನಿಜಪ್ರಸಂಗದಿಂ ೧೪೧

ಕ್ರಮಸುಸ್ನಾತ[3]ಪ್ರಸಾಸ್ಯ[3]ದ್ವಿಚಕಿಳದಶನಂ ಪಾಟಲಾಶೀತಿಬಿಂದೂ
ದ್ಗಮದಿಂ ಮಂದಾರ್ಕತೇಜೋನಯನರುಚಿ ಸಮುತ್ಪಾತವಾತಂ ವಿಧೂ[4][ನ್ವ
ದ್ದ್ರುಮಪಾದಂ][4] ಶಾಲ್ಮಲೀತೂಳಕಪರಿತವಪುಃಕೇಶಜಾಲಂ ನಿದಾಘಾಂ
ತಿಮಕಾಲಂ ವೃದ್ಧನಂ ಪೋಲ್ತುದು ಶಿಥಿಲಜರಾಜೀರ್ಣವಲ್ಲೀಶಿರೋಳಂ (?) ೧೪೨

## ವರ್ಷಾಕಾಲವರ್ಣನಂ

ತಱಗೆಲೆ ಕೋಡದತ್ತಿಡಿಯೆ ಧೂಳಿವೊಲಂ ಸಱವೀಱೆ ಧೂಳಿಯಿಂ
ಕಿಱುಗಿಡುಗಳ್ ಮುಸುಂಕೆ ಮಱಲೊಕ್ಕಿದವೋಲಿರೆ ಬಟ್ಟಗಣ್ಣ ಪಾ
ಪ[5]ಱ[5]ಯೆಡೆಗಂಟ[6]ನಿಂದೊ[6]ಡೆಯೆ ತೂಱಲನಿಬ್ಬರಗೊಂಬು ಪಾಂಥರ
ಳ್ಕಱೆ ಬಿರುಗಾಳಿ ಬೀಸಿದುದು [7]ಕೋ[7]ಡೊಳೆ ಪೊಕ್ಕು ನಿದಾಘದಂತ್ಯದೊಳ್ ೧೪೩

ಕೆದಱುತ್ತುಂ ಮಱಲಂ ತೆ[8]ರಳ್ಚಿ[8]ಕೊಳುತುಂ ಭೂರೇಣುವಂ [9]ತುಳ್ಕಿ[9]ತುಂ
ನದನದ್ಯಚ್ಛಜಳೌಘಮಂ ಮುಱಿಯುತುಂ ಭೂಜಂಗಳಂ ನುರ್ಗುತುಂ
ಪೊದಱಿಂ ಸೀಳುತುಮೆಯ್ದೆ ವಂಶವನಮಂ ಕಾಡಾನೆಯಂ ಪೋಲ್ತು [10]ಬೀ
ಸಿದುದೆತ್ತಂ[10] ಲಯಕಾಲಕಾಲವಿಚಲದ್ಭೀಮಾರುತಂ ಮಾರುತಂ ೧೪೪
(ಕಾವ್ಯಾಲೋಕನಂ ೪೦೯)

ಒದವಿದ ಕಾರೊಳದ್ರಿಗಳ ಬೇಗೆ ತೆರ[11]ಳ್ಚಿ[11]ದು[12][ದೇಡು]ಮುಂ[12]ಡನಾ
ದುದು ಬಿಸಿಲೇಱಿಗ್ಗ ಕಟ್ಟಿದುದು ಸಂಬಳಮಂ ಕಳಹಂಸಮಾಲೆ ಪೆ
ಟ್ಟಿದುದು ತುಡುಂಕಿ ಸೋಗೆ ಮೊಳೆಯೊಳ್ ಮಿಡುಕು[13]ತ್ತಿಳ[13]ಮಿಂಚು ಕೆ[14]ತ್ತಲೆ[14]
ತ್ತಿದುದು ಪಯೋಧರಾವಳಿ ತಳರ್ನಡೆಯಿಟ್ಟುದು ಪಶ್ಚಿಮಾನಿಳಂ ೧೪೫
(ಅನಂತನಾಥಪುರಾಣಂ ೯-೫)

ವರುಣವಧೂ[15]ರತ[15]ಶ್ವಸಿತಗಂಧವಹಂ ಮಕರೇಶಚಾರುಚಾ
ಮರಮರುತಂ ಜಳೇಶಮಕರೋದ್ಗತಪುಚ್ಛಸಮೀರನು[16]ದ[16]ನ
ದ್ವಿರದನಕರ್ಣತಾಳಪವಮಾನನಿದೆಂದು ವಿತರ್ಕಿಪನ್ನಮಾ
ಸ್ಫುರಿತದವಾನಳಂ ಸುಱಿದುದೊಯ್ಯನೆ ಪಶ್ಚಿಮದಿಗ್ಭವಾನಿಳಂ ೧೪೬
(ಜಗನ್ನಾಥವಿಜಯಂ ೪-೨)

---

[1] ದ್ದು (ಖ ಬ) [2] ನುಡಿಸುವಾ (ಕ) [3] ಪ್ರಸಸ್ಯಾ (ಕ ಖ) [4] ಸ್ವದ್ರುಮ ನಂಬೆಂ (ಕ ಖ ಬ) [5] ಱಿ (ಖ ಬ) [6] [illegible] (ಕ) [7] ಕಾ (ಖ ಬ) [8] ನಳ್ [illegible] (ಅ) [9] ಸೂಸು (ಅ) [10] ಪೊಕ್ಕುದು [illegible] (ಅ) [11] [illegible] (ಅ) [12] ದೆಡರ[illegible] (ಅ) ನೆಡೆಮಱಿ (ಖ ಬ) [13] [illegible] (ಅ) [14] [illegible] (ಅ) [15] [illegible] (ಅ)
[16] ಜ (ಅ)

ಮುಗುಳ ತೊಡಂಬೆ ಗಂಟೊಡೆಯ ಮೊಲ್ಲೆಗೆ ಬೆಳ್ಪು[1]ಯೊತ್ತೆ[1] ಪುಟ್ಟೆ ಕೇ
ದಗೆ[2]ಗತ್ತೆ[2] ಸೊರ್ಕು ಚೇತರಿಸೆ ಚಾದಗೆಗಂ ಚಿರಮಾಗೆ ರಾಗಮಂ
ಚೆಗೆ ಕಿಱುವೀಲಿ ಕಣ್ದೆಱೆಯೆ ಸೋಗೆಗೆ ತಣ್ಣಸು ಪುಟ್ಟೆ ಬೆಟ್ಟಬೇ
ಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ವರ್ಷಿಮಾನಿಳಂ ೧೪೭

(ರಾಮಚಂದ್ರಚರಿತಪುರಾಣಂ ೭.೧೨೯, ಮಲ್ಲಿನಾಥಪುರಾಣಂ ೮.೭೬)

ಮುತ್ತುದು ನೇಸಱ ತೇಜಂ
ಪತ್ತುದು ದಾವಾಗ್ನಿ ಪಡುವದೆಸೆ ಮಱಕಮುಗಿಲಿಂ
ಪೊತ್ತುದು ಕಡ[3]ಲಿನ ತಂ[3]ಪಂ
ಪೊತ್ತುದು ಮಧುಕರಕುಲಕ್ಕೆ ಪಚ್ಚೆವುಪವನಂ ೧೪೮

(ಶಬ್ದಮಣಿದರ್ಪಣಂ ೨೩೬.೨)

ಎಬ್ಬದು ತಣ್ಣೆಲರ್ ವರುಣದಿಙ್ಮುಖದಿಂದದಱ[4]ೊಂದೆ ಕಟ್ಟದಿಂ
ಬೆಬ್ಬದು ತೃಷ್ಣೆಯಿಂದಱದ ಚಾತಕಜಾತಕಚಿತ್ರಮೆಕ್ಕೆಯಿಂ
[4][ದಿ][4]ಟ್ಟದು ಬಟ್ಟೆ ಸಂಬಳಕೆ ಬಾಳಮೃಣಾಳಮನಂಜೆ ತಣ್ಣೆಲರ್
ಬಿಬ್ಬದು ಕೂಡೆ ಧಾತ್ರಿ ಮೃಗಶೀರ್ಷವಿಭಾಗಮನರ್ಕನಾಳ್ವುದುಂ ೧೪೯

ಮೊದಲಿಡೆ ಕಾರ್ಮುಕಂ ಗಿಳಿಯೆಱಂಕೆಯ ಬಣ್ಣದ ಪುಲ್ಗೊನರ್ ಪೊದ
ಟ್ಟದು ಪೊಲದೊಳ್ ವಿರಾಜಿಸುವ ಮಾಣಿ[5]ಕವಣ್ಣದ ಕೋ[5]ರಕಂಗಳಿಂ
ಪುದಿದೆಸೆದತ್ತು ಸಾಳತರು ಮುತ್ತಿನ ಬಣ್ಣದ ಕುಟ್ಮಳೌಘವಾ
ದುದು ಕುಟಜಂಗಳೊಳ್ ಪವಳವಣ್ಣದ ಪೂಗಳನಾಂತುದರ್ಜುನಂ ೧೫೦

(ಜಗನ್ನಾಥವಿಜಯಂ ೪.೬)

ಕೆಂಗೊನರಾಯ್ತು ಸಲ್ಲಕಿ ಕದಂಬಮುರಲ್ದುದು ಜಂಬು ದೋರೆವ
ಣ್ಗೊಂಗಲನಾಂತುದತ್ತ[6]ಮುಳಕಂ[6] ಪರಲೊತ್ತಿದುದಿತ್ತ ಕೇತಕಂ
ಪೊಂಗಱಗಟ್ಟ[7]ದತ್ತು ವನಲಕ್ಷ್ಮಿಯ[7]ನೀಕ್ಷಿಸುವಂತಿರಾದುವೆ
ತ್ತಂ ಗಿರಿಕುಂಜದೊಳ್ ಕುಣಿದು [8]ಕೇ[8]ಗುವ ಸೋಗೆಯ ಕಣ್ಣ ಪೀಲಿಗಳ್ ೧೫೧

(ಅನಂತನಾಥಪುರಾಣಂ ೯.೩)

ಬೆಟ್ಟದ ತೋಳಸಿಂಬಱದು ಸಾರ್ದುವು ಬೇಡರ ಪಳ್ಳಿ, ಕಾಗೆ ಗೂ
ಡಿಟ್ಟುವು ತತ್ತ್ರಿಯಿಕ್ಕಿದುವು ಪೋದಗೆ ಮೆಲ್ಲನೆಯಲ್ಲಿ ಹಂಸೆಗಳ್

1 ಪುಟ್ಟೆ (ಅ) 2 ಗೆಳ (ಅ) 3 ಪಿಸಕಂ (ಕ ಬ) 4 ಪ (ಕ ಖ ಬ) 5 ಕಂಗಳಂ ಕಾ (ಕ ಖ ಬ) 6 ಕೆಸರಂ (ಅ) 7 ಬೆಂದುಕಲಪ್ಪೊರೆಯ್ಯೊಱು (ಅ) 8 ಕೂ (ಅ)

ತೊಟ್ಟನೆ ಪಾಱುಪೋದುವು ಜಲಾಶಯದಿಂ ಮರದಿಂ ಮರಕ್ಕೆ ಧಿಂ
ಕಿಟ್ಟು ಕಳಾಪಿ ಕೇಗಿದುವು ಚಾದಗೆಯೇಱಿದುವಭ್ರಮಾರ್ಗಮಂ ೧೫೨

ಮುಗಿಲಿದಿರೇಱೆ ಕಾದಲಲರೇಱೆ ಪೊಲಂ ಪಸುರೇಱೆ ಕಾಡಮ
ಲ್ಲಿಗೆ ನನೆಯೇಱೆ ಮೊಲ್ಲೆ ನಯವೇಱೆ ಬಿಸಿಲ್ ಕಡುದಣ್ಣಸೇಱೆ ಕೇ
ದಗೆ ಸುೞಿಯೇಱೆ ಹಂಸೆ ಭಯವೇಱೆ ನವಿಲ್ ನಲವೇಱೆ ಕಾಮಬಾ
ಹುಗೆ [1]ಬಲ[1]ವೇಱಿದತ್ತು ವಿರಹಿಪ್ರಕರಕ್ಕೞಲೇಱುತಿರ್ಪಿನಂ ೧೫೩

(ಜಗನ್ನಾಥವಿಜಯಂ ೪-೪)

ಅಱಿದಿನಿ[2]ಸುಂ[2] ಬೆಟ್ಟದ [3]ತೋ
ಳ್ಸಱು[3]ಗೊಂಡಿರಲೆಂದು ಭಿಲ್ಲಪಳ್ಳಿಗಳೆಲ್ಲಂ
ತೊಱೆದುವು [4]ತೊಱೆದಡಿಗಳನಾರ್[4]
ತೊಱೆಯದರನುಕೂಲವೃತ್ತಿಗೆಟ್ಟಿಸಗುವರಂ ೧೫೪

(ಜಗನ್ನಾಥವಿಜಯಂ ೪-೧೦)

ಘನ[5]ವಜ್ರ[5]ಜ್ವಾಲಧೂಮಾವಳಿಯೊ ಗಗನಗಂಗಾತಟೋದ್ವೃತ್ತಮಾಳೀ
ವನಮೋ ವಿದ್ಯುನ್ನಟೀಕರ್ಬುರಜವನಿಕೆಯೋ ಚಾರುಮೇಘಾಗಮಶ್ರೀ
ವನಿತಾಪಿಂಛಾತಪತ್ರಪ್ರಕರಮೊ ವಿಯದುತ್ತುಂಗಮಾತಂಗ[6]ಭೂಷಾ[6]
ಜಿನಪಕ್ಷತ್ರಾಣಮೋ [7]ಪೇೞೆ[7]ನೆ ನೆಗೆದುದಳಿಶ್ಯಾಮಳಂ ಮೇಘಜಾಳಂ ೧೫೫

(ಚಂದ್ರಪ್ರಭಪುರಾಣಂ ೪-೩೧)

ಒಟ್ಟಿದ ವಾರಿದೇರುಗಳವೋಲ್ ಕೆಲವೊಪ್ಪಿರೆ ದೂರಭಾಗದೊಳ್
ಕಟ್ಟಿದ ಗಂಧವಾರಣದವೋಲ್ ಕೆಲವೊಪ್ಪಿರೆ ತಳ್ತ ಕರ್ಪೊಡಂ
ಬಟ್ಟಿಸೆದೆತ್ತಿದೋಳಿಗುಡಿವೋಲ್ ಕೆಲವೊಪ್ಪಿರೆ ನೀರದಂಗಳೊಂ
ದಿಟ್ಟಳಮೊಪ್ಪಿದತ್ತು ಮೞೆಗಾಲದ ಬೀಡಿನವೋಲ್ ನಭಸ್ಥಳಂ ೧೫೬

ವರುಣನ ಕೀಲಾರದ ತುಱು
ಖರಕರಕೃತ ನಿರತ [8][ನೀರದಾಂ][8]ಬರ ವಿಪಿನಾಂ
ತರಮನಡರ್ದೇಱಿದಪುವೆನೆ
ವರುಣಾಶೆಯಿನಭ್ರಪಥವನೇಱಿದುದಭ್ರಂ ೧೫೭

ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲಕೀಲಾ
ವಳಿ ಸಂಜಾತೇಂದ್ರಗೋಪಪ್ರಸರವಿಸರ[1]ದ[1]ರ್ಚಿಃಕಣಂ ಪಶ್ಚಿಮಾಶಾ

---

[1] ಜಯ (ಅ) [2] ಸಂ (ಅ) [3] ತಾೞ್ಸಱಿ (ಅ) [4] ತೋಱಿಪಡಿಗಳಾ (ಕ ಖ ಬ) [5] ವಹ್ನಿ (ಅ) [6] ರುಕ್ಮಾ (ಕ) ಖುಕ್ಮಾ (ಖ ಬ) [7] ನೋೞೆ (ಅ) [8] ನಿರತಾಂ (ಕ ಖ ಬ)

ನಿಳ[1]ವಾ[1]ತೋಜ್ಜೃಂಭಿತಂ ಬಂದುದು ವಿರಹಿತರುವ್ರಾತಮಂ ಪರ್ವುವುಗ್ರಾ
ನಳನೆಂಬಂತಬ್ದಕಾಲಂ ಸ್ತನಿತಧಗಧಗಧ್ವಾನರೌದ್ರಾಯಮಾಣಂ ೧೫೮

(ಚಂದ್ರಪ್ರಭಪುರಾಣಂ ೪-೨೯)

ಸ್ತನಿತಘನಬೃಂಹಿತಂ ದು
ರ್ದಿನಮದಪೂರಂ ಪಯೋದ[2]ಗಜ[2]ಘಟೆ ಸು[3]ಱಿ[3]ದ
ತ್ತಿನರುಚಿಪಲ್ಲವಕುಳಕಬ
ಳಿನಲೀಲೆಯಿನಂತರಿಕ್ಷಕಕ್ಷ್ಯಾಂತರದೊಳ್ ೧೫೯

(ಚಂದ್ರಪ್ರಭಪುರಾಣಂ ೪-೩೨)

ಮುಂ ಬಿಸಜೋದ್ಭವಂ ಸಮೆದನಂಬುದಮಂ ಪವಮಾನಧೂಮತೇ
ಜೋಂಬುಗಳಿಂದಮೆಂಬ ನುಡಿ ಸತ್ಯಮದಲ್ಲದೊಡುಂತೆ ಕಾರ ಕಾ
ದಂಬಿನಿ ಮಾಟ್ಕುಮೇ ಬಿರಯಿಗಂಗಜವಹ್ನಿ ವಿಜೃಂಭಮಂ ವಿಳೋ
ಳಾಂಬಕವಾರಿಯಂ [4]ತನುನಿದಾಘ[4]ಮನುತ್ಕಳಿಕಾಪ್ರಪಂಚಮಂ ೧೬೦

(ಚಂದ್ರಪ್ರಭಪುರಾಣಂ ೪-೩೩)

ಇಂಬುಗಿಡಿಸಿದುವು ದೆಸೆಗಳ
ನಂಬರಮಂ ಪೀರ್ದು[5]ವಹಿಮ[5]ಹಿಮಕರಕಿರಣಾ
ಡಂಬರಮಂ ನೊಣೆದುವು ಪಿರಿ
ದುಂ ಬೇಸಱಿಸಿದುವು ಬಿರಯಿಯಂ ಜಲದಂಗಳ್ ೧೬೧

(ಚಂದ್ರಪ್ರಭಪುರಾಣಂ ೪-೩೪)

ನಲ್ಲರನಪ್ಪೆ ಮುಗ್ಧೆಯರು ದುರ್ಭಯಸಂಭ್ರಮದಿಂದೆ ಹಂಸೆಗಳ್
ನಿಲ್ಲದೆ ಪಾಱಿಪೋಗೆ ಕೊಳದಿಂ ನವಿಲ್ ಮೊಱೆಯೆ ಕೇಳ್ದು ನರ್ತನೋ
ತ್ಫುಲ್ಲತೆಯಿಂ ನೆಗೞ್ಚೆ ಮೊಱಗಿತ್ತು ಮುಗಿಲ್ ಘನಕಾಲಭೂಮಿಭೂ
ವಲ್ಲಭದಿಗ್ಜಯೋದ್ಯಮಮಹೋತ್ಸವದುಂದುಭಿ ತಾನಿದೆಂಬಿನಂ ೧೬೨
ಹರಿಗೋಪಾಲಪದಕ್ಕೆ ತೂರ್ಯಪಟುಘೋಷಂ ಕೇಕಿನಾಟ್ಯಕ್ಕೆ ಬಂ
ಧುರ ಢಕ್ಕಾನಿನದಂ ವಿಯೋಗಿನಿವಹಕ್ಕಂಗೋದ್ಭವಜ್ಯಾಲತೋ
ದ್ಧುರನಾದಂ ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀ
ರರವಂ ತಾನೆ[6]ನಿಸಲ್ಕೆ[6] ಮೇಘನಿನದಂ ಪೊಣ್ಮಿತ್ತು ರೋದೋಂತದೊಳ್ ೧೬೩

(ಜಗನ್ನಾಥವಿಜಯಂ ೪-೮)

ಪಿಕಮೌನವ್ರತದುಂದುಭಿಧ್ವನಿ ಬಲಾಕಾದೃಶ್ಯಚೂಡೋದಯಾ
ನಕರಾವಂ ಶಿಖಿನೃತ್ಯವಾದ್ಯರುತಿ ಪ್ರೋತ್ಕಕ್ಷ್ಯದ್ಭಗಘೋಷೋತ್ಸವೋ

---

[1] ಪಾ (ಅ) [2] ಘನ (ಕ ಖ ಬ) [3] ರಿ (ಖ ಬ) [4] ಹೃದಯತಾಪ (ಅ)
[5] ವಹ್ನಿ (ಖ ಬ) [6] ನೆನವ್ಯ (ಅ)

ತ್ಸುಕವಾದಿತ್ರರವಂ ಮರಾಳಗಮನಾತೋದ್ಯಸ್ವನಂ ಚಾತಕೋ
ದಕಕೇಳೀಕೃತತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ ೧೬೪

(ಚಂದ್ರಪ್ರಭಪುರಾಣಂ ೪-೩೫)

ರಸನಾಲಂಪಟನಾಜ್ಯವಾಂಛಿತನಸಂತುಷ್ಟಂ ಸದಾಸರ್ವಭ
ಕ್ಷಸಮಸ್ತಾಟವಿಭುಂಜಿತೋಗ್ರನೆನಿಪೀ ದಾವಾಗ್ನಿಯಂ ಕಾಲ್ಗಳಿಂ
ಪೊಸೆವೆಂ ಕಾಟಿಙ್ಪನಲಿಂ ಪೊರಳ್ಚುವೆನರಣ್ಯಶ್ರೀಯೆ ಕೇಳೆಂದು ಗ
ರ್ಜಿಸಿ ಮೇಘಂ ನುಡಿವಂದದಿಂ ಸ್ತನಿತಘೋಷಂ ಪೊಣ್ಮಿತಂದೆತ್ತಲುಂ ೧೬೫

ವಾದನದಂಡಂ ಕುಡುಮಿಂ
ಚಾದುದು ನೇಣಾದುದಮರಚಾಪಂ ವರದಂ
ಭೋದಮದು ಢಕ್ಕೆಯಾದುದು
ನಾದಕನಾದುದು ನಟತ್ಕಲಾಪಿಗೆ ಗಗನಂ ೧೬೬

ರಾಗದ ಬಳ್ಳಿ ಚಾದಗೆಗೆ ಕಾಂಚನಚಂಚಲಲಾಸ್ಯ[1]ತರ್ಜನಂ[1]
ಸೋಗೆನವಿಲ್ಗೆ ಮೇಖಲೆ ಘನಾಗಮ ಲಕ್ಷ್ಮಿಗೆ ದೀಪಮಾಲೆ ಜಾ
ರಾಗಮನಕ್ಕೆ ಜಂತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್ ನಭೋ
ಭಾಗಮನೆಯ್ದೆ ಬಿತ್ತರಿಸಿದತ್ತು ತಟಿಲ್ಲತೆ ಲಾಸ್ಯಲೀಲೆ[2]ಯಿಂ[2] ೧೬೭

(ರಾಮಚಂದ್ರಚರಿತಪುರಾಣಂ ೭-೧೪೮ ; ಮಲ್ಲಿನಾಥಪುರಾಣಂ ೮-೮೮)

ಘನಘನಚಾಪದೊಳ್ ಸ್ಫುರಿತ ಮನ್ಮಥರಾಗಸುವರ್ಣರೇಖೆ ನೂ
ತನಜಳವಾಹಕೇಶಯುಗಳಂ ನವಚಂಪಕಮಾಲೆ ವಾರಿಭೃ
ಜ್ಜನಪತಿಹಸ್ತಖಡ್ಗಲತೆ ಮೇಘ[3]ನೃಪೋ[3]ಜ್ವಳದೀಪಮಾಲೆ ತಾ
ನೆನೆ ಕಡುಗಾಡಿಯಿಂದಿಟಿಃದು ಮಿಂ[4]ಚೆಸೆ[4]ದತ್ತು ನಭೋವಿಭಾಗದೊಳ್ ೧೬೮

ಜಳಮಂ ವಾರಾಶಿಯೊಳ್ ಮಿರ್ಱಬೆರಸು ಮೊಗೆತರಲ್ ಮೇಘವಾ ಬಾಳಮೀನ್ಗಳ್
ಪೊಳೆದಾಡುತ್ತಿರ್ದುವಾಕಾಶದೊಳೆ[5]ನಲವಿ[5]ಭಿನ್ನಾಂಜನಚ್ಛಾಯೆಯಿಂ ಗೊಂ
ದಳಿಸಿರ್ದಂಭೋದ[6]ದಿಂದುಚ್ಚಳಿಸಿ[6] ಪೊಳೆವ ವಿದ್ಯುಲ್ಲತಾಜಾಲಮಾಗಳ್
[7]ತ[7]ಳೆದತ್ತಾಶ್ಚರ್ಯಮಂ ಕಟ್ಟಲೆ ಬಿಡೆ ಬಿಸಿಲಂ ಕಾ[8]ಜಿಂದೊಂದಂ[8]ದದಿಂದಂ ೧೬೯

(ಜಗನ್ನಾಥವಿಜಯಂ ೪-೧೫)

ಸಕಲಾಬ್ಜಾಂಭಸ್ಸಿರಾಮೋಚನಸುನಿಶಿತಶಸ್ತ್ರಂ ಪ್ರಯಾಣೋತ್ಕಹಂಸ
ಪ್ರಕರಪ್ರಸ್ಥಾನಭೇರೀಕನಕಮಯಕನತ್ಕೋಣಮಾಸಾರಲಕ್ಷ್ಮೀ

1 ಜರ್ಝರದುಂ (ಖ ಬ) 2 [illegible] (ಕ) 3 ಗೃಹೋ (ಬ ಖ) 4 ಚಿಸಿ (ಖ ಬ)
5 ನೆನೆದ (ಖ ಬ) 6 [illegible] ಚಿಕಸಿ (ಅ) 7 ಪೊ (ಖ ಬ) 8 [illegible]ತಿಪ್ರೊರ್ಗಿ (ಅ)

ಪ್ರಕಟಾಂಭೋದಾವಳೀವಿಶ್ಲಥಕಬರಿಭರಸ್ರಂಸಿದಾಮಂ ಚಳಚ್ಛಾ
ತಕರಾಜ್ಯಶ್ರೀಕಟಾಕ್ಷದ್ಯುತಿಲತಿಕೆ ತಟನ್ಮಾಲೆ ಚೆಲ್ವಾದುದಾದಂ ೧೭೦
(ಚಂದ್ರಪ್ರಭಪುರಾಣಂ ೪-೩೧)

ಗಗನಶ್ರೀಯ ವಿಚಿತ್ರವಸ್ತ್ರವಿಲಸತ್ಸಂವ್ಯಾನಮೆಂಬಂತೆ ಕಾ
ರ್ಮುಗಿಲೆಂಬಾನೆಯ ರನ್ನದಗ್ಗವಣೆಯೆಂಬಂತಬ್ಜಗರ್ಭಾಂಡಭೂ
ರಿಗೃಹದ್ವಾರ[1]ದ ರತ್ನ[1]ತೋರಣಮಿದೆಂಬಂತಭ್ರದೊಳ್ [2]ನಾ[2]ಡೆ ದಿ
ಟ್ಟಿಗೆ ಚೆಲ್ವಾಯ್ತು ಬಹುಪ್ರಭಾಶಬಳಿತಂ ಗೀರ್ವಾಣಬಾಣಾಸನಂ ೧೭೧
(ಜಗನ್ನಾಥವಿಜಯಂ ೪-೧೬)

ನನೆಗೋಲ್ ಕರ್ಬಿನ ಬಿಲ್ ಮದಾಳಿಕುಳಲೇಖಾವರ್ೌರ್ವಿಯೆಂಬರ್ ಮನೋ
ಜನ ಬಿ[3]ಲ್ ಮುಂ[3] ಪುಸಿಯಲ್ತು ಮೂಡುತಿದೆ ನಾನಾವರ್ಣದಿಂ [4]ಮಿೞ್ತುವೆಂ[4]
ದೆನಸುಂ ಬಾಯ್ಬಿಡೆ ಕಾಮುಕಾವಳಿ ಪಯೋಭೃತ್ಕೃಷ್ಣವಕ್ಷಃಸ್ಥಳೀ
ವನಮಾಲಾ[5]ಯತ[5]ಮೇಂ ಪೊದೞ್ದಸೆದುದೋ ಗೀರ್ವಾಣಬಾಣಾಸನಂ ೧೭೨
(ಅನಂತನಾಥಪುರಾಣಂ ೯-೧೧)

ನೂರ್ಮುಗಿಲೊಡ್ಡಿದತ್ತು ತುಱುಗಾರ್ತಿಯ ಕೋಣೆ ಕಡಂಕೆ ಮಿಂಚಿದ
ತ್ತೊರ್ಮೆಯೆ ನಿಂದ ನೀರ್ತೆಗೆದುದೊರ್ಮೆ ಬಿಸಿಲ್ಗೆ ಪೊದೞ್ದುದೋಳಿಯಿಂ
ಘರ್ಮಮರೀಚಿಮಂಡಳತರಂಗಿತ ಮೈವಳಿಯಾಯ್ತು ನೀರ್ಗದಿರ್
ಪೆರ್ಮೞಕಯಾಗದೀಗಳೆನುತಿರ್ದುದು ರಾಗದಿನುರ್ಬಿದಾ ಜನಂ ೧೭೩

ಥೞಥೞಿಸೆ ಮಿಂಚು ಮಿಂಚಿದ
ಬೞಿಯನೆ ದಳದಳಿಸಿ ಮೊೞಗಿ ಮಿಗೆ ಮೊೞಗಿದವಂ
ಬೞಿಯನೆ ಕಡಲಂ ಮೆಲ್ದಗೆ
ದೆೞಲಿಕ್ಕಿದ ತೆಱದಿನೆಱಗಿಕೊಂಡುವು ಮುಗಿಲ್ಗಳ್ ೧೭೪

ಮೇ[6]ಲೇಟ್ಟ್ವಿ[6] ಮುಗಿಲ [7]ಹೇಱಿನ[7]
ಮಾಲೆಗಳಂ ನೆಗೆದು ಕೊರಡುಗೊಂಡವೊಲೆತ್ತಂ
ಸಾಲಿಟ್ಟುವೆರಲವಟ್ಟೆಯೊ
ಳಾಲಿವರಲ್ಪೆರಸು ತೋರವನಿ [8]ಮುಂಗಾ[8]ರೊಳ್ ೧೭೫
(ಅನಂತನಾಥಪುರಾಣಂ ೯-೮)

ಉಪಶಾಂತರಜೋವಿಕೃತಿಯ
ನುಪ[9][ಗತ] ಕಾ[9]ಳಿಮಪಯೋಧರಸ್ಮಿತೆಯಂ ಮು

---

[1] ದುದಾರ (ಅ) [2] ನೋ (ಅ) [3] ಲ್ಲಂ (ಅ) [4] ಬಿಲ್ಲುಮೆಂ (ಕ ಖ ಬ)
[5] ಮಯ (ಅ) [6] ಲಲೆಪ (ಅ) [7] ಹೊಡಱಿನ (ಅ) [8] ಕೊಳ್ಗಾ (ಅ) ............
ತಾ (ಖ ಬ)

ತ್ರುಪಚಿತಜಡವೃತ್ತಿಯನೆ
ಯ್ದೆ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ* ೧೭೬
(ಚಂದ್ರಪ್ರಭಪುರಾಣಂ ೪-೪೩)

ವಿಳಸಿತ ಕಂ[1]ದಳಂ[1] ವಿ[2]ಸಿಪತತ್ತ್ರ[2]ರಕಂ ಕ್ಷುಭಿತೋರುವಾಹಿನೀ
ಕುಳನಿನದಂ ಗಳಚ್ಛರಸಮುಗ್ರಮುದಗ್ರಸುಪರ್ವಚಾಪಮಂ
ಡಳಲಲಿತಾಂಬರಂ ವಿಹರಿದಶ್ವಸಮುತ್ಕರ[3]ಮಂದಗುರ್ವನೇಂ[3]
ತಳೆದುದೊ ಪೋಲ್ತು ಯುದ್ಧ[4]ದ ಸಮು[4]ಕ್ರಮುಮಂ ಜಲದಾಗಮಕ್ರಮಂ ೧೭೭
(ಚಂದ್ರಪ್ರಭಪುರಾಣಂ ೪-೪೪)

ಘನಸಮಯಶಬರ ಕರಗತ
ಕನತ್ತಟಿದ್ದಂಡಪಾತವಿಗಳನ್ನೀಳ
ಸ್ತನಯಿತ್ನುಕುಳತಮಾಳೀ
ವನಪ್ರಸೂನಂಗಳೆನಿಸಿದುವು ಕರಕಂಗಳ್ ೧೭೮
(ಚಂದ್ರಪ್ರಭಪುರಾಣಂ ೪-೩೭)

ಬಿಟ್ಟು ಸಿಡಿಲ್ದುವಾಲಿವರಲಾಲಿವರಲ್ಗಳ ಪಿಂತೆ ಧಾರೆಗಳ್
ಬಿಟ್ಟುವು ಧಾರೆಯಂ ಬೆಳಗಿ ತೋಱುವವೋಲ್ ಪೊಳಪೇಱೆ ಮಿಂಚು ಮಿಂ
ಚೆಟ್ಟುವು ಮೇಘದೊಳ್ ಮೊಱಗೆ ಮೇಘದ ಸಂದಣಿಯಿಂದೆ ಭೋರೆನು
ತ್ತೆಟ್ಟುಱೆ ಕೊಳ್ವ ಪೆರ್ಮೞೆಯ ಘೋಷವದೇನೆಸೆದತ್ತೊ ಕಾರ್ಮೊಗಂ ೧೭೯

ತೀಡುವ ಪಶ್ಚಿಮಾನಿಳನ ತೀಟ[5]ದಿನು[5]ತ್ಕಟವಾಗೆ ರಾಗಮಿ
ಪ್ಪೋಡಿದ ಚಂಚುವಂ ತೆಱೆದೆಱಂಕೆ ನೆಱಲ್ದಿರೆ ಕಂಠನಾಳಮಂ
ನೀಡಿ ವಿಯತ್ತಳಕ್ಕೊಗೆದು ಕಾರ ಮುಗಿಲ್ವನಿಯಂ ಮನಂ ಕುಳಿರ್
ಕೋಡುವಿನಂ ಕರ್ದುಂಕಿ ನಲಿ[6]ವಾಱುದು ವಾಱುವಂದು[6] ಚಾತಕಂ† ೧೮೦
(ರಾಮಚಂದ್ರಚರಿತಪುರಾಣಂ ೭-೧೪೭ ; ಮಲ್ಲಿನಾಥಪುರಾಣಂ ೮-೮೭)

ಗಱಿಗಳ್ ಮಿಳ್ಳಿಸೆ ಗೋಣ್ ಮರಲ್ದು ಮಡಪಿಟ್ಟಂ ಬಿರ್ಚಿ ಚಂಚೂಪುಟಂ
ದೆಱೆದಳ್ಕತ್ತಿ ದಿವಾಱೆ ಪೀರ್ದು ನಭದೊಳ್ ವಾರ್ಧಾರೆಯಂತೇಱೆ ಮ್ಮೆ
ಮಱುಕಂ ಪೊರ್ದಿನಳುರ್ಕೆಗಾಲಿವರಲಂ ಪೊಯ್ದಣ್ಣೆಕಲ್ಲಾಡಲುಂ
ತೆಱೆಕಲ್ಲಾಡಲದೇಂ ತಗುಳ್ದು ಪೋ ಮನಸ್ಸಂಪ್ರೀತಿಯಿಂ ಚಾತಕಂ (?) ೧೮೧
(ಅನಂತನಾಥಪುರಾಣಂ ೯-೯)

---

[1] ಧರಂ (ಕ ಖ ಬ) [2] ನೀತಪಕ್ಷ (ಖ ಬ) [3] ದಂಡುಗುರ್ವಿಗೇಂ (ಖ ಬ) [4] ಸಮುಚ (ಅ) [5] ದೊಳು (ಅ) [6] ದಾಡಿದು ವಾಱುದುವೊಂದು (ಅ) * ಈ ಪದ್ಯವು (ಕ) ಪ್ರತಿಯಲ್ಲಿಲ್ಲ
† ಈ ಪದ್ಯದಿಂದ ಮುಂದಿನ ಹತ್ತು ಪದ್ಯಗಳು (ಕ) ಪ್ರತಿಯಲ್ಲಿ ಗ್ರೀಷ್ಮವರ್ಣನಾಭಾಗದಲ್ಲಿ ಸೇರಿ ಹೋಗಿವೆ. (ಖ ಬ) ಪ್ರತಿಗಳಲ್ಲಿ ಈ ಪದ್ಯವಿಲ್ಲ.

ಮನದನುರಾಗದಿಂ ನೆಗೆದು ನೀಡಿದ ಕಂಠಮುರಲ್ದ ತುಪ್ಪುೞು
ರ್ಬನಿಮಿಷಮಾದ ಕಣ್ ತೆಱೆದ ಚಂಚು ವಿಜೃಂಭಿಸೆಬಿಂಕೆ ರಂಜಿಸಿ
ತ್ತೆನೆ ನಲವೇಱೆ ತೋರವನಿ ತಣ್ಪನಿ ಮುಂಬನಿಯೆಂಬ ಕಾರ್ಮುಗಿ
ಲ್ವನಿಯನಲಂಪಿನಿಂದಮಿದಿರ್ಗೊಂಡು ಕರ್ದುಂಕಿದುದ್ಧ ಚಾತಕಂ ೧೮೨
(ಜಗನ್ನಾಥವಿಜಯಂ ೪-೧೬)

ಇದಿರ್ಗೊಂಡಾಯ್ಕುಳಿಗೊಂಡು ಕೊರ್ಬಿದ ನವಾಂಬೂದ್ಬಿಂದುವಂ ನುಂಗಿ ಪೆ
ರ್ಚಿದಲಂಪಿಂ ಜಲಧಾರೆಯಂ ಕರ್ದುಕಿದತ್ತೆಯ್ತಂದು ಮುಂಡಾಡಿದತ್ತೊ
ದೆದತ್ತೀಡಿಱಿದತ್ತು ಚಂಚುಪುಟದಿಂ ಪೊಯ್ದತ್ತು ಪಕ್ಷಾಗ್ರದಿಂ
ಬಿದಿರ್ದತ್ತೋಕುಳಿಯಾಡಿದತ್ತು ನಿಜತೃಷ್ಣಾಘಾತಕಂ ಚಾತಕಂ ೧೮೩

ಜಳಧರಮುಕ್ತನವ್ಯಜಳಬಿಂದುಗಳಂ ನೆ[1]ಗೆ[1]ದಾಯ್ದು ನುಂಗಿ ಕ
ಣ್ಮಲರ್ಗೊಳೊಳೋ[2]ವಿ[2]ಕೊಂಡು ಕುಣಿದಾಡಿದುದುಜ್ವಲಮಪ್ಪ ಧಾರೆಯೊಳ್
ಗಿಲಿಗಿಲಿಗಂಬವಾಡಿದುದೆಱಂಕೆಗಳಂ ಕೆದಱುತ್ತು ಮುದ್ದಿನಿಂ
ಕೆಲಕೆ ನಿರಾಕುಳಂ ತೆಗೆದುದಪ್ಪಿದುಮೊಪ್ಪಿದುದೊಂದು ಚಾತಕಂ ೧೮೪

ವಸುಧಾವಲ್ಲಭೆ ಮೇಘಕಾಲವಿಟನೊಳ್ ಸಂಭೋಗಮಂ ಮಾಡೆ ಬಂ
ಣ್ಣಸರಂ ಪೋರ್ಕುಳಿಯಿಂದಲೇ ಪಱಿದು ಸೂಸಿತ್ತಲ್ಲದಂದೆತ್ತಣಿಂ
ಪೊಸಮುತ್ತುಂ ಕಿಸುಗಲ್ಗಳುಂ ಕೆದಱಿ ಕಣ್ಗಿಂಬಾದುವೆಂಬತದೇ
ನೊಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತತ್ತಿಂದ್ರಗೋಪಂಗಳುಂ ೧೮೫
(ರಾಮಚಂದ್ರಚರಿತಪುರಾಣಂ ೭-೧೪೬ ; ಮಲ್ಲಿನಾಥಪುರಾಣಂ ೮-೪೬)

ವಾಸವಚಾಪಮೆಂಬ ಮಣಿಮಂಟಪದೊಳ್ ಮೊೞಗೆಂಬ ವಾದ್ಯಮಂ
ಗೋಸನೆ ಮೇಘಮೆಂಬ ತೆರೆಯಿಂದೆ ತಟನ್ನಟಿ ಬಂದು ನಾಟ್ಯವಿ
ನ್ಯಾಸದೆ ಕೊಂಕಿ ನಿಂದು ಕುಸುಮಾಂಜಳಿಯಂ ಕುಡೆ ಮುತ್ತು ಮಾಣಿಕಂ
ಸೂಸಿದುವೆಂಬಿನಂ ಪರೆದುವಾಲಿವರಲ್ಗಳುಮಿಂದ್ರಗೋಪಮುಂ ೧೮೬
(ಅನಂತನಾಥಪುರಾಣಂ ೯-೧೨)

ಅಂಬರದ ನಡೆಮುಗಿಲ್ ದಾ
ಳಿಂಬದ ಬಿಡುವಣ್ ನಕಾಯಚಿತ್ತಂ ಸಾರ್ಚಿ
ತ್ತೆಂಬಂತೆ ಬಲಾಹಕದಿಂ
ದಂ ಬಿಬ್ದಿಪುವಿಂದ್ರಗೋಪಮಾಲಿವರಲ್ಗಳ್ ೧೮೭

ಉಗುೞುತ್ತುಂ ಸಿಡಿಲೆಂಬ ತೋರಗಿಡಿಯಂ ಕಾಲೂಱಿ ಭೂಭಾಗದೊಳ್
ಗಗನಾಭೋಗಮನೆಯ್ದಿ ನೀಳ್ದ ಘನವೇಣೀ ಬಂಧಮಂ ಬಿರ್ಚಿ ಮಿಂ

1 ನೆ (ಗ ಘ) 2 ಕ್ತಿ (ಗ ಘ)

ಚುಗಳೆಂಬುಳ್ಕುವ ದಾಡೆಗಳ್ ಪ್ರೋಳೆಯೆ ಚಂದ್ರಾದಿತ್ಯರಂ ನುಂಗಿ ಬೇ
ಸಗೆಯಂ ಬೆರ್ಚಿಸಿ ಗರ್ಜಿಸುತ್ತುಮೊಗೆದಂ ಕಾರೆಂಬ ಕಾಳಾಸುರಂ ೧೮೮

(ರಾಮಚಂದ್ರಚರಿತಪುರಾಣಂ ೭-೧೫೨ ; ಮಲ್ಲಿನಾಥಪುರಾಣಂ ೮-೯೪)

ಎಳಮಿಂಚಂ ತಳೆಯಿಕ್ಕಿ ಚಾದಗೆಗಳಂ ಬಿಟ್ಟಾಡಿ ಬಲ್ಗೆಚ್ಚಲಿ
ಟ್ಟೆಳನೀಳಾಂಬುದದಿಂ ಬೆಳಲ್ದ ಗಗನ ಶ್ರೀಧೇನುವಂ ಕೋಮಳಾ
ಮಳದೀರ್ಘಾಮೃತಧಾರೆಗಳ್ ಸುರಿಯೆ ಭೋರ್ ಭೋರೆಂಬಿನಂ ಶಕ್ರಚಾ
ಪಲತಾದಾಮಕದಿಂದೆ ಕಟ್ಟಿ ಕಱೆದಂ ಕಾರೆಂಬ ಗೋಪಾಲಕಂ ೧೮೯

(ಅರ್ಧನೇಮಿಪುರಾಣಂ ೮-೩)

ನವನೀಳಾಂಭೋದವಂಭೋದದಿನೆಱಗುವ ಧಾರಾಳಿ ಧಾರಾಳಿಗಳ್ ಸೂ
ಸುವಿನಂ ತಳ್ಪೊಯ್ವ ಜಂಝಾನಿಳನನಿಳನಿನಾಮೋದಮುಂ ಪೇಱೆ ಪೂವೇ
ಱುವ ಕುಂದಂ ಕುಂದದೊಳ್ ತಳ್ತಳಿಗಳಳಿಗಳಂ ಪಣ್ಗಳಿಂ ಗೆಲ್ದ ಜಂಬೂ
ನಿವಹಂ ಚೆಲ್ವಾಗೆ ಚೆಲ್ವಾದುದು ಚಟುಲತಟಿಜ್ಜಾಲವಂಭೋದ[1]ಕಾಲಂ[1] ೧೯೦

(ಜಗನ್ನಾಥವಿಜಯಂ ೪-೨೭)

ನೆರೆದ ಮುಗಿಲ್ ಕಲಂಕುವುದನೀಕ್ಷಿಸಿ ತನ್ನ ಮನಂ ಕಲಂಕಿ ಕ
ರ್ಗೆರೆ ಮಱದುಂಬಿವಿಂಡನೊಳಕೊಂಡಿರುಳೊಳ್ ಮುಗಿದಿರ್ದ ಪಾಂಡುಪಂ
ಕರುಹದ ಭೃಂಗಿಯಂ ತಳೆದು ವಿಸ್ಮಿತಮಾನಸರಾಗಿ ಮಾನಸರ್
ಪರಿಕಿಸೆ ಮಾನಸಕ್ಕೆ ನಡೆಗೊಂಡುದು ಕೂಡೆ ಮರಾಳಮಂಡಲಂ ೧೯೧

(ಜಗನ್ನಾಥವಿಜಯಂ ೪-೯)

ವಸುಧಾಚಕ್ರಕ್ಕೆ ಕಾಳಾಯಸಗೃಹ[2]ವಿಲಸಂ[2] ಚಂದ್ರಬಿಂಬಕ್ಕೆ ರಾಹು
ಗ್ರಸನಂ ಚಂಡಾಂಶುಬಿಂಬಕ್ಕೆ[3]ಸಮಯ[3]ರಜನೀಪ್ರೋದ್ಗಮಂ ವಜ್ರವಹ್ನಿ
ಪ್ರಸರಕ್ಕುದ್ದಾಮಧೂಮೋದಯಮಖಿಳವಿಯೋಗಾತುರರ್ಗಂಧಕಾರೋ
ಲ್ಲಸನಂ ತಾನೆಂಬಿನಂ ಬಂದುದು ಬಹುಳತಟಿಜ್ಜಾಲಮಂಭೋದಕಾಲಂ ೧೯೨

(ಕಾದಂಬರಿ ಉ. ಭಾ. ೫೨೯)

ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಿಂ ಮಾಡಿ ನೀಡುಂ ಭಯಂ
ಕರಮಾಗೇಱಸಿಕೊಂಡು ಶಕ್ರಧನುವಂ ಧಾರಾಶರಾಸಾರಮಂ
ಸುರಿಯುತ್ತುಂ ಘನಘೋಷಗರ್ಘರತರಪ್ರಧ್ವಾನದಿಂದಾರ್ದು ಪಾ
ರ್ದಿರ[4]ದುದ್ದಾಮ[4] ನಿದಾಘಮಂ ಬೆದಱೆ ಬೆಂಕೊಂಡತ್ತು ಮೇಘಾಗಮಂ ೧೯೩

(ಕಾದಂಬರಿ ಉ. ಭಾ. ೫೩೦)

ಧರೆಯೊಳ್ ಶಾಲೂರಸಂಘಂ ಪವನಪಥದೊಳಂಭೋಧರಾನೀಕವಾಶಾಂ
ತರದೊಳ್ ಜಂಝಾಸಮೀರಂ ವನಸಮುದಯದೊಳ್ ಕೇಕಿಸಂಘಾತಮುರ್ವೀ

---

[1] ಜಾಲಂ (ಕ ಖ ಘ) [2] ನರಣಂ (ಅ) [3] ವನೆಯ (ಅ) [4] ದುಂಗಾಹ (ಖ ಬ)

ಧರ[1]ವಪ್ರ[1]ಪ್ರಾಂತದೊಳ್ ನಿರ್ಝರತತಿ ತಟನೀವ್ಯೂಹದೊಳ್ ವಾರಿಪೂರಂ
ವಿರಹಿವ್ರಾತಕ್ಕಗುರ್ವಂದೊಡನೊಡನನಿತುಂ ಗರ್ಜಿಸುತ್ತಿರ್ದುದೆತ್ತಂ ೧೯೪
(ಕಾದಂಬರಿ ಉ. ಭಾ. ೫೩೨)

ಸ್ಫುರಿತ ತಟತ್ಪ್ರಭಾಪ್ರತತಿ ಕತ್ತಲೆಯಂ ಸುರಗೋಪಕಾಂತಿ ಪಾಂ
ಡುರತೆಯನಂಬುವಾಹತತಿ ಶೋಷಣಮಂ ಘನವಾರಿಧಾರೆ ನಿ
ರ್ಝರ ಪರಿ[2]ತೋದ[2]ಮಂ ಕುಟಜಕುಂದ ನವೋದ್ಗಮ[3]ರಾಜಿ[3] ರಾಗಮಂ
ವಿರಹಿಜನಕ್ಕೆ ಮಾಡಿದುದು ನೋಡುವೊಡೆಯ್ದೆ ವಿರುದ್ಧಮೆಂಬಿನಂ ೧೯೫
(ಕಾದಂಬರಿ ಉ. ಭಾ. ೫೩೪)

ಪಸುರ್ಪುಲ್ಲಂ ಮೇದು ಸಂದೊಂದೆಡೆಯೊಳಮೊಡಲಿಂಬಿಲ್ಲೆನಲ್ ಕೊರ್ವಿ ಕೆಚ್ಚಲ್
ಕುಸಿವನ್ನಂ ಬೀಗಿ ಪಾಲಂಬಿರಿವಿಡೆ ಮೊಲೆಯಿಂ ವತ್ಸಪೀತಾವಶೇಷಂ
ಪೊಸಗಾರೊಳ್ ತಾಱಲೊಳ್ [4]ಕಣ್ಮಲರ್ ಮುಗುಳ್ದಿರೆ[4] ಸೃಕ್ವಂಗಳಿಂ ಸೂಸೆ ಫೇನ
ಪ್ರಸರಂ ಮೆಲ್ಕೊತ್ತುತುಂ ನಿಂದುದು ವನಮಹಿಷೀವೃಂದಮಾನಂದದಿಂದಂ ೧೯೬
(ರಾಮಚಂದ್ರಚರಿತಪುರಾಣಂ ೭-೫೭ ; ಮಲ್ಲಿನಾಥಪುರಾಣಂ ೮-೯೯)

ಬಯಲೊಳ್ ಪರ್ವುಗೆದೋಱಿ [5]ಮುಂಬಸ[5]ಲೆಯೊಳ್ [6]ಮೆಲ್ಪೇ[6]ಱಿ ನೀರ್ದಾಣದೊಳ್
ನಯಮಂ ಬೀಱಿ ಮಹೀಧ್ರದೊಳ್ ಮಸಕಮಂ ಕೈಕೊಂಡು ಶಾಖಾಸಮು
ಚ್ಚಯದೊಳ್ ಸಂದಣಿಗೊಂಡು ತಾಟವನದೊಳ್ ಕಾರ್ಕಶ್ಯಮಂ ಕೂಡಿಕೊಂ
ಡು ಯಥಾ[7]ಧಾ[7]ರನಿಪಾತಮುಣ್ಮಿದುದು ಮೇಘೋನ್ಮುಕ್ತಧಾರಾರವಂ ೧೯೭
(ಕಾದಂಬರಿ, ಉ. ಭಾ. ೫೩೩)

ಬಲ್ಸರಿ ಬಿಱುಸರಿ ಪೆರ್ಮೞೆ
ಮೆಲ್ಸರಿ ತುಂತುಱುಸ್ ತುಷಾರಮಿಡುಕುಂಬನಿ ತಂ
ದಲ್ಸೋನೆ ನಟ್ಟ ಬಡಸಮೆ
ನಲ್ ಸುರಿದುವು ಬಿಡದೆ ಮುಗಿಲಗಳಿರುಳುಂ ಪಗಲುಂ ೧೯೮
(ಜಗನ್ನಾಥವಿಜಯಂ ೪-೩೨)

ಪರಿವ ಮುಗಿಲ್ ಪಳಂಚೆ ಖಚರೀನಿಚಯಸ್ತನತಾರಹಾರವ
ಲ್ಲರಿ ಪಱಿಯಲ್ ಪೊದಱ್ದ ಬಿಡುಮುತ್ತು ಘನೋಪಲದೊಂದು ರೂಪದಿಂ
ಸುರಿಯಲನಂತರಂ ಬಱಿಯದಾರಪೆಬಿಲ್ದಪುದೆಂಬ ಚೆಲ್ವನಾ
ವರಿಸಿದುವಂದು ಸಂದಣಿಸಿ ನೀಳ್ದ ಪಯೋಧರವಾರಿಧಾರೆಗಳ್ ೧೯೯
(ಜಗನ್ನಾಥವಿಜಯಂ ೪-೩೧)

---

1 ಚಕ್ರ (ಅ) 2 ತಾಪ (ಅ) 3 ವಾಟಿ (ಅ) 4 ಕಣ್ಣರೆ ಮುಗಿದಿರೆ (ಅ) 5 ಮುಣ್ಪಸ (ಅ) 6 ಮೊಯ್ಯೋ (ಅ) 7 ಸಾ (ಅ)

ಪುರಮಂತರ್ದ್ವಿಪಮೆಂಬಂತಿರೆ ವಿಪಿನಚರಾನೇಕಪಾನೀಕಮಂಭಃ
ಕರಿಯೂಥಂ ತಾನಿದೆಂಬಂತಿರೆ ನಗನಿಕರಂ ಪಕ್ಷಕುತ್ಕೀಳಮೆಂಬಂ
ತಿರೆ ಮತ್ತಂ ಲೋಕಮೇಕಾರ್ಣವಮೆನಿಸಿದುದೆಂಬಂತಿರೆತ್ತೆತ್ತಲುಂ ಕಾ
ಟ್ಪಿರಮಾದಂ ಕೊರ್ವಿ ಬಿರ್ದಂ ಕೞ್ತದುದು ಬಹಳಾಸಾರಮಂ ನೀರದೌಘಂ ೨೦೦

(ಚಂದ್ರಪ್ರಭಪುರಾಣಂ ೪-೪೧)

ಬಱಬಱನಾಗಿ ತಾಳಿಸಿದುದುರ್ವರೆಯಂ ರವಿ ಸುಟ್ಟನೆಮ್ಮನಿಂ
ತಱಗುಲಿಯೆಂದು ವಾರಿದಕೆ ಮುಟ್ಟಿಸಿ ಪುಯ್ಯಲನಿಕ್ಕುವಂದದಿಂ
ಟಱಟಱ ಱೊಂಕು ಱೊಂಕುಟ ಟಱಟ್ಟಱ ಱಟ್ಟಱಯೆಂದುಮೆತ್ತಲುಂ
ಕೆಱೆಕೆಱೆ ಬಾವಿಬಾವಿ ತೊಱೆಪೆದೋರ್ಱೆದಪ್ಪದೆ ದರ್ದುರವ್ರಜಂ ೨೦೧

(ಅನಂತನಾಥಪುರಾಣಂ ೯-೧೨)

ಅಡದೊರ್ಂದೊಂದಱ ಬೆನ್ನಂ
ಪಡಿಮೊಗದಿಂ ಪತ್ತಿಕೊಂಡು ವಿಷಯಾತುರದಿಂ
ಗಡರ್ಗಬಕು ಗಬಕುಱೆಹಕೆಂ
ದೊಡನೆಂದುವು ಕಾರಗಪ್ಪೆ ಕೆಱೆಗಳ ತಡಿಯೊಳ್ ೨೦೨

(ಕಾವ್ಯಸಾರಂ ೩೨-೮೩೬)

ಮೊಲ್ಲೆ ಮುಗುಳ್ತುದಂದು ಗಿರಿಮಲ್ಲಿಗೆ ಮೆಲ್ಲನರಲ್ದುದಂದು ಕಂ
ಕೆಲ್ಲಿ ಪಸುರ್ತುದಂದು ಬಿದಿರೊಳ್ ಕುಡಿ ಮೂಡಿದುವಂದು ಕೆಂದಳಿರ್
ಸಲ್ಲಕಿಗಾದುದಂದು ರಸವೇಱಿದ ನೇಱಿಲ ದೋರೆವಣ್ಗಳಂ
ತಲ್ಲುಗುತಂದುವಂದು ತಲೆದೋಱಿದುವಂದು ಶಿಲೀಂಧ್ರಕಂದಳಂ ೨೦೩

ಕಿರುವಿಲ್ಲದ ಸುರಧನುವಂ
ಸುರಭಿಶರಂ ಪಿಡಿದು ಗೆಲ್ದು ಭೂಪರ ಕೊಡೆಯಂ
ಪಿರಿದಿನಿತೆಂದುಂ ರತಿಪತಿ
ವಿರಚಿಸಿದಂತಿರ್ದುವೆಬ್ಬಿ ಕಳ್ಪನ ಕೊಡೆಗಳ್ ೨೦೪

ಹಿಮರೋಚಿಃಕಳಿಕಾಕದಂಬಕಮನಿಂಬಿಂ ತಿರ್ದಿ ಮೇಳೈಸಿ ಕುಂ
ಕುಮದಿಂ ಭಾವಿಸಿ ಚಂದನಾಂಬುಗಳ ನೀರಂ ಪೊಯ್ದು ಹಾರೀತರ
ತ್ನಮ[1]ಯೀಶು[1]ಕ್ತಿಯೊಳೊತ್ತಿ ಬಯ್ತನಜನೆಂಬಂತಾಯ್ತು ಹೂತೇೞ್ತ[2]ಯಿಂ[2]
ಸುಮನಸ್ಸಾಯಕ[3]ಶಸ್ತ್ರನಾಭರಣ[3]ಮಾ [4]ಸಂ[4]ಕೇತಕಂ ಕೇತಕಂ ೨೦೫

(ಅನಂತನಾಥಪುರಾಣಂ ೯-೧೪)

ಕುಸುಮಾಸ್ತ್ರಪ್ರಥಿತಾಜ್ಞೆಯಂ ತಲೆಯೊಳಾಂಪಂ ತನ್ನ [5][ನಾ][5]ರಿಂತಿದಂ
ಬಿಸುಟಂ ಬೂದಿಯ ಜೋಗಿ ಭೂತಗಣನಾಥಂ ಚರ್ಮವಾಸಂ ಕಪ

[1] ಯಾಸೂ (ಖ ಬ) [2] ಯೊಳ್ (ಅ) [3] ನಸ್ತ್ರಸಾರಭರ (ಅ) [4] ಸಾ (ಅ) [5] ದಾ (ಕ ಖ ಬ)

ರ್ದಿ ಸಮಂತೆಂದು ಮಧುಪ್ರಮತ್ತತೆ ಕರಂ ತಳ್ಪೊಯ್ವಿನಂ ಬೈದು ಪಾ
ಡಿಸುವಂತಿರ್ದುದು ಬಂದ ಕೇದಗೆ ನದದ್ಭೃಂಗಾಳಿಯಿಂ ಶೂಲಿಯಂ ೨೦೬

ಎಱಗದೆ ತಮ್ಮೊಳ್ ಮಧುಕರ
ನೆಱೆಗಿರೆ ಕೇದಗೆಯೊಳೆಯ್ದೆ ಕಂಬನಿವೞಿಯಂ
ಕಱೆವಂತಿರೆ ಕೞವೂಗಳ್
ನೆಱೆ ಬೀತುವು ಸುರಗಿ ಹೊನ್ನೆ ಮಲ್ಲಿಗೆ ಬನದೊಳ್ ೨೦೭

(ಜಗನ್ನಾಥವಿಜಯಂ ೪-೪೫)

ಬಡಸಂ ಬೆಂಬತ್ತೆ ಮೇಸಂ [1]ತೊ[1]ಱಿ[3]ದು ಬಿಡದೊಡಲ್ ಕೂಡಿ ತನ್ನಿಚ್ಚೆಗೆ[2]ಟ್ಟೊ
ಳ್ದು[2]ಡೆಯೊಳ್ ಬೆಚ್ಚಂತೆ ಬಾಲಂ ನಿಲೆ ನೆ[3]ವಿರೊ[3]ಡೆದುರ್ವೆಟ್ಟು ಬೆಂಡಾಗಿ ಕಾಲೊಳ್
ನಡುಕಂ ಮೈವೆರ್ಚೆ ಗಂಟಲ್ ಕುಸಿದು ಕಿವಿಯೆಱಲ್ತಂದು ನಿಂದಿರ್ದುದೋರೊಂ
ದೆಡೆಯೊಳ್ [4]ನಾನಲ್ಗ[4]ಳೊತ್ತಂಬಿಡಿದು ಮೃಗಮೃಗೀವೃಂದಮೋರಂದದಿಂದಂ ೨೦೮

(ಚಂದ್ರಪ್ರಭಪುರಾಣಂ ೪-೪೭)

ಹೞವುಗೊಳಿಸಿತ್ತು ಜನಮಂ
ಮೞೆಗಾಲಂ ತೀವ್ರಪವನನಿಂ ದುರ್ದಿನದಿಂ
ಮೊೞಗಿಂ ಮಿಂಚಿಂ ಸಿಡಿಲಿಂ
ಮೞೆಯಿಂ ದೆಸೆದೆಸೆಗೆ ಪರಿವ ಪೊನಲಿಂ ಕೆಸಱಿಂ ೨೦೯

ಇನನಿದಿರೇಟ್ವಿ ಕಾರ್ಮುಗಿಲ ಬಾಧೆಗೆ ಬಿಟ್ಟನೊ ತಳ್ತ ಬಳ್ಳಿಮಿಂ
ಚಿನ ಬಲೆಯಲ್ಲಿ ಸಿಲ್ಕಿದನೊ ಪೊಯ್ವ ಸಿಡಿಲ್ಗೊಳಗಾಗಿ ನಿಂದನೋ
ಘನಜಲಧಾರೆಯೊಳ್ ಕರಗಿಪೋದನೊ ತನ್ನನೆ ಕಾಣನೆಂದು ಪ
ದ್ಮಿನಿ ನಲವೋಡಿ ತನ್ಮಧುಕರಧ್ವನಿಯಿಂದೆ ಪಲುಂಬಿ ಪಾಡಿದಳ್ ೨೧೦

(ಅನಂತನಾಥಪುರಾಣಂ ೯-೧೫)

ಅವಿ[5]ಶಾಲಾಂ[5]ಬರವಪ್ರಸನ್ನ ದಿವವಸ್ಪಷ್ಟಾಧ್ವವಸ್ವಚ್ಛತೋ
ಯವಸುದ್ಯೋಗಜನೌಘವಸ್ತ್ರದವವಸ್ಮೇರಾಬ್ಜವಶ್ಲಕ್ಷ್ಣ ಕೈ
ರವವಕ್ರೀಡಿಹಂಸವಸ್ಫುರಿತ ಚಂದ್ರಾದಿತ್ಯವಶ್ಲಿಷ್ಟಕೋ
ಕವಯೂನಾಧ್ವಗವಸ್ವರಾನ್ಯಭೃತವಂದೊಪ್ಪಿರ್ದುದಭ್ರಾಗಮಂ ೨೧೧

(ಜಗನ್ನಾಥವಿಜಯಂ ೪-೨೬)

ಕೆಸಱಿೞೊಳ್ ಜಾಱುವ ಜಾಱೆ ಬೀಟ್ವಿ ಮೞೆಯೊಳ್ ಮೈನಾಂಬ ನಾಂದೊಚ್ಚತಂ
ಬಸಿಯುತ್ತಿರ್ಪ ಜನಂಗಳಂ ಸುರತಲೀಲಾಗೇಹನಿರ್ವ್ಯೂಹ[6]ದು[6]

---

[1] ಮೆ (ಅ) [2] ಟ್ಟಿರ್ದ (ಕ ಖ ಬ) [3] ಲಿವೊ (ಕ ಖ ಬ) [4] ತಾಱಿಲ್ಗ (ಅ)
[5] ಳಾಶಾಂ (ಖ ಬ) [6] ಮು (ಕ ಖ ಬ)

[1]ದ್ವಿಸದೊಳ್ ತೞ್ಕೈಸಿ[1] ಸಂತಮಿರ್ದಿನಿಯರೋರೊರ್ವರ್ಗೆ [2]ಕಣ್ಣೆತ್ತಿ[2] ತೋ
ಱೆ ಸಖೀಸಂಗ[3]ತ[3]ಹಾಸ್ಯದಿಂ ನಲಿಯೆ ರಯ್ಯಂ ತತ್ಪಯೋದಾಗಮಂ ೨೧೨
ಪರೆದ ಕಚಂ ಮುಗಿಲ್ ಕರತಳಾಹತಿಯಿಂ ಪಱಿದೊಕ್ಕ ಮೌಕ್ತಿಕಾ
ಭರಣದ ಮುತ್ತು[4]ಮಾ[4]ಲಿವರಲಾ ಸುಗಳಧ್ವನಿ ಮೇಘನಿಸ್ವನಂ
ಸುರಿವ ಬೆಮರ್ ತಗುಳ್ದ ಮಳೆ ಕಾಮರಸಂ ಪೊನಲಾಗೆ ಕಾದಲರ್
ನೆರೆವೆಡೆಯೊಳ್ ಮನೋಭವನ[5]ಸೃ[5]ಷ್ಟಿವೊಲಾದುದದೊಂದು ಕಾರ್ಮೊಗಂ ೨೧೩
ಬಂದಪೆನೆಂದು ಪೋದನಿನಿಯಂ ಜಲದಾಗಮನಕ್ಕೆ ಕಾರ್ಮುಗಿಲ್
ಬಂದುದು ಶಕ್ರಚಾಪಲತೆ ಬಂದುದು ಪೆರ್ಚಿದ ಸೋಗೆಯಿಂಚರಂ
ಬಂದುದು ಚೆಲ್ವುವೆತ್ತು ನಭದೊಳ್ ಪೊಳೆದೊಪ್ಪುವ ಬಳ್ಳಿಮಿಂಚು ತಾಂ
ಬಂದುದು ಬಂದನಿಲ್ಲ ಪತಿಯೆಂದು ಲತಾಂಗಿ ಪಲುಂಬಿ ಪಾಡಿದಳ್ ೨೧೪
ಇನಿಯಂ ಬಾರದೆ ಮಾಣ್ದನಿನ್ನೆವರನಿನ್ನೀಂ ಕಾರಿನೊಳ್ ಪೋಗಿ ಕಾ
ಮನ ಸಾಮ್ರಾಜ್ಯವನಟ್ಟಿದಪ್ಪ ಮಗಳೇ ಕಾಱ್ಪೂರದೊಳ್ ಕುಂಗೆ ಮಿಂ
ಚಿನ ಕಣ್ಣೇಱಿಱಿದಾಗಮೊರ್ಮೊಡೆಯೆ ಭಿನ್ನಂ ಚಾಪವೃತ್ತಸ್ತನಂ
ಸ್ತನಿತಕ್ಕೊಡ್ಡಿಸಲಾರ್ಪವೇ ಮಱಿಯೊಳೇಱುಂಜವ್ವನಂ ನಾನದೇ ೨೧೫
ಬಱಿಸಿಡಿಲೇಱಿ ಸುತ್ತಿಱಿದ ಕಟ್ಟಲೆ ಕಾರ್ಮುಗಿಲೊಡ್ಡು ಬಂದುಬಂ
ದೆಱಗುವ ಬಲ್ಲಿತಪ್ಪ ಸರಿ ಕಂಗಳೊಳುಣ್ಮುವ ಮಿಂಚು ಮಾಣದ
ಳ್ಕಱಿಕೆ ಗಜಱುತ್ತಮಿರ್ಪ ಘನಗರ್ಜನೆಯೆಂಬಿವು ಕಾತರತ್ವಮಂ
ಮಱಿಯಿಸಲೆಂತುಮಾಱವು ನಿಜೇಶ್ವರನಲ್ಲಿಗೆ ಪೋಪ ನಲ್ಲಳಾ ೨೧೬
(ಶೃಂಗಾರರತ್ನಾಕರಂ ೩-೬೧)
ತಳರ್ದಾತ್ಮಾಲಯದಿಂದಿರುಳ್ ಸುಳಿವ ಜಾರಸ್ತ್ರೀಯ ವಕ್ತ್ರೇಂದುವಂ
ಚಳವಿದ್ಯುನ್ನಯನಾವಲೋಕ[6]ನದೆ[6] ಕಂಡನ್ಯಾಯಮಾಯ್ತೀ ವಿಯ
ತ್ತಳಚೂಡಾಮಣಿ ಚಂದ್ರ[7]ನೇಂ[7] ಕಱಿದ[8]ನೀ[8] ವರ್ಷಾಂಬುವಂ ಕೂಡೆ ಭೂ
ವಳಯಕ್ಕೆಂ[9]ದುಲಿ[9]ವಂತದೇಂ ಮೊಳಗಿತೋ ಮೇಘಂ ನಿಶೀಥಂಗಳೊಳ್ ೨೧೭
(ಜಗನ್ನಾಥವಿಜಯಂ ೪-೨೮)
ಭವಲಾಲಾಟವಿಲೋಚನಾಗ್ನಿಶಿಖೆಯಿಂ ಬೆಂದಳ್ಕಿ ಮತ್ತಂ ಮನೋ
ಭವನೆಟ್ಟಿತ್ತೊಡೆ ಕಾಮಕಾಂತೆ ಬಱಿಯಂ ತನ್ನಿಚ್ಚೆಯಿಂ ಮೆಚ್ಚೆ ಬ
ಣ್ಣವುರಂ ತೀವಿದ ಮಾಱಿಕ್ಕಿಯಾಯ್ತು ನ[10]ವಿಲಿಂ[10] [11]ತಂಡಲ್ಗಳಿಂ[11]ದಿಂದ್ರಗೋ
ಪವಿಳಾಸಂಗಳಿನಾಲಿಕಲ್ಲ ಪರ[12]ಪಿಂ[12] ಕಾರೊಳ್ ಮಹೀಮಂಡಳಂ ೨೧೮
(ಪಂಪಭಾರತಂ ೬-೨೯)

---

[1] ದ್ವೈಸದೊರಳ್ಕಿಸಿ (ಕ) ದ್ವೈಸದೊತ್ತಳ್ಕಿಸಿ (ಖ ಬ) [2] ಕಣ್ಗೆತ್ತಿ (ಕ) ಕಂಗೆತ್ತಿ (ಖ ಬ) [3] ಡ (ಖ ಬ) [4] ವಾ (ಗ ಘ) [5] ವೃ (ಗ ಘ) [6] ದೊಳೆ (ಅ) [7] ನಂ (ಅ) [8] ನೋ (ಅ) [9] ಬಿನ (ಅ) [10] ಲವಿಂ (ಖ ಬ) [11] ಕುಂದುಂಗಳಿಂ (ಕ) [12] ಲಿಂ (ಅ)

ಮೊಳೆವುಲ್ ಮೆಯ್ನವಿರಾಲಿ ಲೋಲನಯನಂ ಗೀರ್ವಾಣಬಾಣಾಸನಂ
ನಳಿತೋಳಾಡುವ ಸೋಗೆ ಸೋರ್ಮುಡಿ ಪೊನಲ್ ರೋಮಾಳಿ ಮಿಂಚೋಲೆವೊಲ್
ಜಳದಂ ಪೆರ್ಮೊಲೆ ಶಕ್ರ[1]ಗೋ[1]ಪಮಧರಂ ತಾನಾಗೆ ಕಾರೆಂಬ ನ
ಲ್ಲಳೆ ಬಪ್ಪಂತತಿಕಾಮುಕರ್ಗೆ ಮನದೊಳ್ ಮಾಡಿತ್ತತಿಪ್ರೀತಿಯಂ ೨೧೯

ಕಡವಲದುರ್ವು ಮೊಲ್ಲೆಯ ಪೂ
ಗುಡಿ ನಿಮಿರ್ದುವು ಸೋಗೆ ಕೇಗಿದುವು ಕೇದಗೆ ಬೆ
[2]ಳ್ಪೊಡೆ[2]ವೋದುವು ಚಾದಗೆಗಳ್
ಕಡಂಗಿ ನುಂಗಿದುವು ತೋರವನಿಯಂ ಕಾರೊಳ್ ೨೨೦

(ರಾಮಚಂದ್ರಚರಿತಪುರಾಣಂ ೨-೫೨)

ನಿಳೆಯದ ಸೂರ್ಗಳೊಳ್ ತರದೆ ಮುತ್ತಿನ ಸೂಸಕದಂತೆ ನಂದನಂ
ಗಳ ತರುಪತ್ರದೊಳ್ ಮುಕುಳಮಂಜರಿಯಂತೆ ಚರತ್ಪುರಾಂಗನಾ
ವಳಿಯ ಕುರುಳ್ಗಳೊಳ್ ತಳಿದ ಸೇಸೆಗಳಂತೆಳವುಲ್ಗಳೊಳ್ ಘನೋ
ಪಳಕುಳದಂತೆ ತೋಱಿದುವು ನವ್ಯಘನಚ್ಯುತ ತೋಯಬಿಂದುಗಳ್* ೨೨೧

(ಜಗನ್ನಾಥವಿಜಯಂ ೪-೧೯)

ಸುರಗೋಪಂಗಳುಮಾಲಿಕಲ್ಲುಮೆಳವುಲ್ಲುಂ ಕೆಂಪಿನಿಂ ಬೆಳ್ಪಿನಿಂ
ಹರಿತಚ್ಛಾಯೆಯಿನಲ್ಲಿಗಲ್ಲಿಗೆಸೆಗುಂ ಮಾಣಿಕ್ಯದಿಂ ಮುತ್ತಿನಿಂ
ಗರುಡೋದ್ಗಾರದ ಪಚ್ಚೆಯಿಂ ಸಮೆದ ನಾನಾಭೂಷಣಾನೀಕಮಂ
ಧರಣೀವಲ್ಲಭೆಗಂಬುದಾಗಮವಿಟಂ [3]ಕೈಗೆಯ್ಸಿ[3]ದೊಂದಂದದಿಂ ೨೨೨

(ಜಗನ್ನಾಥವಿಜಯಂ ೪-೨೦)

ಕೆಱೆ ಕಾಲ್ಪುರದಿಂ ತೀವಿರೆ
ಕೆಱೆಗಳ ಕಡೆಗೋಡಿ ಪಳ್ಳಮಂ ಪಳ್ಳಂಗಳ್
ತೊಱೆಯಂ ತೊಱೆಗಳ್ [4]ಬಾಂದೊಱೆ
ಯೆಱೆಯನನೊಲವಿಂದೆ ಕೂಡಲಳ್ಕುಱೆ[4] ಪಥಿಕರ್ ೨೨೩

(ಜಗನ್ನಾಥವಿಜಯಂ ೪-೩೩)

ಘನರಾವಂ ಪೊಣ್ಮೆ ಮೀನುಂ ಮೊಸಳೆಯುಮೊಡವಿಟ್ಟೆತ್ತೆನಲ್ ಮೇಗಣಿಂದಂ
ಬಿನ ಕಟ್ಟಂಬಿಟ್ಟವೊಲ್ ಸಂದಿಸಿಕೊಡಗೊಡದೊಳ್ ಪೊಯ್ದವೋಲಾಗೆ ಭೋರ್ಭೋ
ರೆನುತುಂ ಸಂವರ್ತಮೆತ್ತಂ ಜಳಚಳಕುಳದೊಂದಂದದಿಂ ಗೋಕುಲಂ ಬ
ಲ್ಪೊನಲೊಳ್ ತೇಂಕಾಡುವನ್ನಂ ಕಱೆದುವು ಮುಱಿಯುಂ ನೂತಜೀಮೂತಜಾಲಂ ೨೨೪

---

1 ಚಾ (ಕ) 2 ಳ್ಗುಡಿ (ಅ) 3 ತಂದಿಕ್ಕಿ (ಅ) 4 ತಾಂಬಾಂದೊಱೆಗೊರೆಯೆನಲುರ್ಚಿ ಪೊಕ್ಕರೆಬ್ಬುರೆ (ಅ) * ಈ ಪದ್ಯ (ಕ) ಪ್ರತಿಯಲ್ಲಿಲ್ಲ.

## ಶರದ್ವರ್ಣನಂ

ತೊಲಗದ ಮೋಡವೋಡಿದುದು ತಂದಲಗುಂದಲೆಯಾಯ್ತು ಮೇಘಮಂ
ಡಲವಳಱುತ್ತು ಮಿಂಚುವೆಳಗುಂ ಬಱಮಾಯ್ತು ಶಿಖಂಡಿ ತಾಂಡವ
ಕ್ಕಲಸಿದುದಂದು ಕುಂದಲತೆ ಕುಂದಲೊಡರ್ಚಿದುವಂಚೆ ಚಂಚುವಿಂ
ನಲಿದು ಮೃಣಾಳವಂ ಸವಿದುದಾಯ್ತು ಶರತ್ಪ್ರಥಮಪ್ರದೇಶದೊಳ್ ೨೨೫

(ಜಗನ್ನಾಥವಿಜಯಂ ೪.೩೬)

ಚಾದಗೆಯ ಸೊಕ್ಕು ತೀರ್ದುದು
ಕೇದಗೆಯಗೆಯೆತ್ತಿಪೋಯ್ತು ಗಿರಿಮಲ್ಲಿಗೆಯಾ
ಮೋದಂ [1]ತಳೆದುದು[1] ದರ್ಬಿಸಿ
ಪೋದುದು ನುಣ್ದನಿ [2]ನವಿಲ್ಗೆ[2] ಶರದಾಗಮದೊಳ್ ೨೨೬

ಮಱಿಯಿನ್ನೆತ್ತಣದೆಂಬಿನಂ ಬೆಳಗುಗುಂ ಬಾನೊರ್ಮೆ ಮತ್ತೊರ್ಮೆ ಪೆ
ರ್ಮಱಿ ಕೊಳ್ಗುಂ ರವಿ ಕೂ[3]ಡೆ[3] ಪಣ್ತು ಮುಗಿಲಿಂ ಸೀಳ್ದಂದದಿಂ ಬಿಸಿಲ್
ಮಱಿ ಕೊಳ್ಗುಂ ಗಿಳಿಸೋವ ಪಾಮರಿಯರಂ ಕೈಮಿಾಱಿ ನೀರಪ್ರಜಂ
ಸುಱಿಗುಂ ಶಾಡ್ವಳಮಾದ ಶಾಳಿವನದೊಳ್ ನೀರಾಜನಂ ಮಾಳ್ಪವೋಲ್ ೨೨೭

ನಡೆದುದು ಬಟ್ಟೆ ಬಟ್ಟೆಯ ಕೆಸಱ್ ಸಱೀವಿಟ್ಟುದು ನಂದನಂ ನಯಂ
ಬಡೆದುದು ಪೂಗೊಳಂ ತಿಳಿದುವಭ್ರಪಥಂ ಬೆಳಗಿತ್ತು ಪಳ್ಳಮು
ಕ್ಕಡಿದುದು ಕೂಡೆ ಬೊಂಬೆ ಸಸಿಯಾದುವು ಕೆಯ್ ಪಸುರ್ವೋದ ಪುಲ್ಗಳಂ
ಪಿಡಿದುವು ಶಾಲಿ[4]ಗಾ[4]ಪಿಯರ ಗಾವರಮುಬ್ಬರಮಾಯ್ತು ಸುತ್ತಲುಂ ೨೨೮

ಸೀರದವಿಟಂಗೆ ವಿದ್ಯು
ನ್ನಾರಿಯ ವಿರಹಂ ಪೊಣರ್ಚೆ ಬಡವಾಗಿ ಕರಂ
ದೂರಿಸಿ ಬೆಳರ್ತ ತೆಱದಿಂ
ಶಾರದ ಜಳಧರದ ತುಱುಗಲೊಗೆದುವು ನಭದೊಳ್ ೨೨೯

(ಲೀಲಾವತಿ ೫.೨೪)

ಜೀವನಮುಳ್ಳನಮಿತ್ರಖಿ
ಳಾವನಿಗಂ ಕೀರ್ತಿಶೇಷನಾಯ್ತೆ [5]ನಲಂದ[5]
ಬ್ದಾವಳಿ ಬೆಳರ್ತು ಬಾನಂ
ತೀವಿದುವು ಪರೋಪಕಾರಿ ಕೆಟ್ಟೊಡೆಯುಂಟೇ ೨೩೦

(ಲೀಲಾವತಿ ೫.೨೬)

---

[1] ತಳಿತುದು (ಕ ಬ) [2] ನವೀನ (ಕ ಖ ಬ) [3] ಡಿ (ಕ) [4] ಗೋ (ಕ ಖ ಗ ಬ) [5] ನೆತುಂಗಾ (ಅ ಕಾ)

ತರದಿಂ ನಲಿನಲಿದಾಡುವ
ಸರಸದ ಮಕ್ಕಳವೊಲಂಚೆಗಳ್ ಮಾನಸದಿಂ
ಬರೆ ಮೆಱೆದು ಶರದದವನಿಪ
ನರಮನೆಯಂಗಣಮಿದೆನಿಸಿ ಬೆಳಗಿತು ಗಗನಂ ೨೩೧

ಪಿಂದೆ ತಲೆ[1]ಗರೆ[1]ದ ಕದಿರ್ಗಳ್
ಸಂದಣಿಗೊಂಡರ್ಕಬಿಂಬದಿಂ ಪೊಱಪೊಣ್ಮು
ತ್ತೊಂದೊಂದನೊಱಸಿ ಕಿಡಿವಿಡು
ವಂದದೆ ಕಡುವಿಸಿಲ ಪೊಳಪುವಡೆದುದು ಕಾಯ್ಪಂ ೨೩೨
(ಲೀಲಾವತಿ ೫-೩೮)

ಮುನ್ನಂಗಿ ದಹನನಂ [2]ತಪ
ನನ್ನೆಲಕು[2]ಗುಳ್ವಿಂತೆ ಬಿಸುಗದಿರ್ಗಳ್ ನೆಱೆ[3] ಕಾ
ಯ್ವನ್ನಂ ಸುಡುತಿರೆ ಪಥಿಕರ್
ಬೆನ್ನಂ ಕೊಂಡೋಡಿ ಮೆಳೆಯ ನೆೞಲಂ ಸಾರ್ದರ್ ೨೩೩
(ಲೀಲಾವತಿ ೫-೪೦)

ತಿಂಗಳ ಯೌವನ ವಿಭವನು
ನಂಗನ ಸಿರಿಹುಟ್ಟಿದಮೃತವಾರಾಶಿ ಚಕೋ
ರಂಗಳ ಕಂಗಳ ಹಬ್ಬಂ
ಶೃಂಗಾರಂಬಡೆದ ಸ್ಯೆಪು ಶರದದ ಜೊನ್ನಂ ೨೩೪

ಅರಗಿಳಿಯ ಹಿಂಡು ಬಂದುಗೆ
ಯರಲಂದದ ಚಂಚುವಿಂದೆ ಕೞಮೆಯ ತೆನೆಯಂ
ಬರೆ[3]ತೆಗೆದು ಕರ್ಚಿ ನೆಗೆದುವು[3]
ಶರದಂ ಪುಗೆ ಪಾಱೆ ಪೋಪ ಸುರಚಾಪದವೊಲ್ ೨೩೫
(ಲೀಲಾವತಿ ೫-೪೧)

ಪೊಳೆವ ಬಿಸಿಲ್ಗೆ ಮೆಯ್ವೆಳಗು ಚಂದನಪಾಂಡುಪಯೋಧರಾಗ್ರದಿಂ
ಬಳೆದಿೞಿತರ್ಪ ಬೆಳ್ಸರಿಗೆ ಹಾರಮೆ ಸಾ[4]ಲ್ತಿ[4]ರೆ ಪೋಲ್ವೆಯಿಂ ಸಮು
ದ್ದಳಿತಸರೋಜಗಂಧಿ ಕಳಹಂಸಮನೋಹರಯಾನೆ ಸಸ್ಮಿತೋ
ತ್ಪಳಧವಳಾಕ್ಷಿಯೇಂ ಸುರಿದಳೋ ಶರದಂಗನೆ ಕಣ್ಗೆ ಶೋಭೆಯಂ ೨೩೬
(ಲೀಲಾವತಿ ೫-೪೨)

---

1 ವೆಗೆ (ಅ) 2 ದಹನಂ ಸುಗುಳ್ದು (ಖ ಬ) 3 ಕರ್ಚಿ ಪಾಱುತಿರ್ದುವು (ಅ)
4 ರ್ತ (ಖ ಬ)

## ಹೇಮಂತವರ್ಣನಂ

ಅರೆವಸುರಾಯ್ತು ಹುಲ್ಲೆಸೆಯೆ ಸಿಂದುವು ಕಾಯ್ ಪೊಡೆ ಕೊಯ್ಲಾಯ್ತು ಬಂ
ಧುರತರ ಶಾಳಿ ನೀರಜಿಕೆ ತೊಟ್ಟನೆ ಮಾಣ್ದುದು ಚಂಪಸಕ್ಕೆ ಪೆ
ಯ್ಯರಸಿದುದಂಗರೇಜಿ ಹೊಜಿಹಕ್ಕಿಗಳೋವರಿಪಕ್ಕವಾವಗಂ
ಶರದದ ಮಾತು ಪಿಂಗಿದುದು ಪೊಕ್ಕುದು ಮಾಗಿ ಮಹೀವಿಭಾಗದೊಳ್ ೨೩೭

ಅಣಿಯರಮಾಡಿ ಮೂಡಗಡಲೊಳ್ ತೆರೆವಾಲೆಯನೆತ್ತಿ ದೇವವಾ
ರಣಕರಶೀಕರೋತ್ಕರಮನಾಂತು ಶಚೀರಮಣಾಭಿಷೇಕವಾಃ
ಕಣನಿಕುರುಂಬಮಂ ತಳಿದು ಬಂದೆಸಗಿತ್ತತಿಶೈತ್ಯಕಾರಣಂ
ಪ್ರಣಯವಿಮುಕ್ತವಲ್ಲಭವಿದಾರಣನಿಂದ್ರದಿಶಾಸಮೀರಣಂ ೨೩೮

(ಜಗನ್ನಾಥವಿಜಯಂ ೧೪-೪)

ಗಗನಂ ದಿಗ್ವಳಯಂ ದಿನೇಶ[1]ವಳೆಯಂ[1] ಶೈಲಾಳಿ ತೋಯಾ[2]ಶ[2]ಯಂ
ನಗರಂ ನಂದನಮೆಂಬ ವಸ್ತುಗಳನಾರುಂ ಕಾಣದಂತಾಗಿ ತೊ
ಟ್ಟಗೆ ಕಣ್ ವಂಚಿಸಿ ನುಂಗಿ ತೋರ್ಪ ಚಪಲಂ ಹೇಮಂತವೆಂಬಿಂದ್ರಜಾ
ಲಿಗನಿದೂರ್ಗದಿದ ಧೂಮದಂತಸದಳಂ ಪರ್ಬಿತ್ತು ಮಂಜೆತ್ತಲುಂ ೨೩೯

ಬಿಟ್ಟು ಸರೋಜಮಂ ಕುವಲಯಕ್ಕಡಿಯಿಟ್ಟುದು ತುಂಬಿ ಜಾತಿ ಕಂ
ಪಿಟ್ಟುದು ದಿಕ್ತಟಂಗಳನಶೇಷ ನದೀನದ ನಿರ್ಝರಾಂಬು ರೂ
ಪಿಟ್ಟುದು ಚಂದ್ರಕಾಂತಹಿಮವಾರಿಗೆ [3]ಚಿಂತಿ[3]ಸಿ ಜಕ್ಕವಕ್ಕಿ ಸಾ
ಲಿಟ್ಟುದು ಕಣ್ಣ ನೀರನೆನೆ ಮಾಗಿ ಬರಲ್ ಮೊದಲಿಟ್ಟುದೆಂಬಿನಂ ೨೪೦

(ಜಗನ್ನಾಥವಿಜಯಂ ೧೪-೬)

ಮುಗಿಯೆ ಕರದ ಕಂಜಂ ವಾಜಿಗಳ್ ಸುರ್ಕೆ ಸೂತಂ
ಸುಗಿದು ಪೆಟಿವನಾದಂತೈಕಿಲಿಂ [4]ಹೊನ್ನ[4]ರಂಗಳ್
[5][ತ][5]ಗೆಯೆ ರಥದ ಕೀಲಂ ಕಿಟ್ಟು ಪೊತ್ತಿಕ್ಕೆ ಕಣ್ಣೋ
ಪುಗೆ ಪೊಗೆ ರವಿಸಾರ್ತಂದೂದುವಂ ಪೋಪ ಕಿಚ್ಚಂ ೨೪೧

(ಲೀಲಾವತಿ ೯-೬)

ಮಾಸರಮೆನೆ ಪಾರದದಿಂ
ಪೂಸಿದವೊಲ್ ಪೊನ್ನ ಮುಕುರಮಂ ಹಿಮಲಿಪ್ತಂ
ನೇಸಜಬಿಂಬಂ ತಿಂಗಳ
ಕೂಸಿನವೊಲ್ ಮೂಡುತಿರ್ಪುದಂದಿನ ದಿನಮೊಳ್ ೨೪೨

(ಲೀಲಾವತಿ ೯-೮)

---

[1] ಶಶಿಯಂ (ಖ ಬ) [2] ಸಿ (ಕ) [3] ಮಿಂಚಿ (ಖ ಬ) [4] ಪೆರ್ಸ (ಕ ಖ ಬ) [5] ತ್ರೆ (ಅ ಕ ಖ ಬ)

ಹಿಮಮನಲರ್ಚೆ ತೀಡೆ ಪವನಂ ಪನಮಾಲೆಗೆ ಪೋಯ್ತು ವಿಭ್ರಮಂ
ಭ್ರಮ[1]ರನಿಷೇ[1]ವ್ಯಮಾಯ್ತು ಕುಮುದಂ ಮುದಮಂ ಪಡೆದತ್ತು ಪಣ್ತ ಕ
ರ್ಬುವೃತರಸಾವಿಳಂ ವಿಳಯಮೆ[2]ಯ್ದಿದುದಬ್ಜ[2]ವನಾಳಿ ನಾಳಿಕೇ
ರಮುನವಳಂಬಿಸಿರ್ದುವು ಫಲಂ ರಸಪೂರಿತಮಾಗಿ ಮಾಗಿಯೊಳ್ ೨೪೩

(ಜಗನ್ನಾಥವಿಜಯಂ ೧೪-೫)

ಗಿರಿತಟದೊತ್ತುಗೊಂಡು ಮೃಗಸಂಕುಲಮಿರ್ದುವು ಜೀರ್ಣಕೋಟರಾ
ವರಿತಟದೊತ್ತುಗೊಂಡು ಖಗಸಂಕುಲಮಿರ್ದುದು ಮಾಗಿಯೊಳ್ ಸರೋ
ವರತಟದೊತ್ತುಗೊಂಡು ಪೊಣರ್ವಕ್ಕಿಗಳಿರ್ದುವು ಕಾಮಿನೀಪಯೋ
ಧರತಟದೊತ್ತುಗೊಂಡು ವಿಟನೀಟಕರಿರ್ದುದು ಮುಂಬಗಲ್ವರಂ ೨೪೪

ತಳರ್ದು ಕುಳಾಯದಿಂ ಬಿದಿರ್ದೆಱಂಕೆಯ ನೀರ್ವನಿಯಂ [3]ತೆರಳ್ದ[3] ತು
ಪ್ಪುಲಿನೊ[4]ದಂಟೆ[4] ಚಂಚುಪುಟದಿಂ ಬಿಸಿಲತ್ತಿದಿರಾಗಿ ನಿಂದು ಕ
ಣ್ಗಳನರೆಮುಚ್ಚಿ [5]ತೋದ[5] ಗಱಿಯಂ ನಸು ಜೋಲಿಸಿ ಪಕ್ಕಿಗಳ್ ಮರಂ
ಗಳ ತುದಿಗೋಡಮೇಲೆ ದನಿಗೆಯ್ಯುತಮಿರ್ದುವು ಮುಂಬಗಲ್ವ[6]ರಂ[6] ೨೪೫

(ಜಗನ್ನಾಥವಿಜಯಂ ೧೪-೧೦)

ಖಂಡಿ[7]ಸಿ[7] ಬಿಸಕಳಿಕೆಗಳಂ
ತುಂಡಂ ಕುತ್ತಿಱಿಯೆ [8]ಬಿರಿದು[8] ಬಳ್ಕಿಸಿ ತಲೆಯಂ
ಕೊಂಡೋಡಿ [9]ಕೊಡಹಿ[9]ಕೊಂಡುವು
ಮಂಡಳಿಸಿದ ಪಕ್ಕ[10]ದಿಂದೆ[10] ಕಳಹಂಸಂಗಳ್ ೨೪೬

(ಲೀಲಾವತಿ ೯-೧೫)

ತುದಿಗೋಡಿಂಗೇಱಿ ಕೊಂಬಂ ಪಿಡಿದು ಜಡಿದು ಪುರ್ವಿಕ್ಕಿಯುಃಪೆಂದು ಮುನ್ನೇ
ಱಿದ ಕೊಂಬಂ ನೋಡಿ ಮೆಯ್ಯಂ ಸುಗಿದುಗಿದುರಮಂ ಪಿಕ್ಕಿ ಪೇಸ್ವಿಂಡನಾಯ್ದು
ರ್ಬಿದ ಮೆಯ್ಯಂ ಕಯ್ಯಿನೆತ್ತಂ ತುಱಿಸಿ ಮಱಿಗಳಂ ಸಾರ್ಚಿ ಮುಂದಣ್ಗೆ ಕುಳ್ಳಿ
ರ್ದುದು ಕೋಡಂ ಕೋಡಿ ಹೇಮಂತದೊಳಿಳವಿಸಿಲಂ ಕಾಯಲೆಂದೊಂದು ಧೂರ್ತಂ ೨೪೭

ಪಲ್ಗಿರಿದು ಪುರ್ವನುರ್ಚಿ ಬೆ
ರಲ್ಗೊನೆಯಿಂ ತುಱಿಸಿ ಬಱಿಯ ಸೀರ್ದುಪ್ಪಟಿ ಬಂ
ಬಲ್ಗಳನುಗುರಿಂ ಪಿಕ್ಕಿ ಬಿ
ಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ ೨೪೮

(ಜಗನ್ನಾಥವಿಜಯಂ ೧೪-೧೧)

---

[1] ರಿಗೆಸೇ (ಖ ಬ) [2] ಯ್ದಿ ವೃಪುಂಜ (ಖ ಬ) [3] ತಳೆರ್ದು (ಖ) [4] ಸೆಡುಂದು (ಖ ಬ)
[5] ಕೋಡ (ಕ ಖ ಬ) [6] ರಲ್ (ಅ) [7] ಸೆ (ಅ) [8] ಬಿದಿರ್ದು (ಅ) [9] ತೊಡೆದು (ಅ)
[10] ದಲ್ಲಿ (ಅ)

ಮಱುಗಳನಿಱುಂಕಿ ಮೋಹದೆ
ನೆಱಂಕೆಯಿಂ ಗೂಡುಗೊಂಡು ಗೂಡಿನೊಳ್[1]ರುಳೇ[1]
[2]ನೊ[2]ಱಗಿರ್ದುದೊ ಕೂಗದೆ ಕಣ್
ತೆಱೆಯದೆ ಕುಕ್ಕುಟ ಕುಂಟುಂಬಿನೀ ನಿಕುರುಂಬಂ ೨೪೯
(ಜಗನ್ನಾಥವಿಜಯಂ ೧೪-೫)

ಪೊಱಮಟ್ಟು ತೊಱೆಯ ನಡುವಣ
ಕುಱುವಂಗಳ [3]ತಡಿಯೊ[3]ಳಿರ್ದು ಕಾಯ್ದುವು ಬಿಸಿಲಂ
ಮಱಿಗಳ್ ಪಕ್ಕಂ [4]ಬೆಂಬಿಡ
ದೊಱಗಿರೆ[4] ಕುಂಭೀರ ಕಮಠ ಕರ್ಕಟಕಂಗಳ್ ೨೫೦
(ಜಗನ್ನಾಥವಿಜಯಂ ೧೪-೧೨)

ನಂದುವ ಪುಲ್ಲ ಕಿಚ್ಚಿನೊಳೆ ಕಪ್ಪಡವಂ [5]ಪಱ[5]ದಿಕ್ಕಿ ಪಾಂಥನುಃ
ಪೆಂದಿರದೂದಿ ಪೊಣ್ಮೆ ಪೊಗೆ ಕಣ್ಣೊಳಗಂ ಪುಗೆ ಬಾಷ್ಪ[6]ವಾರಿ[6]ಬೀ
ೞ್ದಿಂದು ತದಗ್ನಿಯಂ ನದಿಪಿದತ್ತಕಟಾತನ ಬೆನ್ನ ಕಪ್ಪಡಂ
ಬೆಂದುದು ಬೆಂದು[7]ವೀೞ್ದುದು[7] ಹಿಮಾನಳ[8]ನಿಂತುಟು ಪಾಪದುಜ್ಜುಗಂ[8] ೨೫೧
(ಲೀಲಾವತಿ ೯-೧೯)

ಪೊಸ[9]ಗಿಚ್ಚಂ ಪುಲ್ಲೊಳ್[9]ಟ್ಟೊದಿದೊಡುರಿದು[10]ರಿ ಕೂಚಾ[10]ಗ್ರವಂ ಪತ್ತೆ ಕಯ್ಯಿಂ
ಪೊಸೆದುಂ ವಸ್ತ್ರಾಂತದಿಂ ಮೋದಿಯುಮುಗುೞ್ವೆಱೆಯಿಂ ಮೊಕ್ಕಳಂ ನಾಂದಿಯುಂ ನಂ
ದಿಸಲೆಂತುಂ ಪಾಂಥನಂದಾಱದೆ [11]ನ[11]ಡುನಡುವಂ ಪೊಕ್ಕು ಬಿರ್ದ್ದೆಕಿಲಿಂ ಕಂ
ಪಿಸುತಿರ್ದಂ ಪುಲ್ಲ ಕಿರ್ಚುಂ ಪೊಲೆಯನ ಕೆಳೆಯುಂ ಮಾಡದಾವಂಗೆ ಕೇಡಂ ೨೫೨
(ಲೀಲಾವತಿ ೯-೨೦)

ಗಂಗೆಯ ಸೂಡನಂದುೞಿದು ಸೂಡಿದ ಚಂದ್ರಕಲಾವತಂಸಮಂ
ಪಿಂಗಿಸಿ ಸುಟ್ಟು ಮನ್ಮಥನೊಳಾದ ವಿಭೂತಿಯನೊಟ್ಟಿಕೊಂಡು ವಾ
ಮಾಂಗದೊಳಿಟ್ಟು ಪಾರ್ವತಿಯನೀಶ್ವರನಗ್ಗಳಗಣ್ಣ ಬೆಂಕಿಯಿಂ
ಭಂಗಿಸುವಂ ಕುಬೇರಗಿರಿಗಹ್ವರದೊಳ್ ಶಿಶಿರಾತಿರೇಕಮಂ ೨೫೩

ಕರಿಣೀಪೇಚಕಮಂ ತುಡುಂಕದೆ ವನೇಭಂ ಕಾಮುಕರ್ ಕಾಮಿನೀ
ಪರಿರಂಭಸ್ಪೃಹರಾಸೆಗೆಯ್ಯರೆ ರತವ್ಯಾಪಾರಮಂ ಪುಲ್ಲೆಯಂ
ಹರಿಣಂಗಳ್ ನಡೆನೋಡ[12]ವಿಂತು ತುಹಿನವ್ಯಾಘಾತದಿಂ[12] ಬಿಲ್ಗೆ ಕೈ
ದರಲೇನಾಱನೊ ಪೂವಿನಂಬು ತನಗಿಲ್ಲಾಗಿರ್ದನೋ ಮನ್ಮಥಂ ೨೫೪
(ಲೀಲಾವತಿ ೯-೪)

---

[1] ರುಳುಂ (ಕ ಖ ಬ) ರದೇಂ (ಅ) [2] ಪೊ (ಕ ಖ ಬ) [3] ಕೆಲದೊ (ಅ) [4] ಬಿಡದೆಪೆ ಗಿಱಿಂದಿರೆ (ಅ) [5] ಪಿರಿ (ಅ) [6] ಬಿಂದು (ಅ) [7] ದಾಗಳೆ (ಅ) [8] ನಂತುಟು ಪಾಂಥರುಬ್ಬಸಂ (ಅ) [9] ಪುಲ್ಲೊಳ್ ಕಿಚ್ಚನಿ (ಅ) [10] ಕಚಾಗ್ರಾ (ಅ) ವಕ್ಷೋಜಾ (ಗ ಘ) [11] ಕೆ (ಖ ಬ) [12] ಕೊಲ್ಲವೆ ಹಿಮವ್ಯಾಪಾರದಿಂ (ಅ)

ತಳಿದ ಸುವರ್ಣಭೂಷಣದ [1]ಪೂಸಿದ ಕುಂಕುಮದಿ[1]ಟ್ಟ ರೋಚನಾ
ತಿಳಕದ ರಾಗದಿಂ ಮದನರಾಗಮೆ ಮೂರ್ತಿಯನಾಂತವೊಲ್ ಮನಂ
ಗೊಳಿಪೆಳವೆಂಡಿರಂಗಣದ ಹೇಮವಿತರ್ದಿಯೊಳಿರ್ದು ಕಾದರಂ
ದೆಳವಿಸಿಲಂ ಮನಂಬಯಸಿ ಕಾಯೆ ವಿಟಪ್ರಕರಕ್ಕೆ ಮನ್ಮಥಂ ೨೫೫
(ಜಗನ್ನಾಥವಿಜಯಂ ೧೪-೯)

ಪಿರಿದುಂ ಕಾರ್ಯಾತುರಂ ಮಾಣದೆ ಕರೆದೊಡಮಿಾ ಬಂದೆನೀ ಬಂದೆನೆಂದೊಂ
ದರೆಜಾವಂ ಕಾಮಿನೀಕರ್ಕಶನಿಬಿಡಕುಚಾಲಿಂಗನಾಲಿಂಗಿತಂ ರಕ್ತವಸ್ತ್ರಾ
ಸ್ತರಣಂ ಕಾಶ್ಮೀರರಾಗಾವಿಳನತಿಮೃದುಶಯ್ಯಾತಳಂ ನಕ್ತಭೀತಾ
ತುರಚಿತ್ತಂ ಕಾಂತನಿರ್ದಂ ಸಹಚರಗಮನೋದ್ಯೋಗ[2]ಭಂಗಂ[2] ಭುಜಂಗಂ ೨೫೬

ಅಡಿಯಡಿಯೊಳ್ ತೊಡೆ ತೊಡೆಯೊಳ್
ನಡು ನಡುವಿನೊಳುರಮುರೋಜದೊಳ್ ತೋಳ್ ತೋಳೊಳ್
ತೊಡರ್ದಿರೆ ಬಾಯ್ವಾಯೊಳ್ ಮನ
ದೊಡಕಿನೊಳಿರೆ ಮಾಗಿಗೀಗಿಯೇಗೆಯ್ದಪುದೋ ೨೫೭

ಒಕ್ಕುಡಿತೆಗಂಗಳಬಲೆಯ
ಸುಕ್ಕುಂಗುರುಳವಳ ಪಲ್ಲವಾಧರದವಳಂ
ಕಕ್ಕಸಕುಚದವಳಂ ತಾಂ
ತಕ್ಕೈಸಲು ಮಾಗಿಗೀಗಿಯೇಗೆಯ್ದಪುದೋ ೨೫೮

ನೆಲವಾಸು ತಂಬುಲಂ ಪೆ
ರ್ಮೊಲೆಗಳ ಸಜ್ಜುಮಿಂಡಿ ಸುಪ್ಪತಿಗೆ ಧನಳಾರಂ
ಕೆಲದ ಸಿಗಳಿಗೆಯಿನಿಂಬಿಂ
ಸಲೆ ಸವಿಪೊಡೆ ಮಾಗಿಗೀಗಿಯೇಗೆಯ್ದಪುದೋ ೨೫೯

ಗಳರವಮಾಗಿ ಮುದ್ದುಮೊಗಮಾಗಿ ದರಸ್ಮಿತನೇತ್ರಮಾಗಿ ಕೋ
ಮಳ ಕಚಮಾಗಿ ಪೀನಕುಚಮಾಗಿ ಸಮುಚ್ಚನಿತಂಬಮಾಗಿ ಸಂ
ಚಳತನುಮಧ್ಯಮಾಗಿ ತನುಗಂಗಜರಾಗಮುಮಾಗಿ ನೀಜಡಿಯಂ
ತೊಳಪುಗುವಂತೆ ಮಾಗಿ ಬರೆ [3]ಬಾಸಿಲೆ[3]ಯೆಂಬರೆ ಭೋಗಭಾಗಿಗಳ್ ೨೬೦

ಅಂಬುಜನೇತ್ರೆಯರ್ಕಳ ಘನಸ್ತನದೊತ್ತು ನಿತಂಬದೊತ್ತು ನು
ಣ್ಪಿಂಬಳವಟ್ಟ ಪೆರ್ದೊಡೆಗಳೊತ್ತು ಭುಜಂಗಳ ತಣ್ಪಿನೊತ್ತು ಬಿಂ
ಕಂಬಡೆದಿರ್ದ ತೆಳ್ಗದಪಿನೊತ್ತು ವಿಟರ್ ನೆಜಡಿ ಕಾವುದಲ್ಲದೀ
ಕಂಬಳಿ ದಟ್ಟಿ ಬೂರವಡವೆಂಬಿವು ಕಾವುವೆ ಶೀತಕಾಲನುಂ ೨೬೧

---

1 ಕುಂಕುಮಪಂಕದೊಳಿ (ಖ ಬ) 2 ಕುಂಭಾ (ಖ ಬ) 3 ಬಾಗಿಲ (ಖ ಬ) ಮಾಗಿಲ (ಗ ಘ)

ನೆನೆಯಲೊಡನೆತ್ತಿ ಮನದೊಳ್
[1]ತನುಗಿಚ್ಚಿಂ[1] ಹಿಮವನೋಡಿಸುವ ನವಯುವತೀ
ಸ್ತನಭರಮಂ ತೆಗೆದಪ್ಪಿದ
ಮನುಜರಿಗೇನರಿವುದರಿದೆ ಮಾಗಿಯ ಮೂಗಂ ೨೬೨

(ಲೀಲಾವತಿ ೯_೧೭)

ಐನಿಸುಗುರ್ವೆಚ್ಚನಪ್ಪುಣಿಸು ಕುಂಕುಮದ[2]ಣ್ಪ[2] ಕದಂಬದಂಬುಲಂ
ಕನಕವಿಭೂಷಣಾಳಿ ಪೊಸ ಜಾದಿಯ ಪೂ ಧವಳಾರವಟ್ಟ[3]ಜಿಂ[3]
ಜನಿಯಿ[4]ಸಲಂಚೆ[4]ವಾಸುಗಳೊಳೋಪಳ ಪೆರ್ಮೊಲೆವೆಂಕೆಯಿಂದದೇಂ
ತನತನಗಿಕ್ಕಿ ಮೆಟ್ಟಿದುದೊ ಭೋಗಿಜನಂ ಶಿಶಿರಾತಿರೇಕಮಂ ೨೬೩

(ಜಗನ್ನಾಥವಿಜಯಂ ೧೪_೪೯)

ಕೃತಶೀಘ್ರಸ್ನಾನರಾವರ್ತಿತವಿಕೃತಕರಾಕೃಷ್ಟವಸ್ತ್ರಾಂತರಾವಿ
ಸ್ಕೃತಗರ್ಭರ್ ಗದ್ಗ[5]ದೋಚ್ಚಾರಿ[5]ತ ಜಪಮುಪಸಂಜಾತರೋಮಾಂಚಮಾಕುಂ
ಚಿತಗಾತ್ರರ್ ವಹ್ನಿಸಂದೀಪನಪಟುವಟುದತ್ತೇಕ್ಷಣರ್ ನೀರತೀರ
ಸ್ಥಿತರಿರ್ದತ್ತ್ರಂದು ವೈಭಾತಿಕವಿಧಿವಿಹಿತಾಮೋಘಮಾಘಂ ದ್ವಿಜೌಘಂ ೨೬೪

(ಲೀಲಾವತಿ ೯_೨೫)

ಬಿಸಿಬಿಸಿಯೋಗರಂ ಕೆಲದ ಸೋಡಗೆತೆಳ್ಪೊಳುದುಪ್ಪಮುಪ್ಪುಗಾಯ್
ಮೊಸರಿನಿದಪ್ಪ ಮಜ್ಜಿಗೆ ನಿವಾತದ ಶಯ್ಯೆ ಕದಂಬದಂಬುಲಂ
ರಸಿಕರ ಗೋಷ್ಠಿ ಬಟ್ಟಮೊಲೆಯೋಪಳ ತಳ್ತಮರ್ದಪ್ಪು ತಾವೆ ಬ
ಗ್ಗಿಸದೆ ಹಿಮಾಗಮೋಕ್ತಿಕ [6]ಜಡೋ[6]ದಯಮಂ ಸುಕೃತಾತ್ಮರಪ್ಪರಾ ೨೬೫
ರವಿರುಚಿಯಂ ಹಿಮಾಂಶುರುಚಿಯೆಂದು ಚಕೋರಚಯಂಗಳೀಂಟುತಿ
ರ್ಪುವು ಬಡಬಾಗ್ನಿಯಂ ಪವಳಮೆಂದಿರದಂಬುಚರಂಗಳೊಂದಿ ನಿ
ಲ್ಪುವು ಹರಭಾಳಲೋಚನನುನಂಗಜನೀಕ್ಷಿಸಿ ರಕ್ತಚಂದನ
ದ್ರವದ ಲಲಾಮಮೆಂದಿ[7]ಟಿಂಪನೇ[7]ವೊಗಟಿಪ್ಪಂ ಶಿಶಿರಪ್ರಭಾವಮಂ ೨೬೬

(ಜಗನ್ನಾಥವಿಜಯಂ ೧೪_೧೮)

ಎಸೆವಿಂದ್ರಾಶಾಸಮೀರಂ ತೊಲಗಿಸೆ ಕೆಲಸಾರ್ದಂತಿರತ್ಯಂತ ಶೀತ
ಪ್ರಸರಕ್ಕುಳ್ಳಿಕ್ಕಿ ಮೇಣಗ್ನಿಯ ದೆಸೆಗೆಳಸಿರ್ದಂತಿರಾಶ್ಚರ್ಯಮಂ ಪು
ಷ್ಟಿಸಲುತ್ತುಂ ತೆಂಕಣ್ಗೆ ಸಾರ್ದರ್ಕನ ಬಿಸುಗದಿರ್ಗಳ್ ಮಾಗಿಯೊಳ್ ತಣ್ಪನಾ[8]ಳ್[8]ಲ್
ಬಿಸಿಲಂ ಬೆಳ್ದಿಂಗಳೆಂದೀಕ್ಷಿಸುವುವು ತರಳೋತ್ತಾ[9]ನ[9]ತಾರಂ ಚಕೋರಂ ೨೬೭

(ಜಗನ್ನಾಥವಿಜಯಂ ೧೪_೧೩)

---

[1]ತನಿಗಿಚ್ಚಿಂ (ಖ ಬ) ಘನಗಿಚ್ಚಿಂ (ಗ ಫ) [2] ಣ್ಕೆ (ಅ) [3] ಜಿಂ (ಕ ಖ ಗ ಬ)
[4] ಸೆಪಂಸೆ (ಕ ಖ ಬ) [5] ಪಾಟೋದಿ (ಖ ಬ) [6] ಚರೋ (ಗ ಫ) ಪಸದೇ (ಬ ಖ)
[8] ಳ್ದ (ಅ) [9] ರ (ಖ ಬ)

ಓರಂತೆ ಮೆಚ್ಚಿದಂ ಕೃತಿ
ಸಾರಂ ಋತುವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೨೬೮

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವಕಟಕಾಚಾರ್ಯ ಸುಕವಿ
ಸುಮನೋಬ್ಞಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ಋತುವರ್ಣನಂ ದಶಮಾಶ್ವಾಸಂ ಸಂಪೂರ್ಣಂ

# ವನವಿಹಾರವರ್ಣನಂ

ವನಪಾಲರ್ ಪೇೞ್ವ ಭೂಪರ್ ತರುಣಿಯರೊಡನಾನಂದ[1]ದಿಂದೆ[1]ಯ್ದೆ ಪೋಪಾ
ಬನದೊಳ್ ಪೂಗೊಯ್ವ ಪೂವಿಂ ತು[2]ಡು[2]ಗೆಯನೊಲವಿಂ ಮಾೞ್ಪ ತೂಗುಯ್ಯ
[ಲಂ ಮಾ

ವಿನೊಳಾಡುತ್ತಿರ್ಪ ಬೆಟ್ಟೇಱುವ ಮರನಡರ್ವಾ ಕಾವಣಕ್ಕೋಪ ತಂತ
ಮ್ಮನಿಯರ್ [3]ಸಯ್ತುಂ[3]ಬುದಂ ವರ್ಣಿಸುಗೆ ಕವಿ ವನಕ್ರೀಡೆಯೊಳ್ ನಾಡೆ ರಮ್ಯಂ ೧

ಅದಿರ್ಮುತ್ತೆಯ ನನೆಯಿಂ ಚೂ
ತದ ಕಳಿಕೆಯಿನೆಸೆವ ಕರ್ಣಿಕಾರದ ಪೂವಿಂ
ಕದಳಿಯ ಸುೞಿಯಿಂದೋಲಗಿ
ಸಿದನೋಲಗದೊಳ್ ನೃಪಾಲನಂ ವನಪಾಳಂ ೨

ಕುರವಕದಂಕುರಂ ತಿಲಕದುಜ್ವಳಪುಷ್ಪವಶೋಕದೊಳ್ದಳಿರ್
ಮರುಗದ ನುಣ್ಗೊನರ್ ದವನದೊಳ್ಗುಡಿ ಮಾವಿನ ಕೆಂದಳಿರ್ ನವಾಂ
ಬುರುಹದ ಮೊಗ್ಗೆ ಸಂಪಗೆಯಲರ್ ಸುರಹೊನ್ನೆಯ ಪೂಗಳೆಂಬಿವಂ
ಮುರರಿಪುಗಿತ್ತು ಮೆಚ್ಚುವಡೆದುತ್ಸವದಿಂ ನುಡಿದಂ ಪ್ರಿಯೋಕ್ತಿಯಂ ೩

(ಜಗನ್ನಾಥವಿಜಯಂ ೧೪-೪೪)

ಎಸಗಿದುದೀಗಳೀಗಳನಿಸೊಯ್ಯನೆ ತೆಂಕಣಗಾಳಿ ಕೋರಕ
ಪ್ರಸರದೊಳೀಗಳೀಗಳೆಸೆದಪ್ಪುದು ಚೂತಮಹೀಜಮೆಯ್ದೆ ರಾ
ಗಿಸೆ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ ಕಂತು ಬಿಲ್ಲನೇ
ಱಿಸಿದಪನೀಗಳೀಗ[4]ಳಿದು[4] ಸುಗ್ಗಿಯದೊಂದು ಪೊಡ[5]ರ್ಪಿದಾಗವೇ[5] ೪

(ಕಾವ್ಯಾವಲೋಕನಂ ೩೭೬)

ಪಗಲೆಲ್ಲಂ ವನಕೇಳಿಯಿಂದಮಿರುಳೆಲ್ಲಂ ಚಂದ್ರಿಕಾಶ್ರೀವಿಳಾ
ಸಗತಾಂದೋಳವಿನೋದದಿಂ ದವತಿ .... .... ದರ್ಪಕಂಗಕ್ಕೆ ಕಂ
ತುಗೆ ಮಾಱಾಂತೊಡೆ ಭಾಳನೇತ್ರನುರಿಗಣ್ಣಿಂ ಕಾಮಿನೀಕಾಂತಿವಾ
ರಿಗಳಿಂ ನಂದಿಸಲೆಂದು ಬಂದುದು ಬಸಂತಂ ಸಂತತೋತ್ಸಾಹದಿಂ ೫

ಕೋಗಿಲೆಗಾಯ್ತು ಮಾವಿನೊಳುದೊಂಗಲಿನಿಂ ದನಿ ತುಂಬಿಗಾಯ್ತು ಮೇ
ಲಾಗಿರೆ ಬಂದ ಮಲ್ಲಿಗೆಯ ಸೌರಭದಿಂ ದನಿ ದೇವಸಾಲೆ ತಾಂ

---

1 ನಕ್ಕೆ (ಗ ಘ) 2 ೨ (ಖ ಗ ಬ) 3 ತ್ತೆತು (ಗ ಘ) 4 ಳಿಲೆ (ಅ
5 ಪೊರ್ಗಾಣ್ದುದಂ (ಕ ಖ ಗ ಘ ಬ)

ಕೋಗಿಲೆ ಬಂದು ಬಿನ್ನವಿಸಲೆದ್ದುದು ಮಾವು ತಳಿರ್ತ ಭಂಗಿಯಿಂ
ರಾಗಿಪ ತುಂಬಿ ಬಿನ್ನವಿಸವೇೞ್ಪುದು ಮಲ್ಲಿಗೆ ಪೂತ ಭಂಗಿಯಿಂ ೬
ಮಾವಿನ ಬಂದ ಮಲ್ಲಿಗೆಯ ಬಾಲತಮಾಳಕುಜಾತಷಂಡಮಂ
ತೀವಿ ತಗುಳ್ ಸುತ್ತಿದದಿರ್ಮುತ್ತೆ ಕವುಂಗಿನ ಸಾಲ ಪಕ್ಕದೊಳ್

ಸಾವುಮನಾಳ್ದ ಸಂಪಗೆ ಮನಕ್ಕೆ ಮನೋಹರಮೆಂಬ ಮಾತೆ ಕೇಳ್
ದೇವರ ಪಾದದಾಣೆ ಬನದೀಸುಳ ಮೈಸಿರಿ ಪೇೞಲಗ್ಗಳಂ ೭
ಪಿರಿದುಮನಂಗನಾ[1]ದರಿಸಿ[1] ತಮ್ಮನೆ [2]ನೂ[2]ರ್ಗಣೆಮಾ[3]ಡಿ ಪೊಂಗುವಂ
ತಿರೆ ಕಡುನಲ್ಲರಂ ಬಿಗಿಯೆ[3] ತಾಗಿ ಕರಂ ಬಿರಿವಂತೆ [4]ಬೇಗದಿಂ[4]
ಬಿರಯಿಯ ಚಿತ್ರಮಂ [5]ತಗುಳ್ದು[5] ನುಂಗಲೆ ಬಾಯ್ದೆಱೆವಂದದಿಂದದೇಂ
ಬಿರಿದುವೊ ತೋರಮಲ್ಲಿಗೆಗಳುಬ್ಬರಮಾಗಿ ಬಸಂತಮಾಸದೊಳ್ ೮

(ಲೀಲಾವತಿ ೯-೧೦೪)

ಮುಗಮುಗಿಸಲ್ಕೆ ಮಂದಯಿಸಿ ದಿಕ್ತಟಮಂ ಬಟಿಸಲ್ಕೆ ಪೀರ್ವ ತುಂ
ಬಿಗೆ ತಣಿಪಲ್ಕೆ ನಮ್ಮ ಜಸಮಂ ಬೆಳಗಲ್ಕಿದೆ ಸಾಲ್ಗುಮೆಂದು ತ
ಳ್ತಗಲದಲಂಪಿನಿಂ ಮಧುಮನೋಭವರಿರ್ವರುಮೞ್ತಿವಟ್ಟು ಮ ೯
ಲ್ಲಿಗೆಗೆ ಬಸಂತದೊಳ್ ಬಯಸಿ ಕಟ್ಟಿದರೊಲ್ದಧಿರಾಜಪಟ್ಟಮಂ

(ಆದಿಪುರಾಣಂ ೧೧-೧೦೭)

ಎಕ್ಕಲದುಂಬಿಯಿಂ ಜವಳಿದುಂಬಿಯಿನಟ್ಟುವ ಮಾಲೆದುಂಬಿಯಿಂ
ದಿಕ್ಕುವ ಕುಂಭದಂತೆಸೆವ ಗೊಂದಣದುಂಬಿಯಿನಾವಮೆಯ್ಯೊಳಂ
ಮೊಕ್ಕಳಮೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ ೧೦
ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್

ಭುವನದೊಳಿಮ್ಮ ಮುಟ್ಟದಲರಾವುವೆಱಂಕೆಯ ಗಾಳಿ ಮುಟ್ಟೆ ಕಂ
ದುವುವೆಸಱಿಂದರ್ಮೆ ಪೀರಲೋಡಮಾಗಳೆ ಸೋರ್ವುವು ಕಂಪು ಸೋಂಕೆ ಕಂ
ದವು ದಳಮೆಯ್ದೆ ಪೀರೆ ತವದುಣ್ಮುವ ಸೌರಭಮೆಂದು ಪೀರ್ದು ಪೀ ೧೧
ರ್ದವಚಱದೇಂ ತೆಱಂದಿರಿದು ಪಾಯ್ದವೊ ಕೇದಗೆಯೊಳ್ ಮದಾಳಿಗಳ್

(ಆದಿಪುರಾಣಂ ೧೧-೧೨೦)

ಪಡೆದೊಡೆ ಕಂಪಂ ಬಣ್ಣಂ
ಬಡೆಯವು ಬಣ್ಣಮನೆ ಪಡೆದುವಪ್ಪೊಡೆ ಕಂಪಂ

---

[1] ವಸಿರಿ (ಅ) [2] ಕೂ (ಅ) [3] ಡೆ ನಲ್ಲರಂ ಬಿರಿಯಿಗಳಂ ಮನಂಬಿರಿಯೆ (ಅ) [4] ಥೇಪ್ಪದಿಂ (ಖ ಬ) [5] ಬಿರಿದು (ಅ)

ಪಡೆಯವುಬಿಡಲರ್ಗಳೆರಡುಮ
ನೊಡೆವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೇ ೧೨

(ಆದಿಪುರಾಣಂ ೧೧-೧೧೪)

ಪೊಂಬೆಸದಿಂದಮೆಯ್ದೆ ಸಮೆದಂದದೊಳೊಪ್ಪುವ ಬಣ್ಣಮುಂ ಕರಂ
ಪಂಬಲಿಸಲ್ಕೆ ತಕ್ಕವಚಜಾಗಿಸದೋಗರಗಂಪುಮಾವ ಪೂ
ವಿಂ [1]ಬಗೆಗೊಳ್ವದಂತ[1]ವಜಖಳಗ್ಗಳಮಾದೊಡಮಕ್ಕಟಾ ಮರು
ಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡವೊ ನಿರ್ನಿಮಿತ್ತದಿಂ ೧೩

(ಕಾವ್ಯಾವಲೋಕನಂ ೨೩-೧೩೪)

ಗಟ್ಟಿನೆ ಕೊಳೆ ಕಡುಗಂಪಿನೊ
ಳಟ್ಟಿಮೆಗೊಳಗಪ್ಪೆವೆಂದು ಮಧುಪಂಗಳ್ ತಂ
ಮಟ್ಟಿಮೆ[2]ಯಭೀತಿಯಿಂದಮೆ[2]
ನೀಟ್ಟಿರಿಸಿದುವುಂತೆ ಚಂಪಕಕ್ಕೆಜಿಗದುವೇ ೧೪

(ಆದಿಪುರಾಣಂ ೧೧-೧೧೯)

ಮೊಗೆದುಣ್ಬೈ ಮಧುವಂ ಮಲೀನವಪು ದಾನಂಗೊಂಬೆ ಮಾತಂಗಜಾ
ತಿಗಳೊಳ್ ಪೇಸೆದೆ ಮಾಟಿಪ್ಪಿ ಪುಷ್ಪಿತಲತಾಸಂಭೋಗಮಂ ನಿನ್ನೊಳಾ
ವಗುಣಂ ಷಟ್ಪದ ಪೋಗು ಮುಟ್ಟದೆನುತಂ ಕೈಸನ್ನೆಗೆಯ್ವಂತೆ ಸಂ
ಪಗೆ ಚೆಲ್ವಾಯ್ತು ಸಮೀರಸಂಚರಣಸಂಚತ್ಪಲ್ಲವೋಲ್ಲಾಸದಿಂ ೧೫

ಅರಲಂಬಿಂದೆಮ್ಮೊಳ್ ಮೆ
ಯ್ಗರೆದಿಸು ಬಿರಯಿಗಳನೆಂದು ಕೈಗೊಟ್ಟುವು ಶಂ
ಬರರಿಪುಗೆನ್ನದೆ ಮಾವಿನ
ತರುಗಳ್ ಕೈವಂದುವೆಂಬವರ್ ಮರುಳಲ್ತೇ ೧೬

(ಚಂದ್ರಪ್ರಭಪುರಾಣಂ ೭.೪೩)

ಅಳಿನಿನದ [3]ಗೀತ ಮದಕೋ
ಕಿಳನಿನದಂ ವಾದ್ಯಮಭಿನಯಂ[3] ನೆಗಟ್ಟಿನೆಗಂ
ಲಳಿತಮನೇನಾಡಿಸಿದನೊ
ಮಳಯಾನಿಳನರ್ತಕಂ ಲತಾನರ್ತಕಿಯಂ ೧೭

(ಆದಿಪುರಾಣಂ ೧೧-೯೩)

ಏಣಿಯನಿಕ್ಕಿದೆಂ ನಿಮಿರ್ದ ಪೂಮರಗಳ್ಗೆ ವಿನೋದವಾಗಿ ನಿ
ಶ್ರೇಣಿಯನುಣ್ಮಳಲ್ಪುಳಿನ ಮಾಡಿಸಿದೆಂ ನೆಲೆಗೊಳ್ವ ನೀರ್ಗಳೊಳ್

---

1 ಬಗೆವಾಗಳಿಂತಿ (ಅ) 2 ಯೆಚಾತನಾಗಿರೆ (ಅ) 3 ದ ಮದಕೋಕಿಳ ಕಳನಿನದದ ಜತಿಯೊಳಭಿನಯಂ (ಅ)

ಜಾಣಮರ್ವಂತು ಖೇಡಕುಟೀಯಂ ಪರಿಶೋಧಿಸಿದೆಂ ಸರೋವರ
ಕ್ಷೋಣಿಗಳೊಳ್ ಕುಳಿಕೊಳಿಸುವೋಲಗಶಾಲೆಯನೊಪ್ಪಿ ಮಾಡಿದೆಂ ೧೮

ತರುಣೀಪಾದಪ್ರಹಾರಕ್ಕಸುಕೆ ಕುರವಕಂ ವಾರನಾರೀಕುಚೋದ್ಯ
ತ್ಪರಿರಂಭಕ್ಕಂಗನಾದೃಕ್ಪದವಿಗೆ ತಿಲಕಂ ಕಾಮಿನೀ ದುಗ್ಧಗಂಡೂ
ಷರಸಾಸ್ವಾದಕ್ಕೆ ಚಾಂಪೇಯಕಮೆಳಸಿ ಬರಲ್ವೇಟಿತಿ ನಿಮ್ಮಂ ಪಿಕಾ[1]ನೀ
ಕ[1]ರವಂ ಮಂದಾನಿಲಂ ಬಿನ್ನವಿಸಿ ಕರೆದಪಂ ಸೌರಭಾ[2]ದರ್ಶ[2]ಹಸ್ತಂ ೧೯
(ಅನಂತನಾಥಪುರಾಣಂ ೮-೯೧)

ವಸುಧಾಮಂಡಳಮಂ ಮರುಳ್ಗೊಳಿಪ ರೂಪಾಶ್ಚರ್ಯದಿಂ ಮುತ್ತಿನೆ
ಕ್ಕಸರಂ ಮಲ್ಲಿಗೆ ಚಂದನಂ ಮೆಱತ[3]ಯೆ[3] ಚೆಲ್ವಿಂ ಕಂಪು ಸೊಂಪಾದ ಮೆ
ಯ್ವೆಸದಿಂ ಮನ್ಮಥ ಚಂದ್ರ ಚೈತ್ರರೆ ವನಕ್ರೀಡಾರ್ಥಮೇಟ್ವಿಂತಿರೇ
[4]ಟ್ವಿ[4] ಸಭಾಮಂಡಲದಿಂ ತ್ರಿವಿಷ್ಟಪಸಭಾಮಾಣಿಕ್ಯದೀಪಾಂಕುರಂ ೨೦
(ಅನಂತನಾಥಪುರಾಣಂ ೬-೯೨)

ಹಯಮಂ [5]ರಾಜಕುಮಾರರ[5]ಶ್ವ[6]ರಥ[6]ಮಂ ವಿದ್ಯಾವತೀವೃಂದಮಾ
ನೆಯನುರ್ವೀಶತನೂಜರಂದಣಮನಾ ವಾರಾಂಗನಾಶ್ರೇಣಿ ರಾ
ಣಿಯುವಾಸಂ ಶಿಬಿಕೌಘಮಂ ಪಿಡಿಯ ಪಿಂಡಂ ಪೆಂಡವಾಸಂ ನೃಪಾ
ನ್ವಯಚೂಡಾಮಣಿ ಪಟ್ಟಗಂಧಗಜಮಂ ಮುನ್ನೇಱಿತಿ ತಾಮೇಱಿದರ್ ೨೧
(ಅನಂತನಾಥರಾಣಂ ೬-೯೩)

ಅರಸಿ ಪೆಱಗೇಱಿ[3] ಮದವ
ತ್ಕರಿಧವಳಮನೇಱಿ ಮೆಱತದನವನಿಪಧವಳಂ
ಶರದಂಬುದಮಂ ರೋಹಿಣಿ
ವೆರಸೇಱಿದ ಚಂದ್ರನಂತೆ ಪೂರ್ವಾಸನದೊಳ್ * ೨೨
(ಅನಂತನಾಥಪುರಾಣಂ ೬-೯೪)

ಬನಮಾಯ್ತುಂಗಡಿಬೀದಿ ಪೀಲಿದಟಿತಯೊಡ್ಡಿಂ [7]ಪಂಕಜಾಸ್ಯಂಗಳಿಂ[7]
ವನಜಾತಾಕರಮಾಯ್ತು ವಾರವನಿತಾಪಾಂಗಾಂಶುವಿಂ ಸೌಧಸಾ
ರನಿಕಾಯಂ ಮಧುಮಾಸಮಾಯ್ತು ಪುರಮೆಲ್ಲಂ ಮಲ್ಲಿಕಾಮಾಲೆ ಭಾ
ರನಿಜಾಮೋದದಿನೆಂಬಿನಂ ತಳರ್ದನುರ್ವೀಮಂಡಲಾಖಂಡಳಂ ೨೩
(ಅನಂತನಾಥಪುರಾಣಂ ೬-೯೫)

---

[1] ರಾವ (ಅ) [2] ಹರ್ಷ (ಖ ಬ) [3] ವ (ಅ) [4] ದುರ್ (ಅ) [5] ನಾಗರಕಾದಿಯ (ಅ) [6] ಚಯ (ಕ ಖ ಬ) [7] ಪುಲ್ಲಿದೊಂಗಲ್ಗಳಿಂ (ಕ ಖ ಬ) * ಈ ಪದ್ಯವಾದ ಮೇಲೆ (ಕ) ಪ್ರತಿಯಲ್ಲಿ ಬರುವ ಮೂರು ಪದ್ಯಗಳು (ಖ ಬ) ಪ್ರತಿಗಳಲ್ಲಿ ೨೮-೨೯-೩೦ ನೆಯ ಪದ್ಯಗಳಾಗಿವೆ. (ಖ ಬ) ಪ್ರತಿಗಳ ಕ್ರಮವೇ ಸರಿಯಾಗಿರುವುದರಿಂದ ಅದನ್ನೇ ಇಲ್ಲಿ ಅನುಸರಿಸಿದೆ.

ಕುಮುದರಜಂಗಳೊಳ್ ಪೊರೆದು ವಾಃಕಣಜಾಳಮನಾಂತು ಕೂಡಿ ವಿ
ಭ್ರಮಿಸಿ ತರಂಗಮಾಲಿಕೆಗಳೊಳ್ ಕಳಹಂಸನಿಕಾಯದೊಳ್ ಭ್ರಮ
ದ್ಭ್ರಮರ ರಜಂಗಳೊಳ್ ಬೆರಸಿ ಮಾರುತನೊಯ್ಯನೆ ಬಂದು ತೀಡಿದ
ತ್ರಮದೋಸೆದಪ್ಪಿಕೊಂಡು ಕರೆವಂತೆವೊಲಾ ಮನುಜೇಂದ್ರಚಂದ್ರನಂ ೨೪

(ಕಾದಂಬರಿ ಪೂ. ಭಾ ; ೬೩೩)

ಸಮದೇಭವ್ರಜದಾನವರ್ಷನಬಲಾಸಂದೋಹನೇತ್ರಾಬ್ಜಷಂ
ಡಮನೇಕಧ್ವಜಮೇಘಡಂಬರಚಯಂ ಶುದ್ಧಾಂತಕಾಂತಾಮುಖೇಂ
ದುಮಯೂಖಂ ಚಮರೀಜವೀಜನಬಳಾಕಂ ತಳ್ತು ಕಾರುಂ ಬಸಂ
ತಮುಮುದ್ಯಾನವನಕ್ಕೆ ಬಪ್ಪ ತೆಜದಿಂ ಬಂದಂ ಮಹೀವಲ್ಲಭಂ ೨೫

(ಅನಂತನಾಥಪುರಾಣಂ ೬_೫೬)

[1]ಮ[1]ಡದಿಂದೊತ್ತಿ ಮದಾಂಧಗಂಧಗಜಮಂ ಪಿಂತಿರ್ದ ನಲ್ಲಳ್ಗೆ ಕೈ
ಗುಡುತುಂ ಮೆಲ್ಲನಿೞಿಂಪಿ ಕಯ್ಯಲಗನತ್ತಲ್ ನೀಡಿ ಕುಂಭಾಗ್ರಮಂ
ತೊಡೆಯುತ್ತುಂ ಪಿಡಿದಗ್ರಪಲ್ಲವಮನುದ್ದಂತಾಗ್ರಮಂ ಮೆಟ್ಟಿ ಕೈ
ಯೆಡೆಯಿಂ ಲಂಘಿಸಿದಂ [2]ನೆ[2]ಲಕ್ಕೆ ಜವದಿಂ ಸಾಹಿತ್ಯರತ್ನಾಕರಂ ೨೬

(ಅನಂತನಾಥಪುರಾಣಂ ೬.೫೭)

ಸರಸಿರುಹಂಗಳಿಂದಿೞಿವ ಮತ್ತಮ[3]ದಾ[3]ಳಿಗಳಂತೆ ಕೇಳಿಭೂ
ಧರಶಿಖರಂಗಳಿಂದಿೞಿವ ಸೋಗೆಯ ಗೊಂದಣದಂತೆ ಬಂದ ಮಾ
ಮರದೆಳಗೊಂಬಿನಿಂದಿೞಿವ ರಾಜಶುಕಾವಳಿಯಂತೆ ತೇರ್ಗಳಿಂ
ಕರಿಣಿಗಳಿಂದಮುಂದಣದಿನೇನಿೞಿತಂದರೊ ವಾರನಾರಿಯರ್ ೨೭

(ಅನಂತನಾಥಪುರಾಣಂ ೭-೩)

ಆಗೆವೊಯ್ದ ಚಂದ್ರಮಂಡಲ
ದಗೆಗಳವೋಲ್ ಕಾರಮುಗಿಲ [4]ಕೀಲ್ಸರಿ[4]ಗಳವೊಲ್
ಸೊಗಯಿಸಿದುವು ಬೆಳ್ಗೊಡೆ ಕೊಂ
ಬುಗೊಂಬಿನೊಳ್ ಕಂಬಕಂಬದೊಳ್ [5]ಪೆಣ್ಪಿ[5]ಡಿಗಳ್ ೨೮

(ಯಶೋಧರಚರಿತ್ರೆ, ೪-೪ : ಅನಂತನಾಥಪುರಾಣಂ ೭-೬)

ಎಳಲತೆಗಳ್ಗೆ ಸೋಗೆಗೆ ಸರೋಜಕುಲಕ್ಕೆ ಪಿಕಕ್ಕೆ ತಮ್ಮ ತೋ
ಳ್ಗಳ ಕುಡಿ ನೀಳ್ದ ಸೋರ್ಮುಡಿ ಮೊಗಂ ಗುಡಿ ಮೆಲ್ನುಡಿ ಮತ್ಸರಂಗಳಂ
ಬಳೆಯಿಸೆ ಮುತ್ತುವಂತೆ ಬನಮಂ ನಡೆದರ್ ಕಳನಾದ್ಧೆಯರ್ ಸಮು
ಜ್ವಳಮುಖಬಿಂಬೆಯರ್ ಕುಟಿಲಕುಂತಳೆಯರ್ ವಿಚಳಲ್ಲತಾಂಗಿಯರ್ ೨೯

(ಅನಂತನಾಥಪುರಾಣಂ ೭.೭)

---

1 ಕೊ (ಅ) 2 ಕೆ (ಅ) 3 ರಾ (ಅ) 4 ಕೀಲ್ಸರಿ (ಕ ಬ) 5 ಪೆರ್ದಿ (ಅ)

ಪರಿತಂದುತ್ಸಾಹದಿಂದರ್ಚಿಸಿದರೊಸೆದು ವಾಸಂತಿಯಂ ಸಾಂದಿನಿಂ ಮಾ
ಮರನಂ ಶ್ರೀಖಂಡದಿಂ ಮಲ್ಲಿಗೆಯನಗುರುವಿಂ ಚಂಪಕಾನೀಕಮಂ ಕ
ಸ್ತುರಿಯಿಂ ಕಂ[1]ಗಲ್ಲಿಯಂ[1] ಕಂಪಿಡಿದ ಕ[2]ಮಳ[2]ದಿಂ ನಾಗಮಂ ನೆಲ್ಲಿಯಿಂ ಪಾ
ದರಿಯಂ ಕಾಶ್ಮೀರದಿಂ ಕೇಸರಮನಮಲಕರ್ಪೂರದಿಂ ಕಾಂತೆಯರ್ಕಳ್ ೩೦

(ಲೀಲಾವತಿ ೧೩-೬೪)

ಕುಸುಮಶರಾಸನಕ್ಕೆ ನನೆಯಂಬಿನ ತೆಕ್ಕೆಗೆ ಮೀನಕೇತನ
ಕ್ಕಸಮ ಶಿಲೀಮುಖಕ್ಕೆ ರತಿಗೇಳಿಗಿವೆಂದರೆ ನೋಡಿ ಮೆಚ್ಚಿ ಜಾ
ನಿಸಿ ಕರಪಲ್ಲವಂ ಬಡುಗೆ ಬಾಯಿನ ಬಲ್ಲನೆ ಪೊಗ್ಗೆ [3]ಜಾ[3]ಗರಲ್
ಪಸರಿಸೆ ಕೊಯ್ದು ಮಲ್ಲಿಗೆಯೊಳರ್ಚಿಸಿದರ್ ಸಹಕಾರಪಾದಮಂ ೩೧

(ಅನಂತನಾಥಪುರಾಣಂ ೭-೧೨)

ಅರ್ಚಿಸಿದಾಯಲಾಗ ಪೊಸಪೂಗಳನೆಂದಿದೆ ಚಂದನಚ್ಚ[4]ಟಾ[4]
ಚರ್ಚೆಗಳೆಂಬವೋಲಡಸಿ ನೋಡಿ ನವಾಂ[5]ಕುರಕಾಂತಿದಾಮದಿಂ[5]
ದರ್ಚಿಸುವಂತೆ ನೀಡಿ ನಳಿತೋಳನಲಂಪಿನೊಳಾಯ್ದು ಕೊಯ್ದು ಕೈ
ಮರ್ಚಲ ತೋರಮಲ್ಲಿಗೆಗಳಂ ತಳಿರ್ವಟ್ಟಲೊಳೊರ್ವಳೊಟ್ಟಿದಳ್ ೩೨

(ಲೀಲಾವತಿ ೧೩-೬೬)

ವದನದ ಕಂಪನೊರ್ಮೆ ಸೆಳೆಗೊಂಬಿನ ಪೂಗಳನೊರ್ಮೆ ಸೂಟಿಸೂ
ಟಿದೆ ಮುಸುಱುತ್ತಮಿರ್ಪ ಮಱುದುಂಬಿಯನೀಯದೆ ಸುಯ್ಯೆ ನಾಸಿಕಾ
ವಿದಳಿತ ಚಂಪಕಶ್ವಸಿತ ಸೌರಭಮೊರ್ವಳಪೂರ್ವರೂಪಿನಾ
ಗದ ನಗೆವೂಗಳಂ ಬಯಸಿ ಬೆಚ್ಚದೆ ಬಿಚ್ಚತಮಾಯ್ದಳಟ್ಟಿಯಿಂ ೩೩

(ಲೀಲಾವತಿ ೧೩-೬೭)

ನಡೆ ತಣ್ಪೂತಮರಂಗಳಂ ನೆರೆಯ ಭಾಷಾನಿಸ್ವನಂ ಪೊಣ್ಮೆ ಸಾ
ರ್ದಡಗ್ಗೆ ಬಾಗಿಸೆ ಶಾಖೆಯಂ ಬಲದ ಕೈ ಬೈತಿಟ್ಟವೋಲೆಯ್ದೆ ಕೆಂ
ಪಡರ್ವನ್ನಂ ಕರಪಲ್ಲವಾಂಗುಲಿಗಳಿಂ ಘರ್ಮಾಂಬುವಂ ಮಿಂಚೆ ಪೂ
ದೊಡವಿಂಗೆಂದು ಜೆಡಂಗಿಯರ್ ಬಿಡದೆ ಪೂವಂ ಕೊಯ್ದರುದ್ಯಾನದೊಳ್ * ೩೪

ನಿಮಿರ್ದುದು ಮಧ್ಯಮುಂ ತಿವಳಿ ಕೆಟ್ಟವು ತೋಳ್ ಮೊಲೆ ಕುಂತಳಾಳಿ ಕ
ಣ್ಣೆವೆ ಕುಡಿವುರ್ಬು ಮೇಗೆ ನೆಗೆದೊಪ್ಪಿದುವೊಳ್ನುಡಿ ಬಿಟ್ಟುವಿತ್ತ ಕಂ
ಪಮನೊಳಕೊಂಡವೂರು ತುದಿಕಾಲ್ ನೆಲೆಗೊಂಡವು ನೂಪುರಂ ನಿನಾ
ದಮನೊಳಕೊಂಡವಿಂತಬಲೆ ಪೂದಿಱಿದಲ್ ನಿಮಿರ್ದಳ್ಕೆಗೊಂಬಿನೊಳ್ * ೩೫

---

1 ಕೇಳವಮಂ (ಅ) 2 ಳಭ (ಅ) 3 ವೋ (ಕ ಖ ಬ) 4 ದಾ (ಕ ಖ ಬ)
5 ಕುರಕಾಂತದಾಮದಿಂ (ಕ ಖ ಬ) * ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ

ವಳಿಗಳಲೞಿಯೆ ಬಿಂಕಂಬೆತ್ತ ವೃತ್ತಸ್ತನಂ ಕಂ
ಗೊಳಿಸೆ ಪೊಳೆಯೆ ಬಾಹಾಮೂಲಮೂರುದ್ವಯಂ ಸಂ
ಚಳಿಸೆ ನಿಜಪದಾಂಗುಷ್ಠಾಗ್ರದಿಂ ನಿಂದು ಕಣ್ಗಳ್
ಪೊಳೆಯೆ [1]ಮಿಳಿರ್ವ[1] ಕೊಂಬಂ ನಿಳ್ಕಿ ಪೂಗೊಯ್ವಳೊರ್ವಳ್ * ೩೬
(ಕಾವ್ಯಾವಲೋಕನಂ ೬೧೧)

ಪರಿಮಳಿತರಂಜಿತಂ ಬಂ
ಧುರಗಂಧಂ ಮಂದರಾಗವರ್ಧನಕರಮೀ
ಮರುಗಂ ಕಬ್ಬಾಳನುಮಿರೆ
ಮರುಳಲ್ಲವೆ ಕುಸುಮನಿಚಯದೊಳ್ ಮೆಱೆವಳಿಗಳ್ ೩೭

ಬಂಬಲ್ಗುರುಳೊಡನಾಡಿಗೆ
ತುಂಬಿಗೆ ಪಗೆಯೆಂದು ಮುಳಿದು ಸಂಪಗೆಯೆಸಳಿಂ
ತುಂಬಿಗುರುಳ್ಗೊಪ್ಪಿಸಿದಪ
ಳೆಂಬಿನಮೆಸಳ್ಗಳನೆ ತಿಱಿದು ಸೂಡಿದಳೊರ್ವಳ್ ೩೮
(ಅನಂತನಾಥಪುರಾಣಂ ೭-೧೪)

ಪರಭಾಗಂ ಪೊಣ್ಮುವನ್ನಂ ತನುಲತೆ ಲತೆಯೊಳ್ ಕೂಡೆ ತುಂಗಸ್ತನಂ ಮಂ
ಜರಿಯೊಳ್ ಮುಂಡಾಡೆ ಕಣ್ಗಳ್ ಬೆರಸೆ ಕುಸುಮದೊಳ್ ಕುಂತಳಂ ತುಂಬಿಯೊಳ್ ತ
ಳ್ತಿರೆ ಪುಷ್ಪಾಮೊದದೊಳ್ ಸುಯ್ ಕಲಸೆ ಕರತಳಚ್ಛಾಯೆ ತಳಿರ್ಕೈಸೆ ಬಾಲಾಂ
ಕುರಮಂ ಪೂಗೊಯ್ವಳೊರ್ವಳ್ ಲತೆಲತೆಗೊಲವಿಂ ಬಿರ್ದು[2]ವಂದಂತಿರಿರ್ದಳ್[2] ೩೯
(ಲೀಲಾವತಿ ೧೩-೭೦)

ಸೋದು ಕರಾಬ್ಜದಿಂ ಮುಗಿದ ಕಣ್ಮಲರಂ ಕಚಭಾರಬಂಧಮಂ
ಸೋದಿಸಿ ಮೇಲುದಂ ಬಿದಿರ್ದು ಕುಂತಳಮಂ ಸಮಸಂಶಯಕ್ಕೆ ತಂ
ದೂದಿ ತಗುಳ್ದು ಬೆಂಬೞಿಯನೆಯ್ದಿಸಲಾಱದೆ ಕಾಯ್ವ ಮಲ್ಲಿಕಾ
ಮೋದ ಮಧುವ್ರತಕ್ಕಗಿದು ವಿಭ್ರಮಮಂ ಪಡೆದತ್ತು ಸಂಭ್ರಮಂ ೪೦

ನಱುಸುಯ್ಗೆ ತುಂಬಿಗಳ್ ಬಂ
ದೆಱಗೆ ಕರಾಂಬುಜದೆ ಕಮಲಮುಖಿ ಸೋವುತ್ತುಂ
ಮಿಱುಗುವ ನೀಲದ ಬಟ್ಟಿನ
ತಿಱಿಕಲ್ಗಳನಾಡುವಂತೆ ಸತಿ ಸೊಗಯಿಸಿದಳ್ ೪೧
(ಕಾದಂಬರಿ, ಉ. ಭಾ. ೨೬)

---

1 ನಿರ್ಮಿದ (ಅ) 2 ದೆಂಬಂದದಿಂದಂ (ಕ ಖ ಗ) * ಈ ಪದ್ಯಗಳು (ಕ) ಪ್ರತಿಯಲ್ಲಿಲ್ಲ.

ನೀರೇಜವದನೆ ತಿಱಿದಳ್
ತೋಱಿದ ಮಲ್ಲಿಗೆಯ ಮುಗುಳನಾಗಳೆ ಕಾಶ್ಮೀ
ರಾರುಣಕರಪಲ್ಲವದಿಂ
ತಾರಗೆಯಂ ತಿಱಿವ ಪೂರ್ವಸಂಧ್ಯಾಂಗನೆವೋಲ್ ೪೨

(ಲೀಲಾವತಿ ೧೩-೭೭)

ಪೂಗಣೆಯನ ಚಾಮರಮಂ
ಸೀಗುರಿಯಂ [1]ಪಿಡಿ[1]ವಳಂತೆ ಸೆಳೆಗೊಂಬುಗ[2]ಳಂ[2]
ಬಾಗೊತ್ತಿ ಗುಜ್ಜುಮಾವಿನ
ಪೂಗೊಂಚಲನುಡಿದು ಪಿಡಿದಳಳಿವೆರಸೊರ್ವಳ್ ೪೩

(ಲೀಲಾವತಿ ೧೩-೮೨)

ಎಳಲತೆಯನಂ[3]ಗ[3]ದಿಂ ಕೋ
ಕಿಳಮಂ ಕಳರವದಿ[4]ನಿಕ್ಕಿ[4] ಗೆಲೆಯಲರ್ವಳೆಯಂ
ತ[5]ಳಿದಳೆ[5]ನೆ ನಿಳ್ಕಲಾಱದೆ
ಸೆಳೆಗೊಂಬಂ ಲಲನೆಯಲುಗೆ ಸೂಸಿದವಲರ್ಗಳ್ ೪೪

(ಲೀಲಾವತಿ ೧೩-೮೬)

ವಲ್ಲಭನ ತೋಳ ಸೋಂಕುಂ
ಮಲ್ಲಿಗೆಯುಂ ಕುಂದದಿರ್ಕೆ ಸಂತತಮೆನಗಾ
ನೊಲ್ಲೆಂ ಪೆಱತನೆನುತ್ತುಂ
ಮಲ್ಲಿಗೆಯಂ ಪಿಕನಿನಾದೆ ಕೊಯ್ದಳದೊರ್ವಳ್ ೪೫

(ಜಗನ್ನಾಥವಿಜಯಂ ೧೪-೭೭)

ಮರುಳೊಡನಾಡಿದ ಕತದಿಂ
ಮರುಳಾದನದಲ್ಲದಂತದಂ ಸೂಡನೆ ಶಂ
ಕರನೆಂದು ಕೊಯ್ದಳೊರ್ವಳ್
ಪರಿಮಳಮಂ ಬೀಱುತಿರ್ಪ ಪೊಂಗೇದಗೆಯಂ ೪೬

(ಜಗನ್ನಾಥವಿಜಯಂ ೧೪-೮೪)

ಅಳಿ ಕರ್ದುಕಿದ ಕಡೆಗಂಗಳ
ಗಿಳಿ ಕರ್ದುಕಿದ ದಶನವಸನದುನ್ನದದ ಪಿಕಾ
ವಳಿ ಕರ್ದುಕಿದ ಬೆರಲ ಲತಾ
ಲಲಿತೆಯರೆ ಪಲಂಬರಾದರಲರ್ಗೊಯ್ವೆಡೆಯೊಳ್ ೪೭

1 ಪಡೆ (ಖ ಬ) 2 ಳಿಂ (ಅ) 3 ಪ (ಅ) 4 ನಾಕೆ (ಅ) 5 ಳಿದುಜೆ (ಅ)

ಸುರಹೊನ್ನೆಯ ಮುಗುಳಂ ಕೊ
ಯ್ದರವಿಂದದ ನೂಲೊಳೊಪ್ಪೆ ಕಟ್ಟಿದಳೊರ್ವಳ್
ಪರಿಮಳಮುಳ್ಳಿಳಮುತ್ತಿನ
ಸರಮೆತ್ತಣದೆಂದು ಮುಗ್ಧೆಯರ್ ಮುತ್ತುವಿನಂ ೪೮
(ಅನಂತನಾಥಪುರಾಣಂ ೭-೨೦)

ಕಟಸೂತ್ರಂ ಬ್ರಹ್ಮಸೂತ್ರಂ ಸರಿಗೆ ಮಿನುಕು ಕೊಪ್ಪುಂಗುರಂ ಕರ್ಣಪೂರಂ
ಕಟಕಂ ಮಂಜೀರಕಂ ಮೂಕುತಿ ಚಳಕಿಗೆಪೂ ಪೊಂದಳಿರ್ ಪಾಯವಟ್ಟಂ
ನಿಟಲಾಂ[1]ತಂ[1] ಲಂಬಳಂ ಪೂಬಳಿ ಬಳಿ ಪೆಜಱ ಕೇಯೂರಮೆಂಬನ್ನವಂ ಪ್ರ
ಸ್ಫುಟರ[2][ತ್ನೋ][2]ಪಾಶ್ರಯಂ ರಂಜಿಸುವಿನಮಲರಿಂ ಕಾಂತೆಯರ್ ಮಾಡಿ ತೊಟ್ಟರ್ ೪೯

ಬಳೆ ಮುದ್ರೆ ಬಂದಿ ಪುಟ್ಟಿಗೆ
ಬಳಸದ ಬಿಜ್ಜೋಲೆ ಹರಿಹು ಹೆಜಱ ತಿಲಕಂ ಕಂ
ಗಳನಲಸದೆ ಕೇದಗೆವೂ
ಗಳೊಳಿತ್ತಂ ಮಾಡಿ ತೊಟ್ಟರಬಲೆಯರೆಲ್ಲಂ ೫೦

ಪೊಸತಿಕ್ಕುವಂತೆ ಕಾಮನ
ಪೊಸನಿಧಿಯಂ ಕಾಮಕಾಳಸರ್ಪಂಗೊಲವಿಂ
ಪೊಸಮಲ್ಲಿಗೆಯುಮನಡಕೆಯ
ಪಸಿಯುಮನೊಸೆದೊರ್ವಳಿಕ್ಕಿದಳ್ ಸೋರ್ಮುಡಿಯೊಳ್ ೫೧
(ಲೀಲಾವತಿ ೧೩-೧೦೮)

ತೊಡವೆನಿತೊಳವನಿತಕ್ಕಂ
ಪಡಿಚಂದಂ ಮಾಡಿ ಕಾಂತೆಯರ್ ಪೂದೊಡವಂ
ತೊಡೆ ತೊಟ್ಟ ಮರಲಸರಳಿಂ
ಮಡಲಿಱುದು ಮನೋಜನಡಸಿ ವಿರಹಿಯನೆಚ್ಚಂ ೫೨

ವನಕೇಳೀಲೀಲೆ[3]ಯೊಳ್[3] ತನ್ನಿನಿಯನ ದಯೆಯಿಂ ಪೆತ್ತ ನೂತ್ನೋತ್ಪಲಾಂಭೋ
ಜನವೋತ್ತಂಸಾವತಂಸಂಗಳನಭಿನವಪುನ್ನಾಗಕೇಯೂರಮಂ ನೂ
ತನ ಚಂಚತ್ಕರ್ಣಿಕಾರಪ್ರಸವವಲಯಮಂ ಮಲ್ಲಿಕಾಕುಟ್ಮಲನ್ಯ
ಸ್ತನವೋದ್ಯದ್ಹಾರಮಂ ಕಾಮಿನಿ ತಳೆದೆನಸುಂ ನೋಡೆ ಕಣ್ಗೆಡ್ಡಮಾದಳ್ ೫೩
(ಶೃಂಗಾರರತ್ನಾಕರಂ ೧-೩೭)

ಎಳಲತೆಯುಯ್ಯಲಾಡಿದಪುದೆನ್ನ ಸಿತೋತ್ಪಲಮುಯ್ಯಲಾಡಿತೆ
ನ್ನೆಳದಳಿರುಯ್ಯಲಾಡಿದುದು ತೆಂಬೆರಲೆಂಬೆಲರಿಂದಮೆನ್ನುತಂ

---

1 ಕಂ (ಕ) 2 ನ್ನೋ (ಕ ಖ ಬ) 3 ಯಿಂ (ಕ ಖ ಬ)

ಕೆಳದಿಯರೊಲ್ದು ಪಾಡೆ ತನುಮಧ್ಯ ವಿಲೋಲ[1]ವಿನೀಲ[1]ನೇತ್ರೆ ಕೆಂ
ದಳದ ಬೆಡಂಗನಿಕ್ಕಿ ತಳಿರುಯ್ಯಲನಾಡಿದಳಾಮ್ರಶಾಖೆಯೊಳ್ ೫೪

(ಅನಂತನಾಥಪುರಾಣಂ ೭-೧೫)

ತಳಿರುಯ್ಯಲ್ ಕಣ್ಗೆವಂದತ್ತೆಳಅಡಕೆಯ ಕಂಭಗಳಿಂ ಕಂಜಸೂತ್ರೋ
ಜ್ವಳ[2]ರಜ್ಜು[2]ಭ್ರಾಜಿತಂ ಚಂದನದ ಮಣೆಯಿನುನ್ಮತ್ತಭೃಂಗಾಂಗನಾಮಂ
ಗಳಗೀತೋನ್ಮಾ[3]ದಿ[3] ಮೇಗೇಱಿಸಿದ ಕೃತಕನೃತ್ಯನ್ಮಯೂರಂಗಳಿಂ ನಿ
ರ್ಮಳವಾಳಾಚಾಮರಂ ಚಂಪಕಮುಕುಳಚಲದ್ಘಂಟಿಕಾಜಾಳದಿಂದಂ ೫೫

(ಲೀಲಾವತಿ ೧೧-೫೭)

ಎಳಸಿಕೆ ದೇಸಿ ಪೊಚ್ಚಪೊಸಮಲ್ಲಿಗೆಯಂ ಪಲವಂ ತುಱುಂಬಿ ಕ
ಣ್ಗೊಳಿ ಸಿರಿಕಂಡದಣ್ಪನೊಸೆದಿ[4]ಟ್ಟು[4] ದುಕೂಲಮನುಟ್ಟು ಮೌಕ್ತಿಕಾ
ವಳಿಯನೊಱಲ್ದು ತೊಟ್ಟು ತಳಿರುಯ್ಯಲನ[5]ಟ್ಟಿಱಿಬೂ[5]ಳೇಱಿ ಪಾಡಿದಳ್
ಲಲನೆ ವಸಂತದೊಳ್ ಪಲವು ವರ್ಣ[6]ನ[6]ದಿಂ ಕವಿಕಾಮದೇವನಂ ೫೬

(ಶೃಂಗಾರರತ್ನಾಕರಂ ೧-೪೦)

ತೆರೆಮುಗಿಲನಡರ್ವ ವಿದ್ಯಾ
ಧರಿಯೆಂಬಿನಮೊರ್ವಳೇ[7]ಱಿ[7] ಕೃತಕಾದ್ರಿಯನೇಂ
ಮೊರೆಯಾದಳೊ ರತಿಕಾಂತನ
ಕರುಮಾಡದ ಮದನಮೋಹಿನೀಪುತ್ರಿಕೆವೋಲ್ ೫೭

(ಅನಂತನಾಥಪುರಾಣಂ ೭-೧೬ ; ಯಶೋಧರಚರಿತೆ ೪-೯)

ನಿಱಿದಳಿದೊರ್ಗಂಗಲಂ ತೆಗೆದು [8]ಬಾರುಳಿ[8]ಯಂ ದನಿಗೆಯ್ದ್ದಶೋಕೆಯೊಳ್
ಕಿಱುಮುಗು[9]ಳ್ಗುಂಜಿ[9]ಯಂ ತಳೆದು ಪೂವಿನ ಬಲ್ಮೊನೆಯಂಬು ಕೈಯೊಳ
ಚ್ಚೈಱಿದಿರೆ ಮೇಚಕಚ್ಛವಿಯ ತಾವರೆಗಂಗಳ ಗಾಣವೆಂಗಳೇಂ
ಮೆಱೆದರೊ ಕೇಳಿಶೈಲಶಿಖರಾವಳಿಯೊಳ್ ಶಬರೀವಿಲಾಸಮಂ ೫೮

(ಅನಂತನಾಥಪುರಾಣಂ ೭-೧೭)

ಸೊಗಯಿಪ ಬಳ್ಳಿಮಾವನಡರ್ದೇಱಿ ತಳಿರ್ಪುದಿದಿರ್ದ ಕೊಂಬುಕೊಂ
ಬುಗಳೊಳಡಂಗಿ ತುಂಬಿಯವೊಲಾಣತಿಮಾಡಿ ಶುಕಾಳಿವೊಲ್ ಕೊದಳ್
ಬಗೆವುಗೆ ಮಾತನಾಡಿ ಪಿಕದಂತೆ ಪುಗಿಲ್ ಪುಗಿಲೆಂದು ಭೂಪನಂ
ನಗಿಸಿದರಲ್ಲಿ ಜವ್ವನದ ಸೊರ್ಕಿನಳುರ್ಕೆಯ ನೀಱೆಯರ್ ಕೆಲರ್ ೫೯

1 ವಿಲೋಲ (ಕ ಖ ಬ) 2 ರಾಜಿ (ಕ ಖ ಬ) 3 ದ (ಖ ಬ) 4 ಕ್ಕಿ (ಅ)
5 ಟ್ಟಿಯೊ (ಅ) 6 ಕ (ಅ) 7 ಱಿ (ಕ) 8 ಚಾರಿಣಿ (ಕ ಖ ಬ) 9 ಳಂಜೆ

ನಿಱಿ ಸೊಪ್ಪಾದುದು ಕೋಡಗಂ ಸೆಳೆದುದೇ ಮ್ಮೈ ಬಾಸುೞಿೞೀಱ್ಪಿನ್ನೆಗಂ
ಪಱಿದತ್ತಕ್ಕಟ ಪೊಕ್ಕು ಕೇದಗೆಯ ಪೂಗೊಯ್ಯಲ್ಕೆ ಘರ್ಮಾಂಬುಗಳ್
ತುಱುಗಲ್ಗೊಂಡವು ತಂಗೆ ಬಲ್ಲಿತೆ ಬಿಸಿಲ್ ಪೂದೋಂಟದೊಳ್ ನಿನ್ನನೆಂ
ದಱಿದುತ್ಸಾಹಿಯಳಂಕೆಗೆಯ್ದು ಸಖಿಯಂ ತನ್ನಂಗಿ ಕ[1]ಣ್ಬೆ[1]ಱಿದಳ್ ೬೦

ಎಳಮಾವಿನ ತಳಿರ್ವೂವಿನ
ಗಿಳಿ ಚಿಲಿಪಿಲಿಯೆಂದೊಡಾ ಮರಂ ಜಗಳಕ್ಕೆ
ವ್ವಳಿಸಿದಪುದೆಂದು ಭಯದಿಂ
ತಳಿರ್ಗೊಯ್ಯ[2]ದೆ[2] ಪಿಂಗಿ ಮುಗ್ಧೆ ನಗಿಸಿದಳೊರ್ವಳ್ ೬೧

ಗಿಳಿ ಸೆಳೆಯೆ ತಳಿರನೆಲೆವಱಿ
ಗಳ ಕಾಯ್ಗಳ್ ಪೊಳೆಯೆ ಚೂತಲತೆ ಪೋಲ್ತತ್ತಂ
ಚಳಮನಳಿಪಿಂದಲಿನಿಯಂ
ಸೆಳೆಯೆ ಕುಚಂ ಪೊಳೆಯೆ ಮುರಿದು ನಿಂದಂಗನೆಯಂ ೬೨

ಕುರುವಕಮುಂ ಘನಸ್ತನದ ಸೋಂಕಿನೊಳುಳ್ಳಲರ್ವಂತಿರಾಳಿಯಂ
ಕರುವಿಡೆ ಕೂಡೆ ಕಂಡು ದರಹಾಸದಿನಾಕೆಯ ಚಿತ್ತವಲ್ಲಭಂ
ಪುರುಡಿಸಿ ಕಯ್ಯೊಳಿರ್ದ ಸರಸೀಜಮನಂಟುಮುಗುಳ್ಚಿ ಬೆರ್ಚಿ [3]ತಾ
ವರೆಯಿಸಟಿೞ್ಬೊಟ್ಟ[3]ನಿಟ್ಟಸುಕೆಯೊ[4]ಳ್ಕೆಳಿರಲ್[4] ಪಡೆದಳ್ ಪ್ರಸಾದಮಂ ೬೩
(ಅನಂತನಾಥಪುರಾಣಂ ೭-೧೯)

ತರಳಾಪಾಂಗದಿನಾ ನೃಪಾಲತಿಲಕಂ [5]ಮ್ಮೈವೆತ್ತರಲ್ದಂ ಪ[5]ಯೋ
ಧರಸಂಘಟ್ಟದೆ ಕಾಮು[6]ಕಾಕು[6]ರವಕಂ ಸೊಂಪೇಱಿ ವಾಮೇತರೇ
ತರಪಾದಾಹತಿಯಿಂದಶೋಕನೊಲವಿಂದಂ ತಳ್ತು ಸಂತಂ ನಿರಂ
ತರಮುದ್ಯಾನವಿನೋದಮಂ ಸಲಿಸುವಂ ಭೂಕಾಂತನಾ ಕಾಂತೆ[7]ಯೊಳ್[7] ೬೪
(ಅನಂತನಾಥಪುರಾಣಂ ೨-೧೮)

ದಳಿತಾಂಭೋಜಾತವಕ್ತ್ರಶ್ವಸಿತಪರಿಮಳಂ [8]ಭ್ರೂಲತಾ[8]ಕ್ಷೇಪಲೀಲಾ
ವಳಿತಾಪಾಂಗಾನುರಾಗಂ ಮಧುರಫಳರಸಾಸ್ವಾದ್ಯಹೃದ್ಯಾಧರಂ ಕೋ
ಮಳೆಯೊಳ್ ಸಂಭೋಗದೊಳ್ ಸಂಧಿಸೆ ನೃಪನ ಮನೋಜಾತಕೀರಂ ವಚಃಕೋ
ಕಿಳಮಾಲೋಕದ್ವಿರೇಫಂ ತಣಿವುವೆಳಸಿ ತತ್ಪ್ರೇಮಕಾಂತಂ [9]ನಿತಾಂತಂ[9] (?) ೬೫
(ಅನಂತನಾಥಪುರಾಣಂ ೨-೧೬)

---

[1] ಣ್ಬೇ (ಖ ಬ) [2] ಲೆ (ಖ ಬ) [3] ಕಾತರೆತಳಿರ್ವೊಟ್ಟ (ಅ) [4] ಳ್ದೞಿರಂ (ಅ)
[5] ಮುಯ್ಯಾಂತರಲ್ದುತ್ಪ (ಅ) [6] ಕೋತ್ಕು (ಅ) [7] ಯು (ಅ) [8] ಕೋರಕಾ (ಕ ಖ ಬ)
[9] ವಸಂತಂ (ಅ)

ಗಳದೊಳ್ ತೋಳಮೊದಲ್ ಪಳಂಚೆ ಕಟಿಯೊಳ್ ವೃತ್ತೋರು ತಳ್ಪೊಯ್ಯೆ ಪೆ
ರ್ಮೊಲೆ ವಕ್ಷಃಸ್ಥಲಮಂ ಪ[1]ಳಂಚಲೆಯೆ ತೂಱ[1]ಲ್ಗೊಂಬಿನೊಳ್ ತೋರ್ಪ ಗೊಂ
ಚಲ ಪೂವಿಂಗೆ ಲತಾಂಗಿ ನಿಳ್ಕುವಿನಮೋಪಂ ಲೀಲೆಯಿಂದೆತ್ತಿ ವೃ
ಕ್ಷಲತಾಲಿಂಗನಭಂಗಿಭಾವರಸಮಗ್ನಸ್ತಂಭವಮಂ ತಾಳ್ದಿದಂ ೬೬

(ಅನಂತನಾಥಪುರಾಣಂ ೭_೧೮)

ಸ್ತನಮುರ[2]ದೊಳು[2]ರ್ಚಿತೆನೆ ಮಿಗೆ
[3]ಮೊನಸಿದ[3] ಮೈನವಿರೆ ದಾಂಟಿತೆನೆ ಕೊಂಬಿನ ಪೂ
ವನೆ ತೋಱಿ ತಿಱಿಯಲೆ[4]ತ್ತಿದ[4]
ತನು [5]ಬಿರಿವಿನಮಪ್ಪಿ ವಲ್ಲಭಂ[5] ನವವಧುವಂ ೬೭

(ಲೀಲಾವತಿ ೧೩-೯೬)

ಅನುವಿಸಿ ನನೆದಿಱಿದಪೆನೆಂ
ದಿನಿಯಂ [6][ಬರೆ ಕಂಡು][6] ತೋಳನೆತ್ತದೆ ಕುಚಕುಂ
ಭನ[7]ಖಾಂಕ[7]ದತ್ತ ಲಜ್ಜಾ
ವನತಾನನೆ ನಿಂದ ಭಾವಮಂ ಬಯಸದರಾರ್ ೬೮

(ಲೀಲಾವತಿ ೧೩-೯೮)

ಎಡಗಯ್ಯೊ[8]ಳೊ[8]ಯ್ದು ಮೇಲುದು
ಸಡಿಲ್ದು ಬರೆ [9]ಬದಿಗೆ ಬಳೆದು[9] ನವನಖಪದಮಂ
ಬಿಡುಮುಡಿ ಮುಸುಂಕೆ ಮುಱಿದೇ
ನುಡಿದಳೊ ಕುಡಿದಳಿರನಲಘುಕುಚೆ ಪತಿಯಿದಿರೊಳ್ ೬೯

(ಲೀಲಾವತಿ ೧೩_೯೯)

ಒಂದು ಕುಚಮುರ[10]ಮನು[10]ರ್ಚಿರೆ
ಚಂದನಧವಳಿತನನಪ್ಪಿ ಪೂಗೊಯ್ದಳ್ ತ
ಳ್ತಿಂದುಧರನಂಗದಿಂ ಮುಳಿ
ಸಿಂದಂ ಮಿಗೆ ಮುರಿದು ಮಗುಳ್ದ ಗಿರಿಜೆವೊಲೊರ್ವಳ್ ೭೦

(ಲೀಲಾವತಿ ೧೩-೧೦೨)

ಕರಮೆಸೆದವು ಲತೆಗಳನೆ
ಟ್ಟಿರದಿಂ ಪಚ್ಚೆಲೆಯ ಹೊದಕೆ ಬೆಳ್ವಾಳದ ಬೇರ್
ಸಿರಿಖಂಡದ ವಳಯಂ ಕ
ರ್ಪೂರವಳುಕಿನ ಜಗಲಿ ಕೇತಕೀರಜದ ಮುಟಿಲ್ ೭೧

---

1 ಛುಂಕೆ ತಿಱಿಯಲ್ ವೇ (ಅ) 2 ಮನು (ಕ ಖ ಬ) 3 ಮನಸಿಜ (ಅ) 4 ತ್ತನೆ (ಅ) ... ಜಿಗಿಪಿನಮಪ್ಪಿಯಭಿಮತಂ (ಅ) 6 ತರೆಬಂದು (ಅ ಕ) ಕರೆಬಂದು (ಖ ಬ) 7 ಲೋಕ ... ಖ ಬ) 8 ಳಾ (ಕ ಖ ಬ) 9 ಬರಿಗೆ ಬಳೆದು (ಅ) ಬದಿಗಬಳೆ (ಖ ಬ) 10 ದೊಳು (ಅ)

ಬಿಸಿಲ್ಗೆಯ್ದೆ ಪಸಲೆಗವಿದುದು
ಪಸುರ್ವೆಳ[1]ಗಿಂದೆ[1] ನಿಪ ಬಾಳಕದಳೀವನ[2]ದೊಳ್[2]
ಬಿಸರುಹದಳಂಗಳಿಂದಂ
ಮಿಸುಕದ ಹಿಮಗೃಹಮನವನಿಪಾಲಂ ಕಂಡಂ ೭೨
(ಕಾದಾಂಬರಿ ಉ.ಭಾ; ೨೦೯)

ಒದವಿದ ತೋರಮಲ್ಲಿಗೆಯ ಹಾರದ ಸೂಸಕದಿಂದೆ ಸಿಂಧುವಾ
ರದ ಚಮರೀಜದಿಂ ಕುಮುದದುಜ್ವಲಮಾಲಿಕೆ[3]ಯಿಂದೆ[3] ಪುಂಡರೀ
ಕದ ಕಿಱುಗಂಟೆಯಿಂದೆ ಸಹಕಾರದ ಕೆಂದಳಿರಿಂದೆ ಚೆಲ್ವುವೆ
ತ್ತುದು ಕದಳೀದ್ರುಮಂ ಗ್ರಥಿತಸೌಂದರಮಂಡನಕಾಳಿಕವ್ರಜಂ ೭೩
(ಕಾದಂಬರಿ ಉ. ಭಾ ; ೨೧೩)

ನಗಿಸುವ ಕೋಡಗಂ ನೆರೆದು ನೋಡುವ ದೀಹದ ಹುಲ್ಲೆ ಸೋಗೆಯಂ
ನೆಗಪಿ ತುಡುಂಕಿ ಮೆಟ್ಟುವ ನವಿಲ್ ಕಳಕೂಜನೆಗೆಯ್ವ ಪಾರಿವಂ
ನಗುವ ಶುಕಾಳಿಯಾಡುವ ಕುರಂಗವಡಂಗುಱುಚಾಟನುಂ ಪ್ರಿಯ
ಗೊರ್ಗೆಯಿಪವಂಗಜನ್ಮನ ಬೆಸಂಬಡೆದಂತೆ ಲತಾಗೃಹಂಗಳೊಳ್ ೭೪

ಎಲೆ ಜಲಜಾಸ್ಯೆ ನಿನ್ನ ನಯನೋತ್ಪಲಮಂ ಮಱುದುಂಬಿ ಪತ್ತುವಿ
ತ್ತಲೆ ಕವಿತಪ್ಪುವೆಂದವಳ ಕಣ್ಗೆ ನಿಮೀಲನಮಂ ನಿಮಿರ್ಚಿ ಕಾ
ದಲಳದರಾಗ್ರಮಂ ಸವಿದು ಪೀಡಿಸಿತೀಕೆಯ ವಕ್ತ್ರಪದ್ಮಮಂ
ನಲಿದಳಿಯೆಂದು ತಾಂ ಪುಸಿದನಾಕೆಗೆ ನಲ್ಲಳ ಸೀತ್ಕೃತಂಗಳಂ ೭೫
(ಲೀಲಾವತಿ ೧೩-೧೦೩)

ಮೊಗಮಿಾಸೆ ಬಾರದೋಪರ್
ಸೊಗಯಿಸಿ ಪೆಣ್ಬಾರಿಜನಿಟ್ಟು ಬರೆ ಪೂದಿಱುವ
ಚ್ಚಿಗದಿಂದಮೆಯ್ದೆ ಮೆಚ್ಚಿನ
ಬಗೆಯಿಂ ಸ್ಮರಕೇಳಿಗೆಳಸಿದರ್ ಪುಂಶ್ಚಲಿಯರ್ ೭
(ಲೀಲಾವತಿ ೧೩_೧೦೭)

ಪೊಯ್ದುದು ಮಾಯ್ದಲರ್ ತಿಱಿಯಲೀಯದೆ ಧೂಳಿಯನೆಂದು ಗಾಳಿಯಂ
ಬಯ್ದು ಪರಾಗಮಂ ತೊಡೆಯುತಂ ನಿಡುಗಂಗಳನೊತ್ತಿ ಮುಚ್ಚಿ ಕೋ
ಡೊಯ್ದತೆಮುಗ್ಧವಲ್ಲಭೆಯ ಕಣ್ಬೊಣರಂ ಪತಿ ತುಂಬಿ ಪೀರ್ವವೊಲ್
ನೆಯ್ದಿಲನೂದೆಯೂದಿ ಪರಿಚುಂಬಿಸಿದಂ ನಗುತಂ ನಿಜೇಚ್ಛೆಯಿಂ ೭
(ಲೀಲಾವತಿ ೧೩-೧೦೪)

---

¹ [illegible] (ಕ [illegible]) ³ ಮುಂ (ಕ [illegible]) ² [illegible] (ಕ [illegible])

ಅಲರಾ[1]ಯ್ವಬಲೆಯ[1] ನೊಸಲೊಳ್
ಜಲಜಲಿಸುವ ಬೆಮರನೊರಸಿ ಕಳಿವಿನಿಯನ ಮೆ
ಲ್ಪ[2]ಲೆವ ತಳಿದಲೆ[2]ಪದಿಂ ತಂ
ಬೆಲರಲೆಪಡೆ ಮುಗುಳ್ತ ಲತೆವೊಲೆಯ್ದೆ ಬೆಮರ್ತಳ್ ೭೮

(ಲೀಲಾವತಿ ೧೩-೧೦೫)

ಗಿಳಿಗಳೊಡಗಟಿಪಿ ಮೊರೆವಳಿ
ಕುಳದೊಡಗಾಣಯ್ಸಿ ಪುರುಳಿಯೊಳಗೆಳಸಿ ನವಿ
ಲ್ಗಳ ಬಳಗದೊಳಗೆ ನರ್ತಿಸಿ
ವಿಳಾಸಿನೀನಿಕರಮಾಗಳೀಂ ದಳ್ಳಿಸಿತೋ ೭೯

ಕರಗಮನೆತ್ತು[3]ನೀರ[3]ಳಿಕೆ ಕಾಲ್ತೊಳೆ ಮಾಳಿನಿ ತೀರ್ಚು ಬೋನಮಂ
[4]ಸ[4]ರಳಿಕೆ ಪಾಸು ಗ[5]ದ್ದು[5]ಗೆಯನುತ್ಪಳಿನೀ ಕೆಲಕೊತ್ತು ಚಿತ್ರಿಕೇ
ಪರಿಯಣಮಂ ನೃಪೇಶ್ವರಿಯನಾರೊಗಿಸಲ್ ಕರೆ ಮಂಜುಘೋಷೆಯೆಂ
ದರಸಿಗೆ ಬೋನಮೆತ್ತಲುಲಿದ[6]ತ್ತು ವನಾಂತದೊಳಂಗನಾಜನಂ[6] ೮೦

(ಅನಂತನಾಥಪುರಾಣಂ ೪-೮೫)

ಕರಿರಿಪು ಪೀಠಮಂ ತೊಡೆದು ಪಾಸುವ ಕತ್ತುರಿನೀರಧಾರೆಯಂ
ಪರಪುವ ಮುತ್ತಿನೆಕ್ಕಸರಮಂ ಕಡೆಯಿಕ್ಕುವ ಪಾರಿಜಾತದೊ
ಳ್ಪರಲನುದಿರ್ಚುವಿರ್ತರದ ಗದ್ದುಗೆಯಿಕ್ಕುವ ಸಂಭ್ರಮಂಗಳಿಂ
ಪರಿಮುರಿಯಾಡಿದರ್ [7]ನವಲತಾಗೃಹಪಂಕ್ತಿಯೊಳಂಗನಾಜನಂ[7] ೮೧

(ಅನಂತನಾಥಪುರಾಣಂ ೪-೮೬)

[8]ದೇವಿ[8] ನಿಜವದ[9]ನವಿಧುಗೀ
ತಾ[9]ವರೆ ಸೋಲ್ತತ್ತು ಬಾಯ ತಂಬುಲಮಂ ನೀ
ನೀವುದೆನಿಪಂತೆ ಪಚ್ಚೆಯ
ಕಾವಿನ ಮಾಣಿಕದ ಡವಕೆ[10]ವಿಡಿದಳದೊ[10]ರ್ವಳ್ ೮೨

(ಅನಂತನಾಥಪುರಾಣಂ ೪-೮೪)

ತುಟಿಕಲಡುಗೆಗಳೊಳೀಂ ಪಟಿ
ಗಟಿವೆಯ ಕೂರ್ಟಿವುಡುಗಳೆದ ತೊವರಿಯ ತೊವೆ ಕಾ

---

1 ಯ್ದು ಬಟಿಲೆ (ಅ) 2 ಲೆ ತವಳಲೇ (ಖ ಬ) 3 ಶೀತ (ಅ) 4 ತ (ಅ) 5 ದ್ದಿ (ಅ) 6 ತ್ತಸುರೇಂದ್ರಮುಹುತ್ತರೀಜನಂ (ಅ) 7 ಸುದತಿಯೋಲಗಸಾಲೆಯೊಳಿಂದ್ರಕಾಂತೆಯರ್ (ಅ) 8 ತೀವೆ (ಕ ಖ ಬ) 9 ನೆ ನಡುಗಿತ್ತಾ (ಖ ಬ) 10 ಸೀದದಳೊ (ಖ ಬ)

ಯ್ತಿಱಿಪಿದ ತುಪ್ಪಂ ಕೋಡುವ
ಕಟಿಲಲ್ಲದೆ ದಿವ್ಯಭೋಜನಂ ಪೆಱತುಂಟೇ ೮೩

(ಕಾವ್ಯಾವಲೋಕನಂ ೨೪೧)

ಸಿತಮಿಶ್ರಿತ ಘೃತಪೂರಂ
ಸಿತಮಿಶ್ರಿತ ಸುರಭಿಗಂಧಕದಳಂ ಸದಳಂ
ಸಿತದುಗ್ಧಪೂರಮೆಸೆದಿರೆ
ಸಿತನಿಷ್ಪಿಂಡಮನಭಂಡಮಂ ಮುಟ್ಟುವುದೇ ೮೪

ಬಗಿದಗುಳಿಯೊಂದದಂತೆ ತೆಗೆದಾಱಿಸಿದೋಗರದೊಳ್ ಪೊದಟ್ಟು ಕ
ಮ್ಮಗೆ ಕೆನೆಗೊಂಡ ಗಟ್ಟಿಮೊಸರಂ ಸುರಿದೇಲೆಯಚೂರ್ಣವಿಕ್ಕಿ ಕಾ
ಯ್ದೊಗುಮಿಗೆ ಬೇಳಿಗೆಯ್ದು ಮೆಣಸಂ ತಳಿದಲ್ಲದ ಚಲ್ಲಿಯಂ ಪವ
ಣ್ಬುಗೆ ಕಲಸಿರ್ದ ತಣ್ಗಲಸುಗೂಟನಿಳಾಪತಿಗಿತ್ತನಿಚ್ಚೆಯಿಂ ೮೫

(ಲೀಲಾವತಿ ೫-೭೦)

ಪಿಪ್ಪಲಿ ಚಿಲ್ಲಕಾಯ್ ಮೆಣಸು ಮಾಗುಳಿವೇರ್ ಮೊಳೆಯಲ್ಲಮೇಲೆ ಕ
ಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆಯಂಬಟೆ ನಿಂಬೆ ನೆಲ್ಲಿಗಾಯ್
ಕಪ್ಪುರಗಂಪನೊಪ್ಪಿಸುತಮಿರ್ಪರೆಮಾದುಫಲಂಗಳಾದಿಯಾ
ದುಪ್ಪಿನಕಾಯ್ಗಳಂ ಮಗಮಗಿಪ್ಪುವನಿಕ್ಕಿದನಬ್ಜಪತ್ರದೊಳ್ ೮೬

(ಲೀಲಾವತಿ ೫-೭೧)

ಗಾವಟೆ ಬೆಲ್ಲವತ್ತ ವರ ಮಾದಲವಂಬಟೆ ಚಿಲ್ಲು ಚೆಳ್ಳೆಗಾ
ಯ್ಮಾವಿನ ಕಾಯ್ಗಳೊಪ್ಪುವರಗಪ್ಪುರಮಾಗುಳಿಗಳ್ ಸುಧಾರಸಂ
ತೀವಿರೆ ಕಂಪು ಪೊಂಪುಳಿಸೆಯುಪ್ಪಿನಕಾಯ್ಗಳನೇಕಮಂ ಕಲಾ
ಕೋವಿದೆಯರ್ ಕೆಲಂಬರಿಯಲಿಕ್ಕಿದರಿಕ್ಕು ಮಗುಟ್ಟಿದನುತ್ತಿರಲ್ ೮೭

(ನಳಚಂಪು ೪೬೩)

ನಳನಳಿಸುವ ಮೆಣಸಿನ ಕರೆ
ಹುಳಿಯಲ್ಲಂ ಬಿದಿರ ಕಟಿಲೆಯೇಲಕ್ಕಿಕಾಯ್
ಕಳವೆಯ ಕಾಯ್ ನೇರಿಯ ಕಾಯ್
ಮೊಳಗಿನ ಕಾಯ್ ಬೇಱೆ ಬೇಱೆ ಸವಿವಡೆದಿರವೇ * ೮೮

(ನಳಚಂಪು ೪೬೪)

ಕಹಲೆಯು ಬಾಡಿ ಬೆಂದುರುಳಿಗೊಂಡುದು ಸೊಂಡಗೆ ಕೂಡೆ ಸಂಬರಂ
ಬಿಡದಗಸುಂಟುಗೊಂಡುದು ಪೊಸರ್ ಕೆನೆಗೊಂಡುದು ತುಪ್ಪಮಿಂಪನೊಂ

* ಈ ಪದ್ಯ (ಕ) ಪ್ರತಿಯಲ್ಲಿಲ್ಲ

ದೆಡೆಗೆ ತೆಂಳ್ಪಿ ಕಂಪನೊಳಕೊಂಡುದು ಬಣ್ಣಿಸಿ ಪೇೞ ಚೆಲ್ವನ
ಪ್ಪಡಿಗೆಗಳೆಲ್ಲಮಿಲ್ಲಿ ದೊರೆಕೊಂಡಪುವೇನುಣಿಶೊಳ್ಳಿತಾದುದೋ ೪೯

ಗರಗರಣಾದುದು [1]ಕೂೞ್ ನೆಯ್
[2]ಸು[2]ರಯಿಯು[1] ಕಂಪಾಯ್ತು ಸಟ್ಟುಗಕ್ಕಂ ಮೊಸರ್ಗಂ
ಪಿರಿದುಂ ಪೋರ್ಕುಳಿಯಾದುದು
ಕರಮಿನಿದಾಯ್ತುಜಕೆ ಹೊದಕನಲ್ಲದೆ ಹೊರಕಂ ೫೦

ರಸನೊಸರ್ವಂತಿರೆಯ್ದೆ ಪೊಸತಪ್ಪ ವಿನೋದದೊಳೆಯ್ದೆ ಸಂತಸಂ
ಮುಸಗುವೊಲಂತಿರುಂಡು ಸಿರಿಗಂಧದ ಕರ್ಪುರದೊಂದು ಕೊೞಗ್ಗಸರ್
ಮುಸಗುವ ನೀರದೊಂದು ಪುರುಷಂ ಬೆರಮುತ್ತಿಳಿಪಿರ್ದುದ ವೀಳ್ಯದ ನೀ
ಳ್ದುಪಿರ್ದುಪಿರ್ದಿಂಟದೇವ ಪೇೞತೇಂ ನುಡಿ ಸಂತಸದಂತನೆಯ್ದರೇ ೫೧

ಪೊತ್ತದೆ ಪೊಗೆಸುತ್ತದೆ ನಸು
ಬತ್ತದೆ ಕೆಂಪಡರ್ದು ಬೆಂದ ಪಾಗಲ ಕಾಯಂ
ಪತ್ತೆಂಟು ತುತ್ತಿದಲ್ಲದೆ
ಚಿತ್ತಂ ತಣಿಗುಮೆ ಸರಸ್ವತೀಮಣಿಹಾರಾ ೫೨

ಬೆಳ್ಳಿಯ ಬೆಳ್ಪನಾವರಿಸಿ ಶಂಖದ ವರ್ಣಮನೌಂಕಿ ಕರ್ಪುರ
ಕ್ಕುಳ್ಳ ಗುಣಂಗಳಂ ತೊಱಿಸಿ ಮಲ್ಲಿಗೆಯೊಳ್ ಸಮನಾಗಿ ತೋರ್ಪ ನೀ
ರುಳ್ಳಿಯ ಗಡ್ಡೆಯಂ ಮನದೊಳಟ್ಟಿ ಯೊಳಾವಗಮೊಂದುತಟಿಕ್ಕಿಯಂ
ಚಲ್ಲಿಸಿ ಚಾಜಿಯಂ ಕಲಸಿ ಮೆಲ್ಲದ ಮಾನವನೇನಬಲ್ಲವಂ ೫೩

ಏಗೆಟ್ಟುದೆಂದು ಪಱಿಯ
ಲ್ಕಾಗದು ಸತ್ಪುರುಷರಪ್ಪರಿನಿಸಿನಿಸಿಂದಂ
ಮೂಗಿಂಗೆ ಕಂಪನೊದವಿಪ
ದೋಗರದುಳ್ಳಿಯನೆ ಪಱಿದನಸುಗತಿಗಿಱಿದಂ ೫೪

ಮದಗಂದೇಭವಿಳಾಸಯಾನಮ[3]ನತ[3]ಪ್ರೋಡ್ಡೀನಯಾನಂ ತುರಂ
ಗದ[4]ವಲ್ಲಂ[4]ಘಿತಯಾನ[5]ಮ[5]ಶ್ವತರಲೀಲಾಯಾನಮಾಂದೋಳಸಂ
ಮದಯಾನಂ ನೆಱದೊಪ್ಪಿ ರಾಜಗೃಹಮಂ ಪೊಕ್ಕಂ ಪುರಸ್ತ್ರೀಚಲ
ನ್ಮದಿರಾ[6]ಹಾರ[6]ಮರೀಚಿ [7]ಚಿತ್ರಿತಕದಂಬೀಭೂತಮಾಳಿವ್ರಜಂ[7] ೫೫

(ಅನಂತನಾಥಪುರಾಣಂ ೭-೫೫)

---

[1] ಳ್ದುಯ್ಸುರಯಿಯು (ಬ) [2] ಸ್ಮ (ಕ ಖ ಬ) [3] ರದ (ಅ) [4] ವೋಽರಂ (ಅ)
[5] ಪಿ (ಕ ಖ ಬ) [6] ಶಾಂಗ (ಅ) [7] ಬಂದಿದಿಗೊರ್ಳಲ್ ತನ್ನಂ ಮಹೋತ್ಸಾಹದಿಂ (ಅ)

ಓರಂತೆ ಮೆಚ್ಚಿದಂ ಕೃತಿ
ಸಾರವನಕ್ರೀಡನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೯೬

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸು ಧಾ ರ್ಣ ವ ದೊ ಳ್

ವನವಿಹಾರವರ್ಣನಂ ಏಕಾದಶಾಶ್ವಾಸಂ ಸಂಪೂರ್ಣಂ

# ಜಲಕ್ರೀಡಾವರ್ಣನಂ

ಬೆಮರಂ ವಾರಿವಿಲಾಸಮಂ ಸಲಿಲಧಾರಾಯಂತ್ರಮಂ [1]ವಾಃ[1]ಪ್ರವೇ
ಶಮನಾಲೇಪನ ಕಂಪನಂ [2]ಮುಳಿಸು ಲೀಲಾ[2]ಯುದ್ಧಮಂ ಕಾಮಿನೀ
ಶ್ರಮಮಂ ಮೂಡಿ ಮುಱುಂಗುತಿರ್ಪ ಪರಿಯಂ [3]ಮೆಯ್ಯ್ಯುರ್ಬುವಂ ಚೆಲ್ವು[3]ಮಂ
ಕ್ರಮದಿಂದಂ ಪೊಱಮಟ್ಟು ನಿಂದ ನಿಲವಂ ಪೇೞ್ವರ್ ಜಲಕ್ರೀಡೆಯೊಳ್ ೧

ವನಲಕ್ಷ್ಮೀಶತಮುಂಗಜಂಗೆ ಶತಸಾಹಸ್ರಪ್ರಸೂನೇಕ್ಷುಚಾ
ಪನಿಕಾಯಂಗಳನೀವವೊಲ್ ತರುಣಿಯರ್ ತಂದಿತ್ತು[4]ವಂ[4] ಪುಷ್ಪಮಂ
ಡನಮಂ ತಾಳ್ದಿ ಸರೋವರಕ್ಕೆ ತಳರ್ದಂ ವಾಃಕೇಳಿ[5]ಶಕ್ರಪ್ರಭೂ
ಪನ ತಾಮ್ರ[5]ದ್ವಿಪದಂತಿರುನ್ನಮಿತಯಾನಂ ರತ್ನಮಾಲಾನ್ವಿತಂ ೨

(ಅನಂತನಾಥಪುರಾಣಂ ೭-೨೪)

ನೆಲೆಮೊಲೆ ಪೊಣರ್ವಕ್ಕಿಗಳಂ
ವಳಿ ವಳಿಗಳನಾಸ್ಯಬಿಂಬಮಂಬುರುಹಮನ
ಗ್ಗಲಿಸೆ ಕಲಹಂಸಯಾನೆಯ
ರಲರ್ಗೊಳನಲರ್ಗೊಳಕೆ ಬಿರ್ದುವಂದಂತಿರ್ದರ್ ೩

(ಅನಂತನಾಥಪುರಾಣಂ ೭-೨೬)

ವನಕೇಳೀಶ್ರಾಂತಕಾಂತಾಜನದ ಮುಖಸರೋಜಂಗಳೊಳ್ ಪಾಯ್ದು ತುಂತು
ರ್ವನಿಯಂ ಪೀಱುತ್ತೆ ಮತ್ತ[6]ಶ್ರ[6]ಮಸುರಭಿಪಯೋಬಿಂದುವಂ ತಂದು ನೀರ್ವೂ
ವಿನ ಕಂಪಂ ಕೊಟ್ಟು ಪರ್ಬಿತ್ತಭಿನವಮಧುರಾಮೋದನಿಃಶ್ವಾಸದಿಂ ತ
ಣ್ಣನೆ ತೀಡಿ[7]ತ್ತೊಂ[7]ದು ಭೃಂಗದ್ವಿಗುಣಿತಗಣಿಕಾಕೇಶಭಾರಂ ಸಮೀರಂ ೪

(ಲೀಲಾವತಿ ೧೩-೧೧೩)

ಅಳಿಗಳ ರತ್ನಕದಂಬದ
ಬೆಳಗಿಂ ಬಹುವರ್ಣಜಲಮನಾಂತ ಕಟಾಹಂ
ಗಳ ನಡುವೆ ಪೆತ್ತ ಮಱಿಯಂ
ಪಿಳುಗಾಡಿಸುವಂತೆ ಸರಸಿ ಪಡೆದುದು ಚೆಲ್ವಂ ೫

(ಅನಂತನಾಥಪುರಾಣಂ ೭-೨೫)

---

[1] ವಾರಿ (ಅ. ಕವಿಜ) [2] ತುಮುಳಿಲಾ (ಖ ಬ) [3] ಮೇಲ್ಪಟ್ಟವರ್ಣಶ್ರಮಂ (ಖ ಬ) [4] ಮುಂ (ಖ ಬ) [5] ಶಕ್ರಾಭ್ರಮೂಪನತಾಭ್ರ (ಅ) [6] ಭ್ರ (ಅ) [7] ತ್ತಂ (ಅ)

ಹರಿನೀಲೋಪಲಪಟ್ಟಿಕಾಘಟಿತ ಸೋಪಾನಂಗಳೊಳ್ ತೀರಮಂ
ದರ ಕಲ್ಲೋಲವಿಲೋಲಮಾಳಿಕೆಗಳೊಳ್ ಕಾಂತಾಪ್ರತಿಚ್ಛಾಯೆ ತ
ಳ್ತಿರೆ ಕಾಸಾರಮಿದಲ್ಲದಲ್ಲದು ಮನೋಜಬ್ರಹ್ಮನಿರ್ಮಾಣನಂ
ತರುಣೀರತ್ನಮಹಾನಿಧಾನಮೆನೆ ಕಣ್ಗಿಂಬಾಯ್ತು ಪದ್ಮಾಕರಂ ೬

(ಅನಂತನಾಥಪುರಾಣಂ ೬.೩೨)

ಬನದೊಳಗುಳ್ಳ ಹಂಸೆ ಗಿಳಿ ಕೋಗಿಲೆಯೆಂಬಿವು ಮೆಚ್ಚಿ ಬಂದುವಂ
ಗನೆಯರ ಭಂಗಿವೆತ್ತ ನಳಿತೋಳ್ಗಳಿಗೆಂಬಿನಮೇಂ ಸರೋಜಲೋ
ಚನೆಯರ ಕಯ್ಯೊಳೊಪ್ಪಿದುವು ಮುತ್ತಿನ ಸುತ್ತಿನ ಪಚ್ಚೆಸಾರದ
ಚ್ಚಿನ ಹರಿನೀಲಮಾಲಿಕೆಯ ಸಂಘಟನಾಜಲಯಂತ್ರಸಂಕುಲಂ ೭

(ಅನಂತನಾಥಪುರಾಣಂ ೬.೩೬)

ಅರಗಿಳಿಯಂಚೆ ಕೊಂಚೆ ಪೊಣರ್ವಕ್ಕಿ ಕುಕಿಲ್ ನವಿಲಬ್ಜಮುತ್ಪಲಂ
ಕರಿ ತುರಗಂ ಗಜಾರಿ ಮಕರಂ ಮೃಗಮೆಂಬಿವಱೊಂದು ಮಾಟಿಕೆಯಿಂ
ಪರಿಜಳವಟ್ಟ ಜೀರ್ಕೊಳವಿಗಳ್ ಕರಪಲ್ಲವದೊಳ್ ವಿಳಾಸಮಂ
ಧರಿಯಿಸೆ ಜಂತ್ರಕಾರ್ತಿಯರವೊಲ್ ನೃಪಕಾಂತೆಯರಾದಮೊಪ್ಪಿದರ್ ೮

ಕಡುನೀಱ ಜಂತ್ರದಂಚಿಯ
ನಡಿಗಡಿಗಾ ನೀರೊಳದ್ದಿದಳ್[1] ನಡೆಯೊಳ್ ತಾಂ
ಗಡಣಂ[1] ಬರೆ ಪುರುಡಿಪುವೆ
ನ್ನೊಡ[2]ನೆಂದೊಯ್ದೊಯ್ದು[2] ಪುಡುಕುನೀರದ್ದುವವೊಲ್ ೯

(ಮಲ್ಲಿನಾಥಪುರಾಣಂ ೬-೧೧೦)

ನೆಲೆಯಂ ನೋಡಿಸಿ ಮುನ್ನ ನೋಡಿದವರಿಂ ಮುತ್ತಾ ಮನಶ್ಶಂಕೆಯಿಂ
ಮಲರುತ್ತುಂ ಸಖಿಯರ್ಕಳಂ ಪಿಡಿಯುತುಂ ನಿಂದೂರುಮಂ ಪೊಕ್ಕು ಜ
ಕ್ಕುಲಿಸುತ್ತುಂ ತೊಡೆತುಂಬಿ ಮೆಯ್ಯುಗಿವುತುಂ ಮೈದೋರ್ಪ ಮೀಂಗಂ ವಲಂ
ಕಿಲೆನುತ್ತುಂ ಕಡುಗಾಡಿ ಮಿಕ್ಕ ಕೊಳನಂ ಪೊಕ್ಕರ್ ಕೆಲರ್ ಬಾಲೆಯರ್ ೧೦

ಇಱಿದೊಡೆ ಕೂರದ ಪೆಂಡಿರ
ಕೆಱಗಾದಪೆವೆಂದು ರತ್ನಸೋಪಾನಕದೊಳ್
ಗಱಗಱನಿೞಿಯದೆ ಬಾಣಿತಿ
ಪೊೞಿಮೆಟ್ಟುವ ತೆಱದಿ ಗುಜ್ಜು ಮೆಟ್ಟುವರರೆಬರ್ ೧೧

(ಅನಂತನಾಥಪುರಾಣಂ ೬.೩೪)

1 ನಡೆಯೊಳ್ ಗತ ನಾಣ್ಚದೆ (ಅ) 2 ನೆಂದುಯ್ದಲ್ಲಿ (ಅ) ನೊಡನೆಂಡೊಯ್ದು (ಕ)

ಬಕ ಕು[1]ರ[1]ರ ಪಕ್ಷವಿಕ್ಷಿ
ಪ್ತ ಕಂಜಕಿಂಜಲ್ಕಪುಂಜ ಪಿಂಜರಿತಾಜ್ಞೋ
ದಕ ಪರಿಪೂರ್ಣತಟಾಕ
ಪ್ರಕರಸರೋನಿಕರರಂಜಿತಾಶಾವ[2]ಲ[2]ಯಂ ೧೨

(ಆದಿಪುರಾಣಂ ೧-೫೮; ಕಾವ್ಯಾವಲೋಕನಂ ೫೧೬)

ಜಳಪಕ್ಷಿವ್ರಾತ ಕೋಲಾಹಲವೊಗೆವಿನೆಗಂ ಪಕ್ಕವಾದ್ಯಂಬೊಲುದ್ಯ
ನ್ನಳಿನೀಕಿಂಜಲ್ಕಪುಂಜಾವೃತಿ ಜವನಿಕೆವೊಲ್ ಪಿಂಗೆ [3]ಭೃಂ[3]ಗಾಳಿಯಿಂ ಪೂ
ಗೊಳನಂ ಪೊ[4]ಕ್ಕಂತು[4] ರಂಗಂಬುಗುವ ತೆಱದೆ ನೇತ್ರಪ್ರಭಾಜಾಲಪುಷ್ಪಾಂ
ಜಳಿಯಂ ಸೂಸುತ್ತೆ ಕಾಂತಾಜನಮದು ಜಲಕೇ[5]ಳ್ಯುಜ್ವಲಲ್ಲಾಸ್ಯ[5]ಲೋಲಂ ೧೩

(ಲೀಲಾವತಿ ೧೩-೧೧೫)

ಸೆಳೆ[6]ದು[6] ಮುರ[7]ಲ್ಚಿ[7] ಸೋಗೆನಿಱಿಯಂ ಮೃದುಜಂಘೆಯನೊಯ್ಯನಂ[8]ಟೆ[8] ಮೈ
ಪುಳಕಿಸಿ ಸೋಂಕಿ ನುಣ್ದೊಡೆಯ ಮೆಲ್ದ[9]ಳ[9]ಮಂ ಬಿಡೆ ತಳ್ತು ಮಧ್ಯಮಂ
ಕಳಶಕುಚಂಗಳಂತ[10]ರದೆ[10] ಪೊ[11]ಕ್ಕು[11]ಳಿವಲ್ಲಿ ತರಂಗಹಸ್ತದಿಂ
ಮಳಯಸಮೀರಣಂ ಸರಸವಾಡಿದನಗ್ಗದ ಪೆಂಡವಾಸಮಂ ೧೪

(ಅನಂತನಾಥಪುರಾಣಂ ೭-೩೩)

ತೆರೆಗಯ್ಯಿಂ ತುಡುಕುತ್ತುಮೊಳ್ದೊಡೆಯನಾದಂ ನೀವಿಯಂ ನೀವಿ ಬಿ
ತ್ತರಿಸುತ್ತುಂ ವಳಿಯಂ ಪಳಂಚಲೆಯುತುಂ ವಕ್ಷೋಜಮಂ ನಿಳ್ಕಿ ನೇ
ವರಿಸುತ್ತುಂ ನೆಲೆವೆರ್ಚೆ ಕಾಮುಕನವೊಲ್ ನೀರೇಱುತಿರ್ದತ್ತು ತ
ತ್ತರುಣೀಸಂಕುಳಮೆಲ್ಲಮೀಗಳೊಳಗಾಯ್ತೆಂಬಂತೆ ಪದ್ಮಾಕರಂ ೧೫

(ಚಂದ್ರಪ್ರಭಪುರಾಣಂ ೭-೧೨೬)

ಇದು ಪಿರಿದುಂ ವಸಂತ[12]ಸಖ[12]ಯೌವನರತ್ನನಿಧಾನಮಂತದ
ಲ್ತಿದು ಕುಸುಮಾಸ್ತ್ರಶಸ್ತ್ರಚಯಕೋಶಮ[13]ಹೀ[13]ಗೃಹಮಂತದಲ್ತು ಮ
ತ್ತಿದು ರತಿನಾಥಕಲ್ಪಲತಿಕಾಪ್ರ[14]ಕರ್ಷೆ[14]ಕ ಕೃತಾಲವಾಲಮೆಂ
ಬುದನೆನಿಸಿತ್ತು ಸಂದಣಿಸಿ ನಿಂದಬಲಾವಳಿಯಿಂದೆ ಪೂಗೊಳಂ ೧೬

(ಚಂದ್ರಪ್ರಭಪುರಾಣಂ ೭-೧೩೭)

ಕೀರದ ಹಂಸದ ಪಿಕದ ಚ
ಕೋರದ ಚಕ್ರಾಹ್ವದಂತೆ ಮಾಡಿದ ಗರುಡೋ

---

[1] ಕ (ಕ ಖ ಬ) [2] ಳಿ (ಖ ಬ) [3] ಸುರ್ಯ್ (ಅ) [4] ಕ್ಕರ್ತ (ಖ ಬ) [5] ಳೀಚಲಲ್ಲಾಸ್ಯ (ಖ ಬ) [6] ಪ (ಖ ಬ) [7] ಲ್ಜ (ಕ ಖ ಬ) [8] ಟೆ (ಅ) [9] ಡ (ಅ) [10] ಳೆದು (ಅ) [11] ಕ್ಕಿ (ಅ) [12] ಸಖಿ (ಅ) ಸಿಖಿ (ಕ) [13] ಹಾ (ಖ ಬ) [14] ಮುದ್ಯೆ (ಕವಿಚರಿತೆ ಸಂ ೧-೩೭೮)

ದ್ದಾಗರದ ಮುತ್ತಿನ ನೀಲದ
ಹೀರದ ಮಾಣಿಕದ [1]ಪೊಳೆವ[1] ಜೀರ್ಕೊಟಿವೆಗಳಂ ೧೭

(ಚಂದ್ರಪ್ರಭಪುರಾಣಂ ೭-೧೨೮)

ಚರಣೋಪಾಸನೆಗೆಯ್ದು ಮೆಲ್ಲನೆ ಕಟಾಂತರ್ಭಾಗ[2]ದಿಂ[2]ದೂರುವಂ
ಶೆರೆಗಯ್ಯಿಂ ಪೊಡೆದೇಱನೂಂಕಿ ಪುಳಕಶ್ರೀಯಂ ತ[3][ನೂಲೇ][3]ಖೆಯೊಳ್
ನರನಾರೀಜನಕುಂಟುಮಾಡಿ ಸಲಿಲಕ್ರೀಡಾಸಮುದ್ಯೋಗದೊಳ್
ಸುರತೋದ್ಯೋಗಿಯ ಮಾಟಿಕ್ಕಯಿಂದೆ ಕಡುಚೆಲ್ವಂ ತಾಳ್ದುದಬ್ಜಾಕರಂ ೧೮

ನಿಱಿಯಂ ಸೂಸಿ ಕಲಂಕಿ ನುಣ್ಪೊಡೆಗಳೊಳ್ ಕಯ್ಸಿಕ್ಕಿ ಮೆಯ್ವೆರ್ಚುತುಂ
ಪೊಱವಾಱಂ ಪರಿದೇಱಿ ಪೊಕ್ಕು ಪೊಕ್ಕುೞಿಕೊಳಪೊಕ್ಕೆಯ್ತಂದು ಸವ್ಯಾನಮಂ
ತೆಱೆದುತ್ತುಂಗ ಕುಚಾಗ್ರಮಂ ತುಡುಕಿ ಗಾಢಾಲಿಂಗನಂಗೆಯ್ದು ಕೈ
ಸೆಱೆಗೊಂಡತ್ತು ತರಂಗಸಂಹತವಿಟಾನಂಗೋದ್ಭವಕ್ರೀಡೆಯಂ ೧೯

ತುಡಿಸುತ್ತುಂ ನೀರನಂಗದ್ಯುತಿಯಿನವಯವಚ್ಛಾಯೆಯಿಂ ತಮ್ಮನಂದಿ
ರ್ಮುಡಿಸುತ್ತುಂ ನೇತ್ರನೀಲೋತ್ಪಲದ ನೆಟಿಲ ಬಂಬಲ್ಗಳಿಂ ನೆಯ್ದಿಲಂ ನೂ
ರ್ಮುಡಿಸುತ್ತುಂ ವಕ್ತ್ರಕಂಜಂಗಳೊಳೆ ಕಮಲಪುಂಜಂಗಳಂ ಕೂಡೆ ಸಾಸಿ
ರ್ಮುಡಿಸುತ್ತುಂ ಪೊಕ್ಕುದಬ್ಜಾಕರಮನೊಲವಿನಿಂ ಕಾಂತಕಾಂತಾಕದಂಬಂ ೨೦

(ಲೀಲಾವತಿ ೧೪-೧೧೬)

ಲಲನೆಯರ ನೊಸಲ ಕದಪಿನ
ಮೊಲೆಗೆಲದ ಪೊದಟ್ದ ಬೆಮರಬಿಂದುಗಳಾಗಳ್
ಜಲಕೇಳಿಗೆಳಸಿದುದನಱಿ
ಗಲಿಪಲೊಡಂ ತಳೆರ್ದು ಕೊಳಕೆ ನೃಪಕಳಹಂಸಂ ೨೧

ತೆರೆಗಳ್ ವಕ್ಷೋಜಘಾತಕ್ಕಗಿದು ತೆಗೆವವೋಲ್[4]ಮೀ[4]ಱಿ ಮರ್ಯಾದೆಯಂ ವಾ
ರಿರುಹಂಗಳ್ ವಕ್ತ್ರಚಂದ್ರಪ್ರಭೆಗೆ ಬೆ[5]ಗಡು[5]ಗೊಂಡಂತೆ ನೀರೊಳ್ ಮುೞುಂಗು
ತ್ತಿರೆ ಹ[6]ಸ್ತಾಂಭೋಜದಿಂ[6]ದುತ್ಪಲದಳಿಕುಳಮಂ ಸೋವುತುಂ [7]ಪೊ[7]ಕ್ಕುದಬ್ಜಾ
ಕರಮಂ ಕಾಂತಾಜನಂ ಪೆರ್ಚಿ[8]ಸುತುಮುಲಘುಕಾಂಚೀಪದಾಪೂರದಿಂದಂ[8] ೨೨

(ಲೀಲಾವತಿ ೧೪-೧೧೭)

ನಿಱಿ ತೆಕ್ಕಿದರಳೆ ತೆರೆಗಳ್
ಪೊಱವಾಱಂ ಭೋಂಕನಪ್ಪೆ ಘನನುಣ್ಪೊಡೆಯಂ

---

[1] ಪಲವು (ಖ ಬ) [2] ಮಂ (ಕ) [3] ನುರ್ಲೆ (ಕ ಖ ಬ) [4] ನೀ (ಅ ಖ) [5] ಡಗು (ಬ) [6] ಸ್ತಾಬ್ಜಂಗಳಿಂ (ಅ) [7] ಮಿ (ಕ ಖ ಬ) [8] ಸಿಮುದಲಘುಕಾಂತಾಪದಾಘಾತದಿಂದಂ (ಖ ಬ)

ನಿಱಿಂ ಸೋಂಕಿ ಸೋಂಕೆ ಕೊಳನಂ
ತುಱುಗೆವೆಗಳ್ ತುಱುಗೆ ಪೊಕ್ಕುದಬಲಾನೀಕಂ ೨೩

ತೆರೆಗಯ್ಗಳಿಂದಮಾಂತುದು
ಸರೋವರಂ ನಿಱಿಯ ತೆಕ್ಕೆಯಂ ಮದನಮಹಾ
ಗುರುವೋದಿಸಲ್ಕೆ ಬಿರ್ಚಿದ
ಸುರತದ ಹೊತ್ತಗೆಯನಾಂತ ಶಿಷ್ಯರ ತೆಱದಿಂ ೨೪

ಪುದಿದಿರೆ ಪಕ್ಷದವೋಲ್ ಮೃಗ
ಮದಪತ್ರಂ ಕಾಂತಕರಜ ಕುಲಿಶಕ್ಷತಕ
ಳ್ಕಿದವೋಲ್ ಪೊಕ್ಕವು ಕೊಳನಂ
ಬುದಧಿಯನಬಲೆಯರ ಕಠಿನಕುಚಕುಲಗಿರಿಗಳ್ ೨೫

(ಲೀಲಾವತಿ ೧೩-೧೧೯)

ಕಳನೂಪುರ ನಿನದಂಗಳ
ನೆಳವೆಂಡಿರ್ ಬಯಕೆಗೊಟ್ಟರಕ್ಕುಮೆ ಹಂಸಾ
ವಳಿಗೆನೆ ಕೊಳನಂ ಪೊಕ್ಕಾ
ಗಳೆ ಮಾಣ್ದವು ಗಾಡಿವಡೆದ ನೇವುರದನಿಗಳ್ ೨೬

ಲಲಿತಂ ಕಾಮುಕನಂತೆವೊ
ಲೊಳಪೊಕ್ಕೊಳ್ದೊಡೆಯನೆಟಿವಿ ಕಾಂಚೀಪದಮಂ
ಬಳಸಿ ವಿಟನಂತೆ ನಾಭಿ
ಸ್ಥಳದೊಳ್ ನೆಲೆಗೊಂಡು ನಿಂದುದಾ ಕಾಸಾರಂ ೨೭

ಆವರೋ[1]ಹ[1]ಪ್ರಮದಾಕದಂಬವಿ[2]ದ[2]ಳತ್ಕಾಶ್ಮೀರಸಾರಂ ಮೃಗೋ
ದ್ಭವಕ[3]ಲ್ಪಂ[3] ಘನಸಾರರೇಣುಪಟಲಂ ಶ್ರೀಖಂಡಜಂ ಬಾ[4]ಳಮೆಂ[4]
ಬಿವಱಿಂ [5]ತೀವೆ[5] ತರಂಗಮಾಲೆ ರತಿ ಕಂದರ್ಪಂಗೆ ತೀವಿ[6]ಟ್ಟ[6] ಬ
ಣ್ಣವುರಂ ತಾನೆನೆ ಕಣ್ಗೆ ಮಾಡಿದುದು ಕಾಸಾರಂ ಸುಖಾಸಾರಮಂ ೨೮

(ಅನಂತನಾಥಪುರಾಣಂ ೭-೫೨)

ಅಡರೆ ಕವಲ್ತುದೊಂದೆಡೆ ಮೃಗೋದ್ಭವದಿಂ ಬೆಳರ್ವಟ್ಟು ನಿಂದುದೊಂ
ದೆಡೆ ಮಲಯೋದ್ಭವಪ್ರಸರ[7]ದಿಂ ಕದಡಿಂ[7] ಕಡುಗೆಂಕಮಾದುದೊಂ
ದೆಡೆ ನವಕುಂಕುಮದ್ರವದಿನುರ್ಬಿಪ ಕ[8]ರ್ಪಿಡಿದಿ[8]ರ್ಪನಾಳ್ದುದೊಂ
ದೆಡೆ ಪರಿಮಿಶ್ರಿತಾ[9]ದ್ರ್ರ[9]ಮಹಿಷೀ ರಸದಿಂ ಸರಸೀವಿಭಾಗದೊಳ್ ೨೯

(ಶಾಂತಿಪುರಾಣಂ ೮-೨೯)

---

1 ಧ (ಅ) 2 ಗ (ಅ) 3 ಲ್ಕಂ (ಗ) 4 ಳಿಯಂ (ಅ) 5 ತೇಂಗೆ (ಅ) 6 ರ್ದ (ಕ ಖ ಬ) 7 ದೊಳ್ ಮುದದಿಂ (ಕ ಖ) 8 ರ್ಪಿನದಿ (ಅ) 9 ದ್ರಿ (ಖ ಬ)

ತೊಟ್ಟನೆ ಮಂಗಳಾನಕರವಂ ನೆಲೆವೆರ್ಚೆ ಸರಿತ್ತಟಂಗಳೊಳ್
ಕಟ್ಟೆದಿರಾಗಿ ಸಾರ್ಚೆ ನೃಪವಲ್ಲಭನಂ ಪೊಸಪೂವಿನಿಂದಮಾ
ಯ್ದಿಟ್ಟೊಡನಾರ್ದು ವಾರವಧುವರ್ ಜಳಯಂತ್ರದಿನೊತ್ತೆ ಚಿತ್ರಮಂ
ನಿಟ್ಟೆಸಿ ಬಂದು ಪತ್ತಿದುವು ಸಂಧಿಸಿ ಕುಂಕುಮವಾರಿಧಾರೆಗಳ್ ೩೦

ಪರಿದೊಳಪೊಕ್ಕು ಜೀರ್ಕೊೞ[1]ವೆ[1]ಯಂ ತೆಗೆ[2]ದೆ[2]ತ್ತಿದ ಕಯ್ಯೊಳೊರ್ವರೊ
ರ್ವರನಿರದೊತ್ತೆ ಪಂಜರಿಸೆ ಮೇಲೆ ಮುಸುಂಕುವ ಕುಂಕುಮಾಂಬುಸಂ
ಕರದೊಳದೊಂದು ಕೆಮ್ಮುಗಿಲ ಕಾವಣದೊಳ್ ಕುಡುಮಿಂಚುಗಳ್ ತಡಂ
ಬರಿ[3]ದ[3]ವೊಲೇಂ ಜೆಡುಂಗ[4]ಮರ್ದುದೋ[4] ರುಚಿ[5]ಮದ್ವಿ[5]ಚಳಲ್ಲತಾಂಗಿಯರ್ ೩೧

(ಅನಂತನಾಥಪುರಾಣಂ ೭-೨೮)

ಮಿಸು[6]ಪಲ್[6] ತೋಳಮೊದಲ್ ತುಳುಂಕೆ ಮೊಲೆ ಮುಯ್ವಂ ಮೀಱ[3] ಗಾತ್ರಾಪರಂ
ಪ್ರಸರಂಬೆತ್ತಿರೆ ಕೊಂಕಿ ಬ[7]ಳ್ಕೆ[7]ನಡು ಕೊಂಬಂ ತೀವಿಕೊಂಡೆತ್ತಿ ಪೂ
ಣಿಸಿ ತನ್ನಂ ಬಿಡೆ ಪೊಯ್ಯು ಪೋಪವಳ ನಿಂದೊಡ್ಡೊಡ್ಡೆನುತ್ತೊರ್ವಳೊ
ಡ್ಡಿಸಿ ಪೊಯ್ಯಲ್ ನಿಮಿರ್ದೊಂ[8]ದೆ[8]ಭಾವದೊಳೆ ಭಾವೋದ್ಭೂತನಾದಂ ಸ್ಮರಂ ೩೨

(ಅನಂತನಾಥಪುರಾಣಂ ೭-೨೯)

ಮಂಡಳಿಗೊಂಡು ಸಿಂಪಿಸುವ ಕುಂಕುಮವಾರಿಯ ಬೆನ್ನ ಕೆಂಪು ಕೈ
ಕೊಂಡು ದುಕೂಲಚೇಲದ ವಿಲಾಸಿನಿಯರ್ಕಳ ದೇಸೆ[9]ತಂ[9]ದುದಿಂ
ದುಂಡಿಗೆ ಸಾಧ್ಯಮಾಯ್ತೆನಗೆ ಮೂಜಗಮೀ ಜಳಕೇಳಿಯಿಂದಮೆಂ
ದುಂಡಿಗೆಯೊತ್ತಿ ತೋಱಿಸಿ ತೆರಳ್ಚಿದನಂಗಜನೆಂಬ ಭಂಗಿಯಂ ೩೩

(ಅನಂತನಾಥಪುರಾಣಂ ೭-೩೦)

ಇೞಿಪಿದ ಕಟಾಹಶತದೊಳ್
ಸುೞಿಸುೞಿದೋರೊರ್ಮೆ ಮೊಗೆಯಲೆ[10]ಯ್ದುವ[10] ನೀರ್ ಜೀ
ರ್ಕೊೞವೆಯ ಕೊಂಬಿನ ಜಂತ್ರದ
ಘೞಿಯ[11]ಕ್ಕೇಂ ಪಿ[11]ರಿದೊ ನೃಪನ ವನಿತಾನಿವಹಂ ೩೪

(ಅನಂತನಾಥಪುರಾಣಂ ೭-೩೧)

ಜಳಜಾತದ್ವಯಮೇತಮೆತ್ತಿದಪುವಂಭೋಜಾಳಿಗೆಂಬಂತೆ ಕೆಂ
ದುಳಿಗರ್ಳ್ಗೊಂದಳಮರ್ಘ್ಯಮಿತ್ತಪುವು ಶೀತದ್ಯೋತಿಗೆಂಬಂತೆ ಕೋ

1 ವಿ (ಖ ಬ) 2 ದೊ (ಕ ಖ ಬ) 3 ವ (ಅ) 4 ಡರ್ದರೋ (ಅ) 5 ರ (ಖ ಬ) 6 ಪಂ (ಅ) 7 ಳ್ಕಿ (ಖ ಬ) 8 ದ (ಅ) 9 ವಂ (ಖ ಬ) 10 ಯ್ದುವೆ (ಅ) 11 ಕ್ಕಿನಿವಿ (ಅ)

ಮಳೆಯರ್ ಕೆಂದಳದಿಂ ಮೊಗಕ್ಕೆ ಜಳಮಂ ತುಳ್ಕಾ[1]ಡಿ ಮು[1]ಟ್ಟಿಕ್ಕಿಡಿದರ್
ಪ್ರಳಯಕ್ಷುಬ್ಧಮನೋ[2]ಜವಾರ್ಧಿ[2]ಗಳೊಳೆತ್ತಲ್ ನೋಡೆ ಚಿತ್ತಪ್ರಿಯಂ ೩೫

(ಅನಂತನಾಥಪುರಾಣಂ ೭.೩೬)

ಸುರದೀರ್ಘಿಕೆಯೊಳ್ ಕರಪು
ಷ್ಕರದಿಂದತ್ರಮುಮನಭ್ರಮೂಪತಿ ತಳಿವಂ
ತಿರೆ ಜಳಯಂತ್ರದೆ ತಳಿದಂ
ಸರಸಿಯೊಳರಸಂ ಶಶಿಪ್ರಭಾವಲ್ಲಭೆಯಂ ೩೬

(ಚಂದ್ರಪ್ರಭಪುರಾಣಂ ೭.೧೨೯)

ಜಲಯಂತ್ರಮನೊತ್ತೆ ನೃಪಂ
ಲಲನೆಯ ಕುಚಯುಗಳ ಮಧ್ಯದಿಂದಿಱಿಯಲ್ ತ
ಜ್ಜಳಕೆ ತೆಱಪೀಯದಿರ್ದ
ತ್ತೊಳಕೊಂಡ ಪಯೋಧರಾಖ್ಯೆಯಂ ಪ್ರಕಟಪವೋಲ್ ೩೭

(ಚಂದ್ರಪ್ರಭಪುರಾಣಂ ೭.೧೩೦)

ನಾರಿಯ ಮೊಗಮನನೊತ್ತುವ
ಧಾರಾಪಾತಕ್ಕೆ ಬೆರ್ಚಿ ಜಿತವಾರಿರುಹಂ
ವಾರಿರುಹದ ಮಱೆಗೊಂಡುದು
ಭೀರುವನೋಲಗಿಸಿದರ್ಗೆ ಪೇೞ್ ಬಿಲಮುಂಟೇ ೩೮

(ಲೀಲಾವತಿ ೧೩-೧೩೨)

ಮಡದಿಯ ಮೇಲಿಳಾಧಿಪತಿ ಕತ್ತುರಿನೀರ್ಗಳನೊತ್ತೆ ಕೂಡೆ ಪಾ
ಯ್ದಡಸಿದ ಧಾರೆಯಿಂ ವದನಪಂಕರುಹಂ ಮಱಿದುಂಬಿಮಾಲೆಯಂ
ಪಡೆದುದು ಕರ್ಣಪೂರದಸಿತೋತ್ಪಲಮಂಜರಿ ನೀಳನಾಳಮಂ
ಪಡೆದುದು ಮೌರ್ವಿಯಂ ಪಡೆದುದಾಕೆಯ ಮಧ್ಯಮನೋಜಕಾರ್ಮುಕಂ ೩೯

(ಅನಂತನಾಥಪುರಾಣಂ ೭.೪೧)

ತರಳಾಪಾಂಗೆಲಸದ್ವಿಲಾಸರದಿಂದೋರೊರ್ಮೆ ಲೀಲಾಪ್ರತಿ
ಸ್ಫುರಿತಭ್ರೂಯುಗವಿಭ್ರಮೈಕರಸದಿಂದೋರೊರ್ಮೆ ಸಸ್ನೇಹಭಾ
ಸುರಚಿತ್ತಪ್ರಸಭೋತ್ಥಭಾವರಸದಿಂದೋರೊರ್ಮೆ ಮಾದೇವಿ ಭೂ
ವರನಂ ಸಿಂಪಿಸಿದಳ್ ಸುಗಂಧರಸದಿಂದೋರೊರ್ಮೆ ತತ್ಕೇಳಿಯೊಳ್ ೪೦

(ಚಂದ್ರಪ್ರಭಪುರಾಣಂ ೭.೧೩೨)

ಪ್ರಮದೆಯರಂ ಮನೋಭವನೆ ಸೂಱೆಗೊಂಡೆಚ್ಚಪನಗ್ನಿಬಾಣದಿಂ
ಹಿಮಕರಬಾಣದಿಂ ತಿಮಿರಬಾಣದಿನೆಂಬಿನಮಿಂಬುವೆತ್ತದೇಂ

1 ಡೆ ತು (ಅ) 2 ಭವಾಬ್ಧಿ (ಅ)

ನಿಮಿರ್ದು[1]ವೊ[1] ಲೀಲೆಯಿಂದೆ ಜಳಯಂತ್ರಮನಂದು ಮಹೀಶನೊ[2]ತ್ತೆ[2] ಕುಂ
ಕುಮಜಳ ಚಂದನೋದಕ ಮೃಗೋದ್ಭವ ವಾರಿನಿಯುಕ್ತಧಾರೆಗಳ್ ೪೧

(ಚಂದ್ರಪ್ರಭಪುರಾಣಂ ೭-೧೩೩)

ಇಟ್ಟಳಮಿಟ್ಟಳಿಮುಳಿಸಿಂ
ದಿಟ್ಟಳ್ ಕವಿರಾಜ[3]ಹಂಸ[3]ನಂ ಕಡೆಗಣ್ಣಿಳ್
ನಟ್ಟ ಬಳಿವಿಡಿದು ನನೆಗಣೆ
ನಟ್ಟವೊಲಿರೆ ತಳದೊಳಡಸಿ ತೀವಿದ ನನೆಯಿಂ ೪೨

(ಲೀಲಾವತಿ ೧೩-೧೫೦)

ಸವತಿಯ ಮೇಲೆ ಜೀರ್ಕೊಳವೆಯಂ ತೆಗೆದೊತ್ತೆ ಮನಃಪ್ರಿಯಂ ಕಲಂ
ಕುವ ಬಗೆ ಕೆಂಕಮಾದ ಕಡೆಗಣ್ ತಳಿರ್ವಣ್ಣಮನಾಳ್ದ ತೆಳ್ಗದಂ
ಪವಿರಳ ಘರ್ಮವಾರಿ ಮೆಱೆವನ್ನಮಪೋರ್ವೆಳಲಿಲ್ದು ಸುಯ್ಯೆಯುಂ
ಯುವತಿ ಕಡಂಗಿ ಕೋಪರಸದೋಕುಳಿಯಾಡಿದಳಿಕ್ಷುಚಾಪನೊಳ್ ೪೩

(ಅನಂತನಾಥ ಪುರಾಣಂ ೭-೪೨)

ಬರೆ ತೆಗೆದೊತ್ತೆ ಜೀರ್ಕೊಳವೆಯಿಂ ಪ್ರಿಯನೊತ್ತಿದ ವಾರಿಧಾರೆ [4]ತ
ಳ್ತಿರೆ[4] [5]ಚಳ್[5]ಚೂಚುಕಾಗ್ರದೊಳೆಲಿಲ್ತರೆ ಕರ್ಚಿ ಮೃಣಾಳನಾಳನುಂ
ಬೆರಸಿದ ಜಕ್ಕವಕ್ಕಿ ಕುಣಿದಾಡುವವೊಲ್ ಕುಚಯುಗ್ಮ [6]ನರ್ತನಂ[6]
ತರಳತರಂಗ[7]ದಂಗಣದೊಳೇ[7]ನೆಸೆದಿರ್ದುದೊ ದೀರ್ಘನೇತ್ರೆಯಾ ೪೪

(ಲೀಲಾವತಿ ೧೩-೧೪೬)

ಬಿರಿವಿನಮೆನ್ನ ಚಿತ್ತಮಿರುಳುಂ ಪಗಲುಂ ಖಳ ನಿನ್ನ ದೂಸಱಿಂ
ಸ್ಮರನಿಸೆ ತಳ್ತು ತಾಗುವಲರಂಬುಗಳೆಯ್ದುವೆ ನೀನದೇಕೆ ನಿ
ಷ್ಕರು[8]ಣೆ[8] ಕರಾಬ್ಜಯಂತ್ರಮುಖಮುಕ್ತಸಿತಾಂಬುಗಳಂ ಬೆಗಬ್ಬಿನಂ
ಸುರಿದಿನಿಸಿಲ್ಲದೆನ್ನೆರ್ದೆಯನೋವದೆ ನೋಯಿಸುವೈ ಮನಃಪ್ರಿಯಾ ೪೫

(ಲೀಲಾವತಿ ೧೩-೧೫೫)

ಕಿಂಜಲ್ಕಕೆ [9]ಕೆದಱುವಿನಂ .
ಕಂಜದಿನುಱೆ[9] ಮೋದುವಂತೆ ಕೆಂದಳದಿಂದಂ
ನಂಜಿಕೆ ನವರಜ[10]ನೀರಜ[10]
ಮಂಜರಿಯಂ ಮೊಗೆದು ಮೋದಿದಳ್ [11]ನೃಪವರನಂ[11] ೪೬

(ಲೀಲಾವತಿ ೧೩-೧೫೬)

---

1 ದೊ (ಖ ಬ) 2 ತ್ತಿ (ಖ ಬ) 3 ಮಲ್ಲ (ಅ) 4 ನೀಳ್ದಿರೆ (ಅ) 5 ಬರ (ಬ) 6 ಮಂಡಲಂ (ಕ ಖ ಬ) 7 ರಂಗದೊಳದೇ (ಅ) 8 ಣ (ಅ) 9 ಮಿಗೆ ಕೆದಱುವ ಕಿಂಜಲ್ಕದೆ (ಅ) 10 ನಿರಜೋ (ಖ ಬ) 11 ಮಾನದನಂ (ಅ)

ಕತ್ತುರಿನೀರಿಂ ಕರ್ಪಂ
ಪೆತ್ತಂಗಂ ಕುಂಕುಮಾಂಬುವಿಂ ಕಡುಗೆಂಪಂ
ಪೊತ್ತ ನಿಱ ಮೆಱೆಯೆ ತಳಿರಂ
ಸುತ್ತಿದ ವನಚರಿಯನೊರ್ವಳನುಕರಿಸಿರ್ದಳ್ ೪೭

(ಚಂದ್ರಪ್ರಭಪುರಾಣಂ ೭-೧೩೪)

ಘುಸೃಣರಸಂ ಮೊಲೆ[1]ಯೆಡೆ[1]ಯಿಂ
ದಸಿಯಳ [2]ಬಾಸೆವಿಡಿದಿಟ್ಟಂದು[2] ಸೊಗಯಿಸಿದುದು ತೆ
ಳ್ಪಸಿಱ ಪೊಱಗಣ್ಗೆ ಮಿಸುಗುವ
ನಿಸರತಾಂಬೂಲರಾಗರಸರೇಖೆಯವೊಲ್ ೪೮

(ಚಂದ್ರಪ್ರಭಪುರಾಣಂ ೭-೧೩೫)

ಸರಸಿಜದ ಸಿರಿಯನಾನಪ
ಹರಿ[3]ಸೆಂ[3] ಮನ್ಮುಖದಿನದುವೆ ನಿಜಮೆಂದು ತನೂ
ದರಿ [4]ತಡಗುಂದಿದ ಮೊಗದವೊ[4]
ಲರಸನ ಕೆಲದಲ್ಲಿ ಮುೞುಗಿದಳ್ [5]ನಲಿದೊ[5]ರ್ವಳ್ ೪೯

(ಚಂದ್ರಪ್ರಭಪುರಾಣಂ ೭-೧೩೭)

ಸರ[6]ಸಿಜದೆಲೆಗೊಡೆ[6]ಯಂ ಪಿಡಿ
ದರಸನ ನೀರ್ವೊಯ್ಲೆ ನಿಂದು ಕು[7]ಸಿ[7]ದಂತೊರ್ವಳ್
ಮರಕತದ ಹರಿಗೆಯೋಜೆಯ
ನರಲಂಬನ ಮುಂದೆ ಮೆಱೆವ ರತಿಯವೊ[8]ಲಿರ್ದಳ್[8] ೫೦

(ಅನಂತನಾಥಪುರಾಣಂ ೭-೪೩)

ಮುರಿದೆಡಗೈ ನೀವಿಯನೋ
ಸರಿಸಿರೆ ಬಲಗಯ್ಯನೊಡ್ಡಿ ಧಾರೆಗದೊರ್ವಳ್
[9]ತರಲಾರ್ತಳು[9]ಭಯಕರದಿಂ
ಪ[10]ರಿವೃ[10]ತದೊಳ್ ನಿಂದ ನರ್ತಕೀವಿಭ್ರಮಮಂ ೫೧

(ಅನಂತನಾಥಪುರಾಣಂ ೭-೪೪)

ಕೋಕನದವದನೆ ಜಲಧಾ
ರಾಕದನಕ್ಕಾನಲಾಱದೊರ್ವಳ್ ಪೋಲ್ತಾ

---

1 ಯಾಲೆ (ಖ ಬ) 2 ನಸುಬಾಸೆವಿಡಿಹು (ಖ ಬ) 3 ಸಿಂಯೆ (ಖ ಬ) 4 ತಂಡ ಗುಂಡಿವುಗುವವೊ (ಅ) 5 ಮತ್ತೊ (ಖ ಬ) 6 ಸೀರುಹದೆಲೆ (ಕ ಖ ಬ) 7 ನಿ (ಅ) 8 ಲೆಸೆದಳ್ (ಅ) 9 ತರಳೋತ್ತರೆ (ಖ ಬ) 10 ರಭ್ರ (ಕ ಖ ಬ)

ಯ್ದೋಕುಳಿಯ ನೆವದಿನಪ್ಪಿ ಮ
ಹೀಕಾಂತನೊಳಂಗಸಂಗಸುಖಮಂ ಪಡೆದಳ್ ೫೨

(ಅನಂತನಾಥಪುರಾಣಂ ೭.೪೫)

ನೀರ್ ಮೊಗಸಿ ಪೊಯ್ಯೆ ಬಿರ್ಚಿದ
ಸೋರ್ಮುಡಿಯೊಳೆ ಮುಸುಕೆ ನಿಜಮುಖಾಬ್ಜಮನಿನಿಸಂ
ಕಾರ್ಮುಗಿಲೆಳಸಿದ ಹಿಮರೋ
ಚಿರ್ಮಾಲೆವೊಲೆಸೆದುದಸಿಯಳಾನನಬಿಂಬಂ ೫೩

(ಅನಂತನಾಥಪುರಾಣಂ ೭-೪೭)

ಅರಸನ ಮೇಲೆ ಭೋರ್ಗರೆದು ರಾಣಿಯವಾಸದ ಪೆಂಡವಾಸದಾ
ದರದ ಬೆಡಂಗಿಯರ್ ಮಳೆಯಜಾಂಬುಮಿಳದ್ಘನಸಾರವಾರಿಯಂ
ಸುರಿಯೆ ಮನೋಜಪುಷ್ಪಲತಿಕಾಪ್ರಕರಂ ಮಕರಂದವರ್ಷಮಂ
ಸುರಿವ ನಮೇರುಭೂರುಹದವೋಲ್ ಮೆಱೆದಂ ನರಲೋಕಚಂದ್ರಮಂ ೫೪

(ಅನಂತನಾಥಪುರಾಣಂ ೭-೪೮)

ಸುಲಲಿತ ಕಿಂಕಿರಾತ ನವಮಂಜರಿಯಂತಿರೆ ಕರ್ಣಪಾಳಿ ಕೆಂ
ದಳಿರ ತುಱುಂಬಿ[1]ನಂ[1]ತೆಸೆಯೆ ಸೋರ್ಮುಡಿ ಮೂಡುವ ಚಂದ್ರನಂತೆ ಪ
ಜ್ಜಳಿಸೆ ಮುಖೇಂದು ಪೊಂಗಳಸದಂತಿರೆ ಪೆರ್ಮೊಲೆ ಕಾಂತೆ ಪೊನ್ನಪು
ತ್ತಳಿಕೆವೊಲಪ್ಪಿನಂ [2]ತಳಿದನೋಪಳ[2]ನೊಪ್ಪುವ ಕುಂಕುಮಾಂಬುವಿಂ ೫೫

(ಲೀಲಾವತಿ ೧೩-೧೪೧)

ಜಲಮಂ ಕಾಂತನ ಮೊಗದೊಳ್
ತುಳುಂಕಲೆಂದಗಿದು ಮೊಗೆವ ಕಾಮಿನಿ ಕಯ್ಯಿಂ
ಕಳಸಂ ಜಗುಳ್ದೊಡೆ ಮುಱು[3]ಗಿದ[3]
ಕೆಳದಿಯ ಪೆರ್ಮೊಲೆಗೆ ಪಾಯ್ದುಳಬ್ಜಾಕರದೊಳ್ ೫೬

(ಲೀಲಾವತಿ ೧೩-೧೩೧)

ಧೂರ್ತಂ ತುಳುಂಕೆ ಕತ್ತುರಿ
ನೀರ್ತುಳುಕಿದ [4]ಮೊಗದಿನಲೆದುವಬಲೆಯ ಮೊಲೆಗಳ್[4]
ಸಾರ್ತಂದಗಲ್ಚಲುರ್ಚಿದ
ಕಟ್ತಿಲೆಯಂ ಕುಟುಕುಗೊಳ್ವ ಕೋಕದ್ವಯಮಂ ೫೭

(ಲೀಲಾವತಿ ೧೩-೧೩೪)

---

[1] ದಂ (ಕ ಖ ಛ) [2] ಸುರಿಡನೋಪನ (ಖ ಬ) [3] ಗುಪ (ಅ) [4] ಮೊಗದಿಗ
ಳೊಡೆವವೆಂದಬಲೆಯರ್ಗಳ್ (ಖ ಬ)

ಕತ್ತುರಿಯ ನೀರನರಮುಗ
ನೊತ್ತಲೊಡಂ ಕರಿಯ ಕಿಱಿಯ [1]ಕಾಮಿನಿ ಬೆನ್ನಂ
ತೆತ್ತಿರೆ[1] ರಾಜಾವರ್ತದ
ಪುತ್ತ್ರಳಿಕೆ ಬೆಮರ್ತತೆಱದಿನೇನೊಪ್ಪಿದಳೋ ೫೮

(ಲೀಲಾವತಿ ೧೩-೧೩೫)

ಅಲೆವನ್ನಂ ಚೌರಿವೊಲ್ ಬಿರ್ಚಿದ ಬಹಳ ಕಚಂ ಸಾರಕಸ್ತೂರಿಕಾಪಂ
ಕಿಲಮಂಭೋಧಾರೆ ಕೊಪ್ಪಿಂದಿೞಿದು ಬಳೆವಿನಂ ಕಾಂತನಂದೊತ್ತೆ ರಾಗಾ
[2]ಕು[2]ಲೆ ಬೇಗಂ ಬಾಗಿದಳ್ ತುಂಬಿಯ ತಿರುಗೊಲೆಯೊಳ್ ಕೋದ ಕಂದರ್ಪಕೋದಂ
ಡಲತಾಸೌಭಾಗ್ಯಮಂ [3]ಸೂಸುವ ತನುಲತೆ[3] ಚೆಲ್ವಾಗೆ ತನ್ವಂಗಿಯೊರ್ವಳ್ ೫೯

(ಲೀಲಾವತಿ ೧೩-೧೩೮)

ವಳಿರೇಖೆವಡೆದ ಬಡನಡು
ತೊಲೆಯೆನೆ ಕುಚಜಘನಭಾರಮಂ ಕರತಳದೊಳ್
ನಿಲಿಸಿ ಲತಾಂಗಿಯನೀಸಲ್
ಕಲಿ[4]ಸುವ ಪತಿ[4] ತೂಗುವಂಗಜಂಗೆಣೆಯಾದಂ ೬೦

(ಅನಂತನಾಥಪುರಾಣಂ ೭-೩೯)

ಮಾರಮುಖನೆತ್ತೆ ಸರಸೀ
ತೀರಕ್ಕಂ ಕಾಮ ಮುಂದುಗಾಣಲ್ ನೆವದಿಂ
ನೀರಂ ಕೊಳ್ವ ಮುೞುಂಗುವ
ವಾರಿಜಲೋಚನೆಯನಪ್ಪಿ ಭಾವುಕನಾದಂ ೬೧

ಪೊಳೆವೆಳವಾಳೆ ಚುಂಬಿಸಿ ಮುೞುಂಗಿರಲಂಜಿ[5]ದಳೆಯ್ದೆ ಮೇ[5]ಲೆ ಮೆ
ಯ್ಗೊಳಿಸಿದ ನಾಗವಟ್ಟಣಿಗೆ ನಾಂದು ಪಗಿಲ್ತಿರೆ ನಾಣ್ಚಿದಳ್ ಕುಚಂ
ಗಳ ಕೆಲದೊಳ್ ಕವಲ್ತ ನಖರೇಖೆಗೆ ಬೆನ್ನಗಡುವ್ರಣಕ್ಕೆ ಕಂ
ಚುಳಿಕೆವೊಲಾಗೆ ರಾಗಿಸಿದಳೊತ್ತಿದ ಕುಂಕುಮಪಂಕಧಾರೆ[6]ಯಿಂ[6] ೬೨

(ಅನಂತನಾಥಪುರಾಣಂ ೭-೩೭)

[7]ತುಳ್ಕುವ ನಲ್ಲಳ್ ನೀರ್ವೊಗ
ಲಳ್ಕಿದವೊಲ್ ಮುೞುಗೆ ಮುನ್ನ ಕಣ್ಬೇಟದವಳ್[7]

---

[1] ಬಾಲಕಿ ಬಣ್ಣಂಬೆತ್ತಿರೆ (ಅ) ಕಾಮಿನಿ ಬೆನ್ನಂಪತ್ತಿರೆ (ಖ ಬ) [2] ದ (ಖ ಬ) [3] ಬೀೞುವ ತನುರುಚಿ (ಖ ಬ) [4] ಪ ವಿಟಂ (ಅ) [5] ಳೆಟ್ಟಿದ್ದ ಮೆಯ್ದೆ (ಅ) ಳೆಜ್ಜದ ಮೆಯ್ಗೆ (ಖ ಬ) [6] ಗಳ್ (ಅ) [7] ತುಳುಕುವ ನಲ್ಲನ ನೀರ್ವೊರ್ಯಳ್ತೆಳುಕಿದವೊಲ್ ಮುೞುಕೆ ಮುನ್ನೆ ಕಣ್ಬೇಟದಗಳ್ (ಅ)

ತುಳ್ಕಿದೆಡೆಗೆಯ್ದಿ ಚುಂಬಿಸಿ
[1]ತುಳ್ಕಾಡಿ ಮುರಳ್ದು[1] ಮೂಡಿದಂ [2]ಶರ[2]ನೊರ್ವಂ ೬೩

(ಅನಂತನಾಥಪುರಾಣಂ ೬-೩೮)

ತುಂಗನಿತಂಬದಿಂ ಕುಚದ ಬಿಣ್ಪೊಱೆಯಿಂ ಪೊಡರಲ್ಕಮಾಱದಿ
ರ್ಪಂಗನೆಯರ್ ಸರೋಜಲದೊಳಂದವು ನೊಚ್ಚಿದುವಾಗೆ ರಾಗದಿಂ
ಪೊಂಗಿ ಪೊದಟ್ದು ಪಾಱಿ ಪೊಳೆದಾಡಿದರಂತೆ ಜಡಪ್ರಸಂಗದಿಂ
ದೇಂಗಳ ಲೋಕದೊಳ್ ಗುರುಗಮಾಗಳೆ ಲಾಘವಮಾಗದಿರ್ಕುಮೇ ೬೪

(ಲೀಲಾವತಿ ೧೩-೧೨೪)

ಕಲಸಿದಳಿಂತೀ ಕಾಮಿನಿ
ವಿಳಾಸದಿಂ ಜನರ ಮನಮುನೆಂದು ಮನೋಜಂ
ಕೊಳೆ ಸುತ್ತಿಕೊಂಡು ಗುಂಡಿಗೆ
ಮುೞುಗುವವೋಲ್ಮುೞುಗಿ ಮೊೞಗಿದಂತಿರೆ ನೆಗೆದಳ್ ೬೫

ಉನ್ನತಪೀನಸ್ತನಯುಗ
ಳನ್ನೀರೊಳ್ ತೇಂಕೆ ತೆರೆಯೊಳುರಮಿಕ್ಕಿದಳು
ರ್ಕಿನ್ನಲಿದು ಜಕ್ಕವಕ್ಕಿಯ
ಬೆನ್ನೊಳ್ ಬಿರ್ದೀಸಿಯಾಡುವಂತೊಪ್ಪಿರ್ದಳ್ ೬೬

(ಲೀಲಾವತಿ ೧೩-೧೨೫)

ಮುರಿದೆಲರೆ[3]ತ್ತಿ[3] ಮೆಯ್ದಿರಿದು ತೋರಮುನಾಳ್ದು ಪೊದಟ್ದು ನೀಳ್ದ ಪಂ
ಕರುಹಪರಾಗಮುಂ ಜವದೆ ಮಂದರಮಾಗೆ ಸರೋವರಾಬ್ಧಿಯಂ
ಸ್ಮರಸುರವಲ್ಲಭಂ ಪೊಸೆದು ಪುಟ್ಟಿಸುವಿಂದುಗಳಂದದಿಂದಮೇಂ
ಕರಮೆಸೆದಿರ್ದುವೋ ಮುೞುಗಿ ಮೂಡುವ ಮುಗ್ಧೆಯರಾನನೇಂದುಗಳ್ ೬೭

(ಲೀಲಾವತಿ ೧೩-೧೨೩)

ಅಲರ್ವಚ್ಚಮುನಬಲೆಯುರಿಂ
ತೊಲಗಿಸಿ ಮೈದೊಳೆದನಂಗದೃಷ್ಟಿಯ ತೊಡವಂ
ಪಲವಂ ತೊಡಿಸಿದನಲ್ಲದೊ
ಡ[4]ಲೆಪಮುನಿ[4]ರ್ಮುಡಿಸಿ ಸರಸಿ ಪಡೆದು[5][ದೆ][5] ಮುದಮುಂ ೬೮

ಉಟ್ಟ ಘನಜವಳಿ ನಾಂದಳ
ವಟ್ಟರೆ ಮೆಯ್ಪತ್ತಿ ತೋಱೆ ಸರ್ವಾಂಗಮುಮುಂ
ದುಟ್ಟುದು ಪೋಯ್ತೆಂದೊರ್ವಳ್
ಬಿಟ್ಟಿರ್ದ ಕಚಾಗ್ರದಿಂದೆ ಮುಸುಕಿದಳುಡೆಯಂ ೬೯

---

1 ಚುಳುಕಾಡೆ ಮುರಳ್ಚಿ (ಅ) 2 ಸ್ಮರ (ಅ) 3 ತ್ತ (ಖ ಬ) 4 ಲಪಮುನೂ (ಖ ಬ) 5 ದು (ಕ ಖ ಗ)

ಸ್ಫುರಿತಾಂಗಂ ಸೂಸೆ ಲಾವಣ್ಯಮನೆಸೆವಲರ್ಗಣ್ ಚೆಲ್ಲಮಂ ಸೂಸೆ ಬಿಂಬಾ
ಧರಹಾಸಂ ಸೂಸೆ ಬೆಳ್ದಿಂಗಳನಲಘುಕುಚಂ ಮೇಲುದಂ ಸೂಸೆ ಚಾಮೀ
ಕರಕಾಂಚೀಮಂಜುಗುಂಜದ್ಧ್ವನಿ ಕಿವಿಗಮರ್ದಂ ಸೂಸೆ ತಳ್ಪೊಯ್ವ ಸುಯ್ ಕ
ಸ್ತೂರಿಗಂಪಂ ಸೂಸೆ ಲಕ್ಷ್ಮೀಪತಿಯ ತನುವಿನೊಳ್ ಸೂಸಿದಳ್ ನೀರನೊರ್ವಳ್ ೭೦

(ಜಗನ್ನಾಥವಿಜಯಂ ೧೪-೧೦೪)

ತುಳ್ಕೆ ದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ
ತುಳ್ಕೆ ಕುಚಾಗ್ರದಿಂ ತುಳುಕೆ ಹಾರ ಮರೀಚಿಲತಾಂಗರೇಖೆಯಿಂ
ತುಳ್ಕೆ ವಿಳಾಸವಂಗಜನ ಬಾಳ ಪೊಗರ್ ನಿಜಬಾಹುದಂಡದಿಂ
ತುಳ್ಕಿ ತುಳುಂಕಿದಳ್ ಹರಿಯ ಮೇಲೆ ಪೆಱಳ್ ತರಳಾಕ್ಷಿ ತೋಯಮಂ ೭೧

(ಜಗನ್ನಾಥವಿಜಯಂ ೧೪-೧೦೫)

ಕುರುಳೊಳ್ ಕುಚದೊಳ್ ಭುಜವ
ಲ್ಲರಿಯೊಳ್ [1]ನಯಮೆ[1]ಸೆಯೆ ಪೊಳೆ[2]ಯೆ[2] ತೋಱುವ ಬಿಂಬಾ
ಧರದೊಳ್ ವಳಿಯೊಳುರೋಜಾಂ
ತರದೊಳ್ ಕೊಳಗೊಂಡವಂಗಸಕ್ತಜಲಂಗಳ್ ೭೨

ತನು ಲಾವಣ್ಯರಸಂಗಳಂ ಪಸರಿಸುತ್ತಿರ್ಪನ್ನೆಗಂ ಕಣ್ಣುಮಂ
ಮನಮುಂ ಪಂಕರುಹಾಕ್ಷನೊಳ್ ಪಸರಿಸುತ್ತುಂ ತೋಯಮಂ ತನ್ಮುಕುಂ
ದನ ಮೇಲಟ್ಟಿ ತುಳುರ್ಕೆಯಿಂ ಪಸರಿಸುತ್ತಿರ್ದಳ್ ಪೆಱಳ್ ತನ್ನ ಮೇ
ಲೆಸಿತಾನುಂ ನನೆಯಂಬುಗಳ್ ಪಸರಿಪನ್ನಂ ಕಾಮಕೋದಂಡದಿಂ ೭೩

(ಜಗನ್ನಾಥವಿಜಯಂ ೧೪-೧೦೨)

ಸವತಿಯ ಮೇಲೆ ಮುಂ ತುಳು[3]ಕಿ[3] ತನ್ನಯ ಮೇಲಧಿಪಂ ಬಟುಕ್ಕೆ ತು
ಳ್ಕುವ ವಿಮಲಾಂಬುಗಳ್ ತನಗೆ ಮನ್ಮಥನಂಬುಗಳಂತಿರೆಯ್ದೆ ಕೋ
ಪವನೊಳಕೊಂಡು ತನ್ನ ಬಸಮಲ್ಲ[4]ದ[4] ಕೃಷ್ಣನ ಮೇಲೆ ತಾಂ ತುಳುಂ
ಕುವ ಸಲಿಲಕ್ಕೆ ಕುಂಕುಮದ ರಾಗಮನಿತ್ತಳಪಾಂಗರಾಗದಿಂ ೭೪

(ಜಗನ್ನಾಥವಿಜಯಂ ೧೪-೧೦೦)

ಮುರಮಥನಂ ಸಿಂಪಿಸೆ ಕ
ಸ್ತೂರಿನೀರಂ ತನ್ಮೃಗೋದ್ಭವಾಸಿತಧಾರಾ
ಪರಿ[5]ದಳಿತ ಪರಾಭೃ[5]ಮುಖಿ
ಹರಿಹಸ್ತಾಕೃಷ್ಟ ಕೇಶಹಸ್ತವೊಲೆಸೆದಳ್ ೭೫

(ಜಗನ್ನಾಥವಿಜಯಂ ೧೪-೧೦೬)

---

[1] ಪೊಯ್ದ ನು (ಕ) [2] ದು (ಕ) [3] ಕೆ (ಖ ಬ) [4] ದೆ (ಖ ಬ) [5] ಕಲಿತಪರಾವೃತ (ಅ)

ಸಕಲಾಂತಃಪುರಕಾಮಿನೀನಿಕರನಿರ್ಯದ್ಯಂತ್ರಧಾರಾಕರಂ
ಬಕಮಂ ತಾಳ್ದುಳಿಪಿಂಗೆ ಮೇಗೊಗೆದ ಮಾರ್ಣಾಳಂಗಳಿಂದಂಜಿವಿಂ
ಡು ಕಲಧ್ವಾನಮನೆತ್ತಲುಂ ಪಸರಿಸುತ್ತೋರಂತವಂ ಪಾಱಿ ಪಾ
ಱಿ ಕರ್ದುಂಕಲ್ ಮೊದಲಿಟ್ಟುವೇಂ ಪಿರಿದೊ ವಾರಿಕ್ರೀಡನಾಡಂಬರಂ ೭೬
(ಜಗನ್ನಾಥವಿಜಯಂ ೧೪-೧೦೯)

ಸವನದಿನಂಗರಾಗಮುಮಲಕ್ತಕರಾಗಮುಮೆಯ್ದೆ ಪೋಗಲಂ
ತವಯುವದಲ್ಲಿ ತೋಱುವುಗುರ್ವೊಯ್ಲುಳವಟ್ಟ ವ್ರಣಂಗಳುಂ ವಧೂ
ನಿವಹದೊಳಾವ ಮಂಡನಮುಮಂ ಗೆಲೆವಂದುವು ಮಿಕ್ಕ ಮಂಡನಂ
ಯುವತಿ ಜನಕ್ಕದೇವುದೊ ರತೋತ್ಸವಚಿಹ್ನಮೆ ದಿವ್ಯಮಂಡನಂ ೭೭
(ಜಗನ್ನಾಥವಿಜಯಂ ೧೪-೧೧೦)

ಶ್ರುತಿಕುಮುದಂಗಳ್ ಕೇಳೀ
ಪತಿತಂಗಳ್ ಕೊಳನ ತಡಿಗೆ ಸಾರ್ದುವು ತೆರೆಯಿಂ
ಶ್ರುತಿಮಂಡನ[1]ನಾ[1]ದೊಡ[2]ಮಾ
ಪತಿತಂ[2] ನಿರ್ಮಲರ ನಡುವೆ ಯೋಗ್ಯ[3]ನೆ[3] ಸುೞಿಯಲ್ ೭೮
(ಜಗನ್ನಾಥವಿಜಯಂ ೧೪-೧೧೧)

ನವನಖರೇಖೆಗಳ್ ಕರಿತು ಪೋದುವು ಪೆರ್ಮೊಲೆ ಬಟ್ಟು ಗುಜ್ಜುಗೊಂ
ಡವು ಬೆಳರ್ವಾಯ್ ಬೆಳರ್ತುದಧರೋಷ್ಠದ ಕರ್ಪು ಬಯಲ್ಗೆ ಬಿಟ್ಟುದೊ
ಪ್ಪುವ ನಿಡುಗಣ್ಣ ಕೆಂಪು ಘನಮಾದುವು ಕುಂತಳವಲ್ಲಿ ಸುರ್ಕುನೀ
ಳ್ದುವು ತೆರೆ ಪೊಣ್ಮೆ ಪತ್ತಿದುವು ಸೌಂದರಿಯರ್ಕಳ ಮೆಯ್ಯೊಳುಪ್ಪಟಂ ೭೯

ಕಳೆದುರುಪತ್ರಭಂಗದ ಬೆಡಂಗುಗಳಂ ಕುಟಿಲಾಳಕಂಗಳಂ
ಬಳೆಯಿಸಿದತ್ತು ಕಣ್ಗೆಸೆವ ರಾಗಮ[4]ನೆಯ್ದಿಸಿ[4] ಕೇಶಹಸ್ತಮಂ
ಚಳಿಯಿಸಿದತ್ತು ಮೈಗೆ ಪುಳಕೋದಯಮಂ [5]ತಳೆ[5]ದತ್ತು ತಲ್ಲತಾ
ಲಲಿತೆಯರ್ಗಿತ್ತುದಿಂತು ಜಳಕೇಳಿ ಮನೋಭವಕೇಳಿಲೀಲೆಯಂ ೮೦
(ಆದಿಪುರಾಣಂ ೧೧-೧೫೦)

ಮಱಸಿರ್ದಂಬರಮೆಯ್ದೆ ನಾಂದು ತನುವಂ ಪತ್ತಿರ್ದು ಕಣ್ಗೆಲ್ಲಿಯುಂ
ತೆಱಪಂ ಮಾಡೆ ಮನೋಜಚಕ್ರಿಯ ಜಯಶ್ರೀರಾಜ್ಯಚಿಹ್ನಂಗಳಂ
ನೆಱೆ ನೋಂದಂದದಿನೀಕ್ಷಣಕ್ಕೆ ಪರಮಾನಂದಾಮೃತಂ ಸಾರ್ವಿನಂ
ನೆಱೆದರ್ ಚಕ್ರಿಯ ಮುಂದೆ ತ[6]ತ್ಕೃತಿ[6]ವಿಚಿತ್ರಾನಂಗಚಿಹ್ನಂಗಳಂ ೮೧
(ಆದಿಪುರಾಣಂ ೧೧-೧೫೪)

---

[1] ಮಾ (ಅ) [2] ಮೇಂ ಪತಿತರ್ (ಅ) [3] ರೆ (ಅ) [4] ನಿತ್ತುದು (ಅ)
[5] ಪಡೆ (ಅ) [6] ಕೃತ (ಅ)

ಸುರ್ಕುಟಿಂದುರುಳಿಗುರುಳ್ ನೆಱಿ
ಸುರ್ಕಿದ ಕುಚಚೂಚುಕಂ ಬೆಳರ್ತಧರಂ ನೀರ್
ಪೋರ್ಕುಳಿಯೊಳೆ ಜೋಲ್ದುಳ್ಳೃಡೆ
ಸಾರ್ಕೆಯೊಳೇಂ ನೃಪನ ಮನಮುನಳವಡಿಸಿದುದೋ ೮೨

(ಆದಿಪುರಾಣಂ ೧೧_೧೪೯)

ಲಲನಾಜನಮುಗ್ಗಲಿಸಿದ
ನಲವಿಂದಂ ಬಟಲೆ ತುಳ್ಕುನೀರಾಡುವುದುಂ
ಸುಲಿಪಲ್ಲ ಪೊಳೆಪು ತಮ್ಮೊಳ್
ನೆಲಸಿದ ತೆಱದಿಂ ಬೆಳರ್ತುವವರಧರಂಗಳ್ ೮೩

(ಮಲ್ಲಿನಾಥಪುರಾಣಂ ೬_೧೨೬)

ಕರಶಾಖಾಳಿಗಳವಚ
ತ್ತಿರೆ ಜಳಯಂತ್ರಕ್ಕೆ ಮೆಲ್ಲನಾದುವು ಪದ್ಮಾ
ಕರ ಕೇಳಿ ಸಾಲ್ವುದೆಂಬಂ
ತಿರೆ ಕಂಪಿಸುವು[1]ವು[1] ಬೆಡಂಗಿಯರ ತನುಲತೆಗಳ್ ೮೪

(ಅನಂತನಾಥಪುರಾಣಂ ೭_೪೯)

ತೊಳಗುವ ನಾಗವಟ್ಟಣಿಗೆ ನಾಂದು ಶರೀರಮನೆಯ್ದೆ ಪತ್ತೆ ಬ
ರ್ಪೆಳೆಯಳನೋವಿಯೇನೆಲೆಗೆ ಬತ್ತಲೆ ಬಂದಪೆಯೆಂದು ಮತ್ತೆ ಪೂ
ಗೊಳದೊಳಗೋಡಿ ಪೊಕ್ಕೊಡದನೀಕ್ಷಿಸಿ ಚಾಪಳೆಯರ್ ಪ್ರಮತ್ತ ಕೋ
ಕಿಳಕಳನಾದದಿಂ ನಗುತಲಿತ್ತರಿಳಾಪತಿಗಾದಮುಟ್ಟಿಯಂ ೮೫

ದಂತಚ್ಛದಾತಿರಾ[2]ಗಂ[2]
ಕುಂತಳಕೌಟಿಲ್ಯವೃತ್ತಿ ಪಿಂಗಿದುದಬಳಾ
ಸಂತತಿಗೆ ಪಯಃಕೇಳಿಯೊ
ಳೆಂತುಂ ನಿರ್ಮಳರ ಸಂಗದಿಂದಾಗದುದೇಂ ೮೬

(ಚಂದ್ರಪ್ರಭಪುರಾಣಂ ೭_೪೫)

ನೀರಾಟವಾಡಿ ಪೊಱಮಡು
ವೈರಾವತದಂತೆ ದಿವಿಜದೀರ್ಘಿಕೆಯಿಂ ಕಾ
ಸಾರದಿನೇಂ ಪೊಱಮಟ್ಟನೊ
ವಾರವಧೂಸಹಿತಮುವನಿಪತಿ ಸಂತಸದಿಂ ೮೭

(ಅನಂತನಾಥಪುರಾಣಂ ೭_೫೦)

---

[1] ದು (ಕ)  [2] ಗತೆ (ಅ)

ಕರೆವ ಕೊದಳ್ಗಳುಂ ಪರೆವ ಕಣ್ಗಳ ಕೆಂಪು ಪಯೋಲವಂ ಕರಂ
ಬೆರಸಿದ ಮೆಯ್ಗಳುಂ ನಸು ಬೆಮರ್ತಧರಂಗಳುಮೆಯ್ದೆ ಸುರ್ಕುಗೆ
ಟ್ಟುರುಳಿಗುರುಳ್ಗಳುಂ ಮನಮನಿಟ್ಟಳಿಗೊಂಡಿರೆ ಕಾಂತೆಯರ್ ಮಹೀ
ವರನ ಕೆಲಕ್ಕೆವಂದು ಸುರಕಾಂತೆಯರಂದದಿನಾದವೊಪ್ಪಿದರ್ ೮೮

ಪರೆದಾ ನೀಲಾಳಕಂ ಜೋಲ್ದಲೆವ ಕಚಭರಂ ಕೆಂಪುವೆತ್ತಿರ್ದ ಕಣ್ದಾ
ವರೆ ಬೆಳ್ಪೇಱಿರ್ದ ಬಿಂಬಾಧರಮಣಿ ತನುವಂ ನಾಂದು ಪತ್ತಿರ್ದ ಚೀನಾಂ
ಬರಮಿಂಬಾಗಿರ್ಪಿನಂ ಬಂದುದು ಮೃದುತರಲೀಲಾಪದನ್ಯಾಸಮುದ್ಯ
ದ್ದರಹಾಸಂ ಪೆಂಡವಾಸಂ ವಿಜಿತರತಿವಿಳಾಸಂ ಸುಖಶ್ರೀನಿವಾಸಂ ೮೯

(ಜಗನ್ನಾಥವಿಜಯಂ ೧೪-೧೧೩)

ಮದಕಲಹಂಸಯಾನದ ರಥಾಂಗಕುಚಂಗಳ ವಾರಿಜಾತವ
ಕ್ತ್ರದ ಸಿರಿಯಿಂದಮೆನ್ನ ಸಿರಿ ತಾಂ ಮೆಱೆದಿರ್ದುದು ನಿಮ್ಮ ವಾರ್ವಿನೋ
ದದಿನೆಲೆ ವಾರನಾರಿಯರಿರೆನ್ನನೆ ಬಿನ್ನನೆ ಮಾಡಿ ಪೋಗಲಾ
ಗದು ನಿಮಗೆಂದು ಕಾಲ್ವಿಡಿವವೊಲ್ ತೆರೆ ಪೊಣ್ಮಿದುವಬ್ಜಷಂಡದೊಳ್ ೯೦

(ಅನಂತನಾಥಪುರಾಣಂ ೭-೫೧)

ಸ್ತನಕುಂಭದ್ವಿತಯಂಗಳೊಳ್ ಮೆಱೆಯೆ ಹಸ್ತಸ್ವಸ್ತಿಕಂ ಕುಂತಳಾ
ಗ್ರನ[1]ವೋ[1]ತ್ಪಲ್ಲವಮಾಸ್ಯದರ್ಪಣದ ಮೇ[2]ಲಿಂ[2]ಬಾಗೆ ನಾಂದಂಬರಂ
ತನುವಂ ಪ[3]ತ್ತೆ[3] ದಿಗಂಬರೀ ಮಹಿಮೆಯಂ ತಂ[4]ದಿಟ್ಟನೆಂ[4]ದಿರ್ದ ಕಾ
ಮಿನಿಯರ್ ಮಂಗಳಮಂತ್ರದೇವಿಯ[5]ರೆನಲ್[5] ಕಣ್ಗೇಂ ಬೆಡಂಗಾದರೋ ೯೧

(ಅನಂತನಾಥಪುರಾಣಂ ೭-೫೩)

ವಿತರತ್ಸೀತ್ಕಾರವಕ್ತ್ರಂ ಜಳನಿಬಿಡಿತವಾಸಸ್ಫುಟೀಭೂತನಿಮ್ನೋ
ನ್ನತಮುದ್ಯದ್ರೋಮಹರ್ಷಸ್ತನವಿನಿಹಿತದೋಃಸ್ವಸ್ತಿಕಂ ಲೋಚನೋಷ್ಠ
ದ್ವಿತಯವ್ಯತ್ಯಸ್ತವರ್ಣಸ್ಥಿತಿ ಮಿಲಿತಕಪೋಲಾವಲಗ್ನಾಳಕಂ ಯೌ
ವತಮಾದಂ ಕಣ್ಗೆವಂದಿರ್ದುದು ಕೃತಸಲಿಲಕ್ರೀಡಮುಸ್ತೋತ್ಪಪೀಡಂ ೯೨

(ಚಂದ್ರಪ್ರಭಪುರಾಣಂ ೭-೧೪೯)

ಎಡಗಯ್ಯಂ ನಸುಸೋಂಕೆ ನೀರ್ವೊಱೆಯ ಬಿಣ್ಪಿಂ ಬಿಟ್ಟ ಧಮ್ಮಿಲ್ಲಮಂ
ಪಿಡಿದಲ್ಲಿಂ ಬರುತಿರ್ಪ ವಾರಿಗಳನಾರಕ್ತೋಜ್ವಳಾಪಾಂಗದಿಂ
ನಡೆನೋಡುತ್ತಮು . . ಸೀತ್ಕೃತನಟದ್ಬಿಂಬಾಧರಂ ಪತ್ತಿದೊ
ಳ್ಪುಡೆ ಚೆಲ್ವಾಗಿರೆ ಮುಂದೆ ನಿಂದಬಲೆಯರ್ ಕಣ್ಗೊಪ್ಪಿದರ್ ಕೃಷ್ಣನಾ ೯೩

---

[1] ವಿ (ಅ) [2] ಗಿಂ (ಅ) [3] ತ್ತಿ (ಅ) [4] ದೀಯೆನಿಂ (ಅ) [5] ರವೊಲ್ (ಅ)

ಮೃಗಲೋಚನೆಯರ್ ಸಲಿಲಾ
ವಗಾಹಮಂ ಮಾಣ್ದು ಪೊಱಗೆ ಕಿಲೆ ಕಟ್ಟಿಲೆ ತಾ
ರಗೆಯನುಗುಟ್ದಿಪ್ಪುವೆಂಬಿನ
[1]ಮೊಗೆ[1]ತಂದುವು ಸಲಿಲಬಿಂದುಗಳ್ ಸೋರ್ಮುಡಿಯಿಂ ೯೪

(ಮಲ್ಲಿನಾಥಪುರಾಣಂ ೬-೧೩೧)

ಬಸಿಯೆ ಜಳಬಿಂದು ಕೇಶ
ಪ್ರಸರಮನೆಡಗೆಯ್ಯೊಳಡಸಿ ಪಿಡಿದೆಸೆದುದು ಕಾ
ಱಂಸುವವೊಲನಂಗ[2]ನಸಿ[2]ಯು
ಬ್ಬಸನಾಗಿರೆ ಪೀರ್ದ ವಿರಹಿಜನಜೀವನಮಂ ೯೫

(ಲೀಲಾವತಿ ೧೪-೭)

ಜಳಕೇಳಿಯ [3]ಪೋರ್ಕು[3]ಳಿಯೊಳ್
ಪೊಳೆವಾರಂ ಪಱಿಯೆ ಸೂಸಿ ಕಂಟಕದೊಳ್ ಕೋ
ದೆಳಮುತ್ತುಗಳೆನೆ ನಿಂದುವು
ಜಳಬಿಂದುಗಳಂಗನಾಪಯೋಧರತಟದೊಳ್ ೯೬

(ಲೀಲಾವತಿ ೧೪-೧೪)

ಮುಡಿದ ತಳಿರ ತೊಂಗಲ್ ಜೋಲ್ದು ಬಂದಗ್ರದೊಳ್ ತಾಂ
ತೊಡರೆ ತಳವಿಳಾಸಂ ತಳ್ತ[4]ವೋಲ್ ಬಿಂ[4]ದು ಚೆಲ್ವಂ
ಪಿಡಿಯೆ ನಖನಿಕಾಯಂ ವಾಮಹಸ್ತಂಬೊಲಿಂಬಾ
ಯ್ತಿಡಿದು ತೊಳಪ ಕರ್ಪಿಂ ಕಾಮಿನೀಕೇಶಹಸ್ತಂ ೯೭

(ಲೀಲಾವತಿ ೧೪-೯)

ಭೂವರನಿತ್ತಂಬರಭೂ
ಷಾವಳಿಯಂ ತೊಳಪ ತೋರಮುತ್ತಿನ ಮೊತ್ತಂ
ಪೋವಣಿಗೆವಡೆದುದೆಂಬಿನ
ಮಾ ವರವನಿತೆಯುರದೇಂ ಮನಂಗೊಳಿಸಿದರೋ ೯೮

(ಅನಂತನಾಥಪುರಾಣಂ ೭.೫೪)

ಲಿಲವಿನೋದದೊಳ್ ಹರಿ ತುಳುಂಕಿದ ಕುಂಕುಮವಾಃಕಣೋತ್ಕರಂ
ಮಲಯಜವಾಃಕಣಾವಳಿ ಮೃಗೋದ್ಭವವಾಃಕಣವೃಂದಮೀ ಲತಾ
ಲಲಿತೆಯರಂಗದೊಳ್ ತೊಡರ್ದು ಪೋಗದೆ ನಿಂದುವೆನಲ್ ವರಾಂಗನಾ
ವಲಿಗೆಸದತ್ತು ಮಾಣಿಕದ ಮುತ್ತಿನ ನೀಲದನರ್ಘ್ಯಮಂಡನಂ ೯೯

(ಜಗನ್ನಾಥವಿಜಯಂ ೧೪-೧೧೪)

ಮಾವಿಂಗಿದು ಮಲ್ಲಿಗೆಗಿದು
ತಾವರೆಗೊಳಕಿದು ದಲೆಂದು ಪೆಸರ್ವೆಸರಿಂ ಭೂ
ಷಾವಳಿಸಕಲಂಗಳುಮನಿ
ಳಾವಲ್ಲಭನಿತ್ತನಾತನೆಡಱಿಬೋಡುವಿನಂ ೧೦೦

(ಚಂದ್ರಪ್ರಭಪುರಾಣಂ ೭-೧೫೧)

---

[1] ಮುಗುೞ್ (ಅ) [2] ಘಟಿ (ಖ ಬ) [3] ಬಾಕು (ಅ) [4] ವಾರ್ಬಿಂ (ಅ)

ವನಮದು ಸುರಕುಜದಾರವೆ
ವನಜಾಕರಮದುವೆ ಸಿದ್ಧರಸಕೂಪಂ ತಾ
ನೆನಿಸೆ ನೃಪಂ ವನಜಳಕೇ
ಳಿನಿಮಿತ್ತದಿನರ್ಥಿಗೀಪ್ಸಿತಾರ್ಥಮನಿತ್ತಂ ೧೦೧

(ಚಂದ್ರಪ್ರಭಪುರಾಣಂ ೭-೧೫೨)

ಕೆಲಂ ದಾಳೋ[1]ಕಿತಚುಂಬಿತ[1]ಪ್ರಸರದಿಂ ಹಸ್ತಾಬ್ಜವಿನ್ಯಾಸದಿಂ
ಕೆಲಂ ದಾಂದೋಳಿತಮೌಳಿಯಿಂ ಕೆಲಂದು ತಾಂಬೂಲಪ್ರದಾನಂಗಳಿಂ
ಕೆಲಂ ದಾನಮ್ರಶಿ[2]ರಃಕರಾಂಜುಳಿ[2]ಪುಟವ್ಯಾಲಗ್ನಭಾಳಂ ಜಗ
ಕ್ಕೆಲಿಕೆಯಂ ಬೀಟಿಕ್ಕೊಡೆ ಪೋಯ್ತು ರಾಜಗೃಹದಿಂ ಸೌಜನ್ಯರಾಜನ್ಯಕಂ ೧೦೨

(ಅನಂತನಾಥಪುರಾಣಂ ೭-೫೭)

ಘುಸೃಣರಸಾವಗಾಹಭರಮಂ [3]ರದನಚ್ಛದ[3]ರಾಗಭೋಗವಾ
ಗಿಸೆ ಘನಸಾರಚಂದನಜಳಪ್ಲವಮಂ ದರಹಾಸಕಾಂತಿಗಳ್
ಪಸರಿಸೆ [4]ಮನ್ಮಥೋ[4]ತ್ಸವರ[5]ಸಾ[5]ಮೃತದೊಳ್ ಮುಳುಗಾಡಿ ಮೂಡಿ ಸಂ
ದಿಸೆ ಪುಲಕಂ ನೃಪಂ [6]ಮೆಱೆದ[6]ನಂಗನೆಯೊಳ್ ಜಲಕೇಳಿಲೀಲೆಯಂ ೧೦೩

(ಅನಂತನಾಥಪುರಾಣಂ ೨-೧೯)

ಓರಂತೆ ಮೆಚ್ಚಿದಂ ಕೃತಿ
ಸಾರಂ ಜಲಕೇಳಿಗಿಂತು ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋೞರಸಮುದ್ರಾಧಿನಾಯಕಂ ಸೋಮನೃಪಂ ೧೦೪

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸು ಧಾ ರ್ಣ ವ ದೊ ಳ್
ಜಲಕ್ರೀಡಾವರ್ಣನಂ ದ್ವಾದಶಾಶ್ವಾಸಂ ಸಂಪೂರ್ಣಂ

---

1 ಕನಚಂದ್ರಿಕಾ (ಅ) ಕಸಚುಂಬಕ (ಕ) ಕಸಚುಂಬಿತ (ಬ) 2 ರಸ್ಕಮುಂಜಲಿ (ಅ)
3 ಡನನುತ್ಸವ (ಖ ಬ) 4 ತನ್ಮನೋ (ಕ ಖ ಬ) 5 ತಾ (ಕ ಖ ಬ) 6 ಪಡೆವ (ಅ)

# ಮಧುಪಾನ ವರ್ಣನಂ*

ಮದಿರಾಪಾನವಿಕಾರಮುಂ ನವವಯಸ್ಸಂಪತ್ತಿಯುಂ ಒಂದು ನೋ
[1]ಡ[1]ದವೋಲ್ ನೋಡುಪ ನಲ್ಲನಿ[2]ರ್ಪಿ[2]ರವುಮತ್ಯುತ್ಸಾಹಮುಂ ಮಾ[3]ಡೆ[3] ಚಿ
ತ್ತದೊಳಾಗಳ್ ತನುಮಧ್ಯೆಗೇನೆಸೆದುದೋ ನೃತ್ಯಂ ಚತುರ್ಭಂಗಿ ಭೇ
ದದ ಲೀಲಾಭಿನ[4]ಯ[4]ಪ್ರಧಾನವಿಧಿಯಿಂ ಕಾದಂಬರೀಗೋಷ್ಠಿಯೊಳ್ ೧

(ಶೃಂಗಾರರತ್ನಾಕರಂ ೨-೭೧)

ಮನಮನೊಜಿಲ್ಚೆ ನೂಪುರದ ಮೆಲ್ಲುಲಿ ಕಾಂಚಿಯ ಮಂಜುಳಸ್ವನಂ
ತನಗಿನಿದೀಯೆ ಕಂಕಣಝಣತ್ಕೃತಮೊಪ್ಪಿರೆ ತಾರಹಾರಮೊ
ಯ್ಯನೆ ಮೊಲೆಯಂ ಪಳಂಚಲೆಯೆ ರಾಗರಸಂ ಕರೆಗಣ್ಮೆ [5]ಬಂದು[5] ಕಾ
ಮಿನಿ ನಯದಿಂ ಕರಂ ನಲಿದು ನರ್ತಿಸಿದಳ್ ಮಧುಪಾನಗೋಷ್ಠಿಯೊಳ್ ೨

(ಶೃಂಗಾರರತ್ನಾಕರಂ ೧-೪೫)

ಮದಿರಾಪಾನವಿಕಾರ[6]ದಿ
ನೊದವಿದ ಮುಗ್ಧೋಕ್ತಿ ಬೇಜಿತ ಬಗೆಗೊಳಿಸೆ[6] ಕದ
ಕ್ಕದಿಸೆ ಮೊಲೆ ನಡುಗೆ ನಡು ಮಿಳಿ
ರ್ದದಿರೆ ಕುರುಳ್ ಸುದತಿ ಜತೆಗೆ ಮೆಟ್ಟಿದಳೊರ್ವಳ್ ೩

(ಶೃಂಗಾರರತ್ನಾಕರಂ ೧-೪೭)

ಇರೆ ನವಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋ
ಹರಿ ತಳಿರ್ದೋಂಗಲಂ ತಳೆದ ಕೋಮಲವಲ್ಲರಿಯಂತೆ ರಕ್ತಪಂ
ಕರುಹಮನಾಂತ ಪಂಕಜಿನಿಯಂತೆ ನವೋದಿತಚಂದ್ರಬಿಂಬಮಂ
ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ ೪

(ಜಗನ್ನಾಥವಿಜಯಂ ೧೬-೧೧೫)

---

* ಈ ಪ್ರಕರಣದ ಆರಂಭದಲ್ಲಿ ಇತರ ಆಶ್ವಾಸಗಳ ಪ್ರಾರಂಭದಲ್ಲಿ ಇರುವಂತೆ ಆಶ್ವಾಸದಲ್ಲಿ ವರ್ಣಿತವಾಗುವ ವಿಷಯಗಳನ್ನು ಸೂಚಿಸುವ ಸಂಗ್ರಹರೂಪವಾದ **ಬಹುಶಃ** ಮಲ್ಲಿಕಾರ್ಜುನನಿಂದಲೇ ರಚಿತವಾಗಿರಬಹುದಾದ ಒಂದೆರಡು ಪದ್ಯಗಳು ಇಲ್ಲವಾಗಿವೆ.

1 ಡಿ (ಖ ಬ) 2 ರ್ದಿ (ಖ ಬ) 3 ಡಿ (ಖ ಜ) 4 ವ (ಅ) 5 ವಾರ (ಖ ಗ ಘ ಬ) 6 ದೊಳೊದವಿರೆ ಮುಗ್ಧೋಕ್ತಿ ಕಣ್ಗೆವರೆ ಗಾಡಿ (ಅ)

ನಡೆ ತಡಮಾಗೆ ನುಣ್ಣುಡಿ ತೊದಳ್ಗೊಳೆ ರ್ಝೊಂಪಿಸೆ ಕೆಂಪನಾಳ್ದು ಕ
ಣ್ಣುಡಿ ತನು ಡಿಳ್ಳಮಾಗೆ ಬಿದುವಿಂ ಪ್ರೊಳಪೇಱೆ ಕದಂಪು ಕಾಂತಿಯಿಂ
ಸಡಿಲೆ ಪೊದಟ್ದ ನೀವಿ ಮಧುಪಾನವಿನೋದದಿನಾದ ಸೋಂಕು ಚೆ
ಲ್ವಿಡಿದಿರೆ ಬರ್ಪ ಗೋಪಿ ಮುರವೈರಿಗೆ ಕಾಣಿಕೆಯಿಕ್ಕಿ ಸೊಕ್ಕಿದಳ್ ೫*

ಪಚ್ಚೆ ಪರಕಲಿಸಿ ಬೆನ್ನೊಳ್
ಬಿಚ್ಚಿರೆ ಮುಡಿ ಕಳ್ಳ ಬೆಳ್ಳಿವಟ್ಟಲ್ ಬಾಯೊಳ್
ಬೆಚ್ಚಂತಿರೆ ಸತಿ ಸಸಿಯಂ
ಕಚ್ಚೆ ನೆಲಕ್ಕಿಟಿಂವ ರಾಹುವಂ [1]ಪೋಲ್ತಿರ್ದಳ್[1]† ೬
(ಶಬ್ದಮಣಿದರ್ಪಣಂ ೨೫೦-೬)

ತೊಡರೆ ಕೊದಳ್ ಪೊದಟ್ದು ತುದಿನಾಲಗೆಯೊಳ್ ನಸುಗೆಂಪಿನಿಂದೆ ಕ
ಣ್ಣೊಡೆದು ಪಳಂಚಿ ಪುರ್ವನೆವೆಯಿಕ್ಕುವ ತಗ್ಗುವ ತೂಗಿ ಬೀಗುತೊ
ರ್ಗುಡಿಸುವ ಜೋಲ್ವ ರ್ಝೊಂಪಿಸುವ ಭಂಗಿ ಮನಂಗೊಳೆ ತಕ್ಕಿನೆಕ್ಕೆಯೊಳ್
ತಡತಡಮೆಟ್ಟೆ ಪಾಡಿ ಪೊಸಕಳ್ಗಳನೀಂಟಿದುದಂಗನಾಜನಂ ೭

ಮುಡಿ ಮಕರಧ್ವಜಂಬೊಲೆ[2]ಬಿಲು[2]ತ್ತಿರೆ ಬೆಂಬಿಡದೊಯ್ಯನೊಯ್ಯನು
ಳ್ಪುಡೆ ಕಟಿಸೂತ್ರದೊತ್ತಿನೊಳೆ ಜೋಲ್ದಿರೆ ನಾಣ್ ತಲೆದೋಱೆ ಕೂಡೆ ಕೂ
ಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ ತನ್ನ ತೊಡಂಕದೈದೆ ನೂ
ರ್ಮಡಿ ಮನದೊಳ್ ಪಳಂಚಲೆಯೆ [3]ಢಕ್ಕೆಯೊಳಟ್ಟಿ ಜವಾಗೆಯಾಡಿದಳ್[3] ೮
(ಪಂಪಭಾರತಂ ೪-೯೦)

ತೋರಮುಡಿ ಬಿ[4]ಟ್ಟೆ[4]ಪ್ಪುದಾರುಣಿಯೊಳಗ್ರಕಚಮಾರತಿಯನೆತ್ತೆ [5]ವದನೇಂದು
ಗಲರ್ಗಣ್ಗಳ್[5]
ತೋರವೊಲೆ ಹಾರಮಣಿ ಕಾರಮುಟಿಱಯಂ ಕಱೆಯೆ ಸೀರೆ ನಸು ಜಾಱೆ ಪೊಱಮಾ
ಱ[6]ಲೆಪದಿಂದಂ
ದಾ[6]ರಮನ[7]ಮುಂ[7] ಸ್ಮರವಿಕಾರ[8]ಮುಸೆ[8] ತಾ[9]ಳೆ ಲಲಿತೋರು ಭರ[9]ದಿಂದೊಲೆದು[10]ಮೆಟ್ಟಿ[10]
ಕುಣಿದಳ್ ಶೃಂ
ಗಾ[11]ರರಸವಾರಿನಿಧಿ ಮೇರೆಯನತಿಕ್ರಮಿಪ ವಾರವಧುಗಳ್ ನುಡಿದು ಸೊರ್ಕಿವೆಸವಿ
ಟ್ಟಿರ್[11] (?) ೯

---

*ಈ ಪದ್ಯ (ಕ) ಪ್ರತಿಯಲ್ಲಿ ಅಸ್ತವ್ಯಸ್ತವಾಗಿದೆ. † ಈ ಪದ್ಯ (ಕ) ಪ್ರತಿಯಲ್ಲಿಲ್ಲ.
1 ನೆರೆಪೋಲ್ತಳ್ (ಗ ಘ) 2 ಲೊರೆ (ಖ ಬ) 3 ತೆಕ್ಕೆಯಿನೆಕ್ಕೆಯೊಳೊರ್ವಳಾಡಿದಳ್ (ಕ ಖ ಬ) 4 ಟ್ಟು (ಕ) 5 ಕರವಾರಿಜಚಯಂಗಳ್ (ಕ) 6 ಮುವದಿಂದಂದಾ (ಕ) ಲೆಸೆದಿಂತುದಾದ್ದ (ಖ) 7 ಮಂ (ಖ ಙ) 8 ಮಂ (ಕ ಬ) 9 ಳಿ ನಿರನೂರುಬಲ (ಕ) 10 ಯೇರಿ (ಖ ಬ) 11 ರ ರೇಸವಿಯು ಹಿವಾರಿ ಹಿಗೆ ಸೊರ್ಕುತ ನುದಿರನುನೆ ನೀಂಟಿದವನಾರ ವಧುವೃಂದಂ (ಕ)

ತುಂಬಿಗುರುಳೊಳ್ ತಡತಡಂಬಡರೆ ತುಂಬಿಗಳ [1]ಬಿಂಬವಮಾಲೆಗಳ ಮುಖವಾಸವದ[1] ಕಂಪಂ
ಪೊಂಬಳೆಯ ಸೋರ್ಮುಡಿ ವಿಡಂಬಿಸೆ ಮನೋಜನಲರಂಬು ಮಟಿ[3]ಯಂ ಕಱಿ[3][2]ಯೆ ಕಾರಮುಗಿಲಂ ಬ[2]
ಕ್ಕಂಬಯಲೊ[3]ಳಿಂ[3]ಬಮರ್ದು ಮೀಂಬೊಣರ್ಗಳಂತಿರೆ ತೆಱಿಂಬೊಳೆವ ನೀಳ್ದ ನಿಡುಗಣ್ ಬೆಳಗೆ ತೊಂ
ಡಂ ಬೆಳಗೆ [4]ತೊಂಡರದ[4] ಮಾಟಿಕ್ಕಿ[5][ಯಿನೊಡಂಬಡುತಲಾಡಿದಳು ಬೆಂಬಟಿಯ ಸಂಭ್ರಮದಲೊರ್ವಳ್][5] (?) ೧೦

ಕೊಂಕೆ ಪುರ್ವು ತೊಡಂಕೆ ಸೋರ್ಮುಡಿ ನಾಣ ಪೊಂಕ ಮಡಂದಿ ತಾಂ
ದಿಂಕುಗೊಂಡೆಳಸೊರ್ಕು ಜಕ್ಕುಲಿಪಂತೆ ಮಿಕ್ಕಡದಿಂದ ರಾ
ಗಾಂಕುರಂ ನೆಗೆವನ್ನವಾಗಿರೆ ಮೆಯ್ಬೆಮರ್ ನಲಿದುಣ್ಮೆ ತ
ಳ್ಳಂಕಗುಟ್ಟೆ ಮುಟುಂಗಿ ಪೊಣ್ಮೆ ನಿತಂಬದಿಂ ಮದನದ್ರವಂ (?) ೧೧

ತೊಲಗೆ ಮೇಲುದನುರ್ಚಿ ಸಾರ್ಚಿದ ಬಾಳ್ವೊಲಿರ್ದ ಲತಾಂಗಿಯಂ
ಜಲಕನಾಗಿರೆ ಕಣ್ಗೆ ಸೊಕ್ಕಿನ ರೂಪು ಬೀಗಿ ಬೆಳರ್ತ ಬಾಯ್
ಮೊಲೆಯ ಬಿಂಕಮೆ ಸೋಂಕಿ ಕಿಂಕೊಳಿಯಾಗಿ ನೋಟ್ಪರ ಚಿತ್ತದೊಳ್
ಮೊಳೆಯಲಬಲೆ (?) ಬೆಡಂಗೊಡಂಬಡೆ ಚೋದ್ಯಮಾಯ್ತು ಮದೋದ್ಯಮಂ ೧೨

ತುಱುಗಿ ತುಂಬಿಗುರುಳ ಬಂಬ[6]ಲೀ[6] ಕಪೋಲರಂಗದೊಳ್
ತುಳುಂಕೆ [7]ಪೊಕ್ಕ ಪಾಂಗಿನೊಳ್[7] ಮಲಂಗೆ ವಿಜಯಮಂಗದೊಳ್
ಮಿಱುಗೆ ಪಲ್ಲ ಛವಿಗಳೊಲೆದು ನೆಲಸಿ ಚೆ[8]ಲ್ವನಾಯ[8]ದೊಳ್
ಬೆಡಂಗು ಬಳೆಯೆ ಮಾನದೊಳ್ ಮನಂ ತೊಡಂಕೆ [9]ಗಾನ[9]ದೊಳ್
[10]ಪೊಱಿವ[10] ನವಪಯೋಧರೋತ್ಥ ಕುಂಭಮುಲಿಯೆ ಪಾದದೊಳ್
ಚಳಾಂದುಕಂ ವಿನೋದದೊಳ್ ಕಡಂಗೆ ಮಧುರ ಮೋದದೊಳ್
ಪೊಱಿದು ಪುಗುಗುಮಂಗನೆಯರುಮಂಕದಾನೆಯುಂ ನಮ
ಸ್ಕಿಕಾಮನಿಖಿಳಭುವನಮಂ ತದೀಯ ರಾಜಭವನಮಂ ೧೩

(ಲೀಲಾವತಿ ೭-೨೩)

ಕುಡುಪುರ್ವಂ ನಸು ನೀವುತುಂ ತಿಲಕಮಂ ತಿರ್ದುತ್ತುಮಾಸ್ಯಾಬ್ಜಮಂ
ತೊಡೆಯುತ್ತುಂ ಕುಟಿಲಾಳಕಾವಳಿಗಳಂ ಸೈತೊತ್ತಿ ಚೆಲ್ವಾಗೆ ನೇ
ರ್ಪಡಿಸುತ್ತುಂ ಮದಿರಾಲಸೇಕ್ಷಣೆ ಮದಸ್ತಂಬೇರಮಾಕಾರದಿಂ
ನಡೆಪಾಡುತ್ತುಮುಪಾಂಗಣಪ್ರಘಣದೊಳ್ ತನ್ವಂಗಿ ಕಣ್ಗೊಪ್ಪಿದಳ್ ೧೪

---

[1] ವೆಳಸುತ್ತಿರೆ ಮುಖಾಂಬುಜದ (ಗ ಘ) [2] ಯಲಂಬುದಮಿಡೆಂಬ (ಗ ಘ) [3] ಳಂ (ಗ) [4] ಚೆಂಬುದರ (ಗ ಘ) [5] ಯಕೊಡಂಬಡೆಯೆ ಕಾಲಲಿತಬೆಂಬಱಿಯೊಳಾಡಿದಳಡೊರ್ವಳ್ (ಕ ಖ ಬ) [6] ಲಿದೆ (ಅ) [7] ಪೊಂಗರಂಗದೊಳ್ (ಅ) ಸೊರ್ಕಪಾಂಗದೊಳ್ (ಕ) [8] ಲ್ವಯಾನ (ಅ) [9] ದಾನ (ಅ) [10] ನೆಱಿಯೆ (ಅ)

ಆಲರ್ಗಣ್ಣ ಕುರುಳ ನೆಟಿಲಂ
ಲಲನೆಯರಾ ಮದಿರ ಮಂಡ[1]ನಂಗ[1]ಳ ನೀಲೋ
ತ್ಪಲದಳಮುಣ್ಮಲ್ ಮಿಗೆ ಕ
ಟ್ಟಲಿಸದೆ ನಡೆನೂಂಕಿ ನೋಡಿ ಬೞಿಕವನಱಿವಳ್ (?) ೧೫

ಕಡೆಗಣ್ಣ ಬೆಳ್ಪು ಕೆಂಪಿಂ
ಗೆಡೆಗುಡೆ ಬೆಳರ್ವಾಯ್ ಪಳಂಚೆ ಸೊಗಯಿಸೆ ಮುದ್ದಿಂ
ಗೆಡೆಗುಡದೈತಂದುಂ ಸೊ
ರ್ಕಡನುಡಿವಂತೆ [2]ಕೊ[2]ದಳ್ ಪೊದಱಿೞ್ದಡಂಬಡೆ ನುಡಿದರ್ ೧೬

ಕಾಯದೆ ಕಣ್ಬರಿಯಂ ತಂ
ಗಾಯದೆ ನಿಮಗರಸನಾಣೆಯೆನೆಯೆನೆ ನೃಪತಿಯ
ನಾಯಕಿಯೊಳ್ ನೆರೆದಿರ್ದ ಪ
ಸಾಯತರಂ ಗೊಡ್ಡಕಾರ್ತಿಯರ್ ಪಿಡಿದೆೞೆವರ್ (?) ೧೭

ತಱತಱಮೆಟ್ಟಿ ರಾಗಪೊಡಗೂಡಿ ಬೆಡಂಗು ಪರಿಶ್ರಮಂಗಳೊಳ್
ನೆಱೞದಿರೆ ನೂಲತೊಂಗಲ ತಲಾರದ ಮೆಲ್ಲುಲಿ ಪೆರ್ಚೆ ಮೆಲ್ಪು ಮ
ತ್ತ್ರೊಱಗೆ ಕರಂಗಳಿಂ ನಿಱದುಱುಂಬಿದೆವಾದ್ಯದೊಳೊಂದಿ ನಿಂದು ಮುಂ
ದೆಱಗಿ ಲಯಂಗಳೊಳ್ ತಗುಳಿ ನರ್ತಿಸಿದಾಕೆಯರೊಪ್ಪಿ ತೋಱಿದರ್ (?) ೧೮

ಇಱಮುದಕದಂತೆ ಹಾಲಿನ
ನಱುಸೋನೆಯಲುಂಡ ಬಣ್ಣದರಲ್ಗಳ ಸೊನೆಯಿಂ
ತುಱುಕಿನ ಜೋ[3]ಲುವ ತಿಳಿಗಳ[3]
ನೆಱಗಿದರಾ ಜನಮನಳುರೆ ಹೊಸ ರಸವಣಿಗರ್ (?) ೧೯

ರಸವಣಿಯನುಂಡ ಗೊರವಿತಿ
ಪೊಸತಾಶೀರ್ವಾದವುಳ್ಳದೊಂದೆಂದಾಗಳ್
ಬಸಿಗಳ್ಳಿಂಗೆ ಮಹೀಶರ
ಪಸಾದ ಸುರುಕವಡೆ ಕವಡೆ ಹರಿವೋ ಎಂದಳ್ (?) ೨೦

ಏಗುವೆನೇಗುವೆಂ ಮುಗಿಲು ಬಿದ್ದಿದೆ ಮಂಡೆಯ ಮೇಲೆ ಹಾವು ಹಾ
ನಾಗಯಸಾಮಿ ಜೋಯೆನುತೆ [4]ಕ[4]ತ್ತೆಗೆ ಕೈಮುಗಿದಕ್ಕ ಬಲ್ಲೆನಾಂ
ಬಾ[5]ಗಿ[5]ಯ ಕಂತ್ರ[6]ಗ[6]ಣ್ಣಿ ಗೆಱ3 ಸೋದರನಾದಿನಿ [7]ಧಿಂ ದಿಮಿಕ್ಕ ಧಿಂ[7]
[8]ಕೋ[8]ಗಿಲೆಗೂರು ಸಾರೆಯೆನುತೊರ್ವ [9]ಪುಳಿಂದಿನಿ ನಾಟ್ಯ[9]ವಾಡಿದಳ್ (?) ೨೧

1 ವಂಗ (ಬ) 2 ತೊ (ಖ ಬ) 3 ಜುತಿಳಿಗಳೆನೆನೆ (ಕ) 4 ಕೆ (ಫ) 5 ಲ (ಫ ಯು (ಫ) 7 ಥಿಮ್ಮಿ ಥಿಮ್ಮಿತೋ (ಫ) 8 ಕೂ (ಕ) 9 ಳುಸೊಕ್ಕಿಯೆ ನೃತ್ಯ(ಫ)।

ನಗುಗೇ ಬಾಲಕಿ ಬ[1]ಯ್ಯೆ[1] ನಿನ್ನ ಮೊಲೆಯಂ ಕೊಂಡೊಯ್ದರಾರ್ ಭಾವನೆ
ಲ್ಲಿಗೆ ಕೊಲ್ಲಾಪುರಕೇಕೆ ನಾಯ್ಗುಣಿಸನಿಕ್ಕಲ್ ತಕ್ಕುಹೇನಕ್ಕ ಬೇ
ಸಗೆ ಬಾದಾವಿಯ ಬೆಟ್ಟಕಣ್ಣನದನಾಂ ಬಲ್ಲೆಂ ಎನುತ್ತೊರ್ವಳು
ರ್ವಿಗೆ ಬಿೞ್ದಯ್ಯನೆಯೆದ್ದು ಬಾಗಿ ಮಧುಪಾನೋನ್ಮತ್ತೆ ತೂಗಾಡಿದಳ್ ೨೨

ರಸಮೆ ರಸಂಬೊಲಿಂಬನೊಳಕೊಂಡಿರೆ ಭಾವಮೆ ಜೀವಮಾಗೆ ಚಾ
ರಸಮಳವಟ್ಟು ತೋಱೆ[3] ಜತಿಯಂ ಕೊಳೆ ಕಾಲ್ದುಱುಗಲ್ ಬೆಡಂಗುವೆ
ತ್ತೆಸೆದಿರೆ ಚೆ[2]ಲ್ವೊ[2]ಡಲ್ ಶಬರಿ ಸಂಭ್ರಮಮಾಗಿರೆ ಪೆರ್ಚಿ ಜಾಣ್ಮೆಯೊಳ್
ಕುಸುರಿಯೊಳಾಡಿದಳ್ ದ್ರುತವಿಲಂಬಿತ ಮಧ್ಯಲಯಕ್ರಮಂಗ[3]ಳಿಂ[3] ೨೩

ಪಿಡಿದೊಡೆ ರಾಹು ಕಳ್ಳೊಳಗೆ ನಿಕ್ಕುವಮ[4]ಲ್ತಿ[4]ದನಿಂತು ನಂಬು ನೀಂ
ಜಡಿವೊಡೆ ನಿನ್ನ ರೋಹಿಣಿಯುಮಿಲ್ಲ[5][ೞಕಾತ][5]ರಮೋಘಮೇಕೆ ನೀಂ
ನಡುಗುವೆಯಕ್ಕುಮಾಗಳೞಿದೆಂ ಪೊಸವೆಂಡಿರೊಳೊಲ್ದು ಕೂಡುವಾ
ಗಡಿನ ಭಯಂ ವಿಟಂಗೆ ಪಿರಿದಪ್ಪುದು ಶಂಕಿಸದಿರ್ ನಿಶಾಕರಾ ೨೪

ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ತೆಗೆದೀಂಟುವಲ್ಲಿ ತ
ನ್ನಧರದ ರಾಗದೊಳ್ [6]ಪೊಳೆದುದಂ ಮಧುವಂ[6] ಬೆಱಗಾಗಿ ನೋಡುತುಂ
ಮಧುರಸಮಲ್ತು ಕುಂಕುಮರಸಂ ದಿಟವೆಂದು ಬೞಿಕ್ಕೆ ಶಂಕೆ ತ
ನ್ಮಧುರಸಗಂಧದಿಂ ತೊಲಗೆ ಸೇವಿಸಿದಳ್ ಮಧುವಂ ನಿಜೇಚ್ಛೆಯಿಂ ೨೫

(ಜಗನ್ನಾಥವಿಜಯಂ ೧೬-೧೧೬)

ತನುಲತೆಗಂಕುರಂ ತಳಿರಲರ್ ಮಧುಸಂಗದೊಳಾಯ್ತು ಚೋದ್ಯಮೆಂ
ದೆನೆ ಮಧುಪಾನಜಾತಪುಳಕೇಕ್ಷಣ ಶೋಣಿ[7]ತ[7] ಘರ್ಮಬಿಂದುಗಳ್
ತನಗೆಸೆಯಲ್ ಮಹೋತ್ಸವದೆ ಕೋಗಿಲೆ[8]ವೆಣ್[8] ಗೞಪಂ ನೆಗೞ್ಚು[9]ವಂ
ತನುವಿಪ[9] ಸೊರ್ಕಿನಿಂ ಪಿಕನಿನಾದೆ ಪೆಱಳ್ ಗೞಪಂ ನೆಗೞ್ಚಿದಳ್ ೨೬

(ಜಗನ್ನಾಥವಿಜಯಂ ೧೬-೧೧೭)

ಎಮ್ಮ ಕೆಲಂಗಳೊಳ್ ಮೆಱೆವುತಿರ್ದಪುವೀ ಶ್ರುತಿಪೂರಕೈರವಂ
ತಮ್ಮ ಬೆಡಂಗನೆಂದು ನೆಣಸುತ್ತವೞಿೞ್ ತೊ[10]ಡರ್ದಿಂತ[10]ವಲ್ತೆ ಕೆಂ
ಪಂ ಮುಳಿಸಿಂದವಾಂತವೆನೆ ಕೆನ್ನೆವರಂ ನಿಮಿರ್ದಕ್ಷಿಗಳ್ಗೆ ರಾ
ಗಂ ಮಧುಸೇವೆಯಿಂ ನೆಗೞೆ ರಂಜಿಸಿದರ್ ಮಧುಮತ್ತಕಾಂತೆಯರ್ ೨೭

(ಜಗನ್ನಾಥವಿಜಯಂ ೧೬-೧೧೮)

---

[1] ಯ್ತ (ಗ) [2] ಲ್ವಿ (ಕ ಖ ಘ ಬ) [3] ಳಂ (ಖ ಬ) [4] ಲ್ಲಿ (ಕ) [5] ನಿತಾದ (ಕ) [6] ಪೊರೆದುದಂ ಮನದೊಳ್ (ಅ) [7] ಮ (ಅ) [8] ಯೊಲ್ (ಕ ಖ ಬ) [9] ತುಂ ತನುವಿನ (ಕ ಖ ಬ) [10] ಡರ್ದತ್ತಿ (ಕ ಖ ಬ)

ನೊಲೆಯಂ ಕದ್ದವರಾರೊ ನಮ್ಮೊಳಗೆ [1]ನೀನೇ ನೀನು[1]ಮಾನೆಂದುಮೊ
ರ್ಬ ಲತಾಗಾತ್ರಿಯ ಮೇಲೆನಲ್ಕೆ ಪಿರಿದೊಂದು ಭ್ರಾಂತಿಯಿಂ ತನ್ನ ಪೆ
ರ್ಮೊಲೆಯಂ ತೋಱಿದೊಡಾಹಹಾ ಮಱೆದೆನಾಂ ನೋಡಕ್ಕ ಚಿಕ್ಕಮ್ಮನಂ
ಗೊಲವಾಯ್ತಣ್ಣನ ಸಾರ್ಗೆಯೆಂದು ಮಧುಪಾನೋನ್ಮತ್ತೆ ಮಾತಾಡಿದಳ್ (?) ೨೮

ಕಡಲೆಯ ಕಟ್ಟಿಲೆಯ ಬೇಲದ
ಮಿಡಿವಾಗಳದೊಪ್ಪೆಯೆಳೆಯ ನೀರುಳ್ಳಿಯ ಮಾ
ವಿಡಿಗಳ ಪಸುಂಬರಿಯ ಸವಿ
ದಡಗಿನ ಬಾಡುಗಳ ನೆಲದೊಳೇಂ ಬೇಯಿಸಿದರ್ ೨೯

ಕುಡಿದಾನಂದದೆ ಸೊರ್ಕಿ ಬ[2]ಟ್ಟೆ[2]ಯವರಂ ಕಂಡೆಯ್ದಿ ವಸ್ತ್ರಾಂತಮಂ
ಪಿಡಿದೈ ಭಾವ ಎನುತ್ತುಮಾಗ ಕುಡು ತಾರಾ ತೂಗನಾ ಮೂಗನಂ
ಗಡಿಗೊಯ್ದಾ ಹರದಂಗೆ ಮಾಱಿದೆಯಲಾ ಪೋಯೆಂದು ತಾಂ ಮೂಗು ಪೊಂ
ದೊಡವೇನೇ ಕುಟಿಲಕ್ಕ ದೀವಳಿಗೆ ಬಾಳೆಂದುರ್ಬಿ ಜರ್ಬಾಡಿದಳ್ (?) ೩೦

ಗಾಳಿಗೆ ಮಾತನಾಡುವರು ಹಾರುವ ಹಕ್ಕಿಗೆ ಜೋಹರೆಂಬರೆ
ಳ್ದೊಳುವ ನಾಯ್ಗೆ ಮುದ್ದುಗೊಡಲೀಕ್ಷಿಸುವರ್ ಮರುಳ್ಗಿಂಗೆ ಬುದ್ಧಿಯಂ
ಹೇಳುವರುಟ್ಟುದಂ ಕಳೆದು ನೆತ್ತಿಗೆ ಸುತ್ತುವರಬ್ಬಿಯಿಂದೆ ಕಾ
ಬಿಳ್ಳೇಬಿಗಳಾಗಿ ಕೂಗುವರದೇಂ ಮಧುಪಾನದ ಸೊರ್ಕು ಸಾಲದೇ ೩೧

ಓರಂತೆ ಮೆಚ್ಚಿದಂ ಕೃತಿ
ಸಾರಂ ಮಧುಕೇಳಿಗಿಂತು ಹೊಯ್ಸಳವಂಶೋ
ದ್ಧಾರಂ ನರಸಿಂಗಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೩೨

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸು ಧಾ ರ್ಣ ವ ದೊ ಳ್
ಮಧುಪಾನವರ್ಣನಂ ತ್ರಯೋದಶಾಶ್ವಾಸಂ ಸಂಪೂರ್ಣಂ

---

[1] ನೀನೆನಲಾನು (ಖ ಚ) [2] ಟ್ಟ (ಕ)

# ಸಂಭೋಗ ವರ್ಣನಂ

ಪರಿರಂಭಂ ಚುಂಬನಂ ಸೀತ್ಕೃತಿ ಗಳರುತಿ ದಂತಕ್ಷತಂ ರೇಖೆ ಹೊಯ್ಗುಳ್
ಕರಣಂಗಳ್ ಪಲ್ಲಟಂ ನಚ್ಚಿನ ಮುಖರ[1]ತೆ[1] ಸುಯ್ ಕಂಪನಂ ಸ್ವೇದಮಂಗಾಂ
ತರಪೂರಂ ರೋಮಹರ್ಷಂ ನಯನಮುಕುಳನಂ ಮಂಚಚಂಚ[2]ಚ್ಚುಕುಂತೀ[2]
ಸ್ವರಮೊಪ್ಪಲ್ಕೊಪ್ಪುವನ್ನಂ ಮೆಱೆ[3]ಗೆ[3] ಕವಿತೆಯೊಳ್ ನಾಡೆ ಸಂಭೋಗ[4]ದೊಳ್ಪಂ[4] ೧

ರತಿಗೇಹಂ ಹಾಸುಮಂಚಂ ಪಡಿಗವಡಪ[5]ವಿಂ[5] ಗೆಜ್ಜೆ[6]ಯುಂ[6] ಪಾನಕಂ ಧೂ
ಪಿತವಸ್ತ್ರಂ ಮಂಡನಂ ಲೇಪನಮಲರ್ವಸೆ ಪೂ ದರ್ಪಣಂ ವೀಜನಂ ಸ
ತ್ಕೃತಿ[7]ಚಿತ್ರಂ[7] ವೀಣೆ ನೆತ್ತಂ ಸಹಚರಿಯಿವನುಳ್ಳಂಗದರ್ಗೈಕರೂಪಾ
ನ್ವಿತೆ ಜಾಣುಳ್ಳಾಕೆ ಮಾಟ್ಕಿಂ ವಿಟರ್ಗಭಿಮತಮುಂ ಕಾಮಸಾಮ್ರಾಜ್ಯದೊಳ್ಪಂ ೨

ಮದನನೆ ದೈವಮೊಲ್ದೊಲಿಸುವಾಗಮ[8]ವಾಗಮವೆಯ್ದೆ[8] ಕಾಮ[9]ಕೂ
ಟದ ಸುಖಮಲ್ತೆ[9] ಮೋಕ್ಷದ ಸುಖಂ ಪೆಱ[10]ವೋ[10]ದುಗಳಿಲ್ಲವಿಂದ್ರಜಾ
ಲದ ತೆಱನೆಂದು ತೊಂಡುಗೆಡೆಯಿತ್ತುಪದೇಶಿಕನಂತೆ ಕಾಮ[11]ತಂ
ತ್ರ[11]ದ ತಿರುಳುಂ ಕನತ್ಕನಕಪಂಜರಪಿಂಜರಿತಾಂಶುಕಂ ಶುಕಂ ೩

ನೆಲೆಮೊಲೆ[12]ಯೊತ್ತೆ[12] ವಾತಮಧುರಾಮೃತಸೇವನೆಯಿಂದೆ ಪಿತ್ತಮ
ಗ್ಗಲಿಸಿದಲಂಪಿನಿಂದಮಿರುಳೆಂಟು ಪಗಲ್ ಪದಿನಾಱುಗೊ[13]ಳ್ವ[13] ಕೋ
ಟಲೆಯೊಳೆ ಪೋಗುಗುಂ ಕಫಮದಕ್ಕಱಿವೆಜ್ಜರ ಪೇಟ್ದ ಶುಂಠಿ ಪಿ
ಪ್ಪಲಿ ಮೆಣಸೇಂ ತ್ರಿದೋಷ[14]ಹರಣ[14]ಕ್ಕ[15]ಬಲಾಜನ[15]ಸೇವೆ ಸಾಲದೆ ೪

ಪದೆದಮರ್ದಪ್ಪಿದಪ್ಪುಗಳ ಕಾಳಸೆಗಳ್ ಸಮಸಂದು ಪಜ್ರಲೇ
ಪದೊಳೆಣೆಯಾಗಿ ಪತ್ತಿ ಸುರತಶ್ರಮಮುಂ [16]ತಳೆ[16]ವಲ್ಲಿ ಸಾಂಡು ಪ
ತ್ತಿದ ಸಿರಿತಾಱಿಯೋಲೆಗಳನೊಯ್ಯನಗಲ್ಚುವ ಮಾಟಿಕ್ಕಿಯಾದುದೇ
ನೊದವಿದಲಂಪು ದಂಪತಿಗೆ ಪೊಂಪುಱಿವೋಯ್ತೊ ರತಿಪ್ರಬಂಧದೊಳ್ ೫

---

1 ತಿ (ಖ ಬ) 2 ತ್ಸಕಾಂಚೀ (ಖ ಬ) 3 ಯಿ (ಖ ಬ) 4 ವರ್ಣಂ (ಕ ಗ ಘ)
5 ದಿಂ (ಬ) 6 ಯುಂ (ಖ ಬ) 7 ಚಕ್ರಂ (ಕ) ನೆತ್ತಂ (ಗ ಘ) 8 ವೇಡಮುಟೇಹ (ಕ)
9 ಸೌಖ್ಯದ ತೆಱನಲ್ತೆ (ಕ) 10 ತೋ (ಖ ಬ) 11 ತತ್ವ (ಕ) 12 ಯಿಂದೆ (ಖ ಬ)
13 ಳ್ವ (ಖ) 14 ಗರಮೊ (ಖ ಬ) 15 ಧರಾಮೃತ (ಕ ಗ ಘ) 16 ಕಳೆ (ಬ ಘ)

ತಾಗದೆ ಪಲ್ಗಳ್ ತುಟಿ ಹು
ಣ್ಣಾಗದೆ ನಡು ಕಂದದೊಳಗು ನೋಯದೆ ಕೆಲ[1]ಕಂ
ಬಾಗಿ[1] ರತಿರಾಗದುರುಳಿವೊ
ಲಾಗೆ ಕರಂ ಬೀ[2]ಗಿ[2] ಬಾಯ್ಗಳಂ ಚುಂಬಿಸಿದರ್ ೬

(ಶೂದ್ರಕಂ, ಕಾವ್ಯಸಾರಂ ೬೭೭)

ಕದಪಿನ ಕಣ್ಣ ಸಾರ್ಕೆಯನಲಂಕೃತಿವೆತ್ತ ಗಳಪ್ರದೇಶಮಂ
ಪದಕದ ತಾಣಮಂ ಕುಚತಟಾಂತರಮಂ ನಿಜಬಾಹುಮೂಲಮಂ
ಮೃದುರಸನಾಗ್ರದಿಂ ಬಳಸಿ ಚುಂಬಿಸಿದರ್ [3]ಸವಸೀಳ್ದ ನಾ[3]ಗಲೀ
ಕದ ಕುಸುಮಂಗಳಂ ಪಱಿದು ಪತ್ತಿಸಿದಂತೆವೊಲೊಪ್ಪಿ ತೋರ್ಪಿನಂ ೭

(ಶೂದ್ರಕಂ, ಕಾವ್ಯಸಾರಂ ೬೬೬)

[4][ನಿ][4]ನಗಿಂಬಲ್ಲದು ತಳ್ಪಮೆಂದು ತೆಗೆದಿಟ್ಟುತ್ಸಂಗದೊಳ್ ಪೀವರ
ಸ್ತನ[5][ಮಂ][5] ಜಾಱುವ ಮೇಲುದಂ ತೆಗೆವ ಪಾಂಗಿಂದಂಟೆ ಚಿತ್ರಾವಲೋ
ಕನದೊಳ್ ಪತ್ತಿಸಿ ವಾರಭಾವಿತ ರತವ್ಯಾಪಾರಮಂ ಪಚ್ಚು[6]ವೊಂ[6]
ದು ನೆವಂ ತಳ್ತಿರೆ ಸಾರ್ಚಿ ಚುಂಬಿಸಿದನುರ್ವೀವಲ್ಲಭಂ ನಲ್ಲಳಂ ೮

ತೆಗೆದುತ್ಸಂಗದೊಳಿಟ್ಟುಕೊಂಡು ನಯದಿಂ ತಱಿಕೈಸಿ ಸಂವ್ಯಾನಮೊ
ಯ್ಯಗೆ ಜಾಱುತ್ತಿರೆ ಸಾರ್ಚುತಂತೆ ಕುಚಮಂ ಕಣ್ಗಟ್ಟಿಯಂ ಪೆತ್ತು ಮಾ
ಲೆಗುರುಳ್ ರ್ಝೊಂಪಿಸೆ ಬಾಗಿ ನಿಂದ ಮೊಗಮಂ ಸೈತೆತ್ತಿ ತಳ್ತಿಚ್ಚೈವಾ
ತುಗಳಿಂ ಭೋಗಿಸುವಲ್ಲಿ ಬಂದಿವಿಡಿದಂ ಬಿಂಬಾಧರಸ್ಥಾನಮಂ ೯

(ಶಬ್ದಮಣಿದರ್ಪಣಂ ೩೧೩-೨)

ನಯದಿಂ ಚುಂಬಿಸಿ ತೋಳ ತಳ್ಪಿದಿರ್ಗೊಳುತ್ತಿರ್ಪನ್ನೆಗಂ ಮೆಲ್ಲನ
ಪ್ಪಿ ಯಥಾಪ್ರಸ್ತುತಮನ್ಮಥಕ್ವಣನದಿಂದಂ ಶಂಕೆಯಂ ತಾಳ್ದಿ ದಿ
ಟ್ಟಿಯ ಮೆಯ್ಗೂಟದಿನಾದುದಂ ತಿಳಿದು ನಾನಾಭಂಗಿಯಿಂ ಕೂಡಿದಂ
ಪ್ರಿಯೆಯೊಳ್ ಸಮ್ಯಗುಪಾತ್ತಚಿತ್ತಭವಲೀಲಾಗೌರವಂ ಪೌರವಂ ೧೦

ತೆಗೆದಮರ್ದಪ್ಪಿ ಬಾಯ್ವಿಡಿದು ನಂಬಿಸಿ ಚುಂಬಿಸೆ ಪೋದಜನ್ಮನಂ
ಮಗು[7]ಟ್ದುದೆ[7] ದೇವರಾ[8]ಯು[8] ದೊರೆಕೊಂಬುದು ಕೋಮಳಗಾತ್ರೆಯರ್ಕಳೋ
ಲಗದ ವಿನೋದವಿಲ್ಲದರಸಂ ವಿರಸಂ ಮರದಿಂದೆ ಕಷ್ಟಮಾ
ಕೆಗಳತನುಪ್ರಸಂಗದೊಳೆ ಬಾಟ್ವಿ[9]ನರಂ ನರನಲ್ತು[9] ಲೋಕದೊಳ್ ೧೧

---

[1] ನಿಂಬಾಗಿ (ಕ ಖ ಬ) [2] ಗೆ (ಕ) [3] ಸ್ಮರಸಿರ್ದನಾಂ (ಕಾವ್ಯಸಾರ) [4] ನ (ಕ ಖ ಗ ಘ ಬ) [5] ದೊಳ್ (ಸ) [6] ವಂ (ಖ ಬ) [7] ಳ್ದುದು (ಕ ಗ ಘ) [8] ಊ (ಕ ಗ ಘ) [9] ಮರಂಮರನಲ್ತೆ (ಖ ಗ ಘ)

ತಂಬೆಲರಂತೆ ಸೋಂಕಿ [1]ಖ[1]ಗದಂತಿರೆ ಮೇಳಿಸಿ ತುಂಬಿಯಂದದಿಂ
ಚುಂಬಿಸಿ ಸೊಕ್ಕನಿಕ್ಕಿ ಮಱಪಿಕ್ಕಿ ಪದಂಬಿಡೆ ಚಿತ್ತಮೆಯ್ದೆ ನಾ
ಣಂ ಬಿಡೆ ಬಿಟ್ಟ ಮೆಯ್ಯಱಿದು ಮ್ಮೆನವಿರು[2]ರ್ವಿ[2] ಪೊದಟ್ದೆಲ[3]ರ್ಜೆ[3] ಮೆ
ಯ್ಯಂ ಬಿಗಿಯಪ್ಪಿ ಬಾಲೆಯ ಭಯಂಗಳೆದಂ ನವಸಂಪ್ರಯೋಗದೊಳ್ ೧೨
(ಲೀಲಾವತಿ ೧೩-೧೬)

ಪದಯಿಸೆ ಸೋಂಕಿ ಸಂಕೆಗಿಡೆ ಮೇಳಿಸಿ ಮೆಯ್ವಿಡೆ ತಳ್ತು ತೋಳ್[4]ತ
ಬ್ಬಿ[4]ದಿರ್ಗೊಳೆ ಮೆಲ್ಲನಪ್ಪಿ ಮೊಗ[5]ಮಿತ್ತಿ[5]ರೆ ಚುಂಬಿಸಿ ಸೋಲ್ತು ನಾಣನೊ
ಕ್ಕದನಱದಿಚ್ಚೆಕಾರ್ತನದ ಲಲ್ಲೆಗಳಂ ನುಡಿ[6]ದಂತಲಂಪಿನು
ಬ್ಬದಿಗಮನಾ ಲ[6]ತಾಂಗಿಗೆ ನೃಪಂ ಪಡೆದಂ ನಪಸಂಪ್ರಯೋಗದೊಳ್ ೧೩
(ಕಾವ್ಯಾವಲೋಕನಂ ೮೦೦)

ಸೊಡರಂ ಮೆಲ್ಲನೆ ಬೀಸಿ ಸಾರ್ಚಿ ಪಡಿಯಂ ಸಾರಣ್ಗೆ ಬೇಗಂ ಬರಲ್
ಸೆಡೆಯುತ್ತಿರ್ಪಳನಾನೆ ಪೋಗಿ ನಯದಿಂ ತಬ್ಬಿಕ್ಕಿಸಿ ಶಯ್ಯಾತಳ
ಕ್ಕೊಡಗೊಂಡೊಯ್ದೊಡಗೂಡೆ ಶಂಕಿಸುವ ನಾಣಂ ಕಾಯ್ವ ಮತ್ತಂ ರಸಂ
ಬಡೆವೆನ್ನೋಪಳ ಮುಗ್ಧಭಾವರ[7]ತಮೇನೆ[7]ನ್ನಂ ಗೆಲಲ್ [8]ಸಾಲ್ದುದೋ[8] ೧೪
(ಶೃಂಗಾರರತ್ನಾಕರಂ ೪-೩೩)

ಗರಗರನಾಗಿ ಭೋಗಿಪೊಡೆ ಮೇಳಿಸಿ ಮುಗ್ಧೆಯನಾಗುಮಾಟ್ಪುದೋ
ಗರದಧರಾಮೃತಂ ತುಳುಕಲಾಗದು [9]ಬೀ[9]ಸರವಾಗದಪ್ಪು ಕ
ಣ್ಬರಿಯಣಮಾಗದಣ್ಪಱಯದಣ್ಮರೆಯಾಗದಲಂಪು ಮೀಸಲಂ
ತಿರೆ ಮನಮಿರ್ಪುದೇಳ್[10]ಸ[10]ದ ಲಜ್ಜೆಯ ಲಚ್ಚಣ[11]ದಂ[11]ಗಜಾಬ್ಧಿಯೊಳ್ ೧೫
(ಅರ್ಧನೇಮಿಪುರಾಣಂ ೪-೮೬)

ಮೃದುಗಳನಾದಮಂ ಸಲಿಸಲಮ್ಮದೆ ಪಲ್ಲಟಮಂ ಪ್ರೊಣರ್ಚಲೀ
ಯದೆ ನಿಜ ಮುಗ್ಧಮಂ ತಳೆದ ಕಾ[12]ಲದೊ[12]ಳಾದನುರಾಗದಿಂದೆ ಸಾ
ರ್ಚಿದ ಬೆಳವಾರ್ಯನೇಂ ನೃಪತಿ ಪೀರ್ದನೊ ಚಿತ್ತದ ಮೆಚ್ಚನಿಚ್ಚೆಯಂ
ಮುದಮನಲಂಪಿನಿಂಪಿನೊಲವಂ ಸುಖಮಂ ಬರೆ ಪೀರ್ವ ಮಾಟಕ್ಕಿಯಿಂ ೧೬

ಕಾದಲರೊರ್ವರೊರ್ವರೊಳಳುರ್ಕೆಯನೀಯೆ ನಿಮಿರ್ಕೆ ಸೊರ್ಕನಿಂ
ಮೋದಿದ[ದೊಂ]ದು ಮಾಣಿಕದ ಮುದ್ರಿಕೆಯೊಪ್ಪದೆ ಕೊಳ್ಳೆವೀಸಿಡಂ
ತಾದುದು ಮಂಚವಿದ್ದ ಶಕುನಿಧ್ವನಿ ಮನ್ಮಥರಾಗಕೇಳಿಯು
ದ್ಬೋಧಿತರಾಗದಿಂದವಳ ಘೋಷಿಸುವಂತೆವೊಲಾದುದಾ ಕ್ಷಣಂ ೧೭

---

[1] ಮಿ (ಕ ಖ ಗ ಬ) [2] ರ್ಚಿ (ಅ) [3] ಜ್ಜೆ (ಖ) [4] ನಣ್ಪೆ (ಖ ಬ) [5] ಮೊಪ್ಪಿ (ಖ ಬ) [6] ದೀನಲಂಪಿನುರ್ಬಿದಿರ್ಗೊಳೆ ತಲ್ಲ (ಖ ಬ) [7] ಸಮೋನೆ (ಖ ಬ) ತಮಿನ್ನೆ (ಕ ಫ) [8] ಸಾಲದೇ (ಕ) [9] ಬೇ (ಕ) [10] ಸಿ (ಕ ಖ ಬ) [11] ವಂ (ಕ) [12] ದಲ (ಖ ಬ)

ಕಾದಲರ್ಗೆಱೆ[3] ಕಾಮಮಧುಮತ್ತತೆ ತೊಟ್ಟನೆ ನಾಣುಮುಟ್ಟುದುಂ
ಪೋದುವು ತೋರ್ಪ ಮೆಯ್ಯ್ಮೊಳಗುಂ ಬಿಡುತಂದುವು ತಳ್ತ ರೋಮಹ
ರ್ಷೋದಯ[1]ಮುಂ[1] ಗಳಧ್ವನಿಯುಮುಬ್ಬರಮಾದುವು ಮೊಕ್ಕಳಂ [2]ಕಡಂ
ಗೋದುವು[2] ಪೊಯ್ದುಮೊಯ್ದು ಬಱಿಯೊಳ್ ನಖರೇಖೆಗಳಂ ಕುರುಳ್ಗಳಂ ೧೮

ತೊಡೆ ಮಡವಿಡೆ ಮೊಲೆಗಳ ಮೇ
ಗೊಡೆದಡಗಡಗಾಗಿ ಬತ್ತಿ ಬಾಯುಗಿಯಿಂ ಮೆಯ್
ಸೆಡೆದೊಳ್ಪನುತಿಯೆ (?) ಕೂಟದ
ಕಡುಪುಡುಗದೆ ಪಡೆದಳಾಕೆ ನೃಪತಿಗಲಂಪಂ ೧೯

ಜಾಯಿಲನಂತೆ ಲಜ್ಜೆ ತೆಱದಾಡೆ ಬೆಡಂಗಿ[3] ನೃಪಂ ಕಡಂಗಿ ವಾ
ತ್ಸ್ಯಾಯನನಂತೆ ಮರ್ಮವಱದಾಕೆಯ ತೀನ್ಮಸೆಪಾಸನಂಗಳಿಂ
ಪಾಯೆ ತಗುಳ್ದು ಪಾಯ್ವ ಭರದಿಂದೊಡವಾಯ್ದು ಝುಲಮ್ಮನೊಱ್ಕಗುಂ
ಸೀಯೆನೆ ಕಮ್ಮಗಿಮ್ಮನೆಳದೆಂಗಿನಕಾಯೊಡೆದಂತೆ ತೆಳ್ಪದಂ ೨೦

ಮುಂಚದ ಪಿಂಚದಂಚೆಗಳೊಳಿಂಚರದಂಚರಮಾಗದಂಚೆ ಪೆ
ರ್ಚಂಚರ[4]ಮೀಯೆ[4] ಮುಂಚ[5]ದುಲಿ[5]ಪಿಂ ಚದುರಿಂ ಚದುರೆಂಬ ದೂಸಱಿಂ
ದಿಂಚಱದಂಚೆಯಿಂಚರದ ಪಿಂಚದ ಚಂಚಲ ಚಂಚರೀಕದೊಂ
ದಿಂಚರದೊಳ್ ಪಳಂಚಲೆಯೆ ಮುಂಚರವಂ ಮೊರೆದೇಱಿ[3] ಕೂಡಿದಳ್ (?) ೨೧

ಗಳರುತಿ ಮಂತ್ರನಾದಮಳಕಸ್ಥಳತಾಡನ ಮುಷ್ಟಿಮುದ್ರೆ ಕೋ
ಮಳ ನಖರೇಖೆ ಯಂತ್ರಲಿಖಿತಂ ಸಮಬಿಂದುವೆ ನಿಗ್ರಹಾಕ್ಷರಂ
ತಳಹತಿ ವೇತ್ರದಂಡಹತಿಯಾ ನಱುಸುಯ್ ನವಧೂಪಮಾಗೆ ಕಾ
ದಲರ ಮನೋಭವಗ್ರಹಮನಲ್ಲಿ ತಳರ್ಚುವರಿಚ್ಛೆಗಾರ್ತಿಯರ್ ೨೨

ವಿಳಸನ್ಮಂಜೀರಕಾರಾವಮುಮುತುಳಗಳಧ್ವಾನಮುಂ ತೀವ್ರ ಮಧ್ಯಾಂ
ಗುಳಿಸನ್ಮುಷ್ಟಿಪ್ರಹಾರಸ್ವನಮುಮೆಸೆಯುತಂ ಮಾಣ್ದು ಮತ್ತೀಗಳೀಗಳ್
ಕಳಕಾಂಚೀ ಶೃಂಖಲಾ ಝಂಕೃತ ರವಮನಿದಂ ಕೇಳಲಾದಪ್ಪುದಂತಾ
ವಳನಾವಂ ಪುಣ್ಯಪುಂಜೋದಯನುಪರರತಿಪ್ರೌಢಿಯಿಂ ತಾಳ್ದಿದಾತಂ ೨೩

---

[1] ಮುಂ (ಕ ಖ ಬ) [2] ಕಡಹಾಯ್ದುದು (ಕ) ಕಡಂಗೊಯ್ದುವು (ಖ) [3] ಗಱಿ (ಖ)
[4] ಮಿಟ್ಟು (ಕ) [5] ದಿರು (ಕ)

ನೆರೆವ ಬಗೆ ನೆರೆವ ನೆರವಿಗೆ
ನೆರೆಮನೆಗಳ ನೆರವಿ ಪರೆಯೆ ನೆರವಿಯ ತುದಿಯೊಳ್
ನೆರವಿಗೆ ಮೊದಲಿಡೆ ಮೊದಲಿನ
ನೆರವಿಯ ಸವಿ ತುದಿಯ ನೆರವಿಗೊದವಿರೆ ನೆರೆದರ್ ೨೪

ಸತಿಯ ಕೃತೋಪರಿಷ್ಟಕರತಿ[1]ಶ್ರ[1]ಮದೊಳ್ ಸರಳಾಂಗುಲಿಚ್ಚಟ
ತ್ಕೃತಿ ಪಟುತಾಲು ಠತ್ಕೃತಿ ಗಳೋತ್ಥಿತ ಹೂಂಕೃತಿ ಚಾರು ಮಂಚಚೀ
ತ್ಕೃತಿ ಶಕುನಿಪ್ರತಾನಕುಹ[2]ರತ್ಕೃತಿ[2] ಕಂಕಣಕಿಂಕಿಣೀ ಝಣ
ತ್ಕೃತಿ ಸಮುಪಾದ ಝಂಕೃತಿ ಸಚುಂಬನ ಸೀತ್ಕೃತಿ ಪೊಣ್ಮಿತೆತ್ತಲುಂ ೨೫
(ಶೃಂಗಾರರತ್ನಾಕರಂ ೪_೩೬)

ಸಮಸಂದಟ್ಟಿಜಿಲಂಪಸೀಯೆ ಶಯನಂ ಘರ್ಮಾಂಬುವಿಂ ನಾನೆ ಮು
ನ್ನಮೆ [3]ನಾಣೊಟ್ಟುಡಿ[3]ವೋಗೆ ಸೊಸುವ ಪದಂ ಗಂಗಾಂಬುವಂ ಪೋಲೆ ವಿ
ಭ್ರಮಮಂ ಕಂಠರವಕ್ಕೆ ತಾಡನರವಂ ತಂದೀಯೆ ತತ್ಸ್ವಾಧದೊಳ್
ಸಮಸತ್ವಂಬಡೆವಂತಿರಾಯ್ತು ಸುರತಪ್ರಾರಂಭ ಕೋಳಾಹಳಂ ೨೬
(ಪಂಪಭಾರತಂ ೪_೧೦೯)

ಎಳೆಯಳ ಸೆಳೆವೊಳ್ನಡುವುಂ
ಸೆಳೆಮಂಚಮುಮೊಡನೆ ಸೆಳೆಯೆ ಪುರ್ವುಂ ಕುರುಳುಂ
ಕಿಳಿರೆ ನಿತಂಬದ್ರವಮುಂ
ಗಳರವಮುಂ ಪೊಣ್ಮೆ ಸುರತಮಂ ಸಮನಿಸಿದರ್ ೨೭

ಸುರತದ ಲೆಕ್ಕವಿಕ್ಕಿದೆಡೆಯಂತೆ ತಗುಳ್ದಿರೆ ನಲ್ಮೆಯೆಂಬ ಹೊ
ನ್ನೊರೆಯೊರೆದಂತೆ ರಾಗರಸದಿಂ ಪರಿಪೂರಿತಮಾದ ದೇಹ ತಾಂ
ಬಿರಿದೆಡೆಯಂತೆ ಕಾಮಿನಿಯ ಕೋಮಲಮಪ್ಪ ಶರೀರದೊಳ್ ತರಂ
ತರಮೊಗೆದೊಪ್ಪಿ ತೋಱುದುವು ಕಾಮುಕದಂತನಖಕ್ಷತಾದಿಗಳ್ ೨೮

ಪಂಕರುಹವದನೆಗೆಸೆದುವು
ಕುಂಕುಮದಿಂ ತೊಯ್ದ ಚಮರಿಯಂ ಮೋದಿದವೋಲ್
ಕೊಂಕಿ ನಖರೇಖೆ ಕೊರಲೊಳ್
ಕಂಕುಳ ಮುಯ್ವುಗಳ ಮೊಲೆಗೆಲಂಗಳೊಳೆತ್ತಂ ೨೯

ಸವಲಜ್ಜಾಭಾರಸಮ್ರಾನನೆಯನುರದೊಳೊತ್ತಂಬದಿಂದೊತ್ತಿ ಸರ್ವಾಂ
ಗವನೆನ್ನಂಗಂಗಳೊಳ್ ಮೆಯ್ಗರೆದುವೆನಿಸಿ ಮೆಯ್ಯಾರೆ ತಳ್ತಪ್ಪಿ ದೇವ

---

[1] ಕ್ರ (ಖ ಬ) [2] ಕತ್ಕೃತಿ (ಅ) [3] ನಾಣ್ ನಾಲ್ಕುತೆ (ಕ) ನಾಣ್ಕುಡಿ (ಖ ಬ) ನಾಣ್ಕುಡಿ (ಗ)

ಗರ್ವಣಂ [1]ಕಯ್ಗೊಡ[1]ದಂತೆ[2]ಪ್ಪವಳ[2]ಧರಸುಧಾಸಾರಮುಂ ತುಷ್ಟಿಪರ್ಯಂ
ತವಲಂಪಿಂ ಪೀರ್ದು ಮದ್ವಲ್ಲಭೆಯ ಸುಸಿಲ ಸ್ವೈಪಿಂ ಕೃತಾರ್ಥಾತ್ಮನಪ್ಪೆಂ ೩೦

(ಕಾದಂಬರಿ, ಉ.ಭಾ ೫೨೨)

ಪ್ರತಿಘಾತಾಯತಲೋಲಕಂಕಣಝುಣಜ್ಝಂಕಾರಚಂಚತ್ಕಳಾ
ಹತಿ ಮಂಚಾಗ್ರ ಶಕುಂತಿಕಾಪಟುರವಪ್ರೋಚ್ಚಾರನಾನಾಗಳಾ
ರುತಿ ಮಧ್ಯಾಂಗುಳಿತಾಡನೋಚಿತಲಯಪ್ರವ್ಯಕ್ತಜಿಹ್ವಾಟಳ
ತ್ಕೃತಿ ಪೊಣ್ಮಿತ್ತಿರೆ ರಮ್ಯಮಾಯ್ತು ಸುರತಪ್ರಾರಂಭಕೋಳಾಹಳಂ ೩೧

ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾ
ರವಝುಂಕಾರಿತಚಾರುವಾಮಚರಣಾಘಾತಂ ಚಲದ್ಭ್ರೂಲತಾ
ಗ್ರವಿಭಾಗೋತ್ಕಟತರ್ಜನಂ ತರಳತಾತಾಮ್ರಾಧರಂ ಚಕ್ರಿಗಿ
ತ್ತುವಲಂಪಂ ಪ್ರಣಯಪ್ರಕೋಪಸುರತಪ್ರಾರಂಭದೊಳ್ ಕಾಂತೆಯಾ ೩೨

(ಆದಿಪುರಾಣಂ ೧೨-೪೮; ಕಾವ್ಯಾವಲೋಕನಂ ೬೯೧;
ಶಬ್ದಮಣಿದರ್ಪಣಂ ಪುಟ ೧೨೫)

ಮೊಱೆ ತಡವಾಗೆ ನಾಣಗಲೆ ತೆಳ್ಪದನೊಳ್ಪದನಾಗಿ ಪಾಯೆ ನ್ಮೈ
ಪೞಪೞಯಾಗಿ ತೀನ್‌ಮಸಗಿ ಸೋಲಮುಗುಂದಲೆಯಾಗಿ ಕೂಡುವ
ಟ್ಕಿಱು ಮಿಗೆ ನೀಳ್ದಲಂಪೊದವೆ ಬೇಡಿಸುವಪ್ಪಿನಿತೆಂಬ ಲೆಕ್ಕಮುಂ
ಮಱೆಯಿಸೆ ನಾಡೆ ಸೂಟ್ಗಿಳನೊಡಂಬಡೆ ಮಾಡಿದರೊಂದುಭಾವಮಂ ೩೩

ಸುಯ್ಯು ನಿಡುಪುಡು[3]ಗ[3]ದಿರೆಯುಂ
ಪೆಯ್ಯು[4]ರೆ[4]ಮುಟ್ಗಿದೆಯುಮಿಂತು ಸಂದಂದಿನಿಬರ್
ಬಯ್ಯಲೆ ಪೊಯ್ಯಲೆ ಕುರುಳಂ
ಕೊಯ್ಯಲೆ ಪೋ[5]ಯ್ತಿಂತು[5] ವಿನಯವತಿಗಂ ಪತಿಗಂ ೩೪

(ಕಾವ್ಯಾವಲೋಕನಂ ೯೧೧; ಶೂದ್ರಕಂ, ಕಾವ್ಯಸಾರಂ ೬೬೬)

ಅಳಕಂ ತುಂಬಿವೊಲಾಡೆ ತುಂಬಿದ ಕುಚಂ ಚಕ್ರಾಹ್ವದಂತಾಡೆ ಕ
ಣ್ಗಳಮೀನಾಟಮನಾಡೆ ಮುದ್ದುಮೊಗಮಂಭೋಜಾತದಂತಾಡೆ [6]ಸೀರ್[6]
ತಿಳಿಸೀ[7]ರಂತೊಲೆದಾಡೆ[7] ನೂಪುರಮುರಾಳೋನ್ನಾದವಾದ್ಯಕ್ಕೆ ಪೂ
ಗೊಳನೆದ್ದಾಡುವವೋಲದೇಂ ನೆಱೆದಳೋ ಕಾಂತಾ[8]ರ[8]ತಪ್ರೌಢಿಯಂ ೩೫

(ಲೀಲಾವತಿ ೨-೧೪೨)

---

[1] ಕಯ್ಯಾಱಿ (ಕ ಖ ಬ) [2] ಜ್ಜ್ವಳದ (ಕ) [3] ರ (ಖ ಬ) [4] ನಿ (ಕ ಗ ಕಾವ್ಯಸಾರ) [5] ಯ್ತಂದು (ಕ ಖ ಬ) [6] ಪೊಯ್ (ಅ) [7] ರಾಟಮನಾಡೆ (ಅ) [8] ಯ (ಅ)

ನೆಲೆವೊಲೆಯಂ ತಗುಳ್ದಡಸಿ ತಾಗುವ ಹಾರಮನೇಱನೂಂಕಿ ಮುಂ
ದಲೆಯ ಕುರುಳ್ಗಳಂ ಕವಿಯದಂತೆ ಮುಖಾಂಬುಜದಿಂ ಮರಳ್ಚಿ ಸೂಟ್
ಸಲೆ ನಿಲೆ ಬೆನ್ನನಪ್ಪಳಿಪ ಸೋರ್ಮುಡಿಯಂ ಕಲಿಗಂಟನಿಕ್ಕಿ ಕಾ
ದಲನೊಳೆ ಕೂಡೆ ಕೋಮಲೆಗೆ ಬಿಚ್ಚತಮೊಪ್ಪಿದುದೌಪರಿಷ್ವಕಂ ೩೬

ಒದೆದುಗುರಿಂದೆ ಬಾರುಗಿದುದೆಯ್ದದೆ ಕುತ್ತಿದಳಪ್ಪಿ ಕಂಟಕಾ
ಘದಿನಳಿ ಪಾಱದಪ್ಪಳಿಪ ಕೆಂದಳಿರಿಂದೊಳಪೊಕ್ಕು ಪೊಯ್ದದೆ
ಯ್ದದೆ ಕುಚಕುಂಭದಿಂದಿಱದಳೋವದೆ ಬಾಸಿಗದಿಂದೆ ಮೋದಿತೆ
ಯ್ದದೆ ಕಡೆಗಣ್ಗಳಿಂ ತಿವಿದಳೋಪನನೋಪಳನಂಗಯುದ್ಧದೊಳ್ ೩೭

(ಲೀಲಾವತಿ ೧೩-೨೧)

ತೆಱಪಱದೋಪನಪ್ಪಿದೊಡೆ ಮೆಯ್ಮಱೆವಪ್ಪು ಸಡಿಲ್ದುದಕ್ಕೆ ಮೆ
ಯ್ಯಱೆವ ಪೊದಟ್ದಿ ಬಾಯುಗಿಗೆ ಮೆಯ್ಮಱೆವಂತದು ಮೆಲ್ಲನಾಗೆ ಮೆ
ಯ್ಯಱೆವ ಜವಂ ಜವಂಗಿಡಿಸೆ ಮೆಯ್ಮಱೆವಾಸನಪಲ್ಲಟಕ್ಕೆ ಮೆ
ಯ್ಯಱೆವೆಡೆ ಸಾವ ಹುಟ್ಟುವೆಡೆಯಾದುದವಳ್ಗೆ ರತಾತಿರೇಕದೊಳ್ ೩೮

(ಲೀಲಾವತಿ ೧೩-೨೦)

ಪಸಿಯುಗುರೊತ್ತುಗಳ್ ನೊಸಲೊಳೊಪ್ಪಿರೆ ಪತ್ತಿದ ಕುಂತಳಂಗ[1]ಳಂ[1]
ಬಸವೞಿವಂಗದಿಂ ಬಸಿವ ಘರ್ಮಜಲಂಗಳಿನಾದ ಪಲ್ಲ ನು
ಣ್ಮಸೆಮಿಗೆ ಪತ್ತಿ ಜರ್ಝರಿತಮಾಗಿ ಬೆಳರ್ತಧರೋಷ್ಠದಿಂ ರತಿ
ವ್ಯಸ[2]ನಿ[2]ಮುಹಾಹಿ ನುಂಗಿಯುಗುಟ್ದಿಂತೆವೊಲಾ ನಳಿನಾಕ್ಷಿಯೊಪ್ಪಿದಳ್ ೩೯

ನೆಗೆದುವು ಕಂಪನಂ ಪುಳಕಮುಂ ಬೆಳರ್ವಾಯ್ದೆಱೆ ಬತ್ತೆ ಘರ್ಮವಾ
ರಿಗಳೊಗೆತಂದುವಂಗಜರಸಂ ಪೊನಲೆಟ್ದಿದು ಬಿಟ್ಟ ಕೇಶದಿಂ
ನೆಗಟ್ದಿದು ದುರ್ದಿನಂ ಮದನಮಾಂತ್ರಿಕಸೃಷ್ಟಿಯಿನಿಂತು ಮಾಗಿ ಬೇ
ಸಗೆ ಮೞೆಗಾಲವೆಂಬಿವೊಡನಾದುವು ನಲ್ಲರ ಸಂಪ್ರಯೋಗದೊಳ್ ೪೦

ಮೊಱೆಯಂ ಮಿಱುವ ಮಾತು [3]ತೀನ್ ಮು[3]ಸೆಪ ನಾಣ್ಬಣಂ ತನಿತ್ತಿಂಬು ಮೈ
ಮಱೆಪಂ ಪುಟ್ಟುವ ಸೊರ್ಕು ಸೂಟ್ಪಿಡಿದ ಕೂಟಂ ಪಲ್ಲಟಂಬಾಯ್ಪು ಬಾ
ಯ್ಮುಱುಕಂ ತಾಂಗಿ ಕಟಿಲ್ವ ನಾಣಿಲಿತನಂ ಬೆಂಡೇಟ್ಬಿ ಕಣ್ ಬೀಯದ
ಟ್ಕೆಱೆಳಂ ಪಾಸಿಗೆ ನಾಂಬ [4]ತೆಳ್ಪದ[4]ನಳುಂಬಂ ಕೂಟದೊಳ್ ನಲ್ಲರಾ ೪೧

(ಚಂದ್ರಪ್ರಭಪುರಾಣಂ ೮-೬೮)

[1] ಳಂ (ತ) [2] ನ (ಕ) [3] ಕೆಂದೆ (ಅ) [4] ಮುಂಬದ (ಅ)

ಹರವಸವೊಯ್ಯನಾ[1]ಱ[1] ಮುಗುಳ್ದಕ್ಷಿಗಳ್[2]ಚ್ಚ[2]ಱ ಕೂಡೆ ಮೆಯ್ಯೊಳು
ಬ್ಬರಿಸಿದ ರೋಮರಾಜಿ ನಸುವಕ್ಕಿಗೆ ಸಾರೆ ಬಟಿಲ್ದ ಮೆಯ್ಗೆ ಚೇ
ತರ[3]ಣಮೊಡ[3]ರ್ಜೆ ಬಾಯ್ಗೆ ಬಱಿಪಂ ಬರಿಸುತ್ತಿರೆ ಪೋದ ಕೂಟಮಂ
ಪರಿವಿಡಿಗೆಯ್ಯೆ ಚಿತ್ರಮೆಳಸಿತ್ತು ರತಾಂತಸುಖಾಂತಮೋಪರಾ ೪೨

(ಚಂದ್ರಪ್ರಭಪುರಾಣಂ ೮-೭೦)

ಪದಯಿಪ ಸೋಂಕು ಚುಂಬಿಸುವಲಂಪಪ್ಪುರ್ದಪ್ಪುವ ಕಾಯ್ಪು ಮೇಲುವಾ
ಯ್ದೊದಗುವ ಕಾತರಿಕ್ಕೆ ಬಗೆಮೆಚ್ಚದ ಪಲ್ಲಟದಿಚ್ಚೆ ಬಾಯ್ಗೆವಂ
ದುದು ಗೆಡೆವುಜ್ಜಗಂ ರತದ ಕಾದಲೆ ಸಾಱೆ ಪೊಡರ್ಪು ಮೇಱಿದ
ಪ್ಪಿದುದೆನೆ ಕೂಡಿದರ್ ಪ್ರಿಯತಮರ್ ಸಮಸಂದನುರಾಗವೃತ್ತಿಯಿಂ ೪೩

ಕೊನೆವೆರಲಿಂ[4]ದವೆಂ[4]ಟಳತೆಗೊಂಡಧರಕ್ಷತಮಂ ಘನೋನ್ನತ
ಸ್ತನದುರಿಯಂ ತಗುಳ್ಚುಣಿಸಿ ಬೈತು ಭುಜಂಗಳೊಳೋಳಿಗೊಂಡ ಚುಂ
ಬನವಳಯಂಗಳಂ ಪ್ರತಿಸಲಚ್ಚಣದಿಂ ಪ್ರತಿಯಿಟ್ಟು ನೋಡಿ ಕಾ
ಮಿನಿ ಹು[5]ಲಿ[5]ಸಾದ ಬೇಟವೆಳಸಂ ಕಡುಸಂತಸದಂತಮೆಯ್ದಿದಳ್ ೪೪

ಕಿಚ್ಚಿನಳುರ್ಕೆಯಿಂ ಬಿದಿರ ಗಂಟೊಡೆವಂತಿರೆ ತಾಲುಶತ್ಕೃತಂ
ಬಿಚ್ಚತಮುಣ್ಮೆ ಪೊಣ್ಮೆ ಕಡುತಾಡನದಿಂ ನವರಕ್ತಧಾರೆಗಳ್
ಚೆಚ್ಚರ[6]ಮೆಚ್ಚು[6] ಪಾಯ್ತರೆ ಪದಂಗಳ ನಾ[7]ದ[7]ದ ಸುಯ್ಯಲೊಪ್ಪೆ ಕ
ಟ್ಟುಚ್ಚರಿಯಾದುದೊರ್ಬನ ಮಹಾರತಸಂಭ್ರಮ[8]ಮೊಂ[8]ದು ತಾಣದೊಳ್ ೪೫

ಪರಿವರಿಯಾಯ್ತು ವಲ್ಲಭನ ಮೆಯ್ ನಖಘಾತದಿನಾದ ರೇಖೆಗಳ್
ಹರಕೆಯ ಸಾಲ್ಗಳಾದವನುರಾಗರಸಂ ಹದನಾದುದೋಳಿಯಿಂ
ಸುರಿವ ಬೆಮರ್ ತರಂಬಿಡಿದ ಬೀರದ ಬಿತ್ತುಗಳಾಯ್ತು ಮೆಚ್ಚಿದು
ಬ್ಬರಬೆಳಸಿಂಗೆ [9]ತಕ್ಕ ಕೃಷಿಯಕ್ಕುಮೊ[9] ಕಾಮಿನಿ[10]ಯಾ[10]ಪರಿಷ್ಕಕಂ ೪೬

ಘನಕುಚಮಧ್ಯತಾಡನೆಗೆ ಮುಂದಲೆಯೊಳ್ ಸಮನಾಗೆ ಲಲ್ಲೆಯಿಂ
ವಿನಯದ ಪೆರ್ಮೆಗೆ ಸರಿಯಾಗೆ ಪತಿತ್ವಮನಾಳ್ವ ಚಾಟುನಿ
ಸ್ವನಮೆರ್ದೆಗೊಳ್ವ ಚುಂಬನಕೆ ಬೆಂಬೞಿಯಿಂದಿದಿರ್ವಪ್ಪ ತನ್ನ ಚುಂ
ಬನ[11][ಮೆ][11]ಣಿಕೆಯಾಗೆ ಕಾಂತೆ ಪುರುಷಾಯಿತದೊಳ್ ಕರನೊಪ್ಪಿ ತೋಱಿದಳ್ ೪೭

---

[1] ತೆ (ಕ) [2] ಚ್ಚಿ (ಕ) [3] ಣೆಯುಲ (ಅ) [4] ದವುಂ (ಕ) [5] ರಿ (ಕ ಖ ಬ) [6] ವೆತ್ತು (ಕ ಗ ಫ) [7] ದ (ಗ ಫ) [8] ಮೊಂ (ಬ) [9] ತತ್ತಷಿಯೊನಿಕ್ಕುವ (ಕ) ತಕ್ಕತೃಷೆಯಕ್ಕುಮೊ (ಖ ಬ) [10] ಯೊೞ (ಕ ಖ ಬ) [11] ಕೆ (ಕ ಖ ಬ)

ಉಡುಗಿ ಬರೆವರೆ ಗಳಧ್ವನಿ
ಯೆಡೆಯುಡುಗದೆ ಪೊಡರೆ ಸುಯ್ ನಿತಂಬದ್ರವದಿಂ
ಬಿಡದೊಗೆಯೆ ಝುಂಕೃತಂ ನಡು
ನಡುಗೆ ಲತಾ[1]ಲತಿಕೆ[1] ಕೂಡಿದಳ್ ಪ್ರಿಯವರನೊಳ್ ೪೮

ನೋಡಲೊಡಂ ಮನೋಭವಸುಖಾಮೃತವಾರ್ಧಿಯೊಳೆಯ್ದೆ ಚಿತ್ತಮೊ
ಲ್ಡಾಡುವುದೊಲ್ದು ಸೋಂಕಲೊಡಮಾಗಳೆ ಮೆಯ್ ಪುಳಕಾಂಕುರಂಗಳಿಂ
ಕೂಡೆ ಬೆಮರ್ತು ತಾಳ್ದುವುದು ತಳ್ತು ಕರಂ ಬಿಗಿಯಪ್ಪಿಕೊಂಡು ಬಾ
ಯ್ಗೂಡಲೊಡಂ ಬಱಿಕ್ಕಱಿಯೆನಾನೆನಗಾದ ರತಪ್ರಪಂಚಮಂ ೪೯

ಪಾರಿವವಂಚೆ ಕೊಂಚೆ ಗಿಳಿ ಸೋಗೆ ಕುಕಿಲ್ ತೊಱಿವಕ್ಕಿ ತಮ್ಮತ
ಮ್ಮೋರಗೆ ತಪ್ಪಲುಂಬಿ ದನಿಗೆಯ್ದುಪುವೆಂದೊಡನೆಟ್ಟು ಸುತ್ತಲುಂ
ಭೋರೆನೆ ಕೂಡಿಕೊಂಡು ವಿಟತಾಡನತಾಳಲಯಕ್ಕೆ ಬರ್ಪಿನಂ
ಚಾರು ಚಕೋರನೇತ್ರೆ ಗಳನಿಸ್ವನಮಂ ಮೆಱಿದೊಲ್ದು ಕೂಡಿದಳ್ ೫೦

ಪೆರ್ಮೊಲೆಗಳ್ ಕದಕ್ಕದಿಸೆ ನರ್ತಿಸೆ ಕುಂಡಲಮಾಡೆ ಕುಂತಳಂ
ಸೋರ್ಮುಡಿ ಬೆನ್ನನಪ್ಪಳಿಸೆ ಸಂಚಳಿಸುತ್ತಿರೆ ಮಧ್ಯಮುಣ್ಮೆ ಸುಯ್
ಘರ್ಮಜನವೋದಬಿಂದು ಬಿಡುತಂದುದು ಭೂಷಣಮಂಜುಳಸ್ವನಂ
ನರ್ಮೋ[2]ಡೆ[2] ಪೆರ್ಚೆ ತನ್ವಿ ಪುರುಷಾಯಿತದೊಳ್ ಪ್ರಿಯನಂ ಮಗುಳ್ಚಿದಳ್ ೫೧

ಸುಲಿಯೆ ಬೆಮರೊಲೆಯೆ ನಡು ಕೊರ
ಲುಲಿಯೆ ಕುರುಳ್ ನಲಿಯೆ ಮಂಚಶಕುನೀ ನಾದಂ
ಪಲತೆಱದೊಳೊದವೆ ರಾಗಂ
ನೆಲೆವೆರ್ಚೆ ಪದಂ ತುಳುಂಕೆ [3]ನೆರೆ[3]ದರ್ ನಲ್ಲರ್ ೫೨

ಮುನಿಯಿಸುವುಕ್ಕೆವಂ ತಿಳಿಪುವಟ್ಟಿಱು ಸೋಲಿಪ ಗಾಡಿ ಸೋಂಕಿನಿಂ
ಬಿನದಿಪ ಲಲ್ಲೆ ಚುಂಬಿಸುವಲಂಪು ಮರಳ್ಚುವ ಮುದ್ದು ಲಜ್ಜೆಯಂ
ನೆನೆಯಿಸುವುಜ್ಜುಗಂ ಮೊಱಿಯನೊಲ್ಲದವೊಳ್ನುಡಿ ಸೋರ್ವ ನಾಣ್ಬದಂ
ಜನಿಯಿಸೆ ರಾಗಮಂ ಮನಮನಗ್ಗಲಿಸಿತ್ತು ರತಂ ಲತಾಂಗಿಯಾ ೫೩

ತೆಗೆದತ್ತಲ್ ಬರೆ ತೆಪ್ಪದಂತೆ ತನುಗಳ್ ಬಾಯ್ಬಾಯ್ಗದೇಂ ಚುಂಬನಂ
ಸೊಗ[4]ಸಂ[4] ಮುಂದಿಡೆ ಕೈ ತೊಡಂಕಿದೆಡೆಯೊಳ್ ತಮ್ಮಿಚ್ಚೆಯಿಂ ಬಿ[5]ಟ್ಟ[5] ದಿ

---

[1] ಳಳನೆ (ಕ ಬ) [2] ದೆ (ಕ) [3] ನಷೆ (ಕ) [4] ಶಿಂ (ಕ) [5] ಟ್ಟ (ಖ ಬ) [5]

ಟ್ಟಿಗಳುಂ[1]ಬಂ ಕುಡೆ[1] ಸೊರ್ಕಿ ಸೊರ್ಕಿ ಮೆಱೆವಾಪಾಂಗಾಂಗದೊಳ್ ಜೋಗವ
ಟ್ಟಿಗೆಯುಂ ಗೇಣಿಡುವಂತಿರಾದುದು ರತಂ ವಿಶ್ರಾಮಸಾರಸ್ಯದಿಂ (?) ೫೪

ನಲಿವುಲಿವಿತ್ತಲಿಸುವ ಬಿ
ತ್ತಲಿಸುವ ಚುಂಬಿಸುವ ಹೊಯ್ವ ನಂಬಿಸುವಳಿಪ
ಗ್ಗಲಿಸುವ ಹುಡುಕುವ ತುಡುಕುವ
ಮಲೆವಲೆವ ಪೊಡರ್ಪು ನೇರ್ಪುವಡೆದಿರೆ ನೆರೆದರ್ (?) ೫೫

ಕುಣಿವ ಕುರುಳ್ ಕುರುಳ್ವಿಡಿದು ಜೋರ್ವ ಬೆಮರ್ ಬೆಮರತ್ತಿಱಂ ಕರಂ
ದಣಿದವೊಲೇೞ್ಗೆವೆತ್ತ ಪುಳಕಂ ಪುಳಕಂಗಳ ಕೂರ್ಪು ಕೂರಿತೆಂ
ದೆಣಿಸದೆ ಮಿಾಱುವಪ್ಪು ಬಿಗಿಯಪ್ಪಿನ ಗಾಢತೆ ಹಿಂಡಿದಂತೆ ಸಂ
ದಣಿಸುವ ತೆಳ್ವಿದಂಗಳ ಪೊನಲ್ ಬಗೆಗೊಂಡವು ಸಂಪ್ರಯೋಗದೊಳ್ ೫೬

ಮೆಲ್ಲಿರ್ದೆಗೂಡುವಾಯೆ ನಸುಬೆಂಡು ಮಗುೞ್ದಿರೆ ಕಣ್ ಗಳಸ್ವನಂ
ಮೆಲ್ಲನೆ ನಿಂದು ನಿಂದು ಪೊಡರುತ್ತಿರೆ ಪೊಣ್ಮುವ ತಾಡನಂಗಳಿಂ
ತೆಲ್ಲವಡಂಗೆ ಹೂಂಕೃತಿಗಳಬ್ಬರವೆಯ್ದೆ ಪೊಡರ್ಪುಗುಂದೆ ತ
ಳ್ವಿಲ್ಲದೆ ತೆಳ್ವಿದಂ ಸುರಿಯೆ ಕೋಮಲೆ ಕೂಡಿದಳಾತ್ಮನಾಥನೊಳ್ ೫೭

ಅಲ್ಲದ ಮೊಱಗೊಂಡಾಡುವ
ಪಲ್ಲಟಿಸುವ ಮುದ್ದುಗೆಯ್ವ ಭರದಿಂ ಕೊಲ್ ಕೊಲ್
ಕೊಲ್ಲೆಂದಿದಿರ್ಗೊಂಡುಲಿವೀ
ನಲ್ಲಳ ರತದಿಂದೆ ಸೊಕ್ಕಿ ಮೆಱೆಯದನಾವೆಂ ೫೮

ಪುಳಕಮನಿಂಬುಸೋಂಕಮುರೆ ನಿರ್ಝರಮಂ ಮಸಗಿರ್ಪ ಚುಂಬನಂ
ತಿಳಿವಿನ ಬಂಬಲಂ ನೆಱೆಯೆ ಕಿತ್ತಲೆಯೆತ್ತುವ ಸೌಖ್ಯವಿಚ್ಛೆಯಂ
ಬಳೆಯಿಸಲಂಪು ಕಾದಲರೊಳಚ್ಚರಿಯಾಗಿರಲೊ[2]ರ್ಮೆಗೊರ್ಮೆ[2]ಗ
ಗ್ಗಳಿಸುವರಿಂತಿವಲ್ಲದೊಡೆ ಬೇಂಟಮದುಂಟೆ ಮಹೀವಿಭಾಗದೊಳ್ ೫೯

ಇನಿಯರೊಳಟ್ಟಿಱಿಂ ನೆರೆವ ಭಂಗಿಗಳಂ ಪೆಱರ್ಗಿಂತುಟೆಂದವಂ
ನೆನೆನೆನೆನೆವೆಯ್ದೆ ಪೇೞ್ವಿರವರೇಂ ಮತಿವಂತೆಯರಕ್ಕ [3]ಕೂರ್ತು[3] ನ
ಲ್ಲ[4]ನ ತನು ಸೋಂಕುತಾ[4]ಗಳೆನಗಂ ನಿಱಿ ಮುನ್ನವೆ ಬಿಟ್ಟು ಪೋಪುದೆಂ
ಬಿನಿತನೆ ಬಲ್ಲೆನಾ[5]ನಱಿಯೆನಂದೆನ[5]ಗಾದ ರ[6]ತಪ್ರಪಂಚಮಂ[6] ೬೦

(ಶೃಂಗಾರರತ್ನಾಕರಂ, ೧-೫೭)

---

[1] ಪಿಂಕಡು (ಕ) ಬಂಕುಡು (ಕ ಬ) [2] ರ್ಮಿಗೊವರ್ಮ (ಖ ಬ) [3] ಸೈತು (ಖ ಬ)
[4] ನೊಳೊಡಗೂಡುವಾ (ಅ ಕ) [5] ಮೆಲ್ಲಱಿಯೆನೆನೆ (ಖ ಬ) [6] ತಾಂತರಂಗಳಂ (ಖ ಬ)

ಇಂತುಟದೆಂದು ಬಣ್ಣಿಸುವರಾರ್ ಗಳ ನಲ್ಲಳ ನಲ್ಮೆಯ[1]ಲ್ಲಿ[1] ನಾ
ಣಂತಲೆದೋಱಲೀಯದ ರತಂ ನುಡಿಯಂ ಪೊಱಪೊಣ್ಮಲೀಯದೋ
ರಂತಿರೆ ಬಾಯ್ಗೆ ಬಾಯ್ ಸವಿಯನೊಪ್ಪಿಪ ಚುಂಬನಮೆಯ್ದೆ ನಿದ್ರೆಯಂ
ಸಂತತ ವೋದುವೀಕ್ಷಣಮಲಂಕೃತಿಯಂ ಬೆದಱಿಟ್ಟುವಪ್ಪುಗಳ್ ೬೧

ಮುಡಿಯಿಂದಂ ಸುತ್ತಲುಂ ಕತ್ತುರಿಯುದಿರ್ದುದು ಪೂಮಾಲೆ ಸೂಸಿರ್ದುದೆತ್ತಂ
ಕಡಿಖಂಡಂಬೋಯ್ತು ಹಾರಂ ಬಳೆಯ ಮುಱುಂಗಳಿಂ ಸೆಜ್ಜೆ ತೀವಿತ್ತು ಮೆಚ್ಚ
ಚ್ಚುಡಿವನ್ನಂ ಪಾರ್ದು ನಲ್ಲರ್ ನೆರೆದರಿದಿರೊಳಿಂದಟ್ಟಿಯಿಂ ಸೆಜ್ಜೆಯಿಂ ಪಿಂ
ಬಡಿನೊಳ್ ಪೊಕ್ಕಾಳಿಯರ್ ಕಂಡೊಡನೆ ಪೊಗೞ್ವಿನಂ ಸಂಭ್ರಮಂ ಸಂಪ್ರಯೋಗಂ ೬೨

ವದನಸ್ವೇದಾಂಬುವಿಂದಂ ಕೊನೆನನೆದ ಕುರುಳ್ ಪಾಟಲಚ್ಛಾಯೆಯಿಂ ಬೀ
ಗಿದ ಬಾಯ್ ಕೆಂಪಿಂ ತುಳುಂಕಾಡುವ ನಯನದಳಂ ಸೂಕ್ಷ್ಮರೇಖಾಳಿಯಿಂ ತೀ
ವಿದ ವಕ್ಷೋಜೈಕಪಾರ್ಶ್ವಂ ಪೊಳೆವುವಡೆದ ಮೆಯ್ ನೀಳ್ದ ಸುಯ್ ಬೆಂಗೆ ಬಿಣ್ಪೇ
ಱಿದ ಕೇಶಂ ಮಂದಯಾನಂ ನೆಱೆ ಮೆಱೆದವು ರತ್ಯಂತದೊಳ್ ಕಾಂತೆಯರ್ಗಂ ೬೩

ಅಳಸದಿರಣ್ಣ ನಿರ್ದನೆಲೆ ಅಗ್ಗದ ಪೆರ್ಮೊಲೆ ನೋಗುಮುಟ್ಟುದಂ
ಕಳೆಯದೆ ಕೂಡು ಬೇ[2]ನೆ ತ[2]ಳೆದಪ್ಪುದು ಪೊಯ್ಯದಿರೊತ್ತಿಯಾಱುತಿಂ
ಗಳ ಬಸಿಱ[3]ಕೆಪಾಯ್ತೆಯದಿ[3]ರ್ಪಿಂ[3] ಬಣವೋಡಿದುದಿಂದು ನೋಡೆ ಕೂ
ಸಿಟಿ[4]ವು[5]ದು ಕಾವುದೀ ನೊಗಮನಿತ್ತೆನುತಂ ಪೆಱಗಾಗಿ ಕೂಡಿದಳ್ ೬೪

(ಕಾವ್ಯಸಾರಂ ೩೩೮)

ಮೊಲೆ ಮಲೆಯೆ ಖಾಳಪಟ್ಟವು
ನಲೆಯೆ ಕುರುಳ್ ತಾರಹಾರಮಂಡಲಮುರದೊಳ್
ನಲಿಯೆ ಶಕುನಿಗಳ ತೆಱದಿಂ
ದುಲಿಯೆ ಕೊರಲ್ ಕಾಂತೆ ಕೂಡಿದಳ್ ಪ್ರಿಯತಮನೊಳ್ ೬೫

ಒಡನೊಳಪೊಕ್ಕು ಮೆಯ್ಗೆ ಪುಳಕಂಗಳ ಕೀಲಮರ್ದಪ್ಪು ಕಾಳಸಂ
[5]ಬಿಡ[5]ದಿರೆ ಕಾಸಿ ಬೆಚ್ಚು ತೊಳೆದಂತೆ ಜೆಮರ್ [6]ಬಟಿ[6]ಕೇ[6]ಟಿ ಪೀ[7]ರ್ದ ಬಾಯ್
ಬಿಡದ ತೊಡಂಕಿನಿಂ ತೊಳಗೆ ಪೊಂಗಿ ತೊಡಂಕಿರೆ ಪೋಲ್ತು[7]ರೋಪರಿಂ
ಪಡರ್ದ ರ[8]ತಾಂತ[8]ದೊಳ್ ಸಮನೆ ಸಂಪುಟದಿಂ[9]ದೆಸೆವರ್ಧ[9]ನಾರಿಯಂ ೬೬

(ಅನಂತನಾಥಪುರಾಣಂ ೮-೫೨)

---

[1] ಟ್ಟ (ಕ). [2] ಗೆತ (ಕ) ನೆಕ (ಖ ಬ) [3] ದಿರ್ಪಂ (ಖ ಬ) [4] ದು (ಖ ಬ) [5] ಬಜೆ (ಅ) [6] ತಿಳಿದೇ (ಅ) [7] ದ.ರ್ ಬಾಯ್ಬಗಿದೊಡಂಕಿನಂತೊಳಗೆ ಪೊಂಗಿ ದೊಡಂಕಿರಿ ಪೋಲ್ತು (ಅ) [8] ಥಾಂಗ (ಅ) [9] ಸಮವಿರ್ದ (ಅ)

ಸಮರತಸೌಖ್ಯದೊಳ್ ಸತಿ ದಿಗಂಬರವೇಷಮನಾಳ್ದು ಮುಕ್ತಕೇ
ಶಮದೆಸೆಯಲ್ಕೆ ಕ[1]ಣ್ಗಳೆರೆ[1]ಮೀಲಿತಮಾಗಿರಲಾಸನಕ್ರಮಂ
ಸಮನಿಸೆ ಹೂಂಕೃತಪ್ರಣವಮೊಪ್ಪೆ ಶರೀರಮ[2]ನೊಕ್ಕು ತನ್ಮನೋ[2]
ರಮಣನ ಹೃತ್ಸನ್ನಿಧಾನಮನುಪಾರ್ಜಿಪ [3]ಯೋಗಿನಿ[3]ಯಂತಿರೊಪ್ಪಿದಳ್ ೬೭

(ಶೂದ್ರಕಂ—ಕಾವ್ಯಸಾರಂ ೬೬೫)

ಒದೆದು ಕಲಂಕಿ ಪಾಯ್ವ ಪದದೊಳ್ ಪದವೆತ್ತು ಪುಡುಂಕುನೀರನ
ದ್ದಿದಳುಱಿ ಮೋದಿ ಮುಂದೆಲೆಗೆ ಪಾಯ್ದು ಪೊರಳ್ಚಿದಳು[4]ರ್ಬಿ[4] ಬಾಹುಪಾ
ಶದೊಳೆ ತೊಡರ್ಚಿದಳ್ ಕರದ ಕೊರುಗುರಿಂದಮೆ ಬೆನ್ನ ಬಾರನೆ
ತ್ತಿದಳ[5]ಡಬಾಱಲೊಲ್ಲ[5]ದವನಂ ವನಿತಾಜನಚಿತ್ತಚೋರನಂ ೬೮

(ಲೀಲಾವತಿ ೧೩-೨೨)

ಮದವದ್ಯೌವನ ರೂಪು ವಿಭ್ರಮವಿಲಾಸಂ ಕಣ್ಗೆ ಸಂಭೋಗಸ
ನ್ಮದ ಚಾತುರ್ಯಮೃದೂಕ್ತಿಯುಂ ಕಿವಿಗೆ ಗಾಢಾಲಿಂಗನಂ ಮೆಯ್ಗೆ ಬೀ
ಗಿದ ಬಿಂಬಾಧರದಿಂಪು ನಾಲಿಗೆಗೆ ನುಣ್ಣುಂ ಕಂಪು ಮೂಗಿಂಗೆ ತೋ
ಱುದಳೋಪಂಗೆ[6]ಲತಾಂಗಿ ಮಂಚದೆಡೆಯೊಳ್ ಪಂಚೇಂದ್ರಿಯಪ್ರೀತಿಯಿಂ ೬೯

ಚುಂಬಿ[6]ಸೆ ಬೀಗೆ ಬೆಳ್ಕರಿಸದೊಳ್ತುಟಿ[7]ಯಾಳಿಸಿದ[6]ಪ್ಪಿ[7]ನೊತ್ತಿ ನಿಂ
ದಂ ಬಿಡೆ ಗುಜ್ಜುಗೊಂಡಮೊಲೆ ಪೋರ್ಕುಳಿಯಿಂದಮೆ ಹಂತಿದಪ್ಪಿ ತಾ
ಱುಂಬಟಿ[8]ಯೆಟ್ಟಿ ಚುಂಚು ಬೆಮರಿಂ ಕಡೆಗೆನ್ನೆಗೆ ಬಾನಲಾದ ಬೊ
ಟ್ಟಿಂಬಿವು ಕೂಟದೊಂದು ಸವಿಯೊಳ್ ಸವಿಯಾದುವು ಕಣ್ಗೆ ಕಾಂತನಾ[8] ೭೦

(ಚಂದ್ರಪ್ರಭಪುರಾಣಂ ೮-೭೨)

ಎತ್ತಿ ಮುಖಾಬ್ಜಮಂ ಬೆಮರನೂದಿ ಕುರುಳ್ಗಳನೊಪ್ಪಿ ನೀವಿ ಸ್ಯೆ
ತೊತ್ತಿ ಕದಂಪಿನೊಳ್ ಕದಪನಿಟ್ಟು ತೊಡಂಕಿದ ಭೂಷಣಂಗಳಂ
ಬಿತ್ತರದಿಂದೆ ತಿದ್ದಿ ರಸದಂಬುಲಮಂ ಸವಿಮಾಡಿ [9]ನೀ[9]ಡಿ ಮೆ
ಯ್ವೆತ್ತ ರತಾಂತ್ಯದೊಳ್ ಸುರತಸೇದೆಯನಾಱಿಸಿದಂ ಮನಃಪ್ರಿಯಂ ೭೧

ನಿಡುಸುಯ್ ಪೊಂಗಿರ್ದ ಬಾಯ್ ಚಪ್ಪಲರ್ದ ಕುಚಯುಗಂ ಕಂಪಮಾನೋರುಭೇದ್ಯಂ
ಕಡುರಕ್ತಾಸಕ್ತನೇತ್ರಂ ನವನಖಪದಮಾಕೀರ್ಣ ನೀಲಾಳಕಂ ಜೋ

---

[1] ಣ್ದರನಿ (ಅ) [2] ನೋರಥದ್ರವಾ (ಖ ಬ) [3] ಜೋಗಿಣಿ (ಖ ಬ) [4] ರ್ಚಿ (ಅ) [5] ವಳಾಱದೋವ (ಅ) ಡಬಾರಲಲ್ಲ (ಖ ಬ) [6] ಸಿ ಬೀಗಿ ಬೆಳ್ಪಡರ್ದ ಬಾಯ್ದುಱಿಯಾಳಿಸಿದ (ಅ) [7] ಯೊಳ್ ಪಿಡಿದಪ್ಪಿ (ಖ ಬ) [8] ಯುಂ ತೆರಳ್ದ ಕುರುಳುಣ್ಮೆ ಬೆಮರ್ ನಸುಬಾಲನಾದ ಬೊಟ್ಟಿಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ (ಅ) [9] ನೋ (ಕ)

ಲ್ದುಡೆ ಘರ್ಮಸ್ವೇದನಂ ಕಣ್ಗೊಳಿಸೆ ತಡತಡಂಮೆಟ್ಟೆ ರತ್ಯಂತದೊಳ್ ನೀ
ರ್ಗುಡಿಯಲ್ಕಂ ಪೋಪಳಂ ಕಂಡೆರ್ದೆ ತಣಿದು ಕುಳಿರ್ಕೊಂಡಿತ್ತೆನ್ನಂತರಂಗಂ ೭೨

ಪರೆದಳಕವ್ರಜಂ ಕೆದಱಿ ಸೂಸಿದ ಮುಂದಲೆ ಗುಜ್ಜುಗೊಂಡ ಪೀ
ವರಕುಚಮಂಡಲಂ ತುಳುಕಲಾದೆರ್ದೆ ಬಿಚ್ಚಿದ ಕೇಶಪಾಶಮು
ಬ್ಬರಿಸಿದ ರೇಖೆಗಳ್ ಸುಗಿದು ಪೋಗದ ಜರ್ಜರವಾದ ಬೊಟ್ಟು ಸೌಂ
ದರತರಮಾಗೆ ದಂಪತಿಗಳಿಂತೆಸೆದರ್ ಸುರತಾವಸಾನದೊಳ್ ೭೩

ನಲಿಗರ್ಚುಂ ನಖರೇಖೆಯುಂ ಸುಲಿದುರೋಜೋಮಧ್ಯಮುಂ ಸ್ವೇದಪಾ
ರಿಲವಂಗಳ್ ಪೊಳೆವಾಸ್ಯಮುಂ ಪರೆದ ಚಂಚತ್ಕುಂತಳಾನೀಕಮುಂ
[1]ಸ[1]ಲೆ ಮೆಯ್ದೋಱೆ [2]ರತಾಲಯಾಂಗಣದೊಳೊರ್ವಳ್ ನೀಱೆ ಮೆಯ್ಯೊಡ್ಡಿ[2] ಬ
ತ್ತಲೆ ನಿಂದಿರ್ದಳೆರಲ್ಗೆ ತೀರ್ದ ರತಖೇದಶ್ರಾಂತಿಯಿಂ ಬಿಚ್ಚತಂ ೭೪

ಬೆಮರ್ಗಳನೂದಿ ನುಣ್ದೊಡೆಗಳಂ ಪಿಡಿ[3]ದೌಂಕಿ[3] ಬೆರ[4]ಲ್ಗಳಂ ಕ್ರಮ[4]
ಕ್ರಮದೊಳೆ ಕೋದು ತಳ್ತು ಚಿಟುಕಿತ್ತು ತೊಡಂಕಿದ ಕುಂತಳಂಗಳಂ
ಸಮುದಯಮೊಪ್ಪೆ ನೀವಿ ರಸದಂಬುಲಮಂ ಸವಿಮಾಡಿ ನೀಡಿ ಮೆ
ಲ್ಪಮರಿ ಬೞಲ್ದ ತನ್ನಿನಿಯಳಂ ನೃಪನಾಱಿಸಿದಂ ರತಾಂತದೊಳ್ ೭೫
(ಶಬ್ದಮಣಿದರ್ಪಣಂ ೫೨-೨)

ಅಗಲ್ಗಣ್ ಬೆಂಡೇೞೆ ರೋಮಾಂಚ[5]ನದೊದವಿಸಿತುಂ[5] ತಾಱುತಟ್ಟಾಗೆ ಬಾಯೊಳ್
ಪಲವುಂ ನುಣ್ಮಾತುಗಳ್ ಲಾವುಗೆಯ ಕೊರಳನಲ್ಲಾಡಿದಂತಾಗೆ ಜುಮ್ಮೆಂ
ದೊಲೆದಂಗಂ ತೂಗೆ ಸುಯ್ಲಂತೊಳಗಿೞಿಯೆ [6]ಗಳಂ ಬೀಗೆ[6] ನಾಣ್ ಸೂಸೆ ಕಾ[7]ಮಂ
ಚಲದಿಂ[7] ಕೈಮಿಕ್ಕಮಳ್ಜಂತ್ರಮನೆ ಕೆಡಪಿದಂತಿರ್ವರುಂ ಮೂರ್ಛೆವೋದರ್ ೭೬

ಬೆಮರಂ ಬೀಸಿ ತೊಡಂಕಿದೊಳ್ಗುರುಳನಾದಂ ನೀವಿ ಪಚ್ಚಂಗಳಂ
ಕ್ರಮದಿಂ ತಿರ್ದಿ ಕದಂಪಿನೊಳ್ ಕದಪನೋರಂತಿಟ್ಟು ಮೆಲ್ದೊಪ್ಪಿ ಸಂ
ಭ್ರಮದಿಂದಂ ಪಿಡಿಕೆಯ್ಸಿ ನುಣ್ದೊಡೆಗಳಂ ಕಾದಲ್ಮೆ ಕೈಮಿಕ್ಕು ನೇ
ರ್ಪಮರ್ವನ್ನಂ ರತಖೇದಮಂ ಮಱಸಿದಂ ನಲ್ಲಳ್ಗೆ ತದ್ವಲ್ಲಭಂ ೭೭

ಪ್ರೊಡರ್ವುತ್ತುಂಗಸ್ತನಂ ಕೊಂಕೞಿದು ನಿಮಿರ್ವ ನೀಲಾಳಕಂ ಜೋಲ್ದ ಬಂಬ
ಲ್ಮುಡಿ ಬೆಳ್ಪೇಱಿರ್ದ ಬಿಂಬಾಧರಮಣಿ ನಸು[8]ಕೊಂಕಿ[8]ರ್ದ ಕರ್ಣೋತ್ಪಲಂ ಕೆಂ
ಪಡರ್ದಾಲೋಲೇಕ್ಷಣಂ ಕಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ
ಕುಡೆ ನೆಮ್ಮಿರ್ದೋಪನಂ ಮೆಯ್ಬೆಮರನೆಲರೊಳಂದಾಱಿಸುತ್ತಿರ್ದಳೊರ್ವಳ್ ೭೮
(ಜಗನ್ನಾಥವಿಜಯಂ ೧೬-೧೨೪)

---

[1] ನೆ (ಗ ಘ) [2] ರತಾಂತದೊಳ್ ಸುದತಿ ಸಸ್ವೇದಾಂಬುವಂ ತೀರ್ಚೆ (ಗ ಘ)
[3] ಕೆಯ್ಸಿ (ಕ ಖ) [4] ಳ್ಗಳೆಲ್ಲವಂ (ಗ ಘ) [5] ದಜಲವನಿತುಂ (ಗ ಘ) [6] ಬೆಮರ್ ಪೊಣ್ಮೆ (ಗ ಘ) [7] ಮೋಜ್ಜ್ವಲದಿಂ (ಕ ಖ ಗ ಘ) [8] ಗಂದಿ (ಕ ಖ ಬ)

ಬೆಮರುಣ್ಮಿತ್ತು ಶಶಾಂಕಮಂಡಲದೊಳುದ್ಯತ್ತಾರಕಾಗರ್ಭಸಂ
ತಮಸಂ ಬಿರ್ಚಿದುದಾಯ್ತು ಕೇತಕಿ[1]ಶಿಖಾ[ಲೀಲಾಯಿ][1]ತಶ್ರಾಂತಿ ವಿ
ಶ್ರಮಿಸಿತ್ತಬ್ಜಯುಗಂ ಚರನ್ಮಣಿವತಂಸಕ್ರೀಡೆ ಪೋದತ್ತು ವಿ
[2][ದ್ರುಮಮುಂ][2]ಸೀತ್ಕೃತಿ[3][ಗೆಟ್ಟು][3]ವಾನಜಾಯೆನಲ್ಲಿಂದಾದುದೇನೆಂಬುದಂ ೭೯
ಉಗು[4]ರ್ವೊಯ್ಲಿಂದಾಸುರಂಬಾಸುಟಿ[4]ಮೊಗೆಯೆ ಕರಂ ಬೀಗೆ ಬಿಂಬಾಧರಂ[5]ಬಾ
ಯುಗೆಯಿಂ ಕನ್ನೈಸೆ ಪೊಯ್ಲಿಂ ನಡುವೊಡೆಯೆ ಕುಚಂ[5] ಸೊಪ್ಪುಸೊಪ್ಪಾಗೆ ಕಂಗಳ್
ಮುಗಿವನ್ನಂ [6]ಪಾದದಿಂ ಬಳ್ಳನೆ ಬಳಿದವೊಲಟ್ಟಾಡೆ[6] ವ್ಯೈ [7]ಕೇಶಕೃಷ್ಣೋ[7]
ರಗನಂ ಪಿಂದಿಕ್ಕಿ ತನ್ನಂ ಪ್ರಿಯತಮಗರುಡಂ[8]ಗಿ[8]ತ್ತವೊಲ್ ಕೂಡುತಿರ್ದಳ್ ೮೦
(ಲೀಲಾವತಿ ೨-೧೩೩)
ಕರಜಾತಾದ್ರ್ರಕ್ಷತಂ ಕುಂಕುಮಲಿಖಿತಮನೋಹಾರಿಯಂತ್ರಂಬೊಲಿಂಬಾ
ಗಿರೆ ಮೆಯ್ಯೊಳ್ ಕೈಯ ಪಾತ್ರಂ ಕರಮೆಸೆಯೆ ರಣನ್ನೂಪುರಂ ಮುಕ್ತಕೇಶಂ
ಸ್ಮರಮಂತ್ರಾರಾಧನಾದೇವತೆಯೆ ಕುಣಿವವೋಲಾಡಿದಳ್ ಪೀರ್ದ ಮದ್ಯಂ
ಸುರಿವಂತೂರುಪ್ರದೇಶಂಬಿಡಿದು ಬಿಡೆ ಪದಂ ಕಾಂತೆ ನಿರ್ಗ್ರಥಂದಿಂದಂ ೮೧
(ಲೀಲಾವತಿ ೨-೧೩೭)

ಓರಂತೆ ಮೆಚ್ಚಿದಂ ಕೃತಿ
ಸಾರಂ ಸಂಭೋಗಕೆಯ್ದೆ ಹೊಯ್ಸಳವಂಶೋ
ದ್ಧಾರಂ[9] ನರಸಿಂಹ[9]ಸುತಂ
ದೋೇರಸಮುದ್ರಾಧಿನಾಯಕಂ ಸೋಮನೃಪಂ ೮೨

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸು ಧಾ ರ್ಣ ವ ದೊ ಳ್
ಸಂಭೋಗವರ್ಣನಂ ಚತುರ್ದಶಾಶ್ವಾಸಂ ಸಂಪೂರ್ಣಂ

---

[1]ಸಖೀವಿರಾಯ (ಕ) ಶಿಖಾವೀರಾಯ (ಖ ಗ ಬ) [2]ಭ್ರಮಮಾ (ಕ ಖ ಬ) [3] ಚಾಟು (ಅ) [4] ರೇಖುಂಬಾಳೊಂದಾಸುರ (ಅ) [5] ಪಾಯ್ದುಗಿವನ್ನಂಜೆಂಗೆ ಪೊಯ್ದಾ ಗುರುಕುಚಯುಗಳಂ (ಅ) [6] ಪಾತದಿಂ ಪಿಳ್ಳನೆ ಪಿಳಿದವ್ರೊಲಳ್ಳಾಡೆ (ಅ) [7] ಕೃಷ್ಣೆ ಕಾಳೋ(ಖ ಬ) [8] ಕಿ (ಅ) [9] ಬಲ್ಲಾಳ (ಕ)

# ವಿಪ್ರಲಂಭವರ್ಣನಂ

ಪುರು[1]ಡಿಂ ಮ್ಲಾ[1]ನದಿನನ್ಯದೇಶಗಮನವ್ಯಾಸಂಗದಿಂ ಸುವ್ರತಾಂ
ತರದಿಂ ಕೂಡಿದ ವಲ್ಲಭರ್ಗೆ ವಿರಹಂ ಪೂರ್ವಾನುರಕ್ತರ್ಗೆ ತಾಂ
ವಿರಹಂ [2]ಸಂದಿಸೆ[2] ಪಾಱಯಿಂದೆ ಪಿರಿದುಂ ಬರ್ಕುಂ ದಶಾವಸ್ಥೆಗಳ್
ಹರಿಣಾಂಕಾದಿಗಳಂಜಿಕುಂ ಸರಸಸೇವ್ಯಂ ವಿಪ್ರಲಂಭಸ್ಥಳಂ ೧

ಸ್ಮರವಶದಿನನ್ಯಜನ್ಮಾಂ
ತರಕೃತಸಂಸ್ಕಾರದಿಂ ವಿ[3]ಭೋ[3]ಗ[4]ಸ್ಪೃಹೆ[4]ಯಿಂ
ವರ ಚಾತುರ್ಯಕಳಾಗಮ
ಪರಿಣತಿಯಿಂ ಸ್ನೇಹವೃತ್ತಿಗಳ್ ಸಂಭವಿಕುಂ ೨

(ಶೃಂಗಾರರತ್ನಾಕರಂ ೪–೩೦)

ಪರಿಭಾವಿಸುವುದು ಪೂರ್ವಾ
ನುರಾಗ ಮಾನಾಖ್ಯ[5]ಕಂ ಪ್ರ[5]ವಾಸಾಖ್ಯಾನಂ
ಕರುಣಾತ್ಮಕಮೆಂದಿಂತವ
ತರಿಸೆ ಚತುರ್ಭಂಗಿ ವಿಪ್ರಲಂಭದ ಭೇದಂ ೩

(ಶೃಂಗಾರರತ್ನಾಕರಂ ೪–೩೯)

ನಳಿತೋಳಂ ನೀಡಿ ಕಾಲಂ ಮ[6]ಡಿದು[6] ಪೆಱಗಣಿಂ ಬಾಗಿ ಬಂಬಲ್ಗುರುಳ್ ಸಂ
ಚಲಿ[7]ಸಲ್[7] ನೀವೀನಿಬಂಧಂ ಸಡಿಲೆ ನಿಱಯನೇಱಿಋತ್ತಿ [8]ಸೌ[8]ರಂಭದಿಂ [9]ಕೆಂ
ದ[9]ಳವಂ ಸಂಚಾರಿಕಾಸ್ಕಂಧದೊಳವಯವದಿಂದೂಱಿ [10]ನೆಮ್ಮಿ[10]ರ್ದು ಮುಳ್ಳಂ
ಕಳೆ[11]ಯು[11]ತ್ತುಂ ನೋಡಿದಾ ಕಾಂತೆಯ ತೆಱನೆನಗುದ್ಭ್ರಾಂತಿಯಂ ಮಾ[12]ಟ್ಟಿ
ದಿನ್ನುಂ[12] ೪

(ಶೃಂಗಾರರತ್ನಾಕರಂ ೪_೪೨)

ಇನಿಯಂ ಪ್ರಾಣಮುಗಲ್ದು ಪೋಪ ತೆಱದಿಂದೆನ್ನಿಂದಗಲ್ದಿರ್ದನಾ
ತನ ಪೋಗಿಂಗೆನಗಕ್ಕ ನೋವಿನಿಸುಮಿ[13]ಲ್ಲೇಕೆಂ[13]ದೊಡೊಂದುಂಟು ನ

---

[1] ದಿಂ ಮಾ(ಗ ಘ) [2] ಸಾಧಿಸಿ(ಖ ಗ ಘ ಬ) [3] ಯೋ (ಕ) [4] ಕ್ರಿಯೆ (ಅ) [5] ಮುಂಪ್ರ (ಅ) ತತ್ಪ್ರ (ಗ ಘ) [6] ಡುಪಿ (ಅ) [7] ಪನ್ನಂ(ಗ ಘ) [8] ಸಂ (ಖ ಬ) [9] ಕುಂತ (ಗ ಘ) [10] ನಿಂದಿ (ಗ ಘ) [11] ಸು (ಖ ಬ) [12] ಡುತಿರ್ಕುಂ (ಅ) [13] ಲ್ಲಂತೆಂ (ಅ)

ಲ್ಲನ ಚಿತ್ತಂ ಪೆಱಪಿಂಗೆ ಪಿಂಗ[1]ದೆ[1] ತಗುಳ್ದೋರಂತೆ ನಿಷ್ಕಾರಣಂ
ನೆನೆವೀ ಚಿತ್ತದ [2]ಮೋಹ[2]ನಾಣಿಲಿತನಕ್ಕಾಂ ನೋವೆನಬ್ಜಾನನೇ ೫

(ಶೃಂಗಾರರತ್ನಾಕರಂ ೪-೪೫)

ಪ್ರಿಯೆಯೊಡನಾದ ಕೂಟದೊಳಗಲ್ಕೆ[3]ಯೊಳಾನಿರೆ[3] ಕೂಟದಿಂದಗ
ಲ್ಕೆಯೆ ಕರಮೊಳ್ಳಿತೆನ್ನ ಬಗೆಗೆಂತೆನೆ ನೆಟ್ಟನೆ ನೋೞ್ಪುಡಂ[4]ತೆ[4] ಮ
ತ್ಪ್ರಿಯೆಯನೆ ಕಾಣ್ಬೆನೊರ್ವಳನೆ [5]ಭಾವಿಪೊಡಿಂ ಬೞಿಕೆನ್ನ[5] ಕಣ್ಗೆ ತ
ನ್ಮಯಮೆನಗೀ ಜಗತ್ತ್ರಿತಯಮೆಲ್ಲಮಗಲ್ಕೆಯೊಳೆನ್ನ ನಲ್ಲಳಾ ೬

(ಶೃಂಗಾರರತ್ನಾಕರಂ ೪-೪೮)

ಕೆಳದೀ ಕೀರಾಳಿಗಳ್ ಕೈಯೆಡೆ ನಿನಗೊಡಲಂ ತಾಳಲಾರ್ತಪ್ಪೆನಿಲ್ಲೀ
ಗಳದೊಂದುಂ ಬೇಡ ಕಾಂತಂ [6]ಕೞಿದ[6]ನೆನಗಿರಲ್ ತಕ್ಕುದಲ್ತೆಂದು ಕೈಗ್ಯೆ
[7]ದೆಳೆಯಳ್[7] ತನ್ನಂ ಪರಿಚ್ಛೇದಿಸಿ ಬಗೆಯದೆ ಬಂ[8]ದುಣ್ಮಿ ಪರ್ವಿರ್ದ[8] ಬೆಳ್ದಿಂ
ಗಳ ಕೋಳ್ಗಂ ತೆಂಬೆಲರ್ಗಂ ಪ್ರಿಯ ಶರಣೆನುತಂ ಸಾರ್ಚಿದಳ್ ಮೈಯನೊರ್ವಳ್ ೭

(ಶೃಂಗಾರರತ್ನಾಕರಂ ೪-೫೧)

ಅಭಿಲಾಷೆ ಚಿಂತೆ ಸಂ[9]ಸ್ಮೃ[9]ತಿ
ವಿಭುಗುಣನುತಿ ತಾಪನಂ ಕ್ರಿಯಾದ್ವೇಷಂ ಸಂ
ದಭಿಮಾನಚ್ಯುತಿ ಗಮನಂ
ಕ್ಷುಭಿತಾತ್ಮಾವಸ್ಥೆ ಮರಣಮಿವು ದಶಭೇದಂ ೮

(ಶೃಂಗಾರರತ್ನಾಕರಂ ೪-೬೯)

ಉಂಟೆಲ್ಲವಸ್ಥೆ ಮುಳಿಸಿಂ
ನಂಟೆಂದೊಂದೆರಡು ಮೂಱು ನಾಲ್ಕೈದಾಱೇ
ೞೆಂಟೊಂಬತುಪತ್ತೊಂಬ
ತ್ತೆಂಟೇೞಾಱಯ್ದು ನಾಲ್ಕು ಮೂಱೆರಡೊಂದುಂ ೯

ಇಂಬಱಿದು ನುಡಿವ ನುಡಿಯುಮೊ
ಡಂಬ[10]ಡಿಪೆನಿಸಿದ[10] ವಿಲಾಸಮುಂ ವರರೂಪಾ
ಡಂಬರಮುಮಾರ ಬಗೆಯಂ
ನಂಬಿಸಿ ಪತ್ತಿಸದೆ ಚತುರ ಚುತುರಾನನನಾ ೧೦

(ಶೃಂಗಾರರತ್ನಾಕರಂ ೪-೭೭)

---

1 ದು (ಖ ಬ) 2 ಮಾಯ್ದ (ಅ) 3 ಯಗಲ್ಕೆಯ (ಅ) 4 ದು (ಅ)
5 ಕೂಡಿರೆ ಭಾವಿಪೊಡಿಂದು (ಅ) 6 ತಳರ್ದ (ಗ ಫ) 7 ದಿಳೆಯೊಳ್ (ಅ) 8 ದಣ್ಮಿ
ಪೆರ್ಚಿದರ್ (ಅ) 9 ಸ್ಮೃ (ಖ ಬ) ಸ್ಮೃ (ಗ ಫ) 10 ಡೆಸೊಗಯಿಸ (ಅ)

ಪರವಶದರ್ಶನದಿಂ[1]ದವೆ[1]
ಪರಿದುದು ಮನಮೆನಗೆ ಕೂಟಮೆಂತಕ್ಕುಮವಂ
ಬರಲಱುಗುಮಱು[2]ಯನೆನಗಂ[2]
ದೊರೆಕೊಳ್ಗುಮೊ ಕೊಳ್ಳದೆಂದವಳ್ ಚಿಂತಿಸಿದಳ್ ೧೧

(ಶೃಂಗಾರರತ್ನಾಕರಂ ೪-೭೮)

ಪಲತೆಱ[3]ದ ವಿನೋದಂಗಳ್[3]
ಚಲಿಯಿಸುತಿರೆ ಮನ[4]ಮನೆಂ[4]ತುಮಾಕೆಯ ಮನದಿಂ
ಚಲಿಯಿ[5]ಸದಿರ್ಪನವಂ[5] ಸಂ
ಚಲಿ[6]ಸುವ[6] ಕೇತನದ ಪಟದ ರೂಪಿನ ತೆಱದಿಂ ೧೨

(ಶೃಂಗಾರರತ್ನಾಕರಂ ೪-೭೯)

ಇಂತು ನುಡಿಯಲ್ಕೆ ಬಲ್ಲನ
ನಿಂತಿಂಬಱುವವನನಿಂತು ಚೆಲ್ವನನಿಂತ
ತ್ಯಂತ ಗುಣಗಣಸಮೇತನ
[7]ನಿಂತಪ್ಪನನನ್ಯಗಂಡರೊಳ್ ಕಂಡಱಿಯೆಂ[7] ೧೩

(ಶೃಂಗಾರರತ್ನಾಕರಂ ೪-೮೦)

ಕದಳೀಶಯ್ಯಾ[8]ತಳ[8]ಮುಂ
ಕದಳೀಗ[9]ರ್ಭಾಂಬುಸೇಚನಂ[9] ಶೈತ್ಯಮು[10]ನಿಂ
ದೊ[10]ದಯಿಸುಗುಮೆಂದು ಮಾಡಿದೊ
ಡದು ಪುಟಪಾಕದವೊಲಾಯ್ತುವಳ್ಗಂಗಜನಿಂ ೧೪

(ಶೃಂಗಾರರತ್ನಾಕರಂ ೪-೮೧)

ಆಲೇಪನ[11]ಕಜ್ಜಲ[11]ತಾಂ
ಬೂಲ[12]ಸ್ರಗ್ಭೂ[12]ಷಣಾದಿ ವಿಭವಂಗಳನಾ
ಬಾಲೆ ಸಖೀಪ್ರಾರ್ಥನೆಯೊಳ್
ಮೇಳಿಸಿ ನಿನ್ನನೆ ಪಲುಂಬಿ ಪಂಬಲಿಸಿದಪಳ್ ೧೫

(ಶೃಂಗಾರರತ್ನಾಕರಂ ೪-೮೨)

ಬಗೆಯದೆ ತಾಯಂ ತಂದೆಯ
ಮೊಗಕಂಜದೆ ಬಂಧುವರ್ಗಮಂ ಮೀಱಿ ಕೆಲ

---

[1] ದಂ (ಅ) [2] ಯೆನೆನಗಿದು (ಖ ಬ) [3] ದಂಗಂಗಳ್ ತಾಂ (ಅ) [4] ಮುಮೆಂ (ಅ) [5] ಸುತಿರ್ಪಿರನಿಂ (ಖ ಬ) ಸುತಿರ್ಪನವಂ (ಗ ಫ) [6] ಕುಂ (ಅ) [7] ನಿಂತ ಪಸನೆನ್ನಗಂಡನೊಳ್ ಕಂಡಱಿಯಾ (ಅ) ನಿಂತೀಲೋಕದೊಳ್ ಕಂಡರೊಳ್ ಕಂಡಱಿಯೆಂ (ಗ ಫ) [8] ಸನ (ಖ ಬ) [9] ರ್ಭಾನವಗೂಹನಸಮುಣ್ಣಿಂ (ಗ ಫ) [10] ನಿನ್ನೊ (ಅ) [11] ಕಂಜಲ (ಖ ಬ) [12] ಶ್ರೀಭೂ (ಅ) ಸದ್ಭೂ (ಗ ಫ)

ಕ್ಕಗಿಯದೆ ನಿನ್ನೊಳ್ ನೆರೆಯಲ್
ಮೃಗಶಾಬೇಕ್ಷಣೆ ತಗುಳ್ದು ಪಂಬಲಿಸಿದಪಳ್ ೧೬
(ಶೃಂಗಾರರತ್ನಾಕರಂ ೪-೮೩)

ಕಳವಳಿಸಿದಪಳ್ ಬಾಯುಱೆ
[1]ದೊಳಱು[1]ದಪಳ್ ಬೀದಿ ಬೀದಿಯೊಳ್ ನಿನ್ನಂ ಕೋ
ವಳಿ ಪಿಡಿಯಲೆಂದು [2]ಪಾರ್ದ[2]
ವ್ವಳಿಸಿದಪಳ್ ನೀನವಳ್ಗೆ ಕರುಣಿಸವೇಡಾ ೧೭
(ಶೃಂಗಾರರತ್ನಾಕರಂ ೪-೮೪)

ಮಾಣದೆ[3]ಸುತಿರ್ಪ[3] ಮದನನ
ಬಾಣಾಹತಿಗೊಡಲ[4]ನೊಡ್ಡಿ ನಾಣುಂ ಜಾಣುಂ
ಮಾಣದೆಯುಂ[4] ಕಂಠಗತ
ಪ್ರಾಣೆಯವಳ್ ನಿನ್ನ ದೂಸಱುಂ [5]ಬಟ್ಟಿಪ್ಪಳ್[5] ೧೮
(ಶೃಂಗಾರರತ್ನಾಕರಂ ೪-೮೫)

ಅನವರತಮೆಸುವ ಕಾವನ
ನನೆಯ ಸರಲ್ ಸವೆಯೆ ಸ[6]ವೆಯ[6]ದಾಕೆಯ ಪದ್ಮಾ
ನನದಿನೆಡೆಯುಡುಗದುಣ್ಮುವ
ಘನಸಾರಾಮೋದಪೂರಮಂದಶ್ವಾಸಂ ೧೯
(ಶೃಂಗಾರರತ್ನಾಕರಂ ೪-೮೬)

ತಳಿಗೊರ್ಂಬಂ ಬಲಗೊಂಡು ಚಂದ್ರಬಲಮಂ ಕೈಕೊಂಡು ತೆಂಗಾಳಿಯಂ
ಕೆಳೆಗೊಂಡಾಮ್ರಮನೊತ್ತುಗೊಂಡು ಮಧುವಂ ಮುಂದಿಟ್ಟು ಪುಷ್ಪಾಸ್ತ್ರಸಂ
ಕುಳಮುಂ ತೀವಿರೆ ತೊಟ್ಟು ನಲ್ಲ[7]ರಱುವಂ[7] ಪಾರ್ದೆಚ್ಚನಿಂತೀಗಳೀ
ಖಳನೀ ಪಾತಕನೀ ಬಹುವ್ಯಸನನೀ ಚಂಡಾಲನೀ ಮನ್ಮಥಂ ೨೦

ಬಿರಿದಪುದೆರ್ದೆ ಪೋೞಾಗದು
ಶರೀರಮುರಿದಪುದು ಭಸ್ಮಮಾಗದು ತನುವಂ
ಸ್ಮರನೆಚ್ಚಪನೇಱಾಗದು
ಮುರಹರ ನಿನ್ನೊಂದಗಲ್ಕೆಯಿದು ಚಿತ್ರತರಂ ೨೧

[1]ದೆಳಸಿ (ಅ) [2] ಸಂದ (ಅ) [3] ಸುತ್ತಿದ (ಅ) [4] ನೀಗಳೊಪ್ಪಿಸಿ ನಾಣುಂ ಜಾಣುಂ ಕಿಡೆ (ಅ) [5] ಬರ್ದಿದಪಳ್ (ಅ) ಬಿರ್ದಿರ್ಪಳ್ (ಖ ಬ) [6] ವೆಮು (ಅ)
[7] ರುಳಿವಂ (ಕ) ಉರಿವಂ (ಖ ಬ)

ಪೋದವರಾರುಮೇಂ ಮಗುೞ್ದು ಬಾರರೆ ಪೊದಪೇ [1][ನೆಂ][1]ದೊಡೆಕೆಯಿಂ
ತಾದಪೆಯೆಂದೊಡಾಂತುಗುವ ಕಣ್ಬನಿಯಂ ನೆಗೆವುತ್ತರಂಗಳಂ
ಕಾದು ಪೊದೞ್ದು ನಾಣ್ಚಿರಸು ಮೆಲ್ಲನೆ ನೋಡಿ ವಿಯೋಗದುಃಖದಿಂ
ಕಾದಲಳಂದು ನಕ್ಕಳದು ಮುಂದಣ ಸಾವಿನೊಳಾದ ನಿಶ್ಚಯಂ ೨೨

ಮಿಡುಕುಱಿ ಪೊಯ್ದು ತನ್ನೆರ್ದೆಯನೊತ್ತಿ ಕರಾಗ್ರದೊಳಾರೊಳಪ್ಪೊಡಂ
ನುಡಿಯದೆ ಚಿಂತಿಸುತ್ತಮೆಮೆಯಿಕ್ಕುವುದಂ ಮಱೆದೊಂದು ಜಾವಮುಂ
ಮಿಡುಕದೆ ಸಾಲಭಂಜಿಕೆವೊಲಿರ್ದ ಲತಾಂಗಿಯ ರೂಪು ಕಣ್ಗಳೊಳ್
ತೊಡರ್ದಿರೆ ಪೋಗುಗೆಟ್ಟನಿಸುಬೇಗಮನಲ್ಲಿಯೆ ನಿಂದು ನೋಡಿ[2]ದಂ[2] ೨೩

ಒಡವಂದು ಕಳುಪಿ ನಿಲ್ಲೆಂ
ದೆಡೆಯೊಳ್ ಮರವಟ್ಟು ನಿಂದ ಕಾಮಿನಿ ಪತಿಗೇಂ
ಪಡೆದಳೊ ರಂಭೆಯ ಶಾಪದೊ
ಳೊಡರಿಸಿ [3][ನ][3]ರನಾಗಿ ನಿಂದ ಪೆಣ್ಣಾಕೃತಿ[4]ಯಂ[4] ೨೪

(ಶೃಂಗಾರರತ್ನಾಕರಂ ೨-೯)

ಸುರಚಾಪಂ ಕುಡುವುರ್ಬು ಕುಂತಳಕುಲಂ ಧಾರಾಧರಂ ರೋದನ
ಸ್ವರಮಂಭೋಧರನಿಸ್ವನಂ ಪೊಳೆವಪಾಂಗಂ ನೀಳ್ದ ವಿದ್ಯುತ್ತು ಭೋ
ರ್ಗರೆದೋರಂತುಗುವಶ್ರು ವೃಷ್ಟಿ ದಿಟದಿಂ ತಾನಾಗೆ ಕಾರ್ಗಾಲಮಂ
ನಿರುತಂ ಪೋಲ್ತುದು ನಲ್ಲಳಾಸ್ಯಮಿನಿಯಂ ಪೋದಪ್ಪೆನೆಂದಿರ್ಪುದುಂ ೨೫

ಪೋದುವು ಕೂಡೆ ಕಯ್ಯ ಬಳೆ ಕಣ್ಬನಿ ಸಂಗಡಮಾಗೆ ಚೆಚ್ಚರಂ
ಪೋದುವು ಚಿತ್ತಮಂಗನೆಯ ಸ್ವೈರಣಿ ಸಂಗಡಮಾಗೆ ಕಾದಲಂ
ಪೋದಪೆನೆಂದು ಪೋಗುತಿರೆ ತಕ್ಕುದದಾತ್ಮ[5][ಸ][5]ಖಂ ಸ್ವಕೀಯಕಾ
ರ್ಯೋದಯದಿಂದೆ ಪೋಗಲಿರೆ ಮುಂದೆ ಸುಹೃತ್ತತಿ ಪೋಗದಿರ್ಕುಮೇ ೨೬

ಚಲದಳಕಾಳಿಯೊಡ್ಡಿದ ಮುಗಿಲ್ ಕುಡಿವುರ್ವಮರೇಂದ್ರಚಾಪಮು
ಜ್ವಳ ದಶನಾಂಶು ಮಿಂಚು ಮಱೆ ಬಾಷ್ಪಜಲಂ ಮೊಬಿಗಱ್ಕಯಾಗೆ ಕೋ
ಮಳೆ ಮಱೆಗಾಲದಂತೆಱಗಿ ಕಜ್ಜಳ ಕರ್ದಮಮಂಘ್ರಿಮೂಲದೊಳ್
ಪೊಳೆವಿನಮೊರ್ವಳಾಱಿಸಿದಳೋಪನ ಕೋಪನಿದಾಘತಾಪಮಂ ೨೭

ಇನಿಯನಗಲ್ದು ಪೋಗುತಿರೆ ನಿಂದೆವೆಯಿಕ್ಕದೆ ನೋಡುತಿರ್ದ ಕಾ
ಮಿನಿಯಸು ಪೋದುದಾತನೊಡನಾತನುಮಾಗಳೆ ಪೋಗಿ ಬಂದು ಮೆ

[1] ಯಿಂ(ಕ ಖ ಬ) [2] ದಳ್(ಖ ಬ) [3] ಮ (ಕ ಖ ಬ) [4] ಯೊಳ್ (ಖ ಬ)
[5] ಸು (ಕ ಖ ಬ)

ಲ್ಲನೆ ತೆಗೆದಪ್ಪಿಕೊಂಡು ಬಿಸುಸುಯ್ಯು [1]ಸುಯಿಲ್ ಬರಲಾರ್ತುದಿಲ್ಲವಾ
ತ[1]ನುಗೆ ಬೞಿಕ್ಕದೆಂತು ಬಿದಿ ನಲ್ಲರನೊಯ್ದಸ[2]ಗಲ್ಚಿ[2] ನಿರ್ದಯಂ ೨೮

ತೊಡಿಗೆಗಳೆಲ್ಲಮಂ ತೊಡುವಳೊಲ್ಲದೆ ಮೇಣ್ ಕಳೆದಿಕ್ಕಿ ಪಾಸಿನೊಳ್
ಪಡುವಳದೇನನಕ್ಕೆ ಮಱೆದಂತಿರೆಗೆಯ್ದುಱದಂತೆವೊಲ್ ಬೆರಲ್
ಮಿಡಿವಳೊಡರ್ಚಿ ಸುಯ್ದುಗಿವಳಾಗುಳಿಪಳ್ ದನಿಯೆತ್ತಿ ಪಾಡುವಳ್
ನಡೆದು ತೊಡಂಕುವಳ್ ನುಡಿದು ತಪ್ಪುವಳುಣ್ಮೆ ವಿಯೋಗ[3]ಯೋಗದಿಂ[3] ೨೯

ಎನಗೆ ಮುದಾಳಿ ಪಲ್ಮೊಱೆದು ಕಲ್ತವು ಗಾವರಿಸಲ್ ಪಿಕಂಗಳೆ
ನ್ನನೆ ಜಡಿದೀಗಳೆಯ್ದೆ ನುಡಿಗಲ್ತವು ಮನ್ಮಥನೆನ್ನನೆಚ್ಚು ನ
ಚ್ಚಿನ ಶರವಿದ್ಯೆಯೊಳ್ ಕುಶಲನಾದನಿದೇಂ ಪ್ರಿಯ ಮತ್ತಮೆಯ್ದದೇ
ಮುನಿಸೆನುತುಂ ಲತಾಂಗಿ ಸುರಿದಳ್ ಬಸಮಲ್ಲದ ಬಾಷ್ಪವಾರಿಯಂ ೩೦
(ಮಲ್ಲಿನಾಥಪುರಾಣಂ ೭_೭೮)

ಅಳಿಗಳೊ ನೀಳ್ದ ಕರ್ಬೊಗೆಯೊ ಕೆಂದಳಿರೋಳಿಯೊ ಸುತ್ತಿಗೊಂಡು ತ
ಳ್ತಳುರ್ವುರಿಮಾಲೆಯೋ ಸರಸಪಕ್ವಫಲಂಗಳೊ ವಿಸ್ಫುಲಿಂಗಸಂ
ಕುಳಮೊ ಮನಕ್ಕೆ ಸಂದೆಯಮುಗುಂದಲೆಯಾಗಿರೆ ನೋಡಿ ನೋಡಿ ಕಂ
ಟಳಿಪುದಿದೆನ್ನ ಮೈ ಕೆಳದಿ ಪೇೞ್ದು ಮಾಮರನೋ ದವಾಗ್ನಿಯೋ ೩೧
(ಕಾವ್ಯಾವಲೋಕನಂ ೭೦೯)

ಅದನೇವೇೞ್ಪುದೊ ಮನ್ಮಥಾಗ್ನಿ ಪರಿತಾಪೋದ್ರೇಕಮಂ ಕನ್ನೆ ಕ
ಟ್ಟಿದ ಮುಕ್ತಾವಳಿ ನೀಲಕಂಠಿಕೆವೊಲಿಂಬಾಗಿರ್ದುದಾಪ್ಯಾಯನ
ಪ್ರದಮಪ್ಪಣ್ಪಿನ ಚಂದನಂ ಮೃಗಮದಶ್ರೀವೊಲ್ ತಗುಳ್ದಿರ್ದುದು
ಟ್ಟ ದುಕೂಲಂ ಕರಿವಾೞಿಯಂತೆಪೆದುಕೊಂಡಿರ್ದತ್ತು ಮೆಯ್ವೆಂ[4]ಕೆ[4]ಯಿಂ ೩೨

ಮದನವಿಕಾರಮೊರ್ಮೊದಲೆ ಸಾರ್ಚೆ ಶಕುಂತಳೆಗಿಚ್ಚೆ ಬಚ್ಚೆಯಾ
ದುದು ಬಗೆ ಬಂಜೆಯಾದುದಱವಾಱಡಿವೋದುದು ಪೊಟ್ತು ವಿಟ್ತುವಾ
ದುದು ದೆಸೆ ಬೇಗೆಯಾದುದು ಬನಂ ಪೞುವಾದುದುಗೊಟ್ಟೆ ಬಿಟ್ಟೆಯಾ
ದುದು ಪುರುವಂಶಭೂಷಣನ ಚಿತ್ತಮುಮೀ ತೆಱನಾಗದಿರ್ಕುಮೇ ೩೩

ಪದೆದನುತಾಪದಿಂ ತನು ಬೆಳರ್ತುದು ನಾಣ ಭರಂ ತೆರಳ್ಚಿ ಪೊ
ಣ್ಮಿದ[5]ಘನ[5]ಘರ್ಮವಾರಿ ತೊಱೆಯಾದುದು ಚಿತ್ತದ ಕೂಟದಿಂದೆ ಬ
ತ್ತಿದುದು ಬೆಡಂಗುವೆತ್ತ ಬೆಳರ್ವಾಯ್ದರೆ ಕನ್ನೆಯ ನಲ್ಮೆ ಮಾಗಿಯಾ
ದುದು ಮೞೆಗಾಲಮಾದುದುಱೆ ಬೇಸಗೆಯಾದುದನಂಗಸೃಷ್ಟಿಯಿಂ ೩೪

---

[1] ತೆಸುಯ್ಯೆಲರಾತುರ್ದಿಲ್ಲ ತತ್ತ (ಗ ಫ) [2] ವೇಂಕೆ (ಗ ಫ) [3] ವೇಗೆಯಿಂ (ಗ ಫ)
[4] ಕಿ (ಕೆ ಬ) [5] ಮದ (ಬ)

ಆಗಿವಳ್ ಬಂದೆಳಮಾಮರಕ್ಕೆ ಸುಗಿವಳ್ ಮಲ್ಲೀಲತಾಂತಕ್ಕೆ ಮೈ
ದೆಗೆವಳ್ ತೀಡುವ ತೆಂಬೆಲರ್ಗೆ ಪಗೆವಳ್ ಹಿಂದೋಳರಾಗಕ್ಕೆ ನೀ
ರ್ವೊಗುವಳ್ ಶೀತಕರಾಂಶುಗಳ್ಗೆ ಕಳಕಂಠೀತಾರನಾದಕ್ಕೆ ನೊಂ
ದುಗುವಳ್ ಕಂಬನಿದಂದಲಂ ತರುಣಿ ಪುಷ್ಪಾಸ್ತ್ರಾಗ್ನಿಸಂತಾಪದಿಂ ೩೫

ಪೂಸಿಯುಮೊರ್ಮೆಯುಂ ಮಲಯಜದ್ರವಮಂ ಕದಳೀದಳಂಗಳಿಂ
ಬೀಸಿಯುಮುತ್ಪಲಾಬ್ಜದಳಸಂಚಯಮಂ ಪಲವುಂ ಪ್ರಕಾರದಿಂ
ಪಾಸಿಯುಮಿಂದುಕಾಂತದಿನೊಸರ್ತ ಹಿಮೋಜ್ವಲವಾಃಕಣಂಗಳಂ
ಸೂಸಿಯುಮಾರ್ತರಿಲ್ಲ ಕಳೆಯಲ್ಕೆ ಲತಾಂಗಿಯನಂಗತಾಪಮಂ ೩೬

ಉರಿಪೆಟ್ಟಿತ್ತ್ರರೆ[1]ಯೊ[1]ತ್ತಿ ಪೊತ್ತಿ ತಳಿರ್ವಾಸಂತಂತೆ ಮೆಯ್ಸೋಂಕೆಸೀ
ಕರಿವೋಯಿತ್ತಲರ್ವಾಸು ಕಾಯ್ದು ಕುಡಿವೋಲ್ ಕಾದತ್ತದೇನೆಂಬೆನ
ಚ್ಚರಿ[2]ನೀರ್ವಾಸು[2] ಮೃಣಾಳನಾಳಕದಳೀಕಾಂಡಾದಿಗಳ್ ತದ್ವನಾಂ
ತರದೊಳ್ ತೀರ್ದುವು ತೀರದೆನ್ನ ದೆಸೆಯಿಂ ಸಂತಾಪಮಾ ಕಾಂತೆಯಾ ೩೭

ಪ್ರಗೆ ಪೊಗೆಯೆಟ್ಟಿ ಕೆಂದಳಿರ ಜೊಂಪಮಿವಂತವಳೀಸೆ ಕಾಯ್ದು ನೀ
ರ್ದೆಗೆದ ಸರೋವರಂಗಳಿವು ಜೋಲ್ದು ಮಲಂಗೆ ಕರಿಂಕುವಿಟ್ಟಿ ಬಾ
ಟಿತಗಳಿವು [3]ಸುಯ್ದು ಸಾರ್ದೊಡನೆ[3] ಸೀದ ಲತಾ[4]ಳಿಯಿವಪ್ಪೆ[4] ಬೆಂದು [5]ವೈ
ದೆಗೆದ ಕವುಂ[5]ಗಿದೆಂಬ ಕುಜು[6]ಪೇಂ ಪಲವಾದುದೊ[6] ನಂದನಂಗಳೊಳ್ ೩೮

(ಚಂದ್ರಪ್ರಭಪುರಾಣಂ ೫-೧೩೩)

ಇಸಿಯನುಮಾನುಮೊಂದಿ ನೆರೆವಂದಿನ ಮನ್ಮಥನಂದಿನಿಂದುವಂ
ದಿನ ಕುಳಿರ್ಗಾಳಿಯಂದಿನ ಮಧುವ್ರಜಮಂದಿನ ರಾಜಕೀರಮಂ
ದಿನ ಕಳಕಂಠಮಂದಿನ ಸರೋವರಮಂದಿನ ಹಂಸವೃಂದಮಂ
ದಿನ ದಿನವಲ್ಲದಿಂದು ಕಡುಗಾಯ್ದಪವೆಂದು ಲತಾಂಗಿ ಬಾಡಿದಳ್ ೩೯

ನಿರವಿಸು ತುಂಬಿ ಬಿನ್ನವಿಸು ಕೋಗಿಲೆ ಸೂಚಿಸು ಗಂಧವಾಹ ಪೇ
ೞಿರಗಿಳಿ ವಲ್ಲಭಂಗೆ ಮದವಸ್ಥೆಯನೆಂದುಸಿದಾರ್ಗಳಂತೆ ನೀಂ
ನಿರವಿಸು ತುಂಬಿ ಬಿನ್ನವಿಸು ಕೋಗಿಲೆ ಸೂಚಿಸು ಗಂಧವಾಹ ಪೇ
ೞಿರಗಿಳಿ ನಲ್ಲನಿರ್ದಿರವನೆಂದೆಳೆಯಳ್ ಬೆಸಗೊಳ್ವಳಟ್ಕಱಿಂ ೪೦

ಮದನಶಿಖಾಕಲಾಪವೊಡಲಂ ಸುಡದೇ ಘನಘರ್ಮ ಬಿಂದುಗಳ್
ಪುದಿಯದಿರಿನ್ನೆಗಂ ಮುಱಿಯದೇ ಕದಪಂ ಕರಪದ್ಮವಾಂಕೆಗೊ

---

[1] ವೊ (ಕ ಖ ಬ) [2] ಸಿದ್ದಾಸು (ಖ ಬ) [3] ಸಾರ್ದು ಸುಯ್ಯುಡರೆ (ಅ)
[4] ವಳಿಸುಪ್ಪೆ (ಖ ಬ) [5] ಕಂದೊಗೆದೆಳಗೌಂ (ಅ) [6] ಪು ಪಲನಾಂತುವು (ಅ)

ಳ್ವದೊಡೆ ಕೊರಲ್ ದೃಗಂಬು ಕಡಲಾಗದೆ ಕಾಯ್ದ ಕಪೋಲವೆಯ್ದೆ ಪೀ
ರದೊಡಸು ಪೋಗದೇ ಹರಿಯುಗಲ್ದೊಡೆ ಚಿತ್ತದಿ ತಲ್ಲತಾಂಗಿಯಾ ೪೧

ಪೆಱಸಾರ್ವಳ್ ಬಿಸುಸುಯ್ವಳಾಗುಳಿಸುವಳ್ ಸಂಸಾರಮಂ ಬೈದು ಬೇ
ಸಱುವಳ್ ಮೂರ್ಛೆಗೆ ಸಲ್ವಳುಮ್ಮಳಿಪಳೋರಂತಿರ್ಪುಗುಂದಿರ್ದ ಬಾ
ಯ್ದೆಱೆಯಂ ನಾಲಗೆಯಿಂದೆ ನಾಂದು[1]ನಳವಳ್ಗೀ ತಾಪಮೀಯಂದಮೆಂ
ದೞುಯೆಂ[1] ಸಂತವಿಸಲ್ ಜನಾರ್ದನವಿಯೋಗಾಕ್ರಾಂತೆಯಂ ಕಾಂತೆಯಂ ೪೨

ಚೂತಕುಜಾತಮುಂ ಮುಱಿಯೆ ಮೋದುಗೆ ಮಾರುತನಿನ್ನುಮೊರ್ಮೆ ಹೃ
ಜ್ಜಾತನನೀಶ್ವರಂ ಮುನಿದು ನೋಡುಗೆ ಮಂಜೊಳಕೊಳ್ವುದಕ್ಕೆ ಕಂ
ಜಾತಮನಾವಗಂ ಗುಳಿಗೆಯಿಕ್ಕುಗೆ ರಾಹು ಪಯಃಪಯೋಧಿಸಂ
ಜಾತನನೆಂದು ನೊಂದು ನುಡಿದಳ್ ಪ್ರಿಯಕಾಂತೆ ವಿಯೋಗದುಃಖದಿಂ ೪೩

ಮೊದಲೊಳ್ ಸೊರ್ಕಿದವಂಗೆ ಕಳ್ ವಿಷದಿನಳ್ಕಿರ್ದಂಗೆ ದುರ್ನಿದ್ರೆ ಕಾ
ಣದವಂಗುರ್ವಿದ ಮರ್ವು ದಿಗ್ಭ್ರಮೆ ಪದಂಗೆಟ್ಟಂಗೆ ಪೈಶಾಚಿಕಂ
ಗೆ ದುರಾವೇಶ[2]ಮಧಾರ್ಮಿ[2]ಕಂಗೆ ಕುಮತಂ ತತ್ತ್ವಪ್ರಮೂಢಂಗೆ ಬೀ
ಸಿದ ಕಣ್ಮಾಯದ ಕುಂಚ[3]ದಂತಿರೆ[3]ನಗಾದತ್ತಾಗಳೇನೆಂಬುದೋ ೪೪

(ಕಾದಂಬರಿ, ಪೂ.ಭಾ.೮೦೩)

ಜೊಟ್ಟದ ಪಕ್ಕೆ ನೋಡಿ ಮುಡಿ ಬಿಟ್ಟುದು ಸೋರ್ಮುಡಿ ಪುಷ್ಪಮಾಲೆಯಂ
ಕಟ್ಟುಡೆನೂಲನೇಱತೆಗೆ ಮೇಲುದನೋಸರಿಸೆಂದು ಮೇಲೆ ಮೆ
ಯ್ವಟ್ಟಳನಾನೆ ಸಾವಗಿಸುತುಂ ಬನದಿಂ ಮನೆಗೊಯ್ವನಂತವಂ
ತೊಟ್ಟನೆ ಬೆಳ್ಪು ಪತ್ತಿದೊಡೆ ತೆತ್ತಿಗರಾದವರೊಯ್ವ ಮಾಱ್ಕೆಯಿಂ (?)† ೪೫

ಉದಯದ ನೇಸಱುಂ ಕಿಡದ ಕಟ್ಟಲೆ ಕಿಟ್ಟಲಗಿಂ ಕಱುತ್ತು ಕು
ತ್ತದ ಕಡುವೇನೆಯಂತಕನ ವಾರಿಗೆ ಬಾರದ ಸಾವು ಕಳ್ಳನು
ಣ್ಣದ ಕಡುಸೊರ್ಕು ಕಿಚ್ಚಿನುರಿ ಪತ್ತದೆ ಪೊತ್ತುವ ಬೇಗೆ ಪಾವ್ತ ತಿ
ನ್ನದ ಕಡುನಂಜು ತನ್ನಿಯರೊಳಾದಳಿಪಿಂ ಪೆಱತುಂಟೆ ಲೋಕದೊಳ್ ೪೬

(ಲೀಲಾವತಿ ೪-೫೫)

ನಾಡೆ ಬಱಲ್ದುಬಲ್ದು ನಿಲಲಾಱದೆ [4]ಸೆಜ್ಜೆ[4]ಗೆವಂದು ಮೆಯ್ಮನೀ
ಡಾಡಿ ನಿಜೋತ್ತರೀಯ ವಸನಾಂಚಲದಿಂ ಮುಸುಕಿಟ್ಟು ಚಿಂತೆಯೊಳ್

---

[1]ಸುಗಿವಳ್ ಸಂತಾಪದೊಂದಂದವೆಂತರಿವೆಂ (ಗ ಘ) [2]ದವಾರ್ಥಿ (ಕ ಖ ಬ)
[3]ವಿಂತಿದೆ (ಕ ಖ ಬ) [4]ಸಂಜೆ (ಖ) †ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಮೂಡಿ ಮುಱುಂಗಿ ತನ್ನ ಮನದನ್ನರೊಳಂ ಮೊದಲಾಗಿ [1]ತಾನೆ[1] ಮಾ
ತಾಡದೆ ಜಾನಿಸುತ್ತಮಿರೆ ಪಿಂಗಿದುದಂದಿನದೊಂದಹರ್ನಿಶಂ ೪೭

(ಕಾದಂಬರಿ, ಉ. ಭಾ. ೩೬೬)

ನಡುಗುತ್ತಂ ಮೇಲು[2]ದಂ ಪೆರ್ಮೊಲೆಗೆ[2] ತೆಗೆ[3]ವುತುಂ ಹಾರಮಂ[3] ಸಾರ್ಚುತುಂ ಸೋ
ರ್ಮುಡಿಯಂ ಸಸ್ವೇದಹಸ್ತಾಬ್ಜದಿನೆಟಿವುತುಮಾತ್ಮಪ್ರತಿಚ್ಛಾಯೆಯಂ ಕೈ
ಗುಡು ನೀನೆಂಬಂದದಿಂ ನಿರ್ಮಲತರಮಣಿಬದ್ಧಾವನೀಭಾಗಮಂ ತ
ನ್ನೆಡಗಯ್ಯಿಂ ಮೆಲ್ಲನೊತ್ತುತ್ತೆಸೆವಲರ್ವಸೆಯಿಂ ಕಾಂತೆ[4]ಯೆಂತಾನುಮೆಟ್ದಿಳ್[4] ೪೮

(ಕಾದಂಬರಿ, ಉ. ಭಾ. ೨೩೪)

ಪದೆದೆನ್ನಂ ಕಾಮನಿತ್ತಂ ತನಗೆನಲದು ಪೊರ್ದಲ್ ನೆವಂ ಕೂರ್ಪೆನಾನೆಂ
ಬುದು ವೇಶ್ಯಾಲಾಪವಾಂ ತನ್ನಯ ವಿರಹದೆ ಸತ್ತಪ್ಪೆನೆಂಬಂದು ದೃಷ್ಟ
ಕ್ಕದಸತ್ಯಂ ಬರ್ಪೆನಾನೆಂಬುದು ಚಪಲತೆ ತಾಂ ಬರ್ಪುದೆಂದಂದು ಸೌಭಾ
ಗ್ಯದ ಗರ್ವಂ ಮೇಲೆ ಬಿಟ್ಟಿನೆಳಸಿದಪೆನೆನಲ್ ಬಂಧಕೀಧಾಷ್ಟ್ಯರ್ಮಲ್ತೇ ೪೯

(ಕಾದಂಬರಿ, ಉ. ಭಾ. ೩೧೬)

ನೋಡಿದೊಡೆವೆ ಸೀಗುಂ ಮಾ
ತಾಡಿದ ಕೆಳದಿಯರ ಬಾಯೊಳೊಗೆಗುಂ ಪೊಗೆ ಮೆಯ್
ತೀಡಿದ ತಂಬೆಲರುರಿಗುಂ
ನಾಡೊಳಗಿವು ಕೌಮುದೀಲತಾಂಗಿಯ ವಿರಹಂ ೫೦

ಅಲರ್ದಲರ್ವಾಸುಗಳೊಳ್ ಪರಿ
ಮಳಕ್ಕೆ ಪರಿತಂದು ಮುಸುಱುವಳಿಕುಳದಿಂದಾ
ಕುಲತೆ ಪಿರಿದಾಗೆ ಮದನಾ
ನಳನಳುರಲ್ ಕಾಂತೆ ಪೊತ್ತಿ ಪೊಗೆವಂತಿರ್ದಳ್ ೫೧

(ಕಾದಂಬರಿ, ಉ. ಭಾ. ೩೩೮)

ಮೂಡಿದೊಡಂ ಸುಧಾಕಿರಣನೊಳ್ಳಲರ್ಗಂಪನೆ ತಂದು ತೆಂಬೆಲರ್
ತೀಡಿದೊಡಂ ರಸಂ ತೆರಳೆ ಗಾಯಕಿಯರ್ ಸಮಸಂದು ಬೀಟಮಂ
ಪಾಡಿದೊಡಂ ವಿಚಿತ್ರಕಥಕರ್ ಸಮಸಂದಿರೆ ಹೂಣೆ ಹೊಕ್ಕು ಮಾ
ತಾಡಿದೊಡಂ ಭವದ್ವಿರಹವಿಹ್ವಲೆ ಕೌಮುದಿ ಸತ್ತು ಪುಟ್ಟುವಳ್ ೫೨

---

[1] ಕನ್ನೆ (ಅ) [2] ದೆಂದೊವೊರ್ದಲೆ (ಅ) [3] ಮುಕ್ತಾಹಾರಂಗಳಂ (ಅ)
[4] ತನುಂತಾನುಮಿರ್ದಳ್ (ಖ ಬ)

ಮೃಗಶಾಬಾಕ್ಷಿಗೆ ಮಾಧವಂ ಮಧುಕರಂ ಮಂದಾನಿಲಂ ಮಾವು ಮ
ಲ್ಲಿಗೆ ಮಾದ್ಯತ್ಪಿಕನಿಸ್ವನಂ ಮನಸಿಜಂ ಮುಗ್ಧೇಂದುವೆಂಬೆಲ್ಲ[1]ಮು
ಜ್ಜಗ[1]ಮಂ ಮಾಡಿದುದೊಂದೆ ಮೇಣೆರಡೆ ಮೇಣ್ ಮೇಣ್ಮೂಱ[3] ನೋಡೊಂದು ಹು
ಲ್ಲಿಗೆ [2]ನೂರ್ವರ್ ನೆರೆದಂಬು[2]ತೊಟ್ಟ ತೆಱನಾಯ್ತಾನಿನ್ನದೇನೆಂದಪೆಂ* ೫೩

ನವಕುಂಭಂ ಮೊಲೆ ಕಾಷ್ಠಸಂತತಿ ಮೃಣಾಳಂ ಚಂದನಂ ಮೆಲ್ಗೆ ಸಜ್
ಜವಸಂದಾವಿಗೆಗಿಚ್ಚು ಮೆಲ್ಲೆರ್ದೆಯ ಸೂಡಂಗೋದ್ಭವಂ ಕುಂಬಳಂ
ಪವನಂ ಸುಯ್ ತನು ದಾಹಭೂಮಿಯೆನೆ ಹೃತ್ಸಂತಾಪಮಂ ಪೆರ್ಚಿಸ
ಲ್ಕೆ ವಲಂ ಕಾರಣಮಾದುದಂಗನೆಗೆ ನೀಹಾರಕ್ರಿಯಾಸಂಗಮಂ ೫೪

ಮಡುವಂ ಪೊಕ್ಕು ಮದಾಂಬುವಿಂದೆ ಸಲಿಲಂ ಚುಱುತ್ರಂಬುದುಂ ಭೋಂಕನಾ
ಮಡುವಿಂದಂ ಪೊಱಮಟ್ಟು ಪೋಪ ಕಡೆಯೊಳ್ ತನ್ನಂಗಸಂತಾಪಮಾ
ಗಡೆ ತಾಪಂ ಕಮಲಾಕರಕ್ಕೆ ಕುಡೆ ವಾರಿಕ್ರೀಡೆಯಂ ಮಾಳ್ಪಳೆಂ
ದೊಡೆ ಬಾರಿಪ್ಪವರಾರ್ ಲತಾಂಗಿಯ ವಿಯೋಗಾವಸ್ಥೆಯುದ್ರೇಕಮಂ ೫೫

ಕಳವಳಮಲ್ಲದಿಲ್ಲ ನುಡಿ ಕಣ್ಬರಿ ಕಣ್ಬನಿಯಲ್ಲದಿಲ್ಲ ಸು
ಯ್ಗಳ ಬಿಸುಪಲ್ಲದಿಲ್ಲುಸಿರ್ಗಳಂಗಭವಜ್ವರಮಲ್ಲದಿಲ್ಲ ಮೆಯ್
ತಳವೆಳಗಲ್ಲದಿಲ್ಲಱುವು ಮೆಲ್ಲೆರ್ದೆ ತಲ್ಲಣಮಲ್ಲದಿಲ್ಲ ಕೋ
ಮಳೆಗಱಿವಲ್ಲದಿಲ್ಲವಯವಂಗಳಿದಂ ಕಱಿವಂದಮಾವುದೋ ೫೬

(ಅನಂತನಾಥಪುರಾಣಂ ೮-೩೯)

ಎನಗೇಕಾದುದು ಬೆಂದ ರೂಪೆಸೆವ ರೂಪಿಂಗಿಂತು ಪಾಟಿಸಾದ ಜ
ವ್ವನಮೀ ಜವ್ವನದಲ್ಲಿ ಕೂರದನ ಬೇಟಂ ಬೇಟದೊಳ್ [3]ಮಾಯ್ದ[3] ಚೈ
ತ್ರನ ಕಾಟಂ ಕಱಿವಂದಮಾವುದೆನಗಿ[4]ನ್ನೇನೆಂದೊಡೇನೆಂಬೆನಂ[4]
ಗನೆ ನೀಂ ಗ[5]ರ್ವಿ[5]ಸಿದಪ್ಪೆ[6]ಯೇಂ ಬೆಲೆಗೆದಂದಾ[6] ನಲ್ಲನೇನೊಲ್ಲನೇ ೫೭

(ಅನಂತನಾಥಪುರಾಣಂ ೮-೪೧)

ಕರದಿಂ ಮೆಯ್ಯೊಳ್ ಪನಿತ
ಕ್ಕರದಂತಿರೆ ಸಾಂಜನಾಂಬುಕಣತತಿ ಕಾಮಂ

---

[1] ಮುಚ್ಚಿಗ(ಕ ಖ ಬ) [2] ನೋಡಲ್ಕೆರಡಂಬು (ಕ ಖ ಬ) [3] ಕಾಯ್ದ (ಅ)
[4] ನ್ನೆಂತೊಡಾನೆಂದನಂ (ಅ) [5] ರ್ಜಿ (ಕ) [6] ಯೆಂದು ಬಗೆಗೋಱಂ (ಬ)
* ಇಲ್ಲಿಗೆ (ಖ) ಪ್ರತಿಯು ಮುಗಿದುಹೋಗಿದೆ

ಬರೆದ ನೃಪಸುತನ [1]ರೂಪಿನ[1]
ನರಶಾಸನದಂತೆ ವಿರಹವಿಹ್ವಲೆ[2]ಯಿರ್ಪಳ್[2] ೫೮
(ಚಂದ್ರಪ್ರಭಪುರಾಣಂ ೫-೧೨೬)

ಎನ[3]ಗನ್ನಂ[3] ಪ್ರತಿಪನ್ನ[4]ಮೇ ಸರಸಗೇಯಂ[4] ತಾನುಪಾದೇಯಮೇ
ವನಿತಾಕ್ರೀಡಿತಮೆಂತುಮೀಡಿತಮೆ ಪೇಟಿಃ ಜೀವನಂ ಮತ್ತೆ ಪಾ
ವನಮೇ ಬಂಧುಜನೋಪಜಾಪ್ಯಮದು ಕರ್ಣ[5]ಶ್ರಾವ್ಯ[5]ಮೇ [6]ವಲ್ಲಭಂ
ಮುನಿದಿರ್ದೀ[6] ವಿರಹಪ್ರಘಟ್ಟಕದೊಳೀ ನ್ನೈಪಥ್ಯ[7]ಮೇಂ[7] ಪಥ್ಯಮೇ ೫೯
(ಚಂದ್ರಪ್ರಭಪುರಾಣಂ ೮-೮೮)

ಅತಿವಿರಹದೊಳೀ ಲಲನೆಗೆ
ಮತಿ ದುರ್ಮತಿ ವೀಣೆ ಸಾಣೆ ಸೋಮಂ ಭೀಮಂ
ಲತೆಯಸಿಲತೆ ಸಂಪಗೆ ಪಗೆ
ನುತ ಭೃಂಗಂ ಭಂಗಮನ್ಯಪುಷ್ಟಮರಿಷ್ಟಂ ೬೦

ಘನಬಾಷ್ಪಾಂಬುಕಣಾರ್ದ್ರಯು[8]ಕ್ತೆ[8] ನಳಿನೀಪತ್ರಾಂಶುಕಾಶ್ಲೇಷೆ ಮು
ಕ್ತ ನಿಜಾಳೀಸಹಭಾಷಣೋತ್ತರೆ ಕಪೋಲನ್ಯಸ್ತಹಸ್ತಪ್ರವ
ರ್ತನೆ ಚಿತ್ರಾರ್ಪಿತಕಾಂತೆಯಂತೆ ತಳೆದಳ್ ಸ್ವಾತೀನಚಿಂತಾವಿಚೇ
ತನೆ[9]ಯಂ[9] ನಿನ್ನ ವಿಯೋಗ ದುಃಖ[10]ದೊಳ್[10]ವಳ್ ನಿಷ್ಪಂದ[11]ಕಾರಿ[11]ತ್ವಮಂ ೬೧
(ಚಂದ್ರಪ್ರಭಪುರಾಣಂ ೮-೮೫)

ಚಿತ್ತಂಬೊಕ್ಕಿರ್ದೆಯೆಂತ್ತೆ ಹರಿ ಕುಳಿರ್ವ ಕರಸ್ಪರ್ಶದಿಂದಿಂದು ತಾಪಂ
ಬೆತ್ತಂ ನ್ಮೈಸೋಂಕಿ ಮಂದಾನಿಳನುರಿದನದರ್ಕಾಳಿಯರ್ ದೂರದಿಂ ಸೂ
ಸುತ್ತಿರ್ಪರ್ ತೋಯಮಂ ಜೀರ್ಕೊಳವಿಯೊಳೆ ಮನೋಜಾತ[12]ನೆಟ್ಟಿದ್ದಟ್ಟಿ ಸಲ್ಕಾ
ರ್ದೆ[12]ತ್ತುಂಗೋಲಿಕ್ಕುವಂ ಬಣ್ಣಿಸುವರಳವೆ ಸತ್ರಾಜಿತೀದೇಹದಾಹಂ ೬೨
(ಜಗನ್ನಾಥವಿಜಯಂ ೧೧-೩೮)

ಅನಲಸಹಾಯನುಪ್ಪ ಯಮದಿಙ್ಮುಖದಿಂ ಪರಿತರ್ಪ ತೆಂಬೆಲರ್
ಮನಸಿಜವಹ್ನಿಯಂ ಬಿಡದೆ ಪೆರ್ಚಿಪುದುಂ ಕಡುನೋವನೀವುದುಂ
ವನರುಹವಕ್ತ್ರೆ ವಿಸ್ಮಯಮೆ ತಾಪಹರಂ ಜನಸೌಖ್ಯಕಾರಿ ನಂ
ದನ[13]ಮೆನಗಂ[13]ಗತಾಪಮುಮನೋವದೆ ನೋವ್ರಮನೀವುದದ್ಭುತಂ ೬೩
(ಜಗನ್ನಾಥವಿಜಯಂ ೧೧-೪೨)

---

[1] ಸೊಬಗಿನ (ಅ) [2] ಯಾದಳ್ (ಖ ಬ) [3] ಗಂತಾಂ (ಅ) [4] ಮೆಂಬ ಬಗೆಯುಂ (ಅ) [5] ಪ್ರಾಪ್ಯ (ಅ) [6] ನಲ್ಲನೊಲ್ಲನೆಪೊದೀ (ಅ) [7] ಮುಂ (ಅ) [8] ಕ್ತೆ (ಅ) [9] ಯೀ (ಬ) [10] ದಿನ (ಅ) [11] ತಾರ (ಬ) [12] ನೆನುದ್ವೇಶಿ ಕಾರ್ಧರಂ (ಬ) [13] ವನಮುಂ (ಅ)

ಸರಸಿಜನಾಭನಿಂದುೞಿದ ವೇದನೆಯಿಂದಮಶೋಕಪಲ್ಲವಾ
ಧರೆ ನವಚೂತಪಲ್ಲವಕರಾಂಬುಜೆ ಕುಂದಲತಾಂತದಂತೆ ವಿ
ಸ್ಫುರಿತ ತಮಾಲನೀಲಕಬರೀಭರೆ ಪಾಟಲಗಂಧಿ ಕೇತಕೀ
ಕರರುಹೆ ಚೇಷ್ಟೆಗೆಟ್ಟು ಮರವಟ್ಟಳೆನಿಪ್ಪುದದಾವ ವಿಸ್ಮಯಂ ೬೪

ಜಲರುಹನೇತ್ರನಲ್ಲಿಗೆ ಚಕೋರವಿಲೋಚನೆ ಚಂಚರೀಕಕುಂ
ತಳಕುಳೆ ಚಕ್ರವಾಕಮಿಥುನಸ್ತನಿ ಚಾರುಮರಾಳಯಾನೆ ಚಾ
ಪಳಪಿಕನಾದೆ ಕೀರಮೃದುಭಾಷಿಣಿ ನಿಚ್ಚಲೆಜಂಕೆಯಿಟ್ಟು ಪಾ
ೞಲೆ ಬಗೆಯ[1]ಲ್ಲಿ ನೀಂ ಪ್ರಕೃತಿಗೀ[1]ಕ್ಷಿಸೆ ಸಾಮ್ಯಮಿದಲ್ತೆ ಬಾಲಕೀ ೬೫

ಲಲನೆ ಹಿಮೋಲ್ಲಸದ್ಭವನದೊಳ್ ವನದೊಳ್ ವನದೊಳ್ ಪೊರಳ್ದು ನಿ
ಚ್ಚಲುಮಿಸೆ ಕಂತು ನಿಪ್ಪಸರದಿಂ ಸರದಿಂ ಸರದಿಂಪುದೋೞಿ ಕೋ
ಗಿಲೆ ವಿಧು ಬೀೞಿ ಭೀತಿಕರಮಂ ಕರಮಂ ಕರಮಂ ಕಪೋಲದೊಳ್
ನಿಲಿಸುವ[2]ಳೆಯ್ದೆ[2] ನೋವ[3]ಳ್[3]ಧಿಪಾಂಗದಪಾಂಗದ ಪಾಂಗದಗ್ಗಳಂ ೬೬

(ಜಗನ್ನಾಥವಿಜಯಂ ೧೧_೧೯)

ಸುದತೀ ಮತ್ಪತಿ ಕಣ್ಣೊಳಂ ಮನದೊಳಂ ತಾನಿರ್ಪನಿರ್ದುಂ ಮುೞುಂ
ಗಿದನಿಲ್ಲಶ್ರುಜಲಂಗಳೊಳ್ ಪುದಿದ ಹೃತ್ಕಾಮಾಗ್ನಿಯಿಂ ಬೆಂದನಿ
ಲ್ಲಿದು ಚಿತ್ರಂ ಬಗೆವಾಗಳೆಂದಿನವನೋ ಮಾಯಾವಿ ಪೇೞಿಂದು ಪು
ಟ್ಟಿದನೆಂದೋದಿದನೆಂದು ಕಲ್ತನೊ ಜಲಾಗ್ನಿಸ್ತಂಭ[4]ವಿದ್ಯಂ[4]ಗಳಂ ೬೭

(ಕಾವ್ಯಸಾರಂ ೨೪_೫೮೭)

ಅನಿಮಿಷನಪ್ಪೆಂ ಕಂಡೊಡೆ
ನೆನೆದಂದಸ್ವಪ್ನನಪ್ಪೆನೊಡನಿರೆ ಕಮಳಾ
ನನೆ ಕಾಮನಪ್ಪೆನದಱಿಂ
ದೆನಗಾದುದು ನಿನ್ನ ದೂಸಱಿಂ ದೇವತ್ವಂ ೬೮

ಹೃದಯದೊಳಿರ್ದ ವಲ್ಲಭನನಾ ಕ್ಷತಭೀತಿಯಿನೀಕ್ಷಿಸಂತೆ ಮು
ಚ್ಚಿದವಲರ್ಗಣ್ಪೊಣರ್ ತಡವಿ ನೋಡುವವೋಲ್ ಕುಚಮಧ್ಯದಲ್ಲಿಗಾ
ಡುದು ಕರಪಲ್ಲವಂ ಸರಮನಾಲಿಸುವಂತೆ ಮೊಗಂ ಮಲಂಗೆಯಂ
ತದೊಳಿರ್ಪೆ ಶೂನ್ಯಮಾಗಱಸುವಂತಸು ಪೋಯ್ತು ಸಿತಾಬ್ಜನೇತ್ರೆಯಾ* ೬೯

(ಅನಂತನಾಥಪುರಾಣಂ ೧೨_೪)

---

1 ಯಪ್ರಕೃತಿನೀ (ಕ) 2 ಳೀಯೆ (ಬ) 3 ನ (ಬ) 4 ಮಂತ್ರಂ (ಬ)
* ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಇನಿಯನಿರೆ [1]ನೋಡ[1] ಮತ್ತೊ
ಬ್ಬನ ಕಣ್ಗಂ [2]ಮನಕ[2]ಮೊಪ್ಪಿದಪ್ಪುದು ಸುಡಲೀ
ತನುವನಿದನೆಂದು ಜೀವಂ
ಮುನಿದಂತಿರೆ ಬಿಟ್ಟುಪೋ[3]ಯ್ತು ನಿಬಿಡಸ್ತನೆಯಾ[3] ೭೦

(ಅನಂತನಾಥಪುರಾಣಂ ೧೨-೬)

ವರ ಸಂಭೋಗದವಸ್ಥಾಂ
ತರಭೇದಮನುಚಿತವಚನ ರಚನೆಗಳಿಂದಂ
ವಿರಚಿಸಿದನುದಾಹರಣೆಯ
ಪರಿಕರಮಂ ಸುಕರಸುಕವಿಮುಖಮಣಿಮುಕುರಂ ೭೧†

ಓರಂತೆ ಮೆಚ್ಚಿದಂ ಕೃತಿ
ಸಾರೋದಿತವಿಪ್ರಲಂಭವರ್ಣನಕಂ ಕಾಂ
ತಾರತಿರಹಸ್ಯಚತುರಂ
ಧಾರುಣಿಯೊಳ್ ವೀರಸೋಯಿದೇವ ನೃಪಾಲಂ ೭೨

ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ವಿಪ್ರಲಂಭವರ್ಣನಂ ಪಂಚದಶಾಶ್ವಾಸಂ ಸಂಪೂರ್ಣಂ

---

1 ನಾಚೆ (ಬ) 2 ಬಗೆಗ (ಅ) 3 ಯಿತಸು ಶಶಿಮುಖಿಯೆ (ಅ)

† ಈ ಪದ್ಯ (ಕ) ಪ್ರತಿಯಲ್ಲಿಲ್ಲ

# ಮಂತ್ರವರ್ಣನಂ

ಶುಕಬಾಲಾತ್ಯಂತದೂ[1]ರಂ[1] ಜನಕುಲನಯನಾಗೋಚರಂ ಸ್ತಂಭಜಾಲಾ
[2]ನಿಕ[2]ಶೂನ್ಯಂ ಮಂತ್ರಗೇಹಂ ನೃಪವರನುಭಯಾಯತ್ತನಾಳೋಚಕರ್ ಮಂ
ತ್ರಕಳಾದ್ಯರ್ ಬುದ್ಧಿ[3]ವೃದ್ಧರ್[3] ಸಚಿವರರಿಗಳನ್ವೇ[4]ಷ[4]ದಿಂ ಕಾಲದಿಂ ಸ್ವೈ
ನಿಕದಿಂದಂ [5]ತಾ[5]ಳ್ದು ಪೆರ್ಚಂ ತಿಳಿದು ಗಮಿಸುವರ್ ಕಾವ್ಯಮಂತ್ರಸ್ಥಲಾಂಗಂ ೧

ವಿಗತಾಂತರ್ವಲ[6][ಯಂ][6] [7]ವ್ಯಪೇತಪೃಥುಕಂ[7] ನಿಸ್ತಂಭರಂಗಂ ನಿರ
ಸ್ತಗವಾಕ್ಷಂ ವ್ಯಪಸಂಭೃತಪ್ರತಿರವಂ ನಿ[8]ಷ್ಕ್ವೇ[8]ರವಾ ಮಂತ್ರಶಾ
ಲೆಗೆ ಬಾಹಾಜಯನಾಟ್ಯಶಾಲೆ[9]ಗಧಿರಾಜ್ಯ[9]ಶ್ರೀವಧೂಸೂಚ್ಯಶಾ
ಲೆಗೆ ಬಂದಂ ಜನಕಾನುಜರ್ವೆರಸು [10]ಸನ್ಮಿತ್ರ[10]ಪ್ರಭಂ ಸುಪ್ರಭಂ ೨

(ಅನಂತನಾಥಪುರಾಣಂ ೧೩–೫೪)

ಆಗಳುಮೊಂದು[11]ಮಂ ಮನದೆ[11] ಚಿಂತಿಸಿ ಚಿಂತೆಗೆ ಸಂದು ತಾಂ ನಿರು
ದ್ಯೋಗದೊಳೊಂದಿ ಸಾಧುತನಮಂತಣವಿರ್ಪರೆ ಭೂಭುಜರ್ ಯಶೋ
ಭಾಗಿಯೆನಲ್ ಸಮಸ್ತಧರಣೀಭರಕಾರ್ಯಸಮಸ್ತಮಂ ಮನೋ
ರಾಗದೆ ಚಿಂತೆಗೆಯ್ದು ಸಮಕಟ್ಟುವುದಲ್ತೆ ಬಹುಪ್ರಕಾರದಿಂ ೩

ವಿಷಯಂಗೆಯ್ವುದು ನಂಟುಗೊಳ್ವುದಹಿತಕ್ಷ್ಮಾಪಾಲರೊಳ್ ಸಾಮಮ
ನ್ಯನರೇಂದ್ರರ್ ಪ್ರಿಯದಿಂ ಕಟಿಲ್ಚುವುದು ಭೇದಂ ಸ್ವಲ್ಪಮೌಚಿತ್ಯಮಂ
ಮುನಿವಂಗೀವುದು ಸಂಪ್ರದಾನಮಿವಱಿಂದು[12]ತ್ಸೇ[12]ಧಮಾಗಿರ್ಪನಂ
ಮೊನೆಯೊಳ್ ಕೀಟ್ಸುದು ದಂಡಮೆಂದಱಿವುದಿಂತೀ ನಾಲ್ಕುಮಂ ಭೂಭುಜರ್ ೪

ಧರೆಯೊಳ್ ಪುಟ್ಟಿದ ಕಾರ್ಯಮಂ ಮಿಗೆ ಸುಸೂತ್ರಂ ಮಾ[13]ಟಿಸ್ಪುದೆಂ[13]ತುಂ ಪ್ರಧಾ
ನರೊಳಾಳೋಚಿಸಿ ಮಾಟ್ಪುದೊರ್ವನೆ ಚಲಂಗೊಂಡೊಂದುಮಂ ಮಾಡಬೇ
ಡರಸಂ [14]ನೆಟ್ಟ[14]ನೆ ಮಾಡುವಾಗಳಸಹಾಯೋದ್ಯೋಗದಿಂದೇಕಚ
ಕ್ರರಥಾಕಾರಮನೆಯ್ದೆ ಪೋ[15]ಲ್ಪು[15]ದದು ನಿರ್ವಾಹಕ್ಕೆ ಪೇೞ್ ಸಲ್ಗುಮೇ ೫

---

1 ತಂ (ಕ)  2 ನ್ವಿತ (ಕ)  3 ವಧ್ವಂ (ಕ)  4 ಷಿ (ಕ)  5 ಅ (ಕ)
6 ಜಂ (ಕ ಬ)  7 ನಂತೆತ್ಸ್ಪ್ರತಕಂ (ಬ)  8 ಷ್ಮೇ (ಕ)  9 ಗೆನಸುಂತ್ರಾಂ (ಕ ಬ)
10 ವಿಕ್ರಾಂತ (ಅ)  11 ಕಾರ್ಯಮಂ (ಕ)  12 ತ್ಸಾ (ಕ) ತ್ಸಾ (ಬ)
13 ಳ್ಪಿದೆಂ (ಬ)  14 ಗೊಯ್ಯ (ಕ)  15 ಲ್ತು (ಕ)

ಸದಮಳ ರಾಜ್ಯಭಾರಭರನಪ್ಪುದು ಮಂಗಳಕಾರ್ಯಯುಕ್ತನ
ಪ್ಪುದು ಜಯಲೋಲನಪ್ಪುದು ಕುಲೋನ್ನತನಪ್ಪುದು ವಶ್ಯತಂತ್ರನ
ಪ್ಪುದು ಸುಚರಿತ್ರನಪ್ಪುದು ಜಿತೇಂದ್ರಿಯನಪ್ಪುದು ಶುದ್ಧಚಿತ್ತನ
ಪ್ಪುದು ಪರಿವಾರಮಂ ಪೊರೆವನಪ್ಪುದು ತಪ್ಪದೆ ಭೂಪನಪ್ಪವಂ ೬

ಧರೆಯಂ ರಕ್ಷಿಸಿ ದುಷ್ಟರಂ ಜಡಿದು ಸದ್ಧರ್ಮಂಗಳಂ ಕಾದು ತ
ಸ್ಕರರಂ [1]ಬಂಧಿ[1]ಸಿ ಕಷ್ಟರಂ ಕೆಡಿಸಿ ದಂಡಂಗೊಂಡು ಮಿಂಡರ್ಕಳಂ
ಭರದಿಂ [2]ಬಗ್ಗಿ[2]ಸಿ ಶಿಷ್ಟರಿಷ್ಟ[3]ಪದ[3]ಮಂ ಸಂತೋಷದಿಂ [4]ಕೊಟ್ಟು[4] ಧೂ
ರ್ತರ ಬೇರಂ ನೆಱೆ ಕಿೞ್ತು ಪಾಲಿ[5]ಸುವುದುರ್ವೀ[5]ಚಕ್ರಮಂ ಕ್ಷತ್ರಿಯರ್ ೭

(ಧರ್ಮಾಮೃತಂ ೨–೮೪)

ಆಱಿಡಿ ಬಂದಿ ಠಕ್ಕು ಕಳವೊಟ್ಟಜೆ ತಾಂ [6]ಪ[6]ರಿಮುತ್ತು ಡಾವರಂ
ಸೂಱೆ ನಿರೋಧ ನಿಗ್ರಹಮುಪದ್ರವಮಾ[7]ಯಿಲವೊ[7]ತ್ತು ಜೊತ್ತುಮೇ
ಲೇಱೆಕೂಳಗೇಱು ದೂಱು ಮಱವೊಳ್ನುಡಿ ವಂಚನೆಯೆಂಬುಪಾಯಮಂ
ಸಾಱಿಸಿ ಧರ್ಮಮಂ ನಿಱಿಸಿ ಪಾಲಿಸವೇೞ್ಪುದು ದೇಶಮಂ ನೃಪಂ ೮

ಬಡವರ ಪುಯ್ಯಲಂ ಪ್ರಜೆಯ ಬಿನ್ನಹಮಂ ವಿವಿಧಪ್ರಸಂಗದೊಳ್
ತೊಡರ್ದಿರೆ ಪೂಣ್ಕೆಯಾ ಚ[8]ರ[8]ರ ಮಾತುಗಳಂ ಸುಕವೀಂದ್ರರಾ[9]ದ[9]ಮು
ಗ್ಗಡಿಸುವ ಪುಣ್ಯಪಾಠಕರ ಗಾಣರ ವಿಪ್ರರ ವಾಗ್ವಿಳಾಸಮಂ
ನಡೆವ ಮಹಾನಿಯೋಗಿಗಳ ಲೆಕ್ಕಮನಾ[10][ಲಿ][10]ಸದಂ ನೃಪೇಂದ್ರನೇ ೯

ದೋಷಿಗೆ ತಕ್ಕ ದಂಡನೆಯ ಮಾೞ್ಪುದು ಮಾಡದುಪೇಕ್ಷಿಸಿರ್ದೊಡಾ
ದೋಷಿ ಬೞಿಕ್ಕೆ ಧಾರಿಣಿಯೊಳಂಕುಶಮಿಲ್ಲದ ಹಸ್ತಿಯಂತೆ ನಿ
ರ್ದೋಷಿಗಳಂ ಮದಾಂಧಗುಣದಿಂ ತುೞಿಗುಂ ತುೞಿದಂದು ದೇಶಮುಂ
ದೋಷದೊಳೊಂದಿಪೋಕುಮದಱಿಂದಮೆ ಪೆರ್ಚಿದರ್ಗಿಕ್ಕೆಯಗ್ಗಿಯಂ ೧೦

ಜಡಿವೊಡೆ ಗುಪ್ತದೊಳ್ ಜಡಿವುದಾಗ್ರಹದಿಂ ಸಭೆಯೊಳ್ ಮಹೀಭುಜಂ
ಜಡಿಯಲಿವೇಡ ಮನ್ನಣೆಯ ಮಾನಿಸರಂ ಸಿಡಿ[11]ದೇೞ್ಗೆವೆತ್ತು[11] ತಾಂ
ಕಿಡೆ ಜಡಿದಾಗಳಾತನವನೀತಳದೊಳ್ ಬೆಲೆಗೆ[12]ಯ್ಯದಿ[12]ರ್ಕುಮಿ
ರ್ದೊಡೆ ನಿಜಕಾರ್ಯಮಂತರಿಸುಗುಂ ಶುಭಮಂತರಿಸಲ್ಕೆ ಬರ್ಕುಮೇ ೧೧

---

1 ಬಾರಿ (ಅ) 2 ಬಂಧಿ (ಅ) 3 ಫಲ (ಅ) 4 ದಿತ್ತು (ಅ) 5 ವುದುಧಾತ್ರೀ (ಅ) 6 ಪಿ (ಬ) 7 ಯ್ಲಲಮು (ಬ) 8 ಕ (ಕ) 9 ವ (ಕ) 10 ಗಿ (ಕ ಬ) 11 ಲೆಳ್ಗೆಯೆದ್ದು (ಬ) 12 ಯ್ಯುತಿ (ಕ)

ಆಗಳಿ ಮಾಡದಂದಱಿವ ಕಜ್ಜಮನಾಗಳೆ ಮಾಡಲೊಲ್ಲದೆಂ
ದಾಗಿಯುಮೊರ್ವ ಮೂಱಿಪ್ಪನೆನುತಿರ್ಪುದುಮಕ್ಕುಮದಾಗದೆಂಬುದಂ
ಬೇಗದೆ ಮಾೞ್ಪುದುಂ ನೆಱೆ ವಿಚಾರಿಸಿ ನಿಶ್ಚಯಿಸಿರ್ದ ಕಾರ್ಯದು
ದ್ಯೋಗದೆ ಮಾಡದಿರ್ಪುದುಮಿವೆಲ್ಲವು ಕಾರ್ಯವಿನಾಶಹೇತುಗಳ್ ೧೨

ಕ್ಷಿತಿಯೊಳ್ ತನ್ನಾಜ್ಞೆಯಂ ಪೆರ್ಚಿಸುವೊಡಿರದೆ ನಿಷ್ಕಂಟಕಂ ಮಾಡಿ ಪತ್ರ
ಸ್ಥಿತಿಯಿಂ ಸಿದ್ಧಾಯಮಂ ಕೊಳ್ವುದು ನರಪತಿ ಮರ್ಯಾದೆಯಂ ಚಿತ್ತ
ವ್ಯಥೆ[1]ಯಪ್ಪಂತೊಕ್ಕ[1]ಲಂ ಮಿ[2]ಕ್ಕಳಿ[2]ಪಿ ಕೊಳಲೊಡಂ ಕೆಟ್ಟುಪೋಕುಂ ನಿತಾಂತಂ
ಕ್ಷಿತಿರೌದ್ರಾರಣ್ಯವಾಗಳ್ ಖಗಮೃಗಫಣಿಸಂದೋಹಮಂ ತಾಳ್ದಿ ನಿಲ್ಕುಂ ೧೩

ಬೇಸತ್ತು ನಾಡು ಕೆಟ್ಟೊಡೆ
ದೇಶಮನಾಳ್ವರಸು ಕೆಡುಗುಮರಸಿನ ಕತದಿಂ
ದೇಶಂ ಕೆಡುಗುಮದೆಂತೆನೆ
ತ್ರಾಸಿನ ಕೊಡನೊಂದು ಬೀೞ[3]ಲೊಂದಿರ್ದಪುದೇ[3] ೧೪

ಮಧುರಾಳಾಪಪ್ರಸಂಗಂ ಪರಹಿತನನುಳಂ ಸರ್ವಸನ್ನಾಹಶಸ್ತ್ರಾ
ಯುಧಸಾರಂ ಭಾರಕಾರ್ಯಂ ರಿಪುಜಯಪಟು ಸಾಮಂತ ಶಿಷ್ಟೇಷ್ಟನಾನಾ
ವಿಧತಂತ್ರಂ ನಿಷ್ಕಳಂಕಂ ಋಜುಮತಿ ಕುಶಲಂ ಸತ್ಯ ಶೌಚಾಭಿಮಾ[4]ನಾಂ[4]
ಬುಧಿಯರ್ಥೋದ್ಯೋಗಿ ಶಕ್ತಿತ್ರಯನಿಧಿಯೆನೆ ಸಂದಿರ್ದವಂ ದಂಡನಾಥಂ ೧೫

ಕರಣೀಯೋಪಾ[5]ಯ[5]ಮಂ ಚಿಂತಿಸುವುದು ಪುರುಷಂ ದ್ರವ್ಯಸಂಪತ್ತಿಯೊಳ್ ತ
ತ್ಪರನಾಗುತ್ತಿರ್಩ ಬಿ[6]ರ್ದಿ[6]ರ್ದುದನೆ ನೆಗೞ್ವುದೀ ಕಾಲದೊಳ್ ತಾನಿದಂ ಚಾ
ತುರದಿಂ[7]ದಂ[7] ಕೊಳ್ವುದೆಂತುಂ ನಯಮಿದನಯಮೆಂಬುಕ್ತಿಯಂ ಕ[8]ಲ್ವುದು[8]ರ್ವೀ
ಶ್ವರನಾದಂ ಕೆಟ್ಟುದಂ ಸಂವರಿಪುದಿದುವೆ ಪಂಚಾಂಗಮಂತ್ರಪ್ರ[9]ಯೋಗಂ[9] ೧೬

ಗೆಲವೇೞ್ಕುಂ ಕಾಮಕ್ರೋ
ಧಲೋಭಮದಮಾನಹರ್ಷಮೆಂಬಿವನವನೀ
ತಲಪತಿಯರಿಷಡ್ವರ್ಗಮ
ನಲಸದೆ ಗೆಲ್ವವನೆ ಪಡೆಗು[10]ಮಿಹ[10]ಪರಹಿತಮಂ ೧೭

ಬೆಳೆಯಿಸಬೇಡರಾತಿತರುವಂ ಬಱಿಸಂದದು ಕೂಡೆ ಕೊರ್ಬಿ ಸಂ
ಚಳಿಸದೆ[11]ಪೆ[11]ರ್ಚಿ ಬೇರ್ವರಿದು ದಾಂಗುಡಿವೋಗದೆ ಮಾಣದಂತದಂ

---

[1]ಯಂತಪ್ಪಂಕ (ಕ) [2]ಕ್ಕಳಿ (ಬ) [3]ಲಿರ್ಪುದೆಪೇಳ್ (ಕ) [4]ನಂ (ಬ)
[5] ದ (ಬ) [6] ಲ್ಲಿ (ಬ) [7] ಕೈ (ಕ) [8] ಲ್ದುಜೂ (ಕ) [9]ಯುಕ್ತಂ (ಕ)
[10] ಮೀ (ಕ) [11] ಬೆ (ಬ)

ಮೊಳೆಯೊಳೆ ತೋಡಿ [1][ಸೀಂಟ][1] ಕಳೆಯಲ್ ಬಗೆದಪ್ಪುದು ಮಾಡ[2]ದಾಗ[2]ಳು
ಮ್ಮಳಿಸಿ ಬಟಿಕ್ಕ ಪೆರ್ಗೊಡಲಿಗೊಳ್ವವೊಲಕ್ಕುಮದೊಳ್ಳಿತಕ್ಕುಮೇ ೧೮

ಇದಿರ ವಿರೋಧಿಸೇನೆ ನಿಜಸೇನೆಗೆ ಹೀನಮೆನಿಪ್ಪೊಡೆತ್ತಿ ಮಾ
ಣದೆ ತಱಸಂದು ಕಾದು ಕಡುಬಲ್ಲಿದನೊಳ್ ತಱಸಂದತಿಪ್ರವೇ
ಶದಿನಿರದೆತ್ತಿ ಕಾದಲಣಮಾಗದು ಮಾಣದು ಕಾದಿದಂದು ಕೊ
ರ್ಬಿದ ನರಿ ಸಿಂಗಮಂ ಕೆಣಕಿತೆಂಬವೊಲಕ್ಕುಮದೊಳ್ಳಿಕೆಯ್ಯುಗ್ಗ ಮೇ ೧೯

ಅರಿನೃಪರಿರ್ದ[3]ರಿ[3]ರ್ದೆಸೆಯ ಮಂಡಲಮಂ ಕವಿತಂದವುಂಕಿ ಕ
ರ್ತರಿಯೊಳಗಿರ್ದ ರೋಮದವೊಲಿರ್ದರಿ ಭೂಪತಿ ಮುನ್ನಮೆಯ್ದೆ ಬ
ರ್ಪರಿ[4]ಯುಮ[4]ನೆಯ್ದೆ ಸಾಧಿಸಿ ಬಟಿಕ್ಕೆ ಬಲಸ್ಥನೆನಿಪ್ಪ ವೈರಿಯಂ
ಧುರದೊಳಿದಿರ್ಚಿ ಕೊಲ್ವುದವನಂ ಮಿಗೆ ಮಂತ್ರಿಯೆನಿಪ್ಪ ಭೂಭುಜಂ ೨೦

ಕಾದಲೊಡರ್ಚಿ ಗೆಲ್ವ ರಣರಂಗದೊಳೊಡ್ಡಿದರಾತಿ ಭೂಪರೊಳ್
ಕಾದು[5]ವುದಣ್ಮಿ ಮುನ್ನ[5]ಶಕುನಸ್ಥಿತಿ ಚಂದ್ರಬಲಂಗಳೆಂಬಿವಂ
ಶೋಧಿಸಿ ನೋಡಿ ಪಾಂಗಱದು ಕಾದುವುದೊಪ್ಪಿರೆ ತನ್ನ ಸೈನ್ಯಮಂ
ಕಾದು ಜಯಾವಹಂ ತನಗೆ ಸಾರ್ವಿನೆಗಂ ಸಕಲಾವನೀಶ್ವರಂ ೨೧

ಆಱನೆಯ ಭಾಗದೊಳ್ ಮೈ
ದೋಱರೆ ಸಂದೊಂದುಭಾಗಮಂ ಕೊಂಡು ನೃಪಂ
ಮೀಱದೆ ರಕ್ಷಿ[6]ಸೆ[6] ನಾಡಂ
ಬೀಱುಗುಮಾ ನಾಡುಮವನ ರಾಜ್ಯಶ್ರೀಯಂ ೨೨

ಎರವಿನ ಬೀರದೇಟಿಗ್ಗಿಗಳನಟ್ಟಿಯೆ ಪಾಡಿಸಿ ಪೊಂಗಿ ಮೀಸೆಯಂ
ಮುರಿದು ವಿಲಾಸದಿಂದೊ[7]ದೆ[7]ದು ಘಟ್ಟಿಸಿ [8]ಜ[8]ಜ್ಜೆಯೊಳಿರ್ದು [9]ಬೆಟ್ಟದಿಂ[9]
ಸಿರಿಯಮೆನಿಪ್ಪ ಮಾತುಗಳನಾಡಿ ಬಟಿಕ್ಕೊಳಸಾ[10]ರ್ವ[10]ಗಂಡರಂ
ಧರಣಿಪರಾ[11]ಳ್ವದೇ[11] ಬಿಡದೆ ಕೂರಸಿಯಂ ಪಿಡಿದೇಟ್ವ ಭಂಡರಂ ೨೩

ಚತುರುಪಧಾವಿಶುದ್ಧನಭಿಮಾನಿ ದಯಾಳು ಕುಲಜ್ಞ[12]ನಾ[12]ಜಿಗೂ
ರ್ಜಿತವಿಜಯಪ್ರಸನ್ನನಧಿಕಾರಿ ಧುರಂಧರನೇಕವಾಕ್ಯನು
ನ್ನತಮತಿ ಶಕ್ತಿಯುಕ್ತನಮಲಂ ವ್ಯವಹಾರವಿಶಾರದಂ ಬಹು
ವ್ರತಪಥನೆನಿಪಾತನಲ್ತೆ ಮನೆವೆಗ್ಗ[13]ಡೆ[13] ಭೂಪತಿಗಪ್ಪುದೊಪ್ಪುಗುಂ ೨೪

---

1 ಚಿಲುಟಿ (ಕ) 2 ತಾಕ (ಬ) 3 ರೆ (ಬ) 4 ಯನ (ಕ) 5 ದವಿಮುನ್ನೈ (ಕ) ದರ್ವಿರ್ಮುನ್ನ (ಬ) 6 ಸಿ (ಕ ಬ) 7 ರೆ (ಬ) 8 ರ (ಬ) 9 ಬೇಱ (ಕ) 10 ರ್ದು (ಕ) 11 ಳ್ವರೆ (ಬ) 12 ವಾ (ಕ) 13 ದಿ (ಬ)

ಜನತಾಧೀಶನ ಕಾರ್ಯಮಂ ಬರಿಸಮಂ ಮಾಸಾರ್ಧಮಂ ಮಾಸಮಂ
ದಿನಮಂ ವಾರಮನಾಳ್ವ ಮಂಡಳಮನೂ[1]ರಂ[1] ಸ್ಥಾನಮಂ ಸಾಕ್ಷಿಯಂ
ಧನಮಂ ತತ್ಪರಿಸಂಖ್ಯೆ[2]ಯಂ[2] ಕೊಡುವನಂ ಕೊಳ್ವಾತನಂ ತತ್ಪ್ರಯೋ
ಜನಮಂ ತಾನಱಿದೆಲ್ಲಿಯುಂ ಬರೆದವಂಗೊಳ್ಪೆಕ್ಕುಮಂತೆಲ್ಲಿಯುಂ ೨೫

ಕ್ಷಿತಿಪತಿಯಾಳಲ್ಕಾಗದು
ಮತಿಹೀನನನಧಿಕದೋಷಿಯಂ ಮಂದನನು
ದ್ಧತನಂ ಭೃತ್ಯನನೆಂದುಂ
ಪ್ರತಿಪಕ್ಷದೊಳೊಂದಿದವನನಾತ್ಮಂಭರಿಯಂ ೨೬

[3]ಎಂ[3]ತುಂ ದಾಯಕನೆನಿಪನ
ನೆಂತುಂ ಕೃತಿನಾಶಿಯಂ ಪ[4]ಲಾತ್ಮಕ[4]ನುಮಂ
ಮಂತಣವೇಂ ಗಡ ಬಿಡುವುದು
ಸಂತಂ ಭೂನಾಥನಥ[5]ಮ[5]ಭೃತ್ಯನನೆಂದುಂ ೨೭

ಸುರತಾಸಕ್ತನನನ್ಯಕಾರ್ಯ[6]ರತ[6]ನಂ ನಿದ್ರಾಳುವಂ ಕೋಪ ಭೀ
ಕರನಂ ವಾದಿತನೃತ್ಯಗೀತಮಧುರಾಳಾಪೇಷ್ಟಗೋಷ್ಠೀಮನೋ
ಹರನಂ ಕುಕ್ಕುಟ ಮಲ್ಲ ಮೇಷ ಮಹಿಷೇಭದ್ವಂದ್ವಯುದ್ಧಕ್ರಿಯಾ
[7]ಭ[7]ರನಂ ಭೂಪನನೆಯ್ದಿ ಬಿನ್ನವಿಸಬೇಡೇನಾದೊಡಂ ಸೇವಕಂ ೨೮

(ದುರ್ಗಸಿಂಹನ ಪಂಚತಂತ್ರಂ, ಪು ೩೧ ಪದ್ಯ ೮೩)

ಅಱಿನೃಪರುತ್ಸವಮಂ ಕೇ
ಳ್ದಿರೆಯುಂ ಸೆಂಡಾಡುತಿರೆಯುಮಾನೆಯನೇಱು
ತ್ತಿರೆಯುಂ ಮಂತಣದೊಳ್ ಕು
ಳ್ಳಿರೆಯುಂ ಬಿನ್ನವಿಸಲಾಗದೆಂ[8]ದುಂ[8] ಭೃತ್ಯಂ ೨೯

(ದುರ್ಗಸಿಂಹನ ಪಂಚತಂತ್ರಂ, ಪು ೩೨ ಪದ್ಯ ೮೪)

ಭೀತನನಲಸಿದನಂ ಕಾ
ರ್ಯಾತುರನಂ ಪಸಿದನಂ ತೃಷಾಪೀಡಿತ[9]ನಂ
ದ್ಯೂ[9]ತಮೃಗ[10]ವ್ಯಸನೋ[10]
ಪೇತನನಱಿದಱಿದು ಬಿನ್ನವಿಪ್ಪಂ ಗಾಂಪಂ ೩೦

(ದುರ್ಗಸಿಂಹನ ಪಂಚತಂತ್ರಂ, ಪು ೩೨ ಪದ್ಯ ೮೫)

---

[1] ರುಂ (ಕ) [2] ಯಿಂ (ಕ) [3] ಅಂ (ಕ) [4] ನಾತ್ಮಕ (ಕ) [5] ಮF (ಕ) [6] ಪರ (ಬ) [7] ಪ (ಕ) [8] ತುಂ (ಅ) [9] ದ್ಯೂತ (ಬ) [10] ವ್ಯಸನಜನೋಃ (ಕ)

ಒಡೆಯರ ರಾಯಸಂ ತನಗೆ ಬಂದೊಡೆ ತಾಸಿದಿರೆಟ್ಟುವಂದು ಮೈ
ವಿಡೆ ಪೊಡೆಮಟ್ಟು ಕೈಮುಗಿದು ಜೀಗದಿನೋದಿಸಿ ಕೇಳ್ದು ಬಿಚ್ಚತಂ
ತಡೆಯದೆ ರಾಜಕಾರ್ಯಮನೆ ಮಾಳ್ಪುದು ಮಂತ್ರವಿಶುದ್ಧಕೀರ್ತಿಯಂ
ಪಡೆವನಿರುದ್ಧಲಕ್ಷ್ಮಿಗೆಡೆಯಪ್ಪ ಪಸಾಯುತಬಲ್ಮೆಯಪ್ಪವಂ ೩೧

ಭರದಿಂ ವಾಚಕಮುಂಟೆಂ
ದುರವಣೆಯಿಂದೋದಿ [1]ಕ[1]ಳಿಯದರ್ಥಾರ್ಥಿಗಳಂ
ದೊರೆಕೊಳಲನು[2]ಮಾನಿಸಿ[2] ಭೂ
ವರನಾಲಿ[3]ಸೆ[3] ವಿದಿತಮಾಗಲೋದುಗೆ ಕರಣಂ ೩೨

ಅನುಮಾನಿಸಿ ಲೇಖಾರ್ಥಮ
ನನುನಯದಿಂ ಚಿತ್ತಮಾಗೆ ಮಧುರಧ್ವನಿಯಿಂ
ಮನಕೆಸೆವ ತೆಱದಿನೋದುಗೆ
ಜನಪನ ಸಭೆ ಮೆಚ್ಚೆ ನಚ್ಚಿ ಮುಯ್ಯಾಂಪಿನೆಗಂ ೩೩

ಬೆರಲಿಂದೊರಸದೆ ಸಗಣಮ
ನೊರೆಯದೆ ನಾಲಗೆಯೊಳಿನಿಸು ನಕ್ಕದೆ ಕೆಲದರ್
ಪಿರಿದುಂ ಬೆಸಜಲೋದದೆ
ವಿರಚಿಸುವುದು ಲೇಖನಾರ್ಥಮಂ ಗಣಿತಜ್ಞಂ ೩೪

ನಡುಗದೆ [4]ಕೆಕ್ಕ[4]ರಿಸದೆ ಬಾಯ್
ತಡವಾಗದೆ ತೊಡರೊಳೊಂದಿ ತೋಱದೆ ಮತ್ತಂ
ನುಡಿದ [5]ಪದವೆಡಹಿ ಬಾರದೆ[5]
ಸಡುಹುಡನೋದುವುದು ಸೇನಬೋವಂ ಸಭೆಯೊಳ್ ೩೫

ಮಾನಧನಂ ಮಧ್ಯಸ್ಥಂ
ಸೂನೃತವಾಕ್ಯಂ ವಿಶುದ್ಧ ಚರಿತಂ ಕುಲಜಂ
ತಾನೆನಿಪುದು ಕೃತಪುಣ್ಯಂ
ತಾನೆನಿಪುದು ರಾಜವರ್ಧನಂ ನೃಪಕರಣಂ ೩೬†

ಪದುಳಿಗನಪ್ಪುದೋಜೆವೆರಸಿಪ್ಪುದು ಸದ್ವಿಮಳಾಂಗಿಕಾಂಗನ
ಪ್ಪುದು ಧೃತಚಿತ್ತನಪ್ಪುದತಿಭಾವುಕನಪ್ಪುದು ನಿರ್ವಿಕಾರಿಯ

---

[1] ತ್ರ (ಕ) [2] ಶಾಗಿ (ಬ) [3] ಸಿ (ಕ) [4] ಕೇಕ (ಕ) [5] ಪನೆಡಹಲಿವಾರದ (ಕ)

† ಈ ಪದ್ಯವು ದೂತಾಂಗ ವರ್ಣನೆಯ ೨೪ ನೆಯ ಪದ್ಯವಾಗಿಯೂ ಇದೆ.

ಪ್ಪುದು ನಯದಿಂದಮುಂದಮಱಿಂದಿಂಬಿನೊಳೆಲ್ಲವನೋದಬಲ್ಲನ
ಪ್ಪುದು ಲಘುಹಸ್ತನಪ್ಪುದು ವಿಶೇಷಗುಣಂ ಗಣಕಂಗೆ ಲಕ್ಷಣಂ ೩೭

ಕವಣಿಸುವೋಜೆ ಲೆಕ್ಕಿಪ ಬೆಡಂಗವಧಾನಿಸುವುನ್ನತಿಕ್ಕೆ ಕೂ
ಡುವ ಕಳೆವಂದಮುಗ್ಘಡಿಸುವೊಟ್ಟಜೆ ತಿದ್ದುವ ಬಿನ್ನಣಂ ಕರಂ
.... .... .... .... .... .... .... .... ...
...ರನೆಂಬಿವಂ ಮೆಱೆಯವೇೞ್ಪುದು ಶ್ರೀಕರಣಕ್ಕಧೀಶ್ವರಂ ೩೮§

ಪುನರುಕ್ತಂ ಸಂಧಿದೋಷಂ ಸ್ವರತತಿ ಪದಪೂರ್ಣೋಕ್ತಿದೋಷಂಗಳೆಂದೆಂ
ಬಿನಿತುಂ ದೋಷಂಗಳಂ ಬಿಟ್ಟೆಳವಡೆ ಪದಕಂ ವ್ಯಕ್ತಮಪ್ಪಂ[1]ತಿರೊ[1]ಲ್ದಾ
ವನ ಚಿತ್ತಪ್ರೀತಿಯಾಗಲ್ ಬರೆದು ಪದಕಮಂ ಬಾರಿಸಲ್ ಬಲ್ಲನಂ ಮಾ
ೞ್ಕೆ ನಿತಾಂತಂ ರಾಜಪುತ್ರಂ ನಯಮನಱಿವನಂ ಸಂಧಿಗಂ ವಿಗ್ರಹಕ್ಕಂ ೩೯

ಗುರುಗೆ ಮಹೀಭುಜಂಗೆ ಕೆಳೆಯಂಗೆ ವಿರೋಧಿಗೆ ಸೇವಕಂಗೆ ಬಿ
ತ್ತರದೆ ಬೞಿಕ್ಕಮಲ್ಲಿ ಋತುಕಾಮಶರಾಸನವೇದಲೋಚನಸ್ಥಿರ
ಪರಿಸಂಖ್ಯೆಯಂ ನೆಱೆಯೆ ಲೆಕ್ಕದ ಮೇಲೆನಿಸುತ್ತೆ ಮತ್ತೆ ಬಿ
ತ್ತರದೊಳೆ ಕೂರ್ತು ಮುದ್ರಿಸಿ ಪದಂ ಬರೆದೋದುಗೆ ಬಂದ ಲೆಕ್ಕಮಂ ೪೦

ಚದುರಂ ಭಾವುಕನಿಂಗಿತಜ್ಞನಱಿವುಳ್ಳಂ ದೇಶಭಾಷಾನ್ವಿತಂ
ಪದವಾಕ್ಯಾರ್ಥವಿ[2]ವಕ್ಷಿ[2]ತಂ ಬಹು[3]ಕಳಾ[3]ಸಂಪನ್ನನಾಸ್ಥಾನಸ
ಮ್ಮದವಾ[4][ಗ್ವಿ][4]ತ್ರನೆನಿಪ್ಪನಂ ನೃಪವರಂ ಕೈಕೊಂಡು ಸತ್ಪಾತ್ರನಂ
ಪದಪಿಂ ನೆಟ್ಟನೆ ಸಂಧಿವಿಗ್ರಹಿಯನೆಂತುಂ ಮಾೞ್ಕೆ ನೀತಿಜ್ಞನಂ ೪೧†

ಒಡೆಯನ ವೀರಮಂ ಪೊಗೞಲಮ್ಮದನಂ ಲಸದುತ್ತರಂಗಳಂ
ಬಿಡದರಿಭೂಪರೊಳ್ ನುಡಿಯಲಮ್ಮದೆ ತತ್ಸಭೆಯಲ್ಲಿ ಭೀತಿಯಿಂ
ನಡುಗುವ ಪೇಡಿಯಂ ಕಳುಪಲಾಗದು ನೆಟ್ಟನೆ ಸಂಧಿಯಲ್ಲಿಗಂ
ತಡೆಯದೆ ಭೂಭುಜಂ ನೆಗೞ್ದ ವಿಗ್ರಹದಲ್ಲಿಗಮಾವ ಕಾಲದೊಳ್ ೪೨

ಎರಡಕ್ಕಂ ಸಲ್ವಂತಿರೆ
ನರನಾಥಂಗುಸಿರ್ಗೆ ಸಂಧಿವಿಗ್ರಹಿ ನುಡಿಯಂ
ಸರಿಯಪ್ಪುದನೆರಡಕ್ಕಂ
ಪರಿಣತಮತಿ ದೂತನಿಂತು ನುಡಿಯಲೆವೇೞ್ಕುಂ ೪೩

---

1 ತುವೊ (ಕ) 2 ವಿಮು (ಕ) ವಿವ (ಬ) 3 ವಳಂ (ಕ) 4 ಗ್ಮಿ (ಕ ಬ)
§ ಈ ಪದ್ಯ (ಬ) ಪ್ರತಿಯಲ್ಲಿಲ್ಲ † ಈ ಪದ್ಯ ದೂತಾಂಗವರ್ಣನೆಯ ೨೬ನೆಯ ಪದ್ಯವಾಗಿಯೂ ಇದೆ

ಅಟ್ಟಿದ ಕಾರ್ಯಮನೊಡೆಯಂ
ಗೊಟ್ಟಜೆಯಿಂ ಸಂಧಿವಿಗ್ರಹಂಗಳನೆರಡಂ
ನೆಟ್ಟನೆ ಮಾಟ್ಪಿ ಸಮರ್ಥನ
ನಟ್ಟುಗೆ ವಿಶ್ವಾಸನೀಶ್ವರಂ ನಯವಿದನಂ ೪೪

ಸೀಱಿನನಾತ್ಮಘಾತಕನನುತ್ಸುಕನಂ ಕ್ಷಮೆಯಿಲ್ಲದಾತನಂ
ಜಾಱುವನಂ ಪಲುಂಬುವನನಸ್ಥಿರನಪ್ಪನನಾಳಿಕಾಱನಂ
ದೂಱುವನಂ ನಿಕೃಷ್ಟನ[1][ನೊಡಂ][1]ಬಡುಕಾಱನನೇನನೆಂದೊಡಂ
ಮಾಱುವನಂ ಕಡಂಗಿ ಸಲೆ ಬೇಡುವನಂ ನೃಪನಾಳಲಕ್ಕುಮೇ ೪೫

ಬೆಸವೇೞ್ದಾಗಲೆ ಜೀವಿತಕ್ಕೆಳಸುವಂ ನಿಷ್ಕಾರಣಂ ಕುತ್ತದಿಂ
ಕುಸಿವಂ ಸಲ್ಗೆಗೆ ಮೆಯ್ಯನಾಂತು ತೊನೆವಂ ಕೊಂಡಿರ್ದು ಮೇಲ್ವಾಯ್ದು ಗ
ರ್ಜಿಸುವಂ ದುರ್ವ್ಯಸನಂಗಳೊಳ್ ತೊಡರ್ದು ನಾಣ್ಗೆಟ್ಟಾಡುವಂ ಕಾಡುವಂ
ನಿಸದಂ ಹಂಗಿಸುತಿರ್ಪನಾ ಖಳನನಾಳ್ವಾತಂಗೆ ಪೆಂಪಕ್ಕುಮೇ ೪೬

ಅರಸಂ ಪೆರ್ಗಡೆ ಜನಪದ
ವರಿದೆನಿಸುವ ಕೋಟೆ ಕೋಶಮಾ[ರಯ್ಯೆ]ಬಲಂ
ದೊರೆವೆತ್ತ ಮಿತ್ರನೆಂದಿಂ
ತು ರಾಜ್ಯಮಕ್ಕುಂ ವಿಚಾರಿಸಲ್ ಸಪ್ತಾಂಗಂ ೪೭

ಬಾಲಂ ವೃದ್ಧಂ ಜಡನೆಂ
ದೇಳಿಸವೇಡರಸುಮಗನನಾತನೆ ದೇವಂ
ಕಾಲಾಗ್ನಿರುದ್ರನೆಂದಱಿಂ
ದಾಳೋಕಿಸು ವಿನಯಪೂರ್ವಕಂ ನೆಱೆ ಬಲವಂ ೪೮

ಶೂರಂಗೆ ಪರಿಜನಂ ಸಲೆ
ಕೂರದು ಮೆಲ್ಲಿದನನಾರುಮುಱಿರದಱಿಂ ಸಾ
ಧಾರಣಮೆಯಪ್ಪುದಾ ಪರಿ
ವಾರದ ಪೆರ್ಚುಗೆಯನದಱ ಸಣ್ಪುಮನೊಲವಂ ? ೪೯

ಆಯುಮನಾ ಯುಗಾವಧಿವರಂ ನಿ[2]ಱಿ[2]ಸಲ್ ಮಱೆವೊಕ್ಕ ರಾಯರಂ
ಕಾಯಲುದಾತ್ತವೃತ್ತಿಯನೆ [3]ಪೆರ್ಚಿಲತರ್ಮನ[3] ಸೇದೆವಟ್ಟುವ

---

[1] ನೆರಂಬಿ (ಕ ಬ) [2] ಲಿ (ಬ) [3] ಪಿಚ್ಚಿಲತರ್ಮನೆ (ಕ)

[1]ಗ್ನಿ[1]ಯಲವುಂಕಿ ತನ್ನ ನೆಲನುಂ ಕುಲನಾರಿಯುಮಂ ಬಲ[2]ಸ್ಥನ[2]
ನ್ಯಾಯದಿಸಾಳಿ ಪೂಣ್ದಱಿಯಲುಂ ಪಿರಿದೇಂ ನೃಪನೆಂಬ ಲೆಕ್ಕನೋ (?) ೫೦

ಜನಪದಕಜ್ಜಮಂ ಕೆಡಿಸಿ ಕೊಳ್ಳಿದನೆಂದೊಡೆ ಕೊಳ್ವನನ್ಯ ಕಾ
ಮಿನಿ ತನಗೊಲ್ದಳೆಂದೊಡದನಾರಿಸಿಯಾಳ್ದನಿನಾಪ್ಪಪಾಯಮುಂ
ಟೆನೆ ಬೆದಱಂ ಸ್ವಕಾರ್ಯವಿರೋಧಮಾಗೆ ತೊ . . .
ಟ್ಟನೆ ಕೊಳಿಮಾಟ್ಟಿನಿಂತುಟುಪಧಾಪರಿಶುದ್ಧನಮಾತ್ಯನಕ್ಕುಮೆ (?) ೫೧†

ಚಳಮತಿ ಬೆಸನಿ ಸುಖಪ್ರಿಯ
ನಳಸನನಿಶ್ಚಯನಸಾಹಸಂ ಚ್ಯುತಚಿತ್ತಂ
ಸ್ಖಲಿತೋದ್ಯೋಗನೆನಲ್ ಭೂ
ತಳದೊಳ್ ನಿರ್ಭಾಗ್ಯರೆಣ್ಬರಪ್ಪರಿಳೇಶರ್ ೫೨

ವೇದವಿದಂ ಕಾಲತ್ರಯ
ವೇದಿ ಬಹುಶ್ರುತನಥರ್ವಕುಶಲಂ ಶುಭವಂ
ಶೋದಯನುತ್ತಮನಾಶೀ
ರ್ವಾದಪರಂ ಪರಹಿತಂ ಪುರೋಹಿತನಕ್ಕುಂ ೫೩
(ಶಬ್ದಮಣಿದರ್ಪಣಂ ೧೧೫-೧)

ಚತುರಪಧಾವಿಶುದ್ಧನಧಿಕಾರಿ ಕಳಾವಿದನರ್ಥಶಾಸ್ತ್ರ ನಿ
ಶ್ಚಿತನುತಿ ಸಂಧಿವಿಗ್ರಹಪದಸ್ಥಿತನಲ್ಲ . . ದುಂತೆ ಗ
ರ್ಭಿತನಿದರೊಡ್ಡುಮಂ ಮನದೊಳ್ಳಿದದಪಂ ಮಱಿವಾಟ್ಟಿನಾಳ್ದನು
ದ್ಧತನೆನೆ ಸಂದಿವಿಗ್ರಹಿಯೆ ವಿಗ್ರಹಭೂಪತಿಗಾಗದಿಕ್ಕುಮೆ ೫೪†

ಪಟುಆಯರನುಱದಪಮಾನದೆ
ಕಟಿಲ್ಟುಮಂ ಬೀಡಿನಾಳ್ಗೆ ತೆಱೆಯಂ ಮತ್ತಂ
ಘಟಿಯಿಸುವಂ ರಾಜ್ಯಮನವ
ಗಟಿಯದೆ ದುಷ್ಟಪ್ರಧಾನನಿರಲಱದಪನೆ ೫೫†

ಶನಗೆಡಱಾಗೆ ನಾಣಟಿಂವು ನಾಣ್ಗಿಡೆ ತೇಜದ ಹಾನಿ ತೇಜಮಿ
ಲ್ಲೆನಿಸೆ ಪರಾಭವಂ ಪರಿಭವಂಬಡೆದಂದಪಮಾನವೃತ್ತಿ ತೊ
ಟ್ಟನೆ ಕೊಳೆ ಸಾಗುರ್ವಮಂತದಱ ಸಾರ್ಕೆಂಮೊಳುಬ್ಬೆಗಮಿರ್ಕುಮುಬ್ಬೆಗಂ
ಜನಿಯಿಸೆ ಬುದ್ಧಿಹಾನಿ ಮತಿವಿಭ್ರಮದಿಂ ಮರುಳೆಂಬರೆಲ್ಲರುಂ ೫೬

---

[1] ಸಿರ್ (ಕ) [2] ಸ್ತುನಾ (ಕ) † ಈ ಪದ್ಯಗಳು (ಬ) ಪ್ರತಿಯಲ್ಲಿಲ್ಲ

ಕಿಸುವಿಂ ದೇವತೆಯಂ ಮಾ
ಡಿಸಿ ಪೂಜಿಸೆಯುಂ ಕಿಲುಂಬುನಾರ್ವುದನೆಂತುಂ
ಬಿಸುಡದು ಗುಣವಿಲ್ಲದುದೇಂ
ಪೆಸರ್ವಡೆದುಂ ತನ್ನ ಸಾಜಮಂ ಬಿಸುಡುವುದೇ ೫೭

ಬಡವನ ಯೌವನಮಫಲಂ
ಕೊಡದನ ಧನಮಫಲಮೊರ್ವನುಣ್ಣದದಫಲಂ
ಜಡಮತಿಯೋದಿದೊಡಫಲಂ
ಕಡುಮೂರ್ಖಂ ಮಂತ್ರಿಯಾದ ರಾಜ್ಯಮದಫಲಂ ೫೮

ಎನಗಿವ ಭಕ್ತನೆನ್ನದೆ ಧುರಂಧರನೆನ್ನದೆ ಶಂಕರಂ ವೃಷೇಂ
ದ್ರನನತಿದೂರದೊಳ್ ನಿಲಿಸಿ ವಕ್ತ್ರಸಮೀಪಕೆ ಸರ್ಪನಂ ದ್ವಿಜಿ
ಹ್ವನನನುರಾಗದಿಂ ಕಿವಿಯ ಪಕ್ಕದೆ ತಾಳ್ದಿದನಂತೆ ತಕ್ಕರಂ
ಜನಪತಿ ಗೆಂಟುಮಾಡಿ ಖಳರಂ ಕಿವಿಯತ್ತೆಳೆಕೊಂಡು [1]ಸಾಚರ್ಯಗುಂ[1] ೫೯

ಉರಗಂಗಳಟ್ಟೆ ತಿನೆಯುಂ
ಶರನಿಧಿಪತಿ ಮೇರೆದಪ್ಪೆಯುಂ ನರ[2]ನಾಥಂ
ಪರಿ[2]ಕಿಸದೆ ಮುನಿಯೆಯುಂ ಸಂ
ಹರಣಂ ಪ್ರಜೆಗಕ್ಕುಮೆಂಬುದೊಂದಚ್ಚರಿಯೇ ೬೦

ತನಗೆಣೆಯಿಲ್ಲದ[3]ನೇನೆಂ[3]
ದನಪ್ಪೊಡಂ ಮುನಿಯವೇಡದೆಂತೆನೆ ಗಜಗ
ರ್ಜನೆಗೆ ಕಡುಮುಳಿವ ಸಿಂಗಂ
ಮುನಿಗುಮೆ ನೆರೆದೂಳುತಿರ್ಪ ನಾಯ್ಗಂ ನರಿಗಂ ೬೧

ಬಿಲದೊಳಗೊಂದು ಕಲ್ಲಗವಿಯೊಳ್ ಕಡುಗೆಂಟಱೊಳಿರ್ದ ಕಪ್ಪೆ ಪೆ
ರ್ಬುಲಿಗಿದಿರಾಗಿ ಗರ್ಜಿಸಿದೊಡಾ ಪುಲಿ ಕಪ್ಪೆಗೆ ಪಾಯ್ದು ಸಾೞಿಲುಂ
ಕೊಲಲುಮೊಡರ್ಚೆ ಕಲ್ಲೊಡನೆ ಪೋರ್ದು ಬಲಂ ಕಿಡುವಂತೆ ದುರ್ಗದೊಳ್
ನೆಲೆಗೆಡೆದಿರ್ದರಂ ನೆಱೆಯ[4]ರಾ ಪಿಸಿ[4]ಗೆಲ್ವರದೆಂತು ಬಾ[5]ೞ್[5]ವರ್ ೬೨

ಮಾನಧನನಂ ನೆಗೞ್ತೆಯ
ಮಾ[6]ನ[6]ಸನಂ ತನಗೆ ಹಿತನನೊಂದಱಿಂ ದೋಷ

---

[1] ಚಾಚರ್ಯವರ್ (ಕ) [2] ಘರ್ಷ (ಕ) [3] ನೆಱಸಂ (ಬ) [4] ತಾಱಸಿ (ಕ)
[5] ೞ (ಕ) [6] ನಿ (ಬ)

23

ಕ್ಕಾ ನರಪತಿ ಕೆಡಿಪೊಡೆ ಕಣ್
ಬೇನೆಗೆ ತಲೆದಿವಿಸಿಕೊಳ್ವನಂ ನೆಱೆ ಪೋಲ್ಗುಂ ೬೩

ಸೊರೆಯಂ ಪಿಡಿದಂ ಮೊದಲಾ
ಗಿರೆ ತೀವಿದ ತೊಱೆಯನೀಸಿ ನಿತ್ತರಿಸಿದಪಂ
ಪಿರಿಯನಿವನೆಂದು ನಂಬಿದ
ನರನಂ ನಿತ್ತರಿಸದಾತನುಂ ಮಾನಸನೇ ೬೪

ಮನುಚರಿತಕ್ಕೆ ವೃತ್ತಿ ನೃಪನೀತಿಗೆ ಪಂಚಿಕೆ ಲೌಕಿಕಪ್ರವ
ರ್ತನೆ[1]ಗುರುವಾರ್ತಿಕಂ ರಿಪುಷಡನ್ವಯರೋದದ[1] ಟಿಪ್ಪಣಂ ಧರಾ
ವನಗುಣದೊಂದು ಟೀಕು ಪರಮಾರ್ಥವಿವೇಕದ ಭಾಗ್ಯಮೆಂದೊಡಾ
ಜನಪತಿ ರತ್ನಶೇಖರನ ರಾಜಗುಣಂ ಬುಧಸೇವ್ಯಮೆನ್ನಿರೇ ೬೫

(ಅನಂತನಾಥಪುರಾಣಂ ೩-೨೧)

ಕುಲಜನನದರ್ಶನೀಕಂ
ಬಲವಂತಂ ಬುದ್ಧಿವಂತನಿಂಗಿತವುಱೆವಂ
ಸಲೆ ಸೇನೆಯೊಡೆಯನಕ್ಕೆ ವಿ
ಮಲ ಸದ್ಭೂಪಾಲನಿಧಿಗೆ ಸೂನೃತವಾಕ್ಯಂ ೬೬

ವಿದಿತಾಯುವಿದಂ ಕೃತಮತಿ
ಮೃದುವಾಕ್ಯಂ ಶಾಸ್ತ್ರಯುಕ್ತನತಿದೈವಜ್ಞಂ
ಪದಪಿಂ ನರನಾಥಂಗೊ
ಲ್ದೊದವಿರೆ ಜೋಯಿಸಿಗನಕ್ಕೆ ದರ್ಶನಸಾರಂ ೬೭†

ಸ್ವಾಮಿಗೆ ತಪ್ಪಿದ ಭೃತ್ಯನ
ಘೋಮಾರ್ಗಂ ರೌರವಕ್ಕೆ ಗಟಿಗಟಿನಿಟಿಗುಂ
ಸ್ವಾಮಿ ಸುಭೃತ್ಯಗೆ ತಪ್ಪಿದೊ
ಡಾವುಱೆಯೆವು ದೇವರಱೆವರಾಳ್ದನ ಗತಿಯಂ ೬೮

ಮುಂ ಕೊಟ್ಟಟ್ಟುವುದುತ್ತಮಂ ಕಪಿಬಲಂ ವಾರಾಸಿಯಂ ದಾಂಟದ
ನ್ನಂ ಕಲ್ಪಾಂತಕೃತಾಂತದೂತಸದೃಶಂಗಳ್ ರಾಮರೌದ್ರೇಷುಗಳ್
ಲಂಕಾದ್ವಾರಕವಾಟಮಂ ಮುಱೆಯದನ್ನಂ ಲಕ್ಷ್ಮಣಜ್ಯಾಲತಾ
ಟಂಕಾರಂ ಕಿವಿಗೆಯ್ದದನ್ನಮಖಿಲಪ್ರಖ್ಯಾತೆಯಂ ಸೀತೆಯಂ ೬೯

(ರಾಮಚಂದ್ರಚರಿತಪುರಾಣಂ ೧೨-೭೧)

---

1 ರುಕೀರ್ತಿ ಕಂಕಷಮನನ್ವಯವಾದದ (ಕ ಬ) † ಈ ಪದ್ಯ (ಬ) ಪ್ರತಿಯಲ್ಲಿಲ್ಲ

ಲೋಕಕ್ಕಿದರ್ಥಶಾಸ್ತ್ರದ
ಟೀಕೆನಿಸಿದ ತನ್ನ ನುಡಿ [1]ಮನಂ[1]ಗೊಳಿಸೆ ದಳ
ತ್ಕೋಕನದಜಠರನಂ ನಿ
ರ್ವ್ಯಾಕುಳಮಿಂತೆಂದು ಧರ್ಮತನಯಂ ನುಡಿದಂ ೨೦†

(ಪಂಪಭಾರತಂ ೯-೧೪)

ಬಸಿಱೊಳಗೆ ಜಗತ್ರಯಮುಮ
ನೊಸೆದೋರಂತಿಟ್ಟು ಕಾದ ಪೆಂಪಿನ ನಿಮ್ಮಾ
ಬಸಿಱಿಂ ಪೊಕ್ಕಿರ್ದ್ದೈವರ
ನಸುರಕುಳಾಂತಕ [2]ಕಡಂಗಿ[2] ಕಾವುದು [3]ಪಿ[3]ರಿದೇ ೨೧

(ಪಂಪಭಾರತಂ ೯-೧೬)

ಕಾದಡೆ ಪನ್ನಗಧ್ವಜನಿಳಾತಳಮಂ ಕುಡನಾನುಮಿರ್ಪುದೇಂ
ಸೋದರರೆಂದು ನಾಣ್ಚಿ ಸಡೆದಿರ್ದಪೆನಿರ್ದೊಡವಸ್ತುಭೂತನೆಂ
ದಾದಮೆ ಭೂತಳಂ ತೆಗಟಿ ತೇಜಮೆ ಕೆಟ್ಟಪುದಿಂತಿದರ್ಕೆ ಪ
ದ್ಮೋದರ ನೀನೆ ಪೇೞಿಮಗೆ ಕಜ್ಜಮನೀಗಳೆ ದಿವ್ಯಚಿತ್ತದಿಂ ೨೨†

(ಪಂಪಭಾರತಂ ೯-೧೮)

[4]ಬೆ[4]ಸಮಾರ್ ಕೊಂಡವೊಲಕ್ಕುವೊಂದೆ ನಯಮಂ ಕೇಳ್ ನಿನ್ನ ಮುಂದೀಗಳಾ
ನುಸಿರ್ದಪ್ಪೆಂ ಸಲೆ ಮೆಲ್ಪು ಬಲ್ಪನೞಿಗುಂ ಕ್ಕೈವಾರ[5]ಮುಂ[5] ಕೂರಿ ಕೂ
ರಿಸುಗುಂ ನಿಕ್ಕುವಮಪ್ಪ [6]ಕಾರಣದಿನಿಂತೀ[6] ಸಾಮಮುಂ ಮುಂ ಪ್ರಯೋ
ಗಿಸದೇಗೆಟ್ಟುಪುದೆಂದು ದಂಡಮನೆ ತಾಂ ಮುಂದಿಕ್ಕುವಂ ಮಂತ್ರಿಯೇ ೨೩

(ಪಂಪಭಾರತಂ ೯-೧೯)

ಆ ಲಾಕ್ಷಾಗೃಹದಾಹವೊಂದೆ ವಿಷಸಂಯುಕ್ತಾನ್ನಮಂತೊಂದೆ ಪಾಂ
ಚಾಲೀನಿಗ್ರಹವೊಂದೆ ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ ಶಾ
ರ್ದೂಲಾಭೀಲವ[7]ನಂಗಳೊ[7]ಳ್ ತಿರಿಪಿದೀ[8]ಯುಕೊರ್ಂದೆ[8] ಲೆಕ್ಕಂಗೊಳಲ್
ಕಾಲಂ ಸಾಲವು ಕಂಡುಮುಂಡು ನಮಗಿನ್ನಾತಂಗಳೊಳ್ [9]ಸಂಧಿಯೇ[9] ೨೪

(ಪಂಪಭಾರತಂ ೯-೨೨)

ತೋಡುವೆನೊರ್ವನೊಳ್ಗರುಳನುರ್ವಿಗೆ ನೆತ್ತರನಾರ್ದು ಪೀರ್ದು ಪೋ
ರ್ದಾಡುವೆನೊರ್ವನೂರುಗಳನೆನ್ನ ಗದಾಶನಿಘಾತದಿಂದೆ ನು

[1] ಯುಬಗೆ (ಬ) [2] ನೊರಲ್ದು (ಬ) [3] ಮ (ಬ) [4] ರ (ಕ ಖ) [5] ಱಿಂ (ಬ)
[6] ಲದಿನದಂತಾ (ಬ) [7] ನಾಳಿಂಪೊ (ಬ)[8] ಯೊೀರೊಂದು (ಬ) [9] ಪಾೞಿಯೋ (ಅ)
† ಈ ಪದ್ಯಗಳು (ಕ)ಪ್ರತಿಯಲ್ಲಿಲ್ಲ

ಗರ್ಾಡುವೆನೇೞುಲೋಕಮಱಿವಂತಿರೆ ಪೂಣ್ದೆನಗಿಂದು ಸಂತಸಂ
ಮಾಡದೆ ಸಂಧಿಮಾಡಿ ಕುರುಪುತ್ರರೊಳಿನ್ನನೆ ಜೋಡುಮಾಳ್ಪಿರೇ ೭೫
(ಪಂಪಭಾರತಂ ೯-೨೪)

ಬಲಿಯಂ ವಾಮನ ರೂಪದಿಂದಮೆ ವಲಂ ಮುಂ ಬೇಡಿದಂ ಭೂರಿ ಭೂ
ತಲಮಂ [1]ಕುಂದೆನಗಾಯ್ತೆ[1] ಕೊಂಡೆಸಿಳಿಯಂ ಕಟ್ಟಿಟ್ಟನಿನ್ನುಂ ರಸಾ
ತಲದೊಳ್ ದೈತ್ಯ[2]ನನಂತೆ[2] ನೀನುಮಿಳೆಯಂ ಮುಂ ಬೇಡಿಯಟ್ಟಟ್ಟು ಮಾ
ರ್ಮಲೆದಾತಂ ಕುಡಿದಿರ್ದೊಡಂದಿಱಿಯ ನೀಂ ಲೋಕಂ ಗುಣಂಗೊಳ್ವಿನಂ ೭೬
(ಪಂಪಭಾರತಂ ೯-೨೦)

ಬಂದು ಕುರುಕ್ಷೇತ್ರದೊಳಗೆ
[3]ವುಂ ದೞಿಮುಂ ನೆರೆದುನೆರೆದು ನಮ್ಮೊಳ್ ಕಾದ
ಲ್ಕೆಂದು ಗಡಂ[3] ಬಂದಿರ್ದರ
ದೇಂ ದಾಯಿಗತನ[4]ದೆ ಪಾಂಡವರ್ ತೋಱಿದರೇ[4] ೭೭
(ಪಂಪಭಾರತಂ ೧೦-೩)

ಪಡೆವಳ್ಳಂ ಗಡ ಮಾಬಲಕ್ಕೆ ತಲೆ ಧೃಷ್ಟದ್ಯುಮ್ನನೆಂ[5]ಬೊಳ್ಳಿಯಾ[5]
ಪಡೆಯೊಳ್ ಗಂಡನುಮಾ[6]ನೊಲಂ[6] ದ್ರುಪದನುಂ [7]ಪೇರೊಟ್ಟಿ[7]ಯಾ ಮತ್ಸ್ಯನುಂ
ಗಡಮಂತಾ ಬಲಕಾಳ್ದನೇನಱಿಯಿರೇ ಧರ್ಮಜ್ಞನಾ ಧರ್ಮಜಂ
ಗಡಮೇಂ ನಾಯಕರೊಳ್ಳಿದರ್ ನೆರೆದರೋ [8]ಮತ್ಸ್ಯೇಶನುದ್ಯಾನದೊಳ್[8] ೭೮
(ಪಂಪಭಾರತಂ ೧೦-೪)

ಕಳವೇೞಿದ್ದು ಕುರುಭೂಮಿಯಂ ಕಳಕವರ್ ವಂದಿರ್ದರೆಂದಂತೆ ದೋ
ರ್ವಳ ಚಾತುರ್ವಳ ತತ್ಸುಹೃದ್ಬಳಮನಿನ್ನೇಗೇಳ್ದಪೈ ಪಾಂಡವರ್
ಬಳಸಂಪನ್ನರುದಗ್ರದೈವಬಳಸಂಪನ್ನರ್ ಮರುಳ್ಮಾತನಿ
ನ್ನುೞಿ ಗಾಂಗೇಯರ ಪೇಳ್ದುದೊಂದು ತೆಱದಿಂ ನೀ ಕಾದು ದುರ್ಯೋಧನಾ ೭೯†
(ಪಂಪಭಾರತಂ ೧೦-೫)

ಪಿಡಿದರವರಸುರವೈರಿಯ
ನೊಡಂಬಡಿಂ ತೊೞ್ತುವೆಸದೊಳಾಂ ಸಿಮ್ಮಡಿಯಂ
ಪಿಡಿದೆನದಕ್ಕಾಂ ನಾಣ್ಚೆಯೆ
ಪಿಡಿದೆನವರ್ ಬಂದು ಪಿಡಿದ[9]ರೆನ್ನರೆ ಗಲ್ಲಂ[9] ೮೦
(ಪಂಪಭಾರತಂ ೧೦-೮)

---

1 ಕೊಟ್ಟೊಡೆ ನೋಡಿ (ಬ) 2 ನೆಂತು (ಬ) 3 ವ್ರಂದಿರೆ ನಮ್ಮೊಳ್ ಕಡಂಗಿ ಮಿಗೆ ತಳ್ತಿಱಿಯಲ್ಕೆಂವಾನುಂ (ಅ) 4 ನುಸಮುನವರ್ ತೋಱೀವಪರ್ (ಅ) 5 ಬಾತನಾ (ಬ) 6 ದನಾ (ಬ) 7 ಪೆಜೊಗ್ಗಟ್ಟ (ಕ ಬ) 8 ಕಾದಲ್ಕೆ ಮತ್ಸ್ಯನ್ನದೊಳ್ (ಅ ಕ) 9 ರೆನ್ನೆದೆಗಲ್ಲಂ (ಕ ಬ) † ಈ ಪದ್ಯ (ಬ) ಪ್ರತಿಯಲ್ಲಿಲ್ಲ

ನರನಾರಾಯಣರಿರ್ವರೆ
ಧುರದೊಳ್ ಮಾರ್ಕೊಳ್ವರೆನ್ನನೊರ್ವಂ ಮೊಮ್ಮಂ
ಪರಮಗುರುವೊರ್ವನವರಿ
ರ್ವರುಮಂ ಕಾದಲ್ಕೆವೆನುಱದ ರಿಪುನೃಪಬಲಮಂ ೮೧†

(ಪಂಪಭಾರತಂ ೧೦-೧೪)

ಧೃತರಾಷ್ಟ್ರಂ ನುಡಿದಾರ್ತನೇ ಹರಿ ಭರಂಗೆಯ್ದಾರ್ತನೇ ನೀಂ ಪೃಥಾ
ಸುತರಂ ನೋಯಿಸಲಾಗದೆಂದು ನುಡಿದೇನಾಮಾರ್ತೆಮೇ ನಿನ್ನೊರಂ
ಟುತನಂ ಕೈಗಲ್ಕೆವಾಯ್ತುದಪ್ಪೊಡೆ ಮಹಾಭಾರಾವತಾರಂ ರಣೋ
ದ್ಯತನಾಗೆಂಬುದನೆಮ್ಮನನ್ಯರವೋಲೇಂ ನೀಂ ಪ್ರಾರ್ಥಿಸಲ್ವೇಳ್ವುದೇ ೮೨*

(ಪಂಪಭಾರತಂ ೧೦_೧೦)

ಪಿಡಿಯೆಂ ಚಕ್ರಮನೆಂಬ ಚಕ್ರಿಯನಿಳಾಚಕ್ರಂ ಭಯಂಗೊಳ್ವಿನಂ
ಪಿಡಿಯಿಪ್ಪೆಂ ಕರಚಕ್ರಮಂ ನರರಥಂ [1]ತೂಳ್ದಾ[1] ಕುರುಕ್ಷೇತ್ರದೊಳ್
ಪಡುವೆಣ್ಗಾವುದ ಪೋಗವೋಗಲೆಸುವೆಂ ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ ನಾಟ್ಪಿನೋವದೆ ಪಯಿಂಛಾಸಿರ್ವರಂ ಯುದ್ಧದೊಳ್ ೮೩

(ಪಂಪಭಾರತಂ ೧೦-೨೫)

ಓರಂತೆ ಮೆಚ್ಚಿದಂ ಕೃತಿ
ಸಾರಂ ಮಂತ್ರಾಂಗಕೆಯ್ದೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೮೪

ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್
ಮಂತ್ರವರ್ಣನಂ ಷೋಡಶಾಶ್ವಾಸಂ ಸಂಪೂರ್ಣಂ

---

[1] ಮುತ್ತಾ (ಬ) †ಈ ಪದ್ಯ (ಕ) ಪ್ರತಿಯಲ್ಲಿಲ್ಲ * ಈ ಪದ್ಯ (ಬ) ಪ್ರತಿಯಲ್ಲಿಲ್ಲ

# ದೂತಾಂಗವರ್ಣನಂ

ಸ್ಥಿರಸಾದೇಯಸ್ವರೂಪಂ ಪರನೃಪವಸುಧಾಂತಾಕುಳಜ್ಞಂ ಸದೃಷ್ಟಾಂ
ತರವಾಕ್ಯಂ ಸಾಮಭೇದಾದ್ಯತಿಶಯವಿದನಗ್ರಾಮ್ಯವೇಷಂ ಸಭಾಖ್ಯಂ
ತರನಿಶ್ಶಂಕಂ ಪರಾಶೇಂಗಿತವಿದನೆನಿಪಂ ದೂತನೆಂದಿಂತು ಧಾತ್ರೀ
ಶ್ವರಕಾರ್ಯೋದ್ಯೋಗಿಗಳ್ ಬಿತ್ತರಿಪ ಕವಿಗಳಿಂ ಖ್ಯಾತದೂತಾಂಗಸುಕ್ಕುಂ ೧

ಸಾಧಿತಮಂತ್ರನುನ್ನತಗಿರೀಂದ್ರಗುಹಾಂತರದಿಂ ಪ್ರಸಿದ್ಧ ವಿ
ದ್ಯಾಧರನಾತ್ಮಮಂದಿರಕೆ ಬರ್ಪವೊಲೊಪ್ಪುವ ಮಂತ್ರಶಾಲೆಯಿಂ
ದಾ ಧರಣೀಶ್ವರಂ ಸೊಗಯಿಪೋಲಗಸಾಲೆಗೆ ಸಿದ್ಧಮಂತ್ರನಾ
ಜ್ಞಾಧರನಟ್ಕಿಱಂದೆ ನಡೆತಂದು ವಿನೋದದೊಳಿರ್ದನೂರ್ಜಿತಂ ೨

(ಪಾರ್ಶ್ವನಾಥಪುರಾಣಂ ೨-೪೭)

ಸಕಳಾಂತಃಪುರ ಮಂತ್ರಿಮಂಡಳಿಕ ರಾಜಶ್ರೇಷ್ಠತಂತ್ರಾದಿ ನಾ
ಯಕ ಸಾವಂತ ಕವೀಂದ್ರ ವಾದಿಗ[1]ಳು ಕೋದ್ವಾ[1]ದಾದಿ ವಾಜ್ಞೇಯ ಕಾ
ರಕಥಾದ್ಯೂತಕ ಪುಣ್ಯಪಾಠಕಲಸದ್ಗೇಯಪ್ರವೀಣಪ್ರವಾ
ದಕ ವೈತಾಳಿಕ ನರ್ತನಪ್ರಕರದಿಂದೊಪ್ಪಿರ್ದುದೊಡ್ಡೋಲಗಂ ? ೩

ಸಂತತವೋಲಗಿಪ್ಪಖಿಳಮಂತ್ರಿಪುರೋಹಿತ ದಂಡನಾಥ ಸಾ
ವಂತ ನಿಯೋಗಿವರ್ಗ ಬುಧಗಾಯಕವಾದಕರೋಳಿಯೊಪ್ಪೆ ವೇ
ದಾಂತವಿಲಾಸಿನೀ ಜನಸಮೇತಮಿಳಾಪತಿ ರಂಜಿಸಿರ್ದನ
ತ್ಯಂತವಿಚಿತ್ರ ಶೋಭೆವಡೆದೋಲಗಸಾಲೆಯೊಳಿಂದ್ರಲೀಲೆಯಿಂ ೪†

ಕರಗಳ್ ನರ್ತಿಸೆ ಚಾಮರಂಗಳೆಳವಿಂದಂ ಮೆಲ್ಪಿನಿಂ ನರ್ತಿಸು
ತ್ತಿರೆ ನೇರಿರ್ದ ಸೆಱಂಗು ಚಿತ್ರಿಸಿದ ಹಂಸಾನೀಕದಿಂ ಜೆಲ್ವನಾ
ಳ್ದಿರೆ ದುಗ್ಧಾರ್ಣವ ಫೇನ ಪಾಂಡುರತೆಯಂ ಕೈಕೊಂಡ ಬೆಳ್ದಿಂಗಳಂ
ತಿರೆ ತೋಱುತ್ತಿರಲುತ್ತರೀಯವಸನಂ ರಾಜೇಂದ್ರ ಚಂದ್ರಾಂಕನಾ ೫

---

[1]ಳಿಕೋದ್ರೋ (ಕ) † ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಚರನೊರ್ವಂ ಪರಿತಂದು ಭೂಪತಿಗೆ ಬೇಗಂ ಕಾರ್ಯವಿಜ್ಞಾಪನಾ
ತುರಚಿತ್ತಂ ಪೊಡೆಮಟ್ಟು ಬಿನ್ನವಿಸಿದಂ ನಿಮ್ಮಾಜ್ಞೆಯಂ ಮೀಱಿ ದೇ
ವರ ಠಾಣಾಂತರಮಂ ತಿರಸ್ಕರಿಸಿ ನಾಡಂ ವಜ್ರವೀರ್ಯಂ ದುರೋ
ದರ ಶೌರ್ಯಂ ಬಿಡೆ ಕಾದಿ ಗೋೞಿಡಿಸಿದಂ ಸ್ತ್ರೀಬಾಲರಂ ವೃದ್ಧರಂ ೬

(ಪಾರ್ಶ್ವನಾಥಪುರಾಣಂ ೨-೧೧)

ಅನುಕೂಲಜನಕ್ಕಿಂದ್ರನ
ನನುಕೂಲಜನಕ್ಕೆ ಯಮನೆ ನೀನೆಂಬುದನಿಂ
ತಿನಿತಂ ಬಗೆಯದೆ ವಿಘಟಿಸಿ
ದನುದಗ್ರಂ ವಜ್ರವೀರ್ಯನತಿದುರ್ವಾರಂ ೭

(ಪಾರ್ಶ್ವನಾಥಪುರಾಣಂ ೨-೧೨)

ಸಂದ ನಿಜಸ್ನೇಹಭರಂ
ಕುಂದಿದೊಡಿನನುದಯದಲ್ಲಿ ತನಗಪದೆಸೆಯೊಳ್
ಮುಂದಱಿಯದತಿಮದಾಂಧಂ
ನಂದುವ ಸೊಡರುದ್ದಮುರಿವ ಮೂೞಿಕ್ಕೆಯೊಳುರಿದಂ ೮

(ಪಾರ್ಶ್ವನಾಥಪುರಾಣಂ ೨-೧೩)

[1]ಶಲಭಂ[1] ಪ್ರದೀಪತೇಜ
ಕ್ಕಲಘುತರಕ್ಕಿರದೆ ಕಾಯ್ವ ನಿನ್ನೀ ತೇಜೋ
ಬಲದ ಸಮೃದ್ಧಿಗೆ ಕಾಯ್ದಂ
ಚಲಪಕ್ಷೋದ್ಧೃತನನಧಿಗತ ನಿಜಸತ್ವಂ ೯

(ಪಾರ್ಶ್ವನಾಥಪುರಾಣಂ ೨-೧೪)

ಕಡೆಗಣ್ಣೊಳ್ ಕೆಂಪಿಡಿದಿರೆ
ಕಡುಗೊರ್ವಿರೆ ಬೆಮರ ಬಿಂದು ಗಂಡಸ್ಥಳದೊಳ್
ಬೆಡಗೊಪ್ಪುವ ವೀರಾಂಗನೆ
ಯೊಡಗೂಡಿದ ತೆಱದಿನವನಿಪತಿ ಸೊಗಯಿಸಿದಂ ೧೦

(ಪಾರ್ಶ್ವನಾಥಪುರಾಣಂ ೨-೧೫)

ಪುದಿದಿರೆ ಕೆಂಪು ನಿನ್ನ ನಯನಂಗಳೊಳನ್ಯರ ರಕ್ತದಿಂದೆ ಮೀ
ಯದೆ ತುಟಿ ಕಿಟ್ಟಿ ಶಸ್ತ್ರಕುಳಮಂ ಕಿೞಿದುಣ್ಮೆ ಬೆಮರ್ ಕಪೋಲದೊಳ್

---

[1] ಸುಲಭಂ (ಕ)

ಮದವದರಾತಿ ಕಾಂತೆಯರ ಲೋಚನವಾರಿಗಳಿಂ ಕಪೋಲಪ
ತ್ರದ ಸಿರಿಯಂ ವಿಮರ್ದಿಸದೆ ಮಾಣ್ಬವನಲ್ತೆ ರಸಾಧಿನಾಯಕಾ ೧೧

(ಪಾರ್ಶ್ವನಾಥಪುರಾಣಂ ೨-೧೬)

[1]ಏಂ ಧರಣೀಶ ನೀಂ[1] ಮುಳಿದು ಕಾದಲೊಡರ್ಚುವೊಡೇನವಂ ಸಮ
ಸ್ಕಂಧನೆ ವಜ್ರವೀರ್ಯನೆನಗೀ ಬೆಸನಂ ಬೆಸಸಾತನಂ ಗಜ
ಸ್ಕಂಧತಳಾಧಿರೂಢನನಗುರ್ವಿಪ [2]ಮಾರ್ಪಡೆ[2] ನೋಡೆ ನೋಡೆ ಕೊ
ಲ್ವೆಂ ಧುರದಲ್ಲಿ ನಿಂದೊ[3]ಡೊಳಸೋರ್ದೊಡೆ[3] ಕೋಡಗಗಟ್ಟು ಕಟ್ಟುವೆಂ ೧೨

(ಪಾರ್ಶ್ವನಾಥಪುರಾಣಂ ೨-೧೮)

ಸಿಂಗಂ ತುಂಗಕರೀಂದ್ರಕುಂಭತಟಮಂ ಸೀಳ್ದಿಕ್ಕುವಂತಳ್ಕದ
ಸ್ವಾಂಗದ್ರೋಹನನಾಹವಾಂಗಣದೊಳತ್ಯುಗ್ರಾಸಿಯಿಂ ಸೀಳ್ದು ದೋ
ರ್ಭಂಗಂಬೆತ್ತನ ವಜ್ರವೀರ್ಯನ ದಳತ್ಖಂಡಂಗಳಿಂದಷ್ಟದಿ
ಕ್ಕಿಂಗಂ ಕೇಳ್ ಬಲಿಗೊಟ್ಟು ದೇವ ಮೆಱೆವೆಂ ದುರ್ವಾರರಮಂ ವೀರಮಂ ೧೩

(ಪಾರ್ಶ್ವನಾಥಪುರಾಣಂ ೨-೨೦)

ಸಿಡಿಲೆಱಪಂದದಿಂದೆಱಗಿ ಪೊಯ್ದೊಡೆ ಬಾಳ್ದಲೆ ಸೀೞ್ದು ಪಾಱೆ ಬಿ
ಟಱ್ದುಡೆದು ಸಿಡಿಲ್ದುರುಳ್ದು ತಲೆ ಮೂದಲೆಯಾಗಿರೆ ಪಚ್ಚುವಿೞ್ದು ಪೆ
ರ್ದೊಡೆಯೊಡೆಸೆಕ್ಕೆಯಾಗಗಿದು ಕೆತ್ತುವ ಪುಣ್ಗಳ ಬಾಯ್ಗಳೀಱನು
ಗ್ಗಡಿಸುವ ಬಾಯ್ಗಳಾಗಿರೆ ಕಱುತ್ತಿಱುವೆಂ ರಿಪುಸೈನ್ಯಮಂ ನೃಪಾ ೧೪

(ಶೃಂಗಾರರತ್ನಾಕರಂ ೧-೮೩)

ಕುಡೆ ಪತಿ ಕೂರ್ತು ಜೀವಿತಮನಾಹವದೊಳ್ ಕುಡುವಂತೆ ಕೊಂಡ ನಿ
ಮ್ಮಡಿಗಡನಂ ಕರಂ ಸುಭಟನನ್ಯನೃಪಾಲರ ಜೀವಿತಂಗಳಂ
ತಡೆಯದೆ ತಂದು ತನ್ನ ಪತಿಗಿತ್ತರಿನಾರಿಯ ಕರ್ಣಯುಗ್ಮದೊಳ್
ಮಡಗಿದ ಪತ್ರಮಂ ತೆಗೆದು ಸೀಳಿಸದಿರ್ದೊಡೆ ಪೋಕುಮೇ ಋಣಂ ೧೫

ಬೆಸನಂ ಬೇೞ್ಪುದಱಿಂ ಭಟ
ರ್ಗೆಸುವುದೆ ಗುಣಮಲ್ಲದಧಿಪನುಂ ಮಾಮಸಕಂ
ಮಸಗಿ ನುಡಿದಂದು ಪೆಂಪಿಂ
ದೆಸೆವಪ್ಪುದದಱಿಂದೆ ಮಾಡಿ ತೋರ್ಪಂ ಕೂರ್ಪಂ ೧೬

(ಪಾರ್ಶ್ವನಾಥಪುರಾಣಂ ೨-೨೯)

---

1 ಯಿಂಧರಣೀಶನಂ (ಕ) ಇಂದು ನಿಜೇಶನಂ (ಬ) 2 ನಂನೆರೆ (ಬ)
3 ದಲನಾರ್ದೊಡೆ (ಕ)

ಪಕ್ಕಿ ಮೊದಲಾಗಿ ಪತಿಕಾ
ರ್ಯಕ್ಕನುವಶನಾಗಿ ತಾಗಿ ರಾವಣನೊಳ್ ಪ್ರೋ
ರ್ದಕ್ಕತುಳಮಿಱಿದುದೆಂದೊಡೆ
ತಕ್ಕಂ ಪತಿಕಾರ್ಯದೆಡೆಯೊಳೋಸರಿಸುವನೇ ೧೭

(ರಾಮಚಂದ್ರಚರಿತಪುರಾಣಂ ೯_೧೦೫)

ಕಿಡುಗುಮುಪಪ್ರದಾನದೆ ಧನಂ ನಿಜಸೈನಿಕಹಾನಿ ದಂಡದಿಂ
ದೊಡರಿಕುಮೆಯ್ದೆ ಪೊರ್ದುಗುಮುಪಾಂಶುತೆ ಭೇದದಿನಂತದಱಿಂದಮೀ
ಗಡಿನ ಪದಕ್ಕೆ ಸಾಮಮೆ ಸುಸಾಧ್ಯಮಣಂ ಪ್ರಿಯವಾಕ್ಯಮಂತ್ರದಿಂ
ಬಿಡುಗುಮದಲ್ಲದೇಂ ಬಿಡುಗುಮೇ ಮನಮಂ ಪಿಡಿದಾಗ್ರಹಗ್ರಹಂ ೧೮

(ಚಂದ್ರಪ್ರಭಪುರಾಣಂ ೯-೧೧೮)

ನಯಮಿದು ನಮ್ಮ ನಾಡಗಡಿಯಂ ಪುಗದಲ್ಲಿಯೆ ಬಂದು ಮುಟ್ಟದ
ಲ್ಲಿಯೆ ಬೆದಱಟ್ಟೆ ಸಂವರಿಸಿದಲ್ಲಿಯೆ ರಾಜ್ಯಮನೀಟ್ಟುಕೊಳ್ಳದ
ಲ್ಲಿಯೆ ಬೆಸಕೆಯ್ದೆವೆಂದಿರದೆ ಸಾರಧನಂಗಳನಟ್ಟೆ ಮುಟ್ಟೆ ಭೀ
ತಿಯಿನಿದಿರ್ವಂದು ಕಂಡರಸುವಿಟ್ಟವರೇನುಚಿತಪ್ರವೀಣರೋ ೧೯

ಸಾಮದೊಳಳವಡುವೊಡೆ ಸಂ
ಗ್ರಾಮಂ ರಿಪುನೃಪರೊಳೇಕೆ ಪಾಲ್ಸಕ್ಕರೆಯಿಂ
ದಾಮಯಮುಪಶಮಿಪೊಡೆ ವಿ
ದ್ಯಾಮಯ ಸೇವಿಸಲದೇಕೆ ಕಟುಕತ್ರಯಮಂ ೨೦

(ಪಾರ್ಶ್ವನಾಥಪುರಾಣಂ ೨-೪೦)

ಅವನಳ್ಕದೆ ನಮ್ಮೊಳ್ ಕಾ
ದುವ ಭರದಿಂ ನಾಡನಿಱಿದೊಡಂ ಕಾದದೆ ಮ
ತ್ತವನೊಳ್ ಸಾಮಮನಾಚರಿ
ಸುವುದೆಂಬುದು ನೋಡೆ ನಾಡೆ ನಗೆಗೆಡೆಯಲ್ತೇ ೨೧

(ಪಾರ್ಶ್ವನಾಥಪುರಾಣಂ ೨_೪೧)

ನಯವಿದನಂ ಸಾಮದಿನಪ
ನಯನಂ ದಂಡದೊಳೆ ಗೆಲ್ವುದೆಂತೆನೆ ಕಟುಕ
ತ್ರಯದಿಂದಲ್ಲದೆ ಮಧುರ
ಪ್ರಯೋಗದಿಂ ಕಫಮನಾವನುಪಶಮಿಸಿದಪಂ ೨೨

(ಪಾರ್ಶ್ವನಾಥಪುರಾಣಂ ೨_೪೨)

ಬೇಡಿದೊಡೀಯನಾಂತಡಿಱುಯಂ ಮಱೆವೊಕ್ಕಡೆ ಕಾಯನಂತವಂ
ನಾಡರಸಾಗಿ ಪೀೞಿಗೆಯನೇಱದೊಡೇನವನಗ್ರಗಣ್ಯನೇ
ಕೋಡಗನೇಱದೇ ಮರನನಟ್ಟವನೇಱದೆ ಬೆಕ್ಕು ಕಾಗೆ ಹೆ
ಮ್ಮಾಡಮನೇಱದೇ ಮನೆಯನೇಱದೆ ಸಾಯ್ ನಿಜದಿಂ ನಿರಂತರಂ ೨೩

ರಾಯಸಮಂ ಪೆಸರ್ವೆತ್ತ ಪ
ಸಾಯಂಬೆರಸಟ್ಟಿ ದೂತನಿಂ ಪಗೆವನಭಿ
ಪ್ರಾಯಮನುಜ್ವಳಮನವಂ
ಗಾಯತ್ತರನಹಿತರಂ ವಿಚಾರಿಪುದುಚಿತಂ ೨೪

(ಪಾರ್ಶ್ವನಾಥಪುರಾಣಂ ೨-೪೫)

ಒಡೆಯನ ವೀರಮಂ ಪೊಗೞಲಮ್ಮದೆ ತನ್ನ ಸದುತ್ತರಂಗಳಂ
ಬಿಡದರಿಭೂಪರೊಳ್ ನುಡಿಯಲಮ್ಮದೆ ತತ್ಸಭೆಯಲ್ಲಿ ಭೀತಿಯಿಂ
ನಡುಗುವ ಪೇಡಿಯಂ ಕಳುಹಲಾಗದು ನೆಟ್ಟನೆ ಸಂಧಿಯಲ್ಲಿಗಂ
ತಡೆಯದೆ ಭೂಭುಜಂ ನೆಗೞ್ದ ವಿಗ್ರಹದಲ್ಲಿಗಮಾವ ಕಾಲದೊಳ್ ೨೫

ಚದುರಂ ಭಾವಕನಿಂಗಿತಜ್ಞನಱುವುಳ್ಳಂ ದೇಶಭಾಷಾನ್ವಿತಂ
ಪದವಾಕ್ಯಾರ್ಥವಿವಕ್ಷಿತಂ ಬಹುಕಳಾಸಂಪನ್ನನಾಸ್ಥಾನಸಂ
ಮದವಾ[1][ಗ್ಮೀ][1]ತ್ರನೆನಿಪ್ಪನಂ ನೃಪವರಂ ಕೈಕೊಂಡು ಸತ್ಪಾತ್ರನಂ
ಪದಪಿಂ ನೆಟ್ಟನೆ ಸಂಧಿವಿಗ್ರಹಿಯೆನಲ್ ಭಾವಿಪ್ಪುದೆಲ್ಲಾಗಳುಂ ೨೬*

ಸಹಜಪ್ರಜ್ಞ [2]ನಶೇಷ[2]ದೇಶಲಿಪಿಸದ್ಭಾಷಾವಿಶೇಷಜ್ಞಸ
ನ್ನಿಹಿತಂ ನೀತಿವಿನೂತಸೂಕ್ತಿಸಹಿತಂ ದಕ್ಷಂ ಜಿತಾಕ್ಷಂ ನಿರಾ
ಗ್ರಹನುದ್ಯದ್ಗುಣರತ್ನಸಂಗ್ರಹನೆನಿಪ್ಪಂಗಾ ಮಹಾಸಂಧಿವಿ
ಗ್ರಹಿಗಾಳೋಚಿಸಿದಂದದಿಂದೆಸೆಗು ನೀನೆಂದಂ ಧರಾಧೀಶ್ವರಂ ೨೭

(ಪಾರ್ಶ್ವನಾಥಪುರಾಣಂ ೨-೪೬)

ಮಾನಧನಂ ಮಧ್ಯಸ್ಥಂ
ಸೂನೃತವಾಕ್ಯಂ ವಿಶುದ್ಧಚರಿತಂ ಕುಲಜಂ
ತಾನೆನಿಪುದು ಕೃತಪುಣ್ಯಂ
ತಾನೆನಿಪುದು ರಾಜವರ್ಧನಂ ನೃಪಕರಣಂ ೨೮†

---

[1] ಗ್ಮಿ (ಬ) [2] ವಿದೇಶ (ಕ)

* ಈ ಪದ್ಯಗಳು ಮಂತ್ರಾಂಗವರ್ಣನೆಯ ೪೨, ೪೧ ನೆಯ ಪದ್ಯಗಳಾಗಿಯೂ ಇವೆ.

† ಈ ಪದ್ಯವು ಮಂತ್ರಾಂಗವರ್ಣನೆಯ ೩೬ನೆಯ ಪದ್ಯವಾಗಿದೆ.

ಬೆಸಗೊಳ್ಳಡೆಡಪದನುಮಾ
ನಿಸದುಚಿತಮೆನಿಪ್ಪ ವಚನದಿಂದೆಸೆದಿರೆ ರಾ
ಯಸಮಂ ಬರೆದಾಗಳೆ ಮು
ದ್ರಿಸಿ ಕಟ್ಟಿ ಪಸಾಯಮಂ ನೃಪೋಕ್ತಕ್ರಮದಿಂ ೨೯

(ಪಾರ್ಶ್ವನಾಥಪುರಾಣಂ ೨.೪೮)

ಧೃಷ್ಟಂ ವರವಕ್ರೋಕ್ತಿವಿ
ಶಿಷ್ಟಂ ನಿಶ್ಶಂಕನನ್ವಿತಂ ನಯನಿಪುಣಂ
ಸ್ಪಷ್ಟತರಚಿತ್ತವೃತ್ತಿನಿ
ಸೃಷ್ಟಾರ್ಥನೆನಿಪ್ಪ ದೂತಮುಖ್ಯನ ಕರೆದರ್ ೩೦

(ಪಾರ್ಶ್ವನಾಥಪುರಾಣಂ ೨.೪೯)

ಇರದೆ ನಿಜಾಂತರ್ಗತಮಂ
ನಿರವಿಸಿ ಕಳಿಪಿದೊಡೆ ಕಟಿಂದು ಬಹುಜನಪದಮಂ
ತ್ವರಿತಗತಿಯಿಂದೆ ಪದ್ಮಾ
ಪುರಿಯಂ ಕಡುಚೆಲ್ವಿನಾ[1]ಗರ[1]ಮನೆಯ್ತಂದಂ ೩೧

(ಪಾರ್ಶ್ವನಾಥಪುರಾಣಂ ೨.೫೦)

ಸಮುರೋದಗ್ರಭಟಪ್ರತಾನಮನುದಾರೋರ್ವೀಶಸಂತಾನಮಂ
ಹಪ್ರಮದಾಸ್ಯಾಂಬುಜಗಂಧಮುಗ್ಧಮಧುಪಪ್ರಧ್ವಾನಮಂ ನೃತ್ಯವಾ
ದ್ಯಮಿಳದ್ಗಾನಮನಾರ್ಯವರ್ಯಸುವಚಃಪೀಯೂಷದತ್ತಾವಧಾ
ನಮನೈಶ್ವರ್ಯ ನಿಧಾನಮಂ ಪದಪಿನಿಂ ಪೊಕ್ಕಂ ನೃಪಾಸ್ಥಾನಮಂ ೩೨

(ಪಾರ್ಶ್ವನಾಥಪುರಾಣಂ ೨.೫೨)

ಭಾವಕನೈದಿಬಂದು ಜನನಾಥಪದಾಬ್ಜಪ್ರಣೂತನಾಗಿ ಮ
ತ್ತಾ ವರಪಾವುಡಂಗಳನು ತಂದಿರಿಸೆಯ್ದೆ ಮನೋನುರಾಗದಿಂ
ಭೂವಧುವಲ್ಲಭಾ ನಿನಗೆ ಮದ್ಭುವನಾಧಿಪನಿತ್ತಲೇಖಮಂ
ನೀವವಧಾನಿಸೆಂದು ಮುದದಿಂ ನುಡಿದಂ ಚರನೊರ್ವನಟ್ಟಿಜಂ ೩೩

ವಾಸವಸಮನ್ನೃಪಗತಿಭೂ
ಪಾಸನಮ ನಿವೇದಿಸುತ್ತೆ ಲೇಖಮನೊಸೆದಾ
ದೇಶಲಿಪಿಭಾ[2][ಷೆ][2]ಕೋವಿದ
ನಾ ಶ್ರೀಕರಣಾಧಿಪತಿ ನಿರೀಕ್ಷಿಸಿದನದಂ ೩೪

---

[1] ಸವ (ಕ) [2] ಷಾ (ಬ)

ಅವಧಾರಿಸುವುದು ದೇವರ್
ಭುವನೇಶಾದೇಶವೆಂದು ಬಿನ್ನವಿಸಿ ಸಭಾ
ಶ್ರವಣರಸಾಯನಮೆನಿಪತಿ
ವಿವರಣಗಂಭೀರನಾದದಿಂ ವಾಚಿಸಿದಂ ೩೫

(ಪಾರ್ಶ್ವನಾಥಪುರಾಣಂ ೨-೫೩)

ಸ್ವಸ್ತಿ ಸಮಸ್ತಸದ್ಗುಣವಿರಾಜಿತರಾಜಸಮಾಜಮಸ್ತಕ
ನ್ಯಸ್ತಪದಾರವಿಂದನರವಿಂದಮಹೀಪತಿ ವಜ್ರವೀರ್ಯನಂ
ವಾಸ್ತವಭಕ್ತಿಯುಕ್ತನೆನಗಾಗ್ರಹದಿಂ ಬೆಸೆದಿ[1]ರ್ಪನೆಂ[1]ಬುದುಂ
ದುಸ್ತರಕೋಪವಹ್ನಿಗೆ ಘೃತಾಹುತಿಯಾಯ್ತದು ತನ್ನೃಪಾಲನಾ ೩೬

(ಪಾರ್ಶ್ವನಾಥಪುರಾಣಂ ೨-೫೪)

ಕುಡುವುದು ಕಪ್ಪಮಂ ನಡೆವುದಾಳ್ವಿಸದಿಂದಮೆ ಮುನ್ನಿನಂದದಿಂ
ಬಿಡುವುದು ದರ್ಪಮಂ ಪಡೆವುದಾಳ್ದನದೊಂದು ಮನಃಪ್ರಸಾದಮಂ
ತಡೆವುದು ಬುದ್ಧಿಯಲ್ಲಧಿಕನಪ್ಪವನೊಳ್ ಬಲಹೀನನಪ್ಪವಂ
ತೊಡರ್ದೊಡೆ ಕೇಡು ತಪ್ಪದೆನುತಂ ನುಡಿದಂ ನಯಶಕ್ತಿ ಕೋವಿದಂ ೩೭

(ಪಾರ್ಶ್ವನಾಥಪುರಾಣಂ ೨-೫೫)

ನಿನ್ನಾಚರಿಸಿದ ತಪ್ಪಂ
ಮುನ್ನಂ ಬೆಸಕೆಯ್ದುದಕ್ಕೆ ಮನ್ನಿಪೆನಾನೆಂ
ಬುನ್ನತಿಗೆ ನೃಪತಿ ಕಳುಪಿದ
ನೆನ್ನನಿದಂ ಬಗೆದು ಪತಿಗೆ ವಿನಮಿತನಾಗಾ ೩೮

(ಪಾರ್ಶ್ವನಾಥಪುರಾಣಂ ೨-೫೬)

ಘನದೂತೋಕ್ತಿಸಮೀರಣ ಪ್ರಚಳಿತಸ್ಥೂಲಾಯಿ[2]ತಶ್ಮಶ್ರು[2] ಲೇ
ಖನಪೀನೋದ್ಧತ ಧೂಮಲೇಖೆ ನಯನೋದ್ಯಚ್ಛೋಣಿಮಜ್ವಾಲೆ ಸಂ
ಜನಿತಸ್ವೇದಜಲಂ ಘೃತಾಹುತಿಯೆನಿಪ್ಪನ್ನಂ ಸ್ವವಂಶಪ್ರಣಾ
ಶನದಾವಾಗ್ನಿವೊಲುರ್ಬಿ ಕೊರ್ಬಿದುದು ಭೂಪಾಲಂಗೆ ಕೋಪಾನಳಂ ೩೯

(ಪಾರ್ಶ್ವನಾಥಪುರಾಣಂ ೨-೫೮)

ವಸುಧೆಗಧೀಶ್ವರ ನಾನೆಂ
ಬೆಸಕಂ ಮಿಗೆ ನಿನ್ನನಟ್ಟಿದಂ ನೆಟ್ಟನೆ ಬಾ

---

1 ರ್ಪವೆಂ (ಕ) 2 ತಃ ಶತ್ರು (ಕ)

ವಿಸದಣಮೆ ವೀರಭೋಜ್ಯಾ
ವಸುಂಧರಾ ಎಂಬ ವಾಕ್ಯಮಂ ನಿನ್ನರಸಂ ೪೦

(ಪಾರ್ಶ್ವನಾಥಪುರಾಣಂ ೨.೫೯)

ಕಪ್ಪಮನೆನ್ನೊಳ್ ಬೇಡುವ
ತಪ್ಪಂ ಸಾಧಿಸುವ ಸುಭಟನೃಪನಾವನೊ ಮುಂ
ತಪ್ಪವನಾಹವದೊಳ್ ಮುಂ
ತಪ್ಪವನೆಂದೆನೆ ಮದುಗ್ರಖಟ್ಗಾಹತಿಯಿಂ ೪೧

(ಪಾರ್ಶ್ವನಾಥಪುರಾಣಂ ೨.೬೧)

ತನ್ನ ಪೊಡರ್ಪಿನಿಂದಮೆ ಸಮಸ್ತ ಧರಿತ್ರಿಯ ದರ್ಪಮಪ್ಪುದಂ
ಮುನ್ನಮಡಂಗಿಪಾ ಸಿಡಿಲ ಡಾಣೆಗೆ ವಜ್ರದ ಕಟ್ಟುಗೊಟ್ಟವೋ
ಲೆನ್ನಯ ತೋಳ್ಪಲಕ್ಕೆ ನೆರವಾದರನೇಕಧರಾಧಿನಾಥರ
ತ್ಯುನ್ನತಶೌರ್ಯರೆಂದೊಡಿದಿರಾಂಪವರಾರೆನಗಾಜಿರಂಗದೊಳ್ ೪೨

(ಪಾರ್ಶ್ವನಾಥಪುರಾಣಂ ೨.೬೪)

ಆಶಂಕೆಯನುೞಿದು ನಿಜಾ
ಧೀಶಂ ನಯಹೀನನಟ್ಟಿದೊಡೆ ನೀಂ ತಂದಾ
ದೇಶಮಿದು ನಿಮ್ಮ ದೇಶವಿ
ನಾಶಮನಾಂ ಮಾಡುವೆಡೆಗೆ ಸಿದ್ಧಾದೇಶಂ ೪೩

(ಪಾರ್ಶ್ವನಾಥಪುರಾಣಂ ೬.೬೭)

ಅಲ್ಲದೊಡೇಕೆ ನಿನ್ನ ನಿನಿತಂ ನುಡಿದಟ್ಟಿದನಟ್ಟಿದಂದದಿಂ
ನಿಲ್ಲದೆ ನಾಳೆ ಕಾಳೆಗಕೆ ಸಂಗರರಂಗದೊಳಕ್ಕದೊಡ್ಡವೇೞ್
ಬಲ್ಲಿದರಾರ್ ವಿ[1]ಹೀನಬಳರಾರ್ ವಿಭುವಾ[1]ರ್ಗಳ ಭೃತ್ಯರಾರಿದಿಂ
ತೆಲ್ಲಮನಲ್ಲಿ ನಿನ್ನ ಪತಿಗಂ ನಿನಗಂ ನೆಱ ತೋಱುದಪ್ಪೆನಾಂ ೪೪

(ಪಾರ್ಶ್ವನಾಥಪುರಾಣಂ ೨-೭೦)

ಅಪರಿಮಿತಂಗಳಂ ಗಱಪಲಾಗದು ದೇವರಿಗಿಂತುಟೊಂದು ಬಿ
ನ್ನಪ ಪ್ರತಿಭೂಪನಪ್ಪೊಡೆ ಬಲಾಧಿಕನಾದೊಡಮೇನೊ ಎನ್ನೊಳಾಂ
ತಪನೆಯವಶ್ಯವಾಂಪನೆರಡಿಲ್ಲದವಂ ಕಲಿ ಕಾಳೆಗಕ್ಕೆ ಬಂ
ದಪನದು ನಿಶ್ಚಯಂ ಬಱಿಕ ದೇವರೆ ಬಲ್ಲಿರಿದಕ್ಕೆ [2]ತಕ್ಕುದಂ[2] ೪೫

---

[1] ಪಕ್ಕೆ ಜಳಾರಿವಿಭುವಾ (ಕ) ಪಕ್ಕೆ ಜಲರಾಶಿಭವಾ (ಜ) [2] ನಿಶ್ಚಯಂ (ಕ)

ಲೋಕಾಧಿಪತಿಯನೇಳಿಸು
ವೀ ಕುನಯಮನಿತ್ತು ಕೇಡನೊಡರಿಸುವ ನೃಪಾ
ನೀಕದ ಪಕ್ಷಂಬಿಡಿದಿಂ
ತೇಕಿಱುಪೆಗೆಱಂಕೆ ಮೂಡಿದವೊಲಾದಪೆ ನೀಂ ೪೬

(ಪಾರ್ಶ್ವನಾಥಪುರಾಣಂ ೨–೬೨)

ಬೆದಱದ ರಾಜಧಾನಿ ಬೆಸಕಯ್ಯದ ಬಲ್ಲಿದರೊಡ್ಡಿ ಕಾದಿ ಸಾ
ಯದ ಸಮರೋದ್ಧತರ್ ಕಿಡದ ಕಂಟಕರೋಡದ ಬೇಡವಟ್ಟು ಪೋ
ಗದ ಕಲಿಗೋಂಟೆ ಸಿಲ್ಕದ ವಿರೋಧಿಕುಟುಂಬಮಿಱುಂಬುಗೊಂಡೊಡಂ
ಜದ ಖಳರನ್ಯಮಂಡಲದೊಳಿಲ್ಲ ಕುಮಾರನದೇನುದಗ್ರನೋ ೪೭

(ಪುಷ್ಪದಂತಪುರಾಣಂ ೫–೫೫)

ಅಸಮಪರಾಕ್ರಮಾಧಿಪ ಮೃಗಾಧಿಪನೊಳ್ ಸಮರಕ್ಕೆ ವರ್ಪ ಸಾ
ಹಸದಿನಿಭೇಂದ್ರನನ್ಯಮೃಗಜಾತಿಗಳೊಳ್ ನಿಜಜಾತಿವೈರಮಂ
ಬಿಸುಟೊಡಗೂಡುವಂದದೊಳೆ ನಿನ್ನೊಡಗೂಡಿದ ಭೂಪರುಂ ಮದ
ಪ್ರಸರದೆ ನೀನುಮಾಂತು ನಿಲೆ ಗೆಲ್ಲದೆ [1]ನಿಲ್ಲ[1]ನಧೀಶನಾಜಿಯೊಳ್ ೪೮

(ಪಾರ್ಶ್ವನಾಥಪುರಾಣಂ ೨-೬೪)

ಪತ್ರವ[2]ನಿದನ[2]ವನೀಪತಿ
ಸೂತ್ರಿಸಿದವೊಲುತ್ತಮಾಂಗದೊಳ್ ತಾಳ್ದಿ ಭವ
ದ್ಧಾತ್ರಿಯನಾಳಲ್ಲದೊಡಸಿ
ಪತ್ರಂ ನಿಜಮಸ್ತಕಕ್ಕೆ ತಡೆಯದೆ ಬರ್ಕುಂ ೪೯

(ಪಾರ್ಶ್ವನಾಥಪುರಾಣಂ ೨-೭೭)

ಎನೆ ಮುನಿದು ವಜ್ರವೀರ್ಯಂ
ಘನಪೀಠದಿನೆಟ್ಟಿ ವಜ್ರನಿರ್ಘೋಷದವೋ
ಲನ[3]ಯಪರಂ ಪೊಳೆವಸಿ[3] ಮಿಂ
ಚನಿಳಿಸಿ ಪೊಯ್ಯಲ್ಕೆ ನಿಲ್ಕಿದಂ ನೃಪಚರನಂ ೫೦

(ಪಾರ್ಶ್ವನಾಥಪುರಾಣಂ ೨-೪೧)

ಪೊಯ್ಯ[4]ಲ್ಕೆವೇಡ[4] ಭೂಪತಿ
ಯೊಯ್ಯನೆ ಪೆಱಸಾರ್ದು ನುಡಿವುದೈ ನಿಜಪತಿಯಾ

---

[1] ನೂಱ (ಕ) [2] ನಿನಗ (ಪ) [3] ಯಂಪರಾಸಿಯುಮಂ (ಕ) [4] ಲೆವೇಡ (ಕ)

ಕಯ್ಯಲದೆ ನಿಮ್ಮ ಬಾಳ್ದಲೆ
ಪುಯ್ಯಲ್ಗಿದಿರಾಗು ತೋಱು[1]ವೆಂ[1] ತತ್ಕ್ಷಣದಿಂ ೫೧

ಅವನತನಾದೊಡಂ ವಿಭುಗೆ ಭೀತಿಯಿನಾಜಿಯೊಳೋಡಿ ಪೋದೊಡಂ
ವಿವಿಧಮೃ[2]ಗೇ[2]ಕ್ಷಣಾಳಿ ವಿಲಸದ್ಭುವನಾಶ್ರಯಮುದ್ಘಶಾಲಮೊ
ಪ್ಪುವ ಕಟಕಂ ಸುವಂಶವಿಭವಂ ನೆಗ[3]ಳ್ದಿ[3] ಧನಮುಳ್ಳದೇಶವುಂ
ಬಿವು ದೊರೆಕೊಳ್ವುವೆಂಬ ಬಗೆಯಿಂದಮೆ ನೀಂ ನುಡಿವೈ ದುರುಕ್ತಮಂ ೫೨
(ಪಾರ್ಶ್ವನಾಥಪುರಾಣಂ ೨_೮೪)

ಎಂತೊಟ್ಟೆಯಿಱು[4]ದೆ[4] ದೇಶವ
ನೆಂತೀಶಾದೇಶಮಂ ಸಮುಲ್ಲಂಘಿ[5]ಸಿದೈ[5]
ಎಂತೆನ್ನೊಳೆಡಱು ನುಡಿದೈ
ಯಂತೆ ರಣಾಂತರದೊಳೊಡ್ಡಿ ನಿಲ್ ನಿರ್ಭಯದಿಂ ೫೩
(ಪಾರ್ಶ್ವನಾಥಪುರಾಣಂ ೨_೮೫)

ಅವಿನಯಮಂ ಗೞಪಿದ ಚರ
ನವಧ್ಯನಾದೊಡಮಿವಿನಿತುಮಂ ಗೞಪಲ್ ಪೇ
ೞ್ದವನೇನನವಧ್ಯನೆಯಾ
ಹವದೊಳ್ ಚಂಡಾಸಿಯಿಂದೆ ಖಂಡಿಪೆನವನಂ ೫೪ †
(ಪಾರ್ಶ್ವನಾಥಪುರಾಣಂ ೨-೮೨)

ಬವರಂ ನಮ್ಮೊಳ್ ಬೇಡಂ
ಬವರಂ ಕಡೆಗಣಿಸಿ ಜಡಿದು ಕಡು[6]ಪಿಂ ನುಡಿವೈ[6]
ಜವನುಂ ತೊಡರ್ದೆಡೆಯೊ[7]ಳ್ ನಂ
ಜ[7]ವನುಂ ನೀನಲ್ಲದುೞಿದರವಗಡಿಸುವರಾರ್ ೫೫
(ಪಾರ್ಶ್ವನಾಥಪುರಾಣಂ ೨-೮೯)

ಎನೆ ವಜ್ರವೀರ್ಯನಾಗಳ್
ಘನಕೋಪಂಬೆತ್ತು ದೂತನಂ ನುಡಿಯಲ್ ಪಾ
ವನಮೂರ್ತಿ ದಂಡನಾಥಂ
ಸನುಮತದಿಂ ಸಮರಭರಮ[8]ನಾಡ[8]ಲ್ಪೇೞ್ದಂ ೫೬

---

[1] ವೆನು (ಕ) [2] ಗ (ಕ) [3] ಳ್ದಂ (ಕ ಬ) [4] ವೆ (ಕ) [5] ಸುವೆ (ಕ)
[6] ಪಂನುಡಿವಂ (ಪ) [7] ಳಂಜ (ಪ) ಳಂಜು (ಬ) [8] ನಾಗ (ಬ) † ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಆದೊಡೆ ಬೇಗಬೇಗ ಕದನಕ್ಕೆ ನಿಮಿರ್ಚೆನೆ ವೈರಿದೂತನಂ
ಭೇದಿಸಿ ವಸ್ತ್ರಮಾಭರಣಲೇಪನವಾದಿ ಸಮಸ್ತವಸ್ತುವಂ
ವೇದಸಿ ಕಳ್ಪಿ ವೈರಿಗಡಿಯಿಂ ಭರದಿಂ ಪೊಱಮಟ್ಟು ಬಂದು ಸಂ
ವಾದಿಸಿದಂದಮಂ ಭುವನಪಾಲನೆ ಕೇಳಲು ಪೇೞ್ದಿನಟ್ಕಿಱಿಂ (?) ೫೭

ದೂತಂ ಸಂಗರಮಂ ನಿರೂಪಿಸೆ ಜನಶ್ರೀಸಂಗಮಂ ತನ್ನೊಳೇ
ಮೂತಿಂ[1]ದಾ[1]ದಪುದೆಂಬ ವಾರ್ತೆಯುಂನೆ ಕೇಳ್ದಂತಾಹವಕ್ಷೋಣಿ ಸಂ
ಕೇತಸ್ಥಾನಮೆನುತ್ತಮಾದೊಲವಿನಿಂದೇಶಾಂ[2]ಗ[2]ದಿಂ ಪೋಪವಿ
ಖ್ಯಾತೋತ್ಸಾಹಮನಪ್ಪುಕೆಯ್ದನತಿಧೀರೋದಾತ್ತಭೂ[3]ಪಾಲಕಂ[3] ೫೮
(ಪಾರ್ಶ್ವನಾಥಪುರಾಣಂ ೨-೯೦)

ರಿಪುವೆನಿಪ ಚಂದ್ರನಂ ರಾ
ಹು ಪೂರ್ಣ[4]ನಂ[4] ಕೆಡಿಸುವಂತೆ ವಿಕ್ರಮಿಯೆನಿಪಾ
ನೃಪನಂ ಪಗೆಯಂ ಲಕ್ಷ್ಮೀ
ಪ್ರಪೂರ್ಣನಂ ಕೆಡಿಸದಂದದೇಂ ಸಾಹಸಮೇ ೫೯
(ಪಾರ್ಶ್ವನಾಥಪುರಾಣಂ ೨-೯೨)

ಕೆತ್ತುವ ಮಿಾಸೆ ಕೆಂಪಡರ್ದ ಕಣ್ಮಲ[5]ರೊ[5]ಪ್ಪುವ ಮೂಗು ಕೋಪ[6]ವ
ಚ್ಚೊ[6]ತ್ತಿದ ಭೀಷಣಭ್ರುಕುಟಿ ಗರ್ಘರ ಘೋರರವಂ ಮೊಗಕ್ಕೆ ವೈ
ವೆತ್ತ ಬೆಮರ್ ಮನಂಗೊಳಿಸೆ ಭೂಪತಿ[7]ಯಾ[7] ಬೇಸವೇಟ್ದಿ[8]ಗುರ್ಬು ಲೋ
ಕೋತ್ತರಮಾಗೆ ವೀರಭಟನೇಂ ಕದನ[9]ಕ್ಷ[9]ಮನಕ್ಕೆ ಪೂಣ್ದನೋ ೬೦
(ಶಾಂತಿಪುರಾಣಂ ೩-೬೮)

ಅಳ್ಕದೆ ಚಕ್ರವರ್ತಿಯ [10]ತನೂಜೆಯನೊಯ್ದನ[10] ಜಿನ್ನನೆ[11]ನ್ನ[11] ಕೂ
ರ್ವಾಳೆನ್ನಳಿ ಮದ್ವರೂಥಿನಿ ಮನಂಗೊಳೆ ನಾ[12]ರದ[12]ನೆಯ್ದೆ ನೋಡಿ ಬಾ
ನೊಳ್ಕುಣಿದಾಡೆ ದೇವತತಿ ನೋಡೆ ಕಱುತ್ತಿಱುವಾಗಳಲ್ಲದೆ
ನ್ನೊಳ್ಕರೆಗಣ್ಮಿ ಪೊಣ್ಮುಗುಮೆ ವೀರರಸಂ ಖಚರೇಂದ್ರಲೋಕದೊಳ್ ೬೧
(ಶಾಂತಿಪುರಾಣಂ ೩-೬೯)

---

[1] ಗಾ (ಪ) [2] ತ (ಕ ಬ) [3] ಪೋತ್ತಮಂ (ಪ) [4] ಮಂ (ಪ)
[5] ದೊ಼ (ಅ) [6] ದತ್ತೆ (ಅ) [7] ಯಂ (ಅ) [8] ಜ್ವ (ಅ) [9] ಕ್ಕೆ (ಅ)
[10] ಕಳತ್ರಯಪ್ರೊಯ್ವಿನ (ಕ ಬ) [11] ಯ್ದೆ (ಕ ಬ) [12] ನವ (ಕ ಬ)

ಓರಂತೆ ಮೆಚ್ಚಿದಂ ಕೃತಿ
ಸಾರಂ ದೂತಾಂಗಕೊಲ್ದು ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೬೨

ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರಮುಮ
ಷ್ಟಾದಶಸ್ಥಳವರ್ಣನಮಾರ್ಗಮನೋಹರಮುಂ ವೀರಹೊಯ್ಸಳ
ಸೋಯಿದೇವರಾಯ ವಿನೋದಾಕರ್ಣನ ಕೌತುಕೋ
ತ್ಪಾದಿತಮುಂ ಯಾದವ ಕಟಕಾಚಾರ್ಯ ಸುಕವಿ
ಸುಮನೋಬಾಣ ಜಾಮಾತೃ ಪರಮ ಚಿದಾ
ನಂದ ಮಲ್ಲಿಕಾರ್ಜುನ ಕವೀಶ್ವರ
ಸಂಯೋಜಿತಮುಮಪ್ಪ ಸೂಕ್ತಿ
ಸುಧಾರ್ಣವದೊಳ್

ದೂತಾಂಗವರ್ಣನಂ ಸಪ್ತದಶಾಶ್ವಾಸಂ ಸಂಪೂರ್ಣಂ.

# ಯಾತ್ರಾಂಗವರ್ಣನಂ

ಶರದಂ ಯಾತ್ರೆಗೆ ಲೇಸು ಮಿಕ್ಕ ಋತುಗಳ್ ತಳ್ತಿರ್ದ.[1]ಕಾರ್ಯ[1]ಕ್ಕೆ ಬಿ
ತ್ತರಿಕುಂ ಯಾತ್ರೆಯನುಷ್ಣಶೀತಸಮಯಂಗಳ್ಗಪ್ಪಪಾಯಂಗಳಂ
ನರನಾಥರ್ ಸಮಕಟ್ಟಿ ಪೋಪ ಗತಿಯಿಂ ವ್ಯಾವರ್ಣಿಪರ್ ಕಾವ್ಯದೊಳ್
ಪರಮಶ್ರೀ ಕವಿಪುಂಗವರ್ ವಿಜಯಯಾತ್ರಂಗಳ್ ಜಗದ್ವಿಶ್ರುತಂ ೧

ಪಡಿವಾತೇಂ ಸೋಯಿದೇವಕ್ಷಿತಿಪತಿ ಪೊಱಮಟ್ಟಿಡಿಂಗೆ ಸೂಳೈಸವೇಟಿ[3]ಂ
ದೊಡೆ ಧಾಂಧಾಂ ಧಾಂ[2]ಧಳಂಬಿಕ್ಕಿದ ಕುಡುಹಿನ[2] ನಿಸ್ಸಾಳ [3]ಘೋಷ[3]ಕ್ಕೆ ರಾಯರ್
ಕೆಡೆದರ್ ಪಾಡಟಿ[4]ದರೊಱಗಿದರ್ ಪಲ್ಲಟಂಬೋದುವೆತ್ತಂ[4]
ಸಿಡಿದಾಶಾದಂತಿ ತೂಗುಯ್ಯಲೆವೊಲಲುಗುತಿರ್ದತ್ತು ಮುನ್ನೀರ ಪೂರಂ ? ೨

ಪೊಡೆದತ್ತುರ್ವರೆಯಂ ಯುಗಾಂತದ ಸಿಡಿಲ್ಮೇಘಂ ತಟಿದ್ದಂಡದಿಂ
[5]ನಡುಗಿ[5]ತ್ತಾದಿವರಾಹ[6]ಘೋಣ[6]ಹತಿಯಿಂ ಪಾತಾಳಗರ್ಭಂ ಸಿಡಿ
ಲ್ದೊಡೆದತ್ತಬ್ಧಿಯೊಳಿಂದು ಮಂದರನಗಂ ಬಿರ್ದತ್ತೆನಲ್ ಲೋಕದೊಳ್
ಬಿಡದುಣ್ಮಿತ್ತು ಸುವರ್ಣಕೋಣಹತಿಯಿಂ ಪ್ರಸ್ಥಾನಭೇರೀರವಂ ೩

(ಕಾದಂಬರಿ, ಪೂ.ಭಾ ೫೪೫)

ಕೆಡೆದಂ ಪದ್ಮಜನಾಸನಾಂಬುರುಹದಿಂದಾಗಳ್ ಸುರೇಂದ್ರಾಚಳಂ
ನಡುಗಿತ್ತರ್ಕನಳುರ್ಕೆಗೆಟ್ಟು ನಭದಿಂ ತೂಳ್ದಂ [7]ಸುರು[7]ಳ್ದಪ್ಪಿದಳ್
ಮೃಡನಂ ಗೌರಿ ಸಮಸ್ತ[8]ನಿರ್ಜರಜನಂ[8] ಪಂಕೇಜಪತ್ರಾಂಬುವೋಲ್
ನಡುಗಿತ್ತೆಂಬಿನಮುರ್ವಿ ಪರ್ವಿದುದು ತತ್ಸನ್ನಾಹಭೇರೀರವಂ ೪

(ಪಂಪಭಾರತಂ ೧೦-೨೬)

ಮೇದಿನಿಯಂ ತಳರ್ಚಿ ರಸೆಗೊಯ್ವಸುರಂಗಸುರಾರಿಯಿಂದಮುಂ
ದಾದುದು ಕೇಡುಮಿನ್ನೆನಗಮಾಗದೆ ಪೋಗದು ಬೇಗವೊಪ್ಪಿಸಿಂ
ದಾದೊಡಮಾ ಮಹೀಸುತೆಯನೆಂದಮರಾರಿಗೆ ಕೇಳೆ ಸಾಱುವಂ
ತಾದುದು ಪೊಯ್ಕೆ ಘೂರ್ಣಿಸುವ ಭೇರಿಯ ಭೂರಿಗಭೀರನಿಸ್ವನಂ ೫

---

[1]ಯಾತ್ರ (ಕ) [2]ದಿಕ್ಕೈಡ ಕಡುಪಿನ (ಕ) [3]ಪೂಯ (ಕ) [4]ದಿರ್ದಪರ್ ದಿಗಧಿಪರ್ ಮೇಣ್ ಪಲ್ಲಟಂಬೋಪುವೀ (ಬ) [5]ಬಡಿದ (ಅ) [6]ದೇಹ (ಬ) [7]ಮರು (ಅ) [8]ಮೀತ್ರಿಭುವನಂ (ಅ)

ಉಪ್ಪರಿಸಿತ್ತು ಸೂರ್ಯನ ರಥಂಬರಮಷ್ಟದಿಶಾವಿಭಾಗಮಂ
ಚಪ್ಪರಿಸಿತ್ತು ವಾರಿಧಿಸಮೂಹದೊಳುಣ್ಮುವ ಘೋರ ಘೋಷಮಂ
ಖೊಪ್ಪರಿಸಿತ್ತು ಮತ್ತೆ ಪೆಱತೇನದು ವಿಕ್ರಮಸಿಂಹಗರ್ಜಿತಂ
ತಪ್ಪದಿದೆಂಬಿನಂ ನೆಗಟ್ದ ಭೇರಿಯ ಭೂರಿಗಭೀರನಿಸ್ವನಂ ೬

ಕೋಡುಂಗಲ್ಗಳು ಶೈಲದಿಂ ಕೆಡೆಯೆ ತೂಗುಂದೊಟ್ಟಲಿಟ್ಟಂತಿರ
ಲ್ಲಾಡಿತ್ತೆಣ್ದೆಸೆ ಶೇಷ ಸುಯ್ಲುಹತಿಯಂ ತುಳ್ಕಾಡೆ ಮುನ್ನೀರಿಭಂ
ಕೋಡಿಟ್ಟಾಮಳಕದ್ರುವಿಂದುದಿರ್ವ ಕಾಯ್ವೊಲ್ಮೀನ್ಗಳುಂ ಬಿರ್ದುವಾ
ಕ್ರೋಡಂ ಮಾರ್ದನಿದೋಱಿ ಪರ್ಬಿತಿಳೆಯಂ ಸಂಗ್ರಾಮಭೇರೀರವಂ ೭

ಅರಿಹಂಸಪ್ರಕರಕ್ಕೆ ನೀರದರವಂ ದಿಙ್ನಾಗಕಂ ಪ್ರೋಚ್ಚಸಿಂ
ಹರವಂ ಶೌರ್ಯಮದೋತ್ಥಕಾರಿ ಫಣಭೃದ್ವರ್ಗಕ್ಕಮುದ್ಯನ್ಮಯೂ
ರರವಂ ಭಾವಿಸಿ ಕೇಳ್ವಡಾ ರವಮುದತ್ಯಾಶ್ಚರ್ಯಮೆಂಬಂತಿರಂ
ಬರಮಂ ತಳ್ತುದು ಕೃಷ್ಣರಾಜವಿಜಯಪ್ರಸ್ಥಾನಭೇರೀರವಂ ೮

ದೆಸೆಯೆಂಟುಂ ವಾರ್ಧಿನಾಲ್ಕುಂ ವಿಯದಿಳೆಯೆರಡುಂ ತಱಗಿ ತಟ್ಟು[1]ತ್ತಿ ಸಂ[1]ಕ್ಷೋ
ಬಿಸಿ ತಾಳಂ[2]ಕುಟ್ಟಿ[2]ಕೋಳಾಹಳಮ[3]ಯ[3]ಮೆನಿಸಲ್ ಸಾಲ್ಗೆ ಮೂಲೋಕಮಂ ಮು
ದ್ರಿಸಿದತ್ತರ್ಕಾಶ್ವಕಂಠಸ್ಖಲಿತ[4]ರಥ[4]ಯುಗಂ ಪದ್ಮ[5]ಪತ್ರಸ್ಥ ಹಂಸ
ಪ್ರಸರ[5] ಪ್ರೋಡ್ಡೀನಪಾದಂ ಮುಸಲಿಹರಿ ಪ[6]ದ[6]ಸ್ಥಾನಭೇರೀ[7]ಪ್ರಣಾ[7]ದಂ ೯

(ಅನಂತನಾಥಪುರಾಣಂ, ೧೩-೭೧)

ಗಗನಕ್ಕಂಭೋಧಿ ತುಳ್ಕಾಡಿದುದವನಿಗೆ ತಾರಾಳಿ ಸೂಸಿತ್ತು ದಿಕ್ಪಾ
ಲಗಣಕ್ಕಾಶಂಕೆ ಪುಟ್ಟಿತ್ತಿದು ಮಗಧನ ಭೇರೀರವಂ ಕೆಟ್ಟಿನಾ[8]ವಿ
ನ್ನ[8]ಗಿದಾವಾವಾಳ್ವೆಸಂಗೆಯ್ದಪೆವೆನೆ ಮಹಿಪರ್ ಪೊಣ್ಮೆತುಚ್ಛೃಂಖಲಂ ಗೋ
ತ್ರಗಿರಿಚ್ಛಾತ್ರಾನುವಾದಾಧ್ಯಯನಗುರು ಜರಾಸಂಧಭೇರೀನಿನಾದಂ ೧೦

(ಜಗನ್ನಾಥವಿಜಯಂ, ೭-೩೯)

ಹರಿ ಮತ್ಸ್ಯಾಕಾರ[9]ದೊಳ್[9] ಪುಚ್ಛದೆ ಜಲನಿಧಿಯಂ ಪೊಯ್ದ ನಾಟ್ಯಕ್ರಿಯಾಡಂ
ಬರದೊಳ್ ಕಾಲಾಗ್ನಿರುದ್ರಂ ನಿಜಪದತಳದಿಂ ತಾಳಮಂ ಕೊಟ್ಟ ದೇವೇ
ಶ್ವರವಜ್ರಕ್ಕಳ್ಕಿ ಗೋತ್ರಾಚಳತತಿ ಕಡಲಂ ಪೊಕ್ಕ ತದ್ಧ್ವಾನಮಂ ಧಿ
ಕ್ಕರಿಸಿತ್ತ[10]ಕ್ಷೋಣ[10]ಕೋಣಪ್ರಹತ ಬಹುಳಭಾಂಕಾರ ಭೇರೀನಿನಾದಂ ೧೧

---

[1]ತ್ತುರೆ (ಅ) [2] ಕೂಡಿ(ಅ) [3] ದ (ಬ) [4] ರದ(ಅ) [5] ಜಾಗ್ರಾರಹಸ್ತಪ್ರಸಭ (ಅ)
[6] ದ (ಅ) [7] ನಿನಾ (ಅ) [8] ತಂಗ (ಅ) [9] ದಿಂ (ಬ) [10] ಕ್ಷುಣ್ಣ (ಬ)

ರಸೆಯಂ ತೆಕ್ಕನೆ ತೀವಿ ವಾಯುಪಥಮಂ ಪೊತ್ತೆತ್ತಿ ದಿಕ್ಸಂಧಿಯಂ
ವಸುಧಾಭಾಗದಿನೊತ್ತಿ ಸೀಳ್ದು ಕಡಲಂ ಕೈಗಾದು ತಳ್ಳಂಕಗು
ಟ್ಟಿಸಿ ವಿದ್ವಿಣ್ನೃಪಕಾಂತೆಯರ್ಕಳೆರ್ದೆಗಳ್ ಝಲ್ಲೆಂಬಿನಂ ಪೊಣ್ಮಿ ದ
ಳ್ಳಿಸುಗುಂ ದಕ್ಷಿಣಚಕ್ರವರ್ತಿಯ ಜಯಪ್ರಸ್ಥಾನಭೇರೀರವಂ ೧೨

ನಳಿನೀಪತ್ರಗತಾಂಬುವೋಲ್ ನಡುಗಿತೀ ವಿಶ್ವಾವನೀಮಂಡಲಂ
ಜಲರಾಶಿವ್ರಜಮುಣ್ಮಿ ಪೊಣ್ಮಿ ಕದಡಿತ್ತರ್ಕಂ ಪಥಂಗೆಟ್ಟು ಸಂ
ಚಳನಾದಂ ತ್ರಿದಶೇಶದಂತಿ ಮದಮಂ ಕಟ್ಟೆತ್ತು ಭೂಭಾಗಮಂ
ಬಳಸಿತ್ತಾ ವಿಜಯಪ್ರಯಾಣಜನಿತಂ ಪ್ರಸ್ಥಾನಭೇರೀರವಂ ೧೩ †

ನಿರಿದಪ್ಪಂ ಮಗಧೇಶನಂ ನಿಜಿಸಿದಪ್ಪಂ ಚೋಳಿನಂ ಭೂಷೆಯುಂ
ಹರಿ ಕೇಳ್ ಧೂಮಪತಾಕ ಕೇಳ್ ಯಮನೆ ಕೇಳ್ ನೈರುತ್ಯ ಕೇಳ್ ವಾರಿಧೀ
ಶ್ವರ ಕೇಳ್ ಮಾರುತ ಕೇಳ್ ಧನಾಧಿಪತಿ ಕೇಳೀಶಾನ್ಯ ಕೇಳೆಂದು ಡಂ
ಗುರಿಪಂತಾಯ್ತು ನೃಸಿಂಹರಾಜನ ಜಯಪ್ರಸ್ಥಾನಭೇರೀರವಂ ೧೪

(ಶಬ್ದಮಣಿದರ್ಪಣಂ ೨೪೧-೩ ; ೨೪೪-೧)

ಅನಿತುಂ ದಿಕ್ಚಕ್ರಮಂ ಪರ್ವಿದುದಱಿಸುವವೋಲೋಡಿದುರ್ವೀಶರಂ ಸಂ
ದ ನೃಪಾಲಶ್ರೇಣಿಗಾ ಸಗ್ಗಮೆ ಗುಱಿ ಪೆಱತಿಲ್ಲೆಂಬವೋಲಭ್ರಮಂ ಭೋಂ
ಕನೆ ಸುತ್ತಿತ್ತೆಯ್ದೆ ಸೋಮೇಶ್ವರನ ಸಮರಭೇರೀನಿನಾದಂ ದಧಾಂ ಧಾಂ
ದನಿ ನಿದ್ರಾಭಂಗದಿಂದಂಗಮನುಡುಗುವಿನಂ ಖರ್ಪರಕ್ಕಾದಿಕೂರ್ಮಂ ೧೫

ಅನಿತುಂ ದಿಕ್ಪಾಲರಂ ಮುನ್ನಡಸಿ ಪೊಡೆವವೋಲ್ ಕುಟ್ಟಿದತ್ತಭ್ರಮಂ ತೊ
ಟ್ಟನೆ ಪೊಯ್ದತ್ತಬ್ಧಿಯಂ ಮುಟ್ಟಿದುದು ಕುಲನಗವ್ರಾತಮಂ ವೀರಬಲ್ಲಾ
ಳನೃಪಂ ಸೂಳೈಸವೇೞ್ದಕ್ಕಸರ ಸಮರಧಾರೀ ಧಧಾಂದಾಂಧಧಾಂಧ
ಧ್ವನಿ ಮತ್ತಂ ಕೋಪದಿಂ ಪಲ್ಮೊರೆದಪುದೆನೆ ಪೊಣ್ಮಿತ್ತನುಪ್ರಾಂಶುಘೋಷಂ ೧೬

ಜರಿವನ್ನಂ ಕನಕಾಚಲಂ ಕದಡುವನ್ನಂ ವಾರ್ಧಿ ದಿಗ್ದಂತಿಗೋ
ಸರಿಪನ್ನಂ ಮದಮದ್ರಿಜಾತೆ ಹರನಂ ತಳ್ತಪ್ಪುವನ್ನಂ ನಿರಂ
ತರಮುರ್ಕಾಂಶುವಳುರ್ಕೆಗೆಟ್ಟು ಸುಗಿವನ್ನಂ ತಳ್ತು ಪೊಣ್ಮಿತ್ತು ನಿ
ರ್ಭರದಿಂ ಭೀಕರಮಪ್ಪಿನಂ ನೃಪಜಯಪ್ರಸ್ಥಾನಭೇರೀರವಂ ೧೭

ದೆಸೆಯಂ ಪೊತ್ತ ಮದೇಭರಾಜಿ ದೆಸೆಗೆಟ್ಟೋಡಲ್ ತಗುಳ್ದತ್ತು ಸ
ಪ್ತಸಮುದ್ರಂ ಕರೆಗಣ್ಮಿ ತನ್ನವಧಿಯಂ ದಾಂಟಿತ್ತಜಾಂಡಂ ಸಿಡಿ

---

† ಈ ಪದ್ಯ (ಕ) ಪ್ರತಿಯಲ್ಲಿಲ್ಲ

ಲ್ದು ಸಿಡಿಲ್ಪೊಯ್ವೊಡೆದೊಂದು ತತ್ತಿಯವೊಲಾಯ್ತೆಂಬೊಂದು ಸಂದೇಹಮಂ
ಪೊಸತಂ ಭೂಭುವನಕ್ಕೆ ಮಾಡಿದುದು ತತ್ಸನ್ನಾಹಭೇರೀರವಂ ೧೮

(ಪಂಪಭಾರತಂ, ೯-೯೪)

ಪರವಾಚಾಲನೃಪಾಲಜಾಲಕುಲನಾಶೋತ್ಪಾತನಿರ್ಘಾತವಾ
ತರವಂ ವಿಕ್ರಮನಾ[1]ಟಕಾಭಿ[1]ನಯನಾಂದೀಮಂಗಲಾತೋದ್ಯಹೃ
ದ್ಯರವಂ ತಾನೆನೆ ಘೂರ್ಣಿಸಿತ್ತು ವಿಲಸತ್ಸೌವರ್ಣಕೋಣಾಹತಿ
ಸ್ಫುರಿತಂ ಶ್ರೀಯುವರಾಜದೇವ ವಿಜಯಪ್ರಸ್ಥಾನಭೇರೀರವಂ ೧೯

(ಪುಷ್ಪದಂತಪುರಾಣಂ, ೫-೭)

ಬೆದಱಿಂದುದಭ್ರಮೂರಮಣನೊಟ್ಟಜೆಗೆಟ್ಟುದು ಪುಂಡರೀಕವ
ಟ್ಟುದು ಕುಮುದಂ ತಡಂಗೆಡೆದುದಂಜನನುರ್ಕುಡುಗಿತ್ತು ವಾಮನಂ
ಬಿದಿರ್ದುದು ಪುಷ್ಪದಂತಮತಿವಿಹ್ವಲನಾದುದು ಸಾರ್ವಭೌಮನಂ
ದದಿರ್ದುದು ಸುಪ್ರತೀಕಮಿರದಾಲಿಸಿ ತತ್ಪಟಹಪ್ರಣಾದಮಂ ೨೦§

(ಪುಷ್ಪದಂತಪುರಾಣಂ, ೫-೮)

ಕರಿಗಳ್ ಭೃಂಗಕುಳಾಕುಳೀಕೃತಕಟೋಪೇತಂಗಳೊಂಬತ್ತು ಸಾ
ಸಿರಮಂತೊಂದು ಗಜಕ್ಕೆ ನೂಱು ರಥಮಂತಾ ಸ್ಯಂದನಕ್ಕೊಂದಱಿಂ
ತುರಗಂ ನೂಱಿನಲಾ ತುರಂಗದಟಿವೊಂದೊಂದರ್ಕೆ ನೂಱಾಳ್ ತಗು
ಳ್ದಿರೆ ಬಲ್ಲರ್ ನಡೆ ನೋಡಿ [2]ನೋ[2]ಡಿ ಪಡೆದತ್ತಕ್ಷೋಹಿಣೀ [3]ಶಂಕೆ[3]ಯಂ ೨೧

(ಪಂಪಭಾರತಂ, ೯-೯೫)

ಧ್ವಜಮಯಮಂಬರಂ ಗಜಮಯಂ ಭುವನಂ ಪ್ರಳಯಪ್ರಚಂಡಭೂ
ಭುಜಮಯಮಷ್ಟದಿಗ್ವಳಯಮಶ್ವಮಯಂ ಜಗತೀತಳಂ ರಥ
ವ್ರಜಮಯಮುಂ ಪದಾತಿಮಯಮುಂ ನೆಱೆಯಾದುದು ನಾಡುಕಾಡುಮಾರ್
ತ್ರಿಜಗದೊಳಾಂಪರೀ ಬಲಮನಿನ್ನೆನಿಸಿತ್ತು ಚತುರ್ಬಲಾರ್ಣವಂ ೨೨*

(ಪಂಪಭಾರತಂ, ೯-೯೮)

---

[1]ಟ್ಯ ಬಿನ್ನ (ಬ) [2]ಕೂ (ಅ) [3]ಸಂಜ್ಞೆ (ಅ) § ಈ ಪದ್ಯ (ಕ) ಪ್ರತಿಯಲ್ಲಿಲ್ಲ * (ಬ) ಪ್ರತಿಯಲ್ಲಿ ಈ ಪದ್ಯವಾದಮೇಲೆ ಮುಂದಿನ ಆಶ್ವಾಸಾಂತ್ಯಪದ್ಯದೊಡನೆ ಯಾತ್ರಾಂಗವೆಂಬ ಪ್ರಕರಣವು ಮುಗಿದು ಯಾನಸ್ಥಲವೆಂಬ ಭಾಗವು ಪ್ರಾರಂಭವಾಗುವುದು. ಮುಂದಿನ ಭಾಗದ ಮೊದಲನೆಯ ಪದ್ಯವು ಇತರಭಾಗದ ಹಾಗೆಯೇ ವರ್ಣನೀಯಾಂಶಗಳನ್ನು ಸೂಚಿಸುವ ಪದ್ಯವೇ ಆಗಿದ್ದರೂ ಪೀಠಿಕಾಸಂಧಿಯಲ್ಲಿ ಅಷ್ಟಾದಶವರ್ಣನೆಗಳನ್ನು ಸೂಚಿಸುವ ಸಂದರ್ಭದಲ್ಲಿ ಯಾತ್ರೆ ಮತ್ತು ಯಾನೆಗಳೆಂಬ ವ್ಯತ್ಯಾಸಗಳಿಲ್ಲದುದರಿಂದಲೂ ಅಷ್ಟಾದಶವರ್ಣನೆ

